ಶ್ರೀರಸ್ತು.

ಉಭಯಕವಿತಾವಿಶಾರದನಪ್ಪ

ಏಳಂದೂರು ಷಡಕ್ಷರದೇವನಿಂ ರಚಿತವೂದ

# ರಾಜಶೇಖರವಿಳಾಸವೆಂಬ

## ಕರ್ಣಾಟಕಚಂಪೂಪ್ರಬಂಧವು

ಮೈಸೂರು ಮಹಾರಾಜಾಕಾಲೇಜ್

ಕರ್ಣಾಟ ಪ್ರಥಮಪಂಡಿತರಾದ

ವೇ. ಪಿ. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಶೋಧಿಸಲ್ಪಟ್ಟು,




ಮೈಸೂರು ಶ್ರೀ ವಾಣೀವಿಲಾಸ

ಬುಕ್ ಡಿಪೋ

ಬಿ. ಎ. ವೆಂಕಟಾಚಲಂ ಶೆಟ್ಟರಿಂದ

ಕ್ರೌನ್ ಪ್ರೆಸ್ಸಿನಲ್ಲಿ ಮುದ್ರಾಪಿತವಾಗಿ

ಪ್ರಕಟಿಸಲ್ಪಟ್ಟಿತು.

1913

ಕ್ರಯ 1—8—0

# ಉಪೋದ್ಘಾತವು.

ರಾಜಶೇಖರ ವಿಳಾಸವನ್ನು ರಚಿಸಿದ ಷಡಕ್ಷರದೇವನು ಮುಮ್ಮಡಿ ಕೃಷ್ಣ ರಾಜೊಡೆಯರ ದಿವಾನರಾಗಿದ್ದ ಪೂರ್ಣಯ್ಯನವರ ಸರ್ವಮಾನ್ಯಮಂಡಲಕ್ಕೆ ಸೇರಿದ ಎಳಂದೂರುಗ್ರಾಮದಲ್ಲಿ ವಾಸಿಸುತ್ತಿದ್ದನು. ಈತನ ಮಠದನಿವೇಶನ ವನ್ನು ಈಗಲೂ, ಅಲ್ಲಿನ ಜನರು ತೋರಿಸುತ್ತಾರೆ. ಷಡಕ್ಷರ ದೇವಕವಿಯು ತಾನು ರೇಣುಕಾಚಾರ್ಯಸಾಂಪ್ರದಾಯಿಕನೆಂದೂ, ದನುಗೂರುಮಠದ ಸ್ವಾಮಿಯಾದ ಚಿಕವೀರದೇಶಿಕನ ಶಿಷ್ಯನೆಂದೂ, ಪ್ರಥಮಾಶ್ವಾಸದಲ್ಲಿ ೫೩ನೆಯದಾದ ಶಿವವಕ್ತ್ರೋ ಭಸ್ಮರೇಣುಪ್ರಭವನೆನಿಸಿಯುಂ ಎಂಬ ಪದ್ಯವೊದಲ್ಗೊಂಡು ಚಿಕವಿರದೇವನ ಕರ ಕಂಜಾತಸುಜಾತಂ...ಎಂಬ ೬೭, ೬೮ ನೆ ಪದ್ಯಗಳವರೆಗೆ ತಿಳಿಸುತ್ತಾನೆ. ಮತ್ತು ಅದೇ ೬೮ ನೆಯ ಪದ್ಯದಲ್ಲಿ "ಸಾಂಬಶಂಕರಪಾದಾಬ್ಜಮಧುವ್ರತಂ" ಎಂದು ತನಗೆ ವಿಶೇಷಣವಂ ಕೊಟ್ಟಿರುವುದರಿಂದಲೂ ಪ್ರಥಮಾಶ್ವಾಸದ ೭೨ ನೆಯ ಪದ್ಯದಲ್ಲಿ "ನಿನಗೆ ನಿಸರ್ಗಮಲ್ತೆ......ಶಿವಯೋಗಮಾಗಮವಿಚಾರತೆ...... ಷಟ್ಸ್ಥಲಾಂಕಶಾಸ್ತ್ರನಿಚಯಸಾರದರ್ಶನಂ" ಎಂದು ಹೇಳಿರುವುದರಿಂದಲೂ, ಈ ಕವಿಯು ಲಿಂಗಾಂಗಸಾಮರಸ್ಯರೂಪಮುಕ್ತಿಪ್ರತಿಪಾದಕವೀರಶೈವಶಕ್ತಿವಿಶಿಷ್ಟಾ ದ್ವೈತಸಿದ್ಧಾಂತಿಯೆಂದೂ ಗುರುಸ್ಥಲದ ಪಟ್ಟಾಧಿಕಾರಿಯೆಂಬ ಬ್ರಹ್ಮಚಾರಿಮಾಹೇ ಶ್ವರನೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ. ೧೪ ನೆಯ ಆಶ್ವಾಸದ ೧೮೪ ನೆಯ ಪದ್ಯದಲ್ಲಿ "ಸುರುಚಿರಶಾಲಿವಾಹನಶಕಾನ್ವಿತರತ್ನಸಮುದ್ರಬಾಣಭೂಪರಿಗಣ ನಾಂಕ ಬಂಧುರ ಜಯಾಬ್ದದ" ಎಂದು......ಗ್ರಂಥ ಸಮಾಪ್ತಿಕಾಲವನ್ನು ಹೇಳಿ ರುವುದರಿಂದ ಶಾಲಿವಾಹನಶಕ ೧೫೭೫ ನೆಯ ಜಯಸಂವತ್ಸರದಲ್ಲಿ (ಕ್ರೀಸ್ತಶಕ ೧೬೫೩ ರಲ್ಲಿ) ಈ ಕವಿಯು ಜೀವಿಸುತ್ತಿದ್ದನೆಂದು ನಿರ್ಣಯವಾಗುತ್ತದೆ. ದನು ಗೂರುಮಠದ ಸ್ವಾಮಿಯ ಶಿಷ್ಯನಾದ ಷಡಕ್ಷರದೇವನು ಎಳಂದೂರಲ್ಲಿ ವಾಸಿಸು ವುದಕ್ಕೆ ಕಾರಣವೇನೆಂದರೆ:—ಆ ಕಾಲದಲ್ಲಿ ಹದಿನಾಡೆಂಬ ದೇಶವನ್ನು ಪಾಲನ ಮಾಡುತ್ತಿದ್ದ ಮುದ್ದುರಾಜನು ತನ್ನ ಹೆಂಡತಿಯ ತೌರುಮನೆಯ ಗುರುವಾ ಗಿದ್ದ ಷಡಕ್ಷರದೇವನನ್ನು ಕರೆಸಿ ತನ್ನ ಹೆಂಡತಿಯ ತೌರೂರಾದ ಎಳಂದೂರಿನ ಲ್ಲಿಯೇ ಒಂದುಮಠವನ್ನು ಕಟ್ಟಿಸಿ, ಅನುಕೂಲತೆಪಡಿಸಿದ್ದನು.

ಈ ಕವಿಯ ಕಾಲದಲ್ಲಿ ಒಂದಾನೊಂದು ದಿನ ಜೈನಮತಸ್ಥರು ನೇಮಿ ಚಂದ್ರನಿಂ ಮಾಡಲ್ಪಟ್ಟ ಲೀಲಾವತಿ ಎಂಬ ಕರ್ಣಾಟಕ ಚಂಪೂಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ, ಆನೆಯ ಹೊಟ್ಟೆಗೆ ಒಂದು ಬೆಳ್ಳಿಯತೊಟ್ಟಿ

ಲನ್ನು ಕಟ್ಟಿ ಬೀದಿಯಲ್ಲಿ ಮೆರೆವಣಿಗೆಮಾಡಿಕೊಂಡು ಬರುತ್ತಾ ಷಡಕ್ಷರ ದೇವನ ಮಠದ ಮುಂದೆ ನಿಲ್ಲಿಸಲು ; ಆತನ ಶಿಷ್ಯರು ನೋಡಿ, ಆ ಗುಂಪಿನಲ್ಲಿ ಮುಖ್ಯರಾದವರನ್ನು, ಇದೇನು ಮೆರವಣಿಗೆ ಎಂದು ಕೇಳಲಾಗಿ ಇದು ಕರ್ನಾಟಕಗ್ರಂಥಶಿರೋಮಣಿಯಾದ ಕವಿಕುಂಜರಲೀಲಾವತಿಯ ಮೆರವಣಿಗೆ ಎಂದು ಹೇಳಿದರು. ಅದು ಸರಿ. ಈ ಆನೆಯ ಹೊಟ್ಟೆಗೆ ತೊಟ್ಟಲನ್ನು ಕಟ್ಟಿರುವುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಲು,—ನಗುತ್ತಾ ಓಹೋ ನಿಮಗೆ ಗೊತ್ತಾಗಲಿಲ್ಲವೋ ? ಈ ಗ್ರಂಥವು ರಸಭರಿತವಾದುದು. ಆ ರಸವು ಸ್ರವಿಸಿ ನೆಲದಲ್ಲಿ ಬಿದ್ದೀತೆಂದು ಊಹಿಸಿ ತೊಟ್ಟಲನ್ನು ಕಟ್ಟಿದ್ದೇವೆ ಎಂದು ಕುಚೇಷ್ಟೆಯ ಮಾತುಗಳನ್ನಾಡಿದರು. ಶಿಷ್ಯರು, ಒಳಗೆ ಹೋಗಿ ಆ ಸಂಗತಿಯನ್ನು ಷಡಕ್ಷರದೇವನಿಗೆ ತಿಳಿಸಿದರು. ಆತನು ಕೇಳಿ—ಇದಕ್ಕಿಂತಲೂ ರಸಭರಿತವಾದ ಗ್ರಂಥವಿರುವಲ್ಲಿ ಈ ಗ್ರಂಥಕ್ಕೆ ಇಷ್ಟು ಬಹುಮಾನವು ಸಲ್ಲುವುದಿಲ್ಲ. ಆದುದರಿಂದ ಮೆರೆವಣಿಗೆಯನ್ನು ಹಿಂತಿರುಗಿಸಬೇಕೆಂದು ಶಿಷ್ಯರ ಕೂಡ ಹೇಳಿ ಕಳುಹಿಸಿ ಮುಂದಕ್ಕೆ ಹೋಗದಹಾಗೆ ತಡೆಸಿದನು. ಈ ಸಂಗತಿಯನ್ನು ಅವರು ಅರಮನೆಯ ಆ ಸ್ಥಾನದಲ್ಲಿ ದೂರಲಾಗಿ ಅಧಿಕಾರಿಗಳು ವಿಚಾರಮಾಡುವ ಸಂದರ್ಭದಲ್ಲಿ ಷಡಕ್ಷರ ದೇವನು ಇನ್ನೊಂದು ವರ್ಷದೊಳಗಾಗಿ ರಸಭರಿತವಾದ ಗ್ರಂಥವನ್ನು ಕಾಶಿಯಿಂದ ತರಿಸುತ್ತೇನೆ. ಆದಕ್ಕಿಂತ ಲೀಲಾವತಿಯು ರಸಭರಿತವಾದುದೆಂದು ವಿದ್ವಾಂಸರಿಗೆ ತೋರಿದರೆ, ಆಗ ಮೆರವಣಿಗೆ ಮಾಡಬಹುದೆಂದು ಹೇಳಿದುದಕ್ಕೆ ವಾದಿಗಳೆಲ್ಲರೂ ಒಪ್ಪಿಕೊಂಡರು. ಅನಂತರ ಷಡಕ್ಷರದೇವನು ರಾಜಶೇಖರ ವಿಳಾಸವೆಂಬ ಗ್ರಂಥವನ್ನು ರಚಿಸುವುದಕ್ಕೆ ಪ್ರಾರಂಭಿಸಿ, ಒಂದು ವರ್ಷದೊಳಗಾಗಿ ಪೂರ್ಣಮಾಡಿ, ವಿದ್ವಾಂಸರನ್ನು ಕೂಡಿಸಿ ಸಭೆಯಲ್ಲಿ ಮೊದಲು ಕವಿಕುಂಜರ ಲೀಲಾವತಿಯ ಮುಖ್ಯ ಭಾಗಗಳನ್ನು ಓದಿಸಿದಮೇಲೆ ರಾಜಶೇಖರದಲ್ಲಿ ಆಯಾ ವರ್ಣನಾಂಶಗಳನ್ನು ಓದಿ ತಾನೇ ಅರ್ಥವನ್ನು ಹೇಳಿ—ಎರಡರಲ್ಲಿ ಯಾವದು ರಸಭರಿತವಾದುದೆಂದು ಕೇಳಲು; ವಿದ್ವಾಂಸರೆಲ್ಲರೂ ಲೀಲಾವತಿಯು ಕನ್ನಡದಲ್ಲಿ ಪ್ರೌಢವಾದಾಗ್ಯೂ ರಾಜಶೇಖರ ವಿಳಾಸದಷ್ಟು ರಸಪುಷ್ಟಿಯುಳ್ಳುದಲ್ಲವೆಂದು ಹೇಳಿ, ಒಟ್ಟಾಗಿ ಷಡಕ್ಷರ ದೇವನ ಕವಿತಾ ವಿಷಯವಾಗಿ

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರ |
ನ್ಮಂಜೀರದ್ವಯಮಂಜುನಾದವಿಭವ ಶ್ರೀಗರ್ವಸರ್ವಂಕಷಾಃ ||
ಜೀಯಾಸುರ್ಭವತಷ್ಷಡಕ್ಷರ ವಿಭೋಃಕುಂದಾರವಿಂದಾವಳೀ |
ಮಂದಾರದ್ರುಮಮಂಜರೀ ಮಧುಝುರೀ ಮಾಧುರ್ಯಧುರ್ಯಾಗಿರಃ ||

ಎಂದು ಯೋಗ್ಯತಾ ಪತ್ರವಂ ಕೊಟ್ಟರೆಂದು ಬಹು ಕಾಲದಿಂದಲೂ ಒಂದು ಐತಿಹ್ಯವು ಜನಜನಿತವಾಗಿ ಬಂದಿರುವುದು. ಇದಕ್ಕನುಗುಣವಾಗಿ ರಾಜಶೇಖರ ವಿಳಾಸ ಗ್ರಂಥದ ೧೪ ನೆಯ ಆಶ್ವಾಸದ ೧೭೨ ನೆಯ ಪದ್ಯವಿದೆ.

ಇಂತೀಕಾವ್ಯಮನೊಲ್ದುಕೇಳ್ದ ವಿಬುಧರ್ಮೆಚ್ಚಿಕೊಂಡಾಡೆಪೇ |
ರ್ದಂ ತಾನೊರ್ಪನೆ ಸಾಂಬಶಂಭು ಕೃಪೆಯಿಂದೇ ಕಾಬ್ದದೊಳ್ಪೂರ್ಣಮ ||
ಪ್ಪಂತೋರಂತೆ ಷಡಕ್ಷರಾರ್ಯನನಘಂಸಾಹಿತ್ಯ ಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗ ಸಂಗತಮಹಾಮಾಹೇಶ್ವರಂ ಭಕ್ತಿಯಿಂ ||

ಷಡಕ್ಷರದೇವನ ಕಾಲದಲ್ಲಿ ಮುದ್ದುರಾಜನು ಹದಿನಾಡಿನಲ್ಲಿ ರಾಜ್ಯವನ್ನಾಳುತ್ತಿದ್ದನೆಂಬ ವಿಷಯವನ್ನು ಯಳಂದೂರಿನ ಗೌರೀಶ್ವರದೇವಾಲಯದ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.

ಶಾಸನದ ೩೨ ನೆಯ ಪಙ್ಕ್ತಿಯಿಂದ ೪೮ ನೆಯ ಪಙ್ಕ್ತಿಯವರೆಗೆ—

ಕಂ|| ಶ್ರೀ ಪತಿವಿಭವಂಮನಸಿಜ ರೂಪಂದೇಪೇಂದ್ರಸೂನುರಾಮನೃಪಾಲಂ ||
ಭೂಪಕುಲತಿಲಕನಖಿಳಕ | ಳಾಪರಿಣತನಾಳುತಿರ್ದ್ದಪದಿನಾಡುಗಳಂ ||

ಶಾಲಿವಾಹನಶಕವರ್ಷ, ೧೪೯೦ ಸಂದ ವಿಭವ ಸಂವತ್ಸರದಲ್ಲಿ:—

ಅಣಿಯರದಿಂ ಗೌರೀಶನ | ಗುಣನಿಧಿ ಪೂಜಾರ್ಥಮಾಗಿ ತದ್ಭೂಪಾಲಂ ||
ಗಣಗನೂರಾಖ್ಯನಗರಮ | ನೆಣಿಕೆಯನುಳಿದಿತ್ತನೇಂ ಕೃತಾರ್ಥನೊ ಜಗದೊಳ್||
ಆತನನುಜಾತನಿಖಿಳೋ | ರ್ವೀತಳನುತನಮಳಕೀರ್ತಿ ಚೆನ್ನನೃಪಾಲಂ ||
ನೂತನಮದನಂಗೆಸೆವಖ್ಯಾತಸುತರ್ನಂಜರಾಜತಿರುಮಲರಾಜರ್ ||

ಮತ್ತಮಾಸಂಜರಾಜಾಗ್ರಜಂತಿರುಮಲರಾಜಂ

ಕಂ|| ಇತ್ತಂ ವಡಿಯುರಪುರಮಂ | ಬಿತ್ತರವೆತ್ತೆಸೆವ ಸೀನಗೂಡಲಮಂ ಭೂ||
ಪೋತ್ತಮನತಿಮುದದಿಂದೇ| ವೋತ್ತಮಗೌರೀಶ್ವರಂಗೆ ಚಿಂತನಪುರಮಂ ||

ವೃ|| ಎಸೆವಾ ಭೂಪನಸೂನುಸತ್ಯನಿಧಿ ಸದ್ಧರ್ಮಾನ್ವಿತಂ ಸಂತತಂ |
ಕುಶಲಂಬೆತ್ತುರೆ ಯಾಳುತಿರ್ದಹದಿನಾಡಾಖ್ಯಾತ ಭೂಭಾಗಮಂ ||
ಕುಸುಮಸ್ತ್ರಾರಿಪದಾಂಬುಜಾತನವಭೃಂಗಂ ಯಾಚಕಾಧಾರನೇಂ |
ವಸುಧಾಚಕ್ರದೊಳೊಲ್ದುರಾಜಿಸಿದನೋ ಮುದ್ದೇಂದ್ರ ಭೂಪಾಲಕಂ ||

ಶಾಲಿವಾಹನಶಕವರ್ಷ ೧೫೭೬ ಸಂದಜಯಸಂವತ್ಸರದಲ್ಲಿ—

ಕಂ|| ಅಂತಪ್ಪಮುದ್ದುಭೂಪತಿ | ಸಂತಸದಿಂತೋಟಗದ್ದೆ ಕೊಂಡಂಗೆರೆಗಳ ||
ಕಂತುಗಿರಿಕುಲಿಶಗೌರೀ | ಕಾಂತಂಗೊಲಿದಿತ್ತನೇನುದಾತ್ತನೊಜಗದೊಳ್ ||

ಈ ಸಂದರ್ಭಗಳನ್ನು ಪರ್ಯಾಲೋಚಿಸಿದರೆ ಚಿಕ್ಕದೇವರಾಜೊಡೆಯರು ಸಿಂಹಾಸನಾರೂಢರಾಗುವುದಕ್ಕಿಂತ ೨೫ ವರ್ಷಗಳ ಹಿಂದೆ ಷಡಕ್ಷರದೇವನು ಈ ಗ್ರಂಥವನ್ನು ಬರೆದನೆಂದು ತಿಳಿದುಬರುತ್ತದೆ. ಷಡಕ್ಷರಕವಿಯು ತನ್ನಗ್ರಂಥಗಳಲ್ಲಿ ಮುದ್ದುರಾಜನ ಹೆಸರನ್ನಾದರೂ ಚಿಕ್ಕದೇವರಾಜನ ಹೆಸರನ್ನಾದರೂ ಎತ್ತದಿದ್ದಾಗ್ಯೂ ಪೂರ್ವೋಕ್ತಶಾಸನವನ್ನು ಕುರಿತು ವಿಚಾರಮಾಡಿದರೆ ಷಡಕ್ಷರದೇವನು ರಾಜಶೇಖರವಿಳಾಸವನ್ನು ಪೂರ್ತಿಮಾಡಿದ ವರ್ಷದಲ್ಲಿಯೇ ಮುದ್ದುರಾಜನು ಗೌರೀಶ್ವರನಿಗೆ ತೋಟಗದ್ದೆ, ಕೊಂಡಂಗೆರೆ ಎಂಬ ಗ್ರಾಮಂಗಳನ್ನು ಒಪ್ಪಿಸಿರುವುದರಿಂದ ಷಡಕ್ಷರದೇವನು ಮುದ್ದುರಾಜನಾಶ್ರಯದಲ್ಲಿದ್ದನೆಂಬುವುದರಲ್ಲಿ ಯಾವಸಂದೇಹವೂ ಇಲ್ಲ. ಮತ್ತು ಷಡಕ್ಷರದೇವನು ವೃಷಭೇಂದ್ರವಿಜಯ, ಶಬರಶಂಕರವಿಲಾಸ ಎಂಬ ಬೇರೆ ಎರಡು ಕರ್ಣಾಟಚಂಪೂಗ್ರಂಥಗಳನ್ನೂ, ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯ ಎಂಬಮೂರು ಸಂಸ್ಕೃತಗ್ರಂಥಗಳನ್ನೂ ರಚಿಸಿದ್ದಾನೆ. ರಾಜಶೇಖರವಿಳಾಸದಲ್ಲಿನ ಕೆಲವು ಪದ್ಯಗಳು ಪ್ರಾಚೀನಗಳಾದ ಉದ್ದಾಮಗ್ರಂಥಗಳ ಪದ್ಯಗಳಿಗೆ ಸಮಾನವಾದ ಶೈಲಿಯುಳ್ಳವುಗಳಾಗಿಯೂ ಕೆಲವು ಪದ್ಯಗಳು ಪೂರ್ವಗ್ರಂಥಗಳ ಶೈಲಿಗಿಂತ ರಮಣೀಯವಾದ ಶೈಲಿಯುಳ್ಳವುಗಳಾಗಿಯೂ ಲಲಿತವಾದಪದಬಂಧವುಳ್ಳವುಗಳಾಗಿಯೂ ಇವೆ. ಗದ್ಯಗಳು ಪುರಾತನ ಗ್ರಂಥಗಳಲ್ಲಿನಗದ್ಯಗಳಿಗಿಂತ ಶ್ರಾವ್ಯವಾಗಿಯೂ ಓದುವುದಕ್ಕೆ ಸರಳವಾಗಿಯೂ ಇವೆ. ಈ ಗ್ರಂಥದಲ್ಲಿ ಸಂಸ್ಕೃತಶಬ್ದಗಳೂ, ಕರ್ಣಾಟಶಬ್ದಗಳೂ ಪ್ರಾಯಶಃ ಸಮಾನವಾಗಿಯೇ ಪ್ರಯೋಗಿಸಲ್ಪಟ್ಟಿವೆ. ಕವಿತಾಪಾಕಗಳಲ್ಲಿ ಕದಳೀಪಾಕವೆಂದು ಹೇಳಬಹುದು. ಈ ಕಾಲದಲ್ಲಿ ಚಂಪೂಪ್ರಬಂಧವನ್ನಾಗಲಿ, ಪದ್ಯಪ್ರಬಂಧವನ್ನಾಗಲಿ, ಗದ್ಯಪ್ರಬಂಧವನ್ನಾಗಲಿ ರಚಿಸಲಪೇಕ್ಷೆಯುಳ್ಳವರು ರಾಜಶೇಖರವಿಳಾಸದ ಸರಣಿಯಂ ಹಿಡಿದು ರಚಿಸಿದರೆ ಗ್ರಂಥವು ಶ್ಲಾಘನೀಯವಾಗುವುದು. ಮತ್ತು ಕರ್ಣಾಟ ಭಾಷಾಭ್ಯಾಸಿಗಳು ಈ ಗ್ರಂಥವನ್ನು ಅರ್ಥವತ್ತಾಗಿ ಓದಿದರೆ ವ್ಯುತ್ಪತ್ತಿಯುಂಟಾಗುವುದು. ಪಾಠಕರಿಗೆ ಸುಲಭವಾಗಿರುವಂತೆ ಪಾದಪಾದಗಳನ್ನು ಹಿಂಗಡಿಸಿ ಪ್ರಾಜ್ಞರಿಗೆ ಕವಿಯ ಅಭಿಪ್ರಾಯವು ವ್ಯಕ್ತವಾಗುವಂತೆ ಲೇಖಕಪಾಠಕದೋಷಗಳನ್ನೆಲ್ಲಾ ಶೋಧಿಸಿ ಮುದ್ರಣಗೊಳಿಸಲ್ಪಟ್ಟಿರುವ ಈ ನೂತನ ಪುಸ್ತಕವನ್ನು ಗುಣಜ್ಞರಾದವರು ಓದಿ ಸಂತೋಷಗೊಂಡು ನನ್ನ ಉದ್ದೇಶವನ್ನು ಸಾಫಲ್ಯಗೊಳಿಸದಿರಲಾರರೆಂದು ನಂಬಿದ್ದೇನೆ.

ಪಿ. ಆರ್. ಕರಿಬಸವಶಾಸ್ತ್ರಿ.

# ವಿಷಯಾನುಕ್ರಮಣಿಕೆ.

# ಶುದ್ಧಾಶುದ್ಧಪತ್ರಿಕೆ.

| ಪುಟಂ | ಪಜ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಜ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಜ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ೫ | ೨೧ | ಭುವವನದೆ | ಭುವನದೆ | ೫೩ | ೧೩ | ಯ್ಯೆರಸ | ಯ್ಯೆಸರ | ,, | ೧೮ | ದೊಲ್ಲಿಂ | ದೊಳ್ಳಿಂ |
| ೧೦ | ೧೮ | ನಗ್ಗದಂ | ನಗ್ಗದ | ೫೪ | ೮ | ಗಲ್ರ್ಕ | ಗಲ್ಕ್ರ | ೮೫ | ೩ | ಜನತಾಕು | ಜನತಾ |
| ೧೧ | ೭ | ಪಡೆವು | ಪಡೆಯು | ,, | ೧೯ | ಯೂಥಿಕಾ | ಯೂಥಿಕಾ | ,, | ೯ | ದಿವ್ಯಾಂಘಿ | ದಿವ್ಯಾಂಘ್ರಿ |
| ೧೫ | ೪ | ತಿಸ್ಥಿ | ಸ್ಥಿತಿ | ೫೬ | ೩ | ಸವುರ | ಸವುರ | ,, | ೧೦ | ಪರಸಿರ | ಪರಸಿದ |
| ,, | ,, | ಯೆಳಡಚ್ಛುೞ | ಯೊಡಚ್ಛುೞ | ,, | ೮ | ತೋರೆ | ತೋರ | ,, | ೧೩ | ಮಹಿಸೆಗೆ | ಮಹಿಗೆ |
| ೧೯ | ೮ | ನ್ನೊಳ್ಕರಂ | ನೊಳ್ಕರಂ | ೬೦ | ೨೨ | ಲ್ವಳಿಪ | ಲವ್ವಳಿಪ | ೮೯ | ೭ | ಚ್ಛ್ರೀದ | ಚ್ಛ್ರೀದೆ |
| ೨೦ | ೨೪ | ಮುರಿಯುದೆಟ | ಮುರಯುದೆವಟ | ೬೧ | ೧ | ಕಾಂಯಂತಿ | ಕಾಂತಿಯಂ | ,, | ೧೦ | ವರ್ಷಾಂಬು | ಘರ್ಮಾಂಬು |
| ೨೩ | ೧೬ | ಮುಕ್ತೌಘು | ಮುಕ್ತೌಘ | ,, | ೧೧ | ಬಿಂಬಾದಾ | ಬಿಂಬಾಧರಾ | ,, | ೧೬ | ಕುರುಳಿಂ | ಕುರುಳೆಂಬ |
| ೨೯ | ೧೧ | ಶಶ್ವಂ | ಶಶ್ವ | ,, | ೨೮ | ತನ್ಮುಕುರ | ತನ್ಮುಕು | ೯೦ | ೫ | ಸೂಂಕಿದಂ | ನೂಂಕಿದಂ |
| ೩೪ | ೩ | ಕನ | ಕನಕ | ೬೨ | ೧ | ಕುಂಡೆ | ಕಡೆ | ೯೧ | ೨ | ಮಂಚಿ | ಮಂಚಿತ |
| ೩೭ | ೧೬ | ವಿರಾಜಿತು | ವಿರಾಜಿತ | ೬೪ | ೨೦ | ಕಾಂತಾತ | ಕಾಂತಾರ | ೯೨ | ೨ | ಳ್ಳಿವ | ಳ್ತ್ರಿವ |
| ೩೮ | ೨೦ | ಬಳಯಿಸೆ | ಬೆಳೆಯಿಸೆ | ೬೫ | ೫ | ಗ್ರಹನ್ತುಂ | ಗ್ರಹನುಂ | ೯೮ | ೫ | ನಪರ | ನಪರಿ |
| ೪೨ | ೨೪ | ಕಾರುಕು | ಕಾರುಕ | ೭೦ | ೧೨ | ದ್ರು ಚಿಯಂ | ದ್ರುಚಿಯಿಂ | ೧೦೨ | ೧೩ | ಕಾತುಕಾ | ಕೌತುಕಾ |
| ೪೭ | ೧೫ | ಘುರ್ಮ | ಘರ್ಮ | ೭೮ | ೧೩ | ಪಯೋಜನ | ಪಯೋಜ | ೧೦೫ | ೨೪ | ಗುವರ | ಗುರುವರ |
| ೪೮ | ೧೪ | ಮಂಪೂಡಿ | ಮಂಡಿ | ,, | ೧೬ | ಕೃತ್ಯ | ಕೃತ್ಯ | ೧೦೯ | ೧ | ಪೊಡವೊಡ | ಪೊಡವಡ |
| ,, | ೨೦ | ಮೆಸಿಹಿದು | ಮೆನಿಸಿದರ್ | ೮೧ | ೧೦ | ದಳ | ದಳಿ | ೧೧೧ | ೩ | ದೊಶ್ಯಕ್ರ | ದೊಳ್ಯಕ್ರ |

| ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ೧೧೨ | ೨೧ | ಸಾಕುವಾರ್ನ್ಯ | ಸೌಕುಮಾರ್ಯ | ೨೦೦ | ೨೨ | ರಿವೃತ | ಪರಿವೃತ | ೨೭೦ | ೨೨ | ರುಚಿವಿ | ರುಚಿರವಿ |
| ೧೧೫ | ೧ | ನೃಷ | ನೃಪ | ೨೦೫ | ೪ | ಗೊಳಿದ | ಗೊಳಿಸಿದ | ೨೭೧ | ೧೬ | ಪ್ರಭೆಯಾ | ಪ್ರಭೆಯೋ |
| ೧೧೮ | ೨೧ | ಸಂಘಡಿಂ | ಸಂಘದಿಂ | ೨೧೧ | ೯ | ಬಂದವ | ಬಂದನವ | ,, | ೨೬ | ಮೆಗುಂ | ಮಸೆಗುಂ |
| ೧೨೨ | ೧೦ | ಖರ್ಬುಡ್ಗ | ಖರಖುಡ್ಗ | ೨೧೫ | ೧೮ | ಬಳಿಯಿಂ | ಬಳಿಕಂ | ೨೭೫ | ೯ | ತ್ರಳೆ | ತಳೆ |
| ೧೨೫ | ೧೧ | ನುಡಿಗಳಲ್ಲಿ | ನುಡಿಗಲ್ಲಿ | ೨೧೬ | ೧೭ | ಮುಮ್ಯಾ | ಮುಮಾಸ್ಯ | ೨೭೬ | ೧೭ | ಅಗಳೆ | ಆಗಳೆ |
| ೧೨೬ | ೨೪ | ಕಾನನಿ | ಕಾನನ | ೨೨೧ | ೮ | ಯ್ವಿಂದಿದಿಂರ | ಯ್ವಿಂದಿಂದಿರ | ೨೭೮ | ೮ | ವಯೆಂದು | ಯೆಂದು |
| ೧೨೭ | ೧೨ | ಕಾತುಕಾ | ಕೌತುಕಾ | ೨೨೭ | ೨ | ಸತದೆ | ಸತ್ಪದೆ | ,, | ೧೧ | ಕಾಶಂ | ಕಾಶ |
| ೧೩೦ | ೨೦ | ಯುಧಿಷಿರ | ಯುಧಿಷ್ಠಿರ | ,, | ೯ | ಖೇಖರ | ಶೇಖರ | ೨೭೯ | ೭ | ಮಳಾಳಾಂ | ಮರಾಳಾಂ |
| ೧೩೨ | ೩ | ಳ್ಳುಡೆಮ | ಳ್ನಡೆದು | ೨೩೦ | ೨೧ | ನಳಿನಾ | ಸಲಿಲಾ | ೨೮೧ | ೧೭ | ದೀಂಟಿ | ದೀಂಟಿ |
| ,, | ,, | ಪಗಲುವೀ | ಪಗಲುಳ್ಳುವೀ | ೨೩೭ | ೧೭ | ವವಿ | ವಲಿ | ೨೮೩ | ೩ | ಚಂದ್ರ | ಚಂದ್ರಂ |
| ೧೩೫ | ೧೪ | ಮೂರ್ಳಲಮಂ | ಮೂರ್ಳಲಮುಂ | ೨೩೯ | ೨೫ | ನಟಿ | ನಟಿ | ೨೮೫ | ೨೨ | ಮುಟ್ಟ | ಮುಟ್ಟ |
| ೧೩೯ | ೬ | ವ್ವಿಲಯಾಗ್ನಿ | ಳ್ವಿಲಯಾಗ್ನಿ | ೨೪೭ | ೨೩ | ಪಕರ | ಪ್ರಕರ | ,, | ೨೪ | ಪೊಟ್ಟನೆ | ಪೊಪ್ಪಿರೆ |
| ೧೪೩ | ೨ | ವಿಜ್ಞಾಪಸಂ | ವಿಜ್ಞಾಪನಂ | ೨೬೨ | ೮ | ಪ್ರೊರ್ಮದಲಾ | ಪ್ರೊರ್ಮದಲೊ | ೨೮೬ | ೩ | ಟೆಂಡುಟಿ | ಚೆಂದುಟಿ |
| ೧೫೩ | ೧೧ | ರಂಜಿಸೆಯಂ | ರಂಜಿಸೆಯುಂ | ,, | ೧೬ | ಮತ್ತೆ | ಮುತ್ತೆ | ೨೮೮ | ೧೫ | ಲೊಡಚ್ಚಿ | ಪೊಡಚ್ಚಿ |
| ೧೭೩ | ೨೫ | ತಜ್ಞೋ | ತಜ್ಞೊ | ,, | ೧೮ | ಕಾಸ್ಮಿರಿ | ಕಾಸ್ಸಿರಿ | ,, | ೨೧ | ಚಂತುಟಿ | ಚೆಂದುಟಿ |
| ೧೭೮ | ೭ | ಮೇರಿಂ | ಮೇಲಿಂ | ,, | ೧೯ | ವ್ತೆತ | ವೆತ್ತ | ೨೯೦ | ೨೪ | ಟ್ವಲ್ಲ | ಟ್ವಲ್ಪ |
| ೧೮೨ | ೧೫ | ಯಸನಾಂ | ನಯನಾಂ | ೨೬೩ | ೨೩ | ನವನ | ನವಳ | ೨೯೧ | ೧೦ | ಮರಳು | ಮರುಳು |
| ೧೮೫ | ೨೪ | ಪಡೆಯೆಪೆ | ಪಡೆಯಪೆ | ೨೬೪ | ೧ | ನಾವಿಂಗಿಸಿ | ನಾಲಿಂಗಿಸಿ | ೨೯೨ | ೪ | ಮಾಡವೆ | ಮಾಡದೆ |
| ೧೯೨ | ೧೭ | ಕೆಂಳಿದ | ಕೆಂದಳಿ | ೨೬೬ | ೨೫ | ವಿಂಗದ | ಪಿಂಗದ | ,, | ೧೯ | ನುಡಿಯೆ | ನುಡಿಯಲೇ |
| ೧೯೫ | ೧೧ | ಘಸ | ಘನ | ೧೬೮ | ೪ | ಪ್ರೊಲಿವ | ಪ್ರೊಲಳಿವ | ೨೯೪ | ೩ | ವೆರೆಪುದು | ವೆರೆಪುದು |
| ೧೯೮ | ೯ | ಭದೀಯ | ಭವದೀಯ | ೨೬೯ | ೧೧ | ಜಮಾ | ಜನಮಾ | ೨೯೫ | ೬ | ಟೀನ | ಪೀನ |

| ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ,, | ೧೬ | ತಿಳು | ತಿಳಿ | ,, | ೧೫ | ಬಲಿಗಟ್ಟಿ | ಬಲಿಗಟ್ಟಿ | ೩೭೩ | ೫ | ಪೊರಗೆ | ಪೊರೆಗೆ |
| ೨೯೬ | ೯ | ವಾಗಿಲೊ | ವಾಗಿಲೊ | ೩೦೭ | ೧ | ಶ್ಯಾಘ್ಯ | ಶ್ಲಾಘ್ಯ | ೩೭೫ | ೨೧ | ಮಸೂನ | ಮನೂನ |
| ೨೯೮ | ೨೦ | ತಲ್ಪ | ತಲ್ಪ | ೩೧೦ | ೨೨ | ಲಘ | ಲಘು | ೩೭೮ | ೧೧ | ಒಡೆದಾ | ಬಡೆದಾ |
| ,, | ೨೩ | ಹಸ್ತ | ಹಸ್ತಾ | ೩೧೩ | ೨೧ | ಮುಡಿ | ಮುಡಿದ | ೩೭೯ | ೨೦ | ರಾತ್ನೆ | ರಾತೇ |
| ೩೦೦ | ೮ | ಜ್ಞೆಲ್ಲ | ಜ್ಞೆಲ್ಲ | ೩೧೫ | ೮ | ನಾಚ್ಚು | ನಾಙ್ಚು | ೩೮೨ | ೧೪ | ಅಕ್ಕಟಘ | ಅಕ್ಕಟ |
| ,, | ೨೨ | ಶಾಸ್ತ್ರ | ಶಾಸ್ತ್ರಾ | ೩೧೬ | ೩ | ಚಾಬ್ಚಂ | ಚಾಬ್ಚಂ | ೩೮೪ | ೧೮ | ದದ್ಬತ | ದದ್ಬುತ |
| ೩೦೧ | ೧೮ | ನವದೆಂ | ನದೆಂ | ೩೧೭ | ೧೭ | ಸ್ಫುರಿತ | ಸ್ಫುರಿತ | ೩೯೬ | ೮ | ಕುರಾವವ | ಕುರಾವ |
| ,, | ೨೦ | ಡೊಡುಡು | ಡೊಡು | ೩೨೮ | ೨೩ | ಮಣ | ಮಣಿ | ೩೯೯ | ೧೩ | ನಿಟಲ | ನಿಟಿಲ |
| ,, | ೨೧ | ಮಡದೆ | ಮಾಡದೆ | ೩೩೪ | ೧೭ | ಗ್ಗೊಗಳ್ದು | ಳ್ಗೊಗಳ್ದು | ೪೦೨ | ೧೪ | ನಮದರ್ೊ | ನಮದೋ |
| ೩೦೨ | ೨ | ಯಾನಡೆ | ಯಂನಡೆ | ೩೩೫ | ೧ | ಪೊಡೆ | ಯೊಡೆ | ೪೦೬ | ೨೦ | ಮಿಗರ್ಮಿ | ಮಿಗಮಿ |
| ,, | ೧೧ | ನೊವ್ವಳೊ | ನೊರ್ವ್ವಳೊ | ೩೩೭ | ೭ | ವಿಳಸಿಸಿತ | ವಿಳಸಿತ | ೪೦೯ | ೫ | ಮುರುಘು | ಮುರುಘ |
| ,, | ೧೩ | ಡೆಸೆ | ಡೊಸೆ | ೩೪೦ | ೧೮ | ದ್ವಿರದುಂ | ದ್ವಿರದಂ | ,, | ೮ | ರಭ | ರಭವ |
| ,, | ೧೮ | ನಲೆ | ನಲ್ಮೆ | ೩೪೪ | ೧೫ | ತ್ರಿಜ | ಕ್ರಿಜ | ೪೧೨ | ೧೦ | ತೇಂದ | ತೇಂದ್ರ |
| ೩೦೩ | ೧೧ | ವಾತಆತಿ | ವಾತಾಗಿ | ೩೪೬ | ೨೨ | ಪತ್ತೂ | ಪತ್ತೂ | ,, | ೧೧ | ಜಯಹ್ರ | ಜಯಹೃ |
| ,, | ೧೨ | ವಿತ್ತ | ವಿತ್ತ | ೩೫೨ | ೨೪ | ತವಳಡೆ | ತಳವಡೆ | ೪೧೪ | ೨೪ | ಮತ್ತೃತಿ | ಮತ್ಕೃತಿ |
| ,, | ೧೫ | ದೊಂದ | ದೊಂದು | ೩೫೫ | ೭ | ದ್ರಂವ | ದ್ರುವಂ | ೪೧೬ | ೭ | ಯಿಂದ ಬದ್ಧ | ಯಿಂದಬದ್ಧ |
| ೩೦೪ | ೯ | ದಿರಿಗಿ | ದಿರುಗಿ | ೩೫೮ | ೨೪ | ತಕ್ಕೆ | ತಳಕ್ಕೆ | ,, | ೮ | ಸಿದ್ಧಿ ನಿ. | ಸಿದ್ಧಿಸಿ |



ಶ್ರೀಪ್ರಮಥಗಣೇಭ್ಯೋನಮಃ

ಮಂಗಳಮಸ್ತು

---

# ರಾಜಶೇಖರವಿಳಾಸಂ

## ಪ್ರಥಮಾಶ್ವಾಸ ಪ್ರಾರಂಭವು.

ವೃತ್ತ॥ ಶ್ರೀಶೈಲಾದಿಪ್ರಸಿದ್ಧಂ ಸುರುಚಿರವಿಜಯಸ್ತುತ್ಯನುದ್ರಿಕ್ತಸತ್ವಾ ।
ವೇಶಂ ಕಲ್ಯಾಣಭೂಭೃತ್ಸದನಧನದಮಿತ್ರಂ ಧರಾಧಾರಧರ್ಮ೯ಂ ॥
ವೈಶದ್ಯದ್ಯೋತಿ ಚಂದ್ರೋಪಲಸಿತಭಸಿತಾನಂತಕಾಂತೋತ್ತಮಾಂಗಂ ।
ಶ್ರೀಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ॥ ೧

ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇ ।
ಣ್ಣಿಜವಾಹಂ ಧರ್ಮ೯ಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ ॥
ನಿಜರೋಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳೀಮಾತೆ ನಿಚ್ಚಂ ।
ನಿಜಮಾದಂ ಸುಪ್ರಮೋದಂ ಕುಡುಗೆಮಗತುಳಶ್ರೇಯಮಂ ಶೈಲಜೇಶಂ॥ ೨

ಪರಮುಕ್ತಿಪ್ರಮದಾಮುಖೈಕಮುಕುರಂ ಮೋಹಾಂಧಕಾರೌಘಭಾ ।
ಸ್ಕರಬಿಂಬಂ ಮುನಿಮುಖ್ಯಮಾನಸಗೃಹಾಂತರ್ಜ್ಯೋತಿ ಚಿದ್ವ್ಯೋಮವಿ ।
ಸ್ಫುರದಬ್ಜಾಹಿತಮಂಡಳಂ ಶ್ರುತಿಸತೀಸೀಮಂತರತ್ನಂ ಮಹೇ ।
ಶ್ವರಪಾದಾಬ್ಜನಖಂ ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್ ॥ ೩

ಕ್ಷಿತಿಯಂ ಪಾಲಿಪಗಣ್ಯಪುಣ್ಯಮತಿಯಂ ಪ್ರಖ್ಯಾತಸೌಂದರ್ಯಸಂ ।
ಗತೆಯಂ ಶೈವಮತೈಕಕಲ್ಪಲತೆಯಂ ಶ್ರೀವಾಗ್ವಧೂಸಂತತ ॥
ಸ್ತುತೆಯಂ ಚಂದ್ರಧರಾರ್ಧದೇಹಯುತೆಯಂ ಬಾಲಾಬ್ಜಿನೀಕಾಂತಸ ।
ದ್ಯುತಿಯಂ ಪಾರ್ವತಿಯಂ ಕೃಪಾವತಿಯನಾಗಳ್ಬಣ್ಣಿಪೆಂ ಭಕ್ತಿಯಿಂ ॥ ೪

ಮುರಹರಪದ್ಮಸದ್ಮಮುಖನಿರ್ಜರಕೋಟಿಯುಸೊಕ್ಕಲಿಕ್ಕಿ ಸ |
ಚ್ಚರಿತಜಿತಾಕ್ಷಸಂಚಯಮನಂಜಿಸಿ ಭಂಜಿಸಿ ಮೂಜಗಂಗಳೊಳ್ ||
ಸರಿದೊರೆಯಿಲ್ಲಿವಂಗೆನಿಪಶೌರ್ಯಮನಾಂತ ಮನೋಜನಂ ಕನ |
ಲ್ದುರುಪಿದಶಂಭುವರ್ಧತನುವಂ ಸೆಳೆದಂಬಿಕೆಗೈದೆ ವಂದಿಪೆಂ || ೫

ಯತಿತತಿಚಕ್ರವರ್ತಿ ರುಚಿರಾಮಳಮೂರ್ತಿ ವಿಶಾಲಕೀರ್ತಿಪೂ |
ರಿತಹರಿದಂತನುಜ್ಜ್ವಳಗುಣಾವಳಿಕಾಂತನತೀವಶಾಂತನಾ ||
ಶ್ರಿತಜನರಕ್ಷನನ್ವಿತಜಿತಾಕ್ಷನಮೋಘಕೃಪಾಕಟಾಕ್ಷನೂ |
ರ್ಜಿತಚಿಕವೀರದೇಶಿಕಶಿಖಾಮಣಿ ಮಾಳ್ಕೆಮಗಿಷ್ಟಸಿದ್ಧಿಯಂ || ೬

ರದನದಕಾಂತಿ ನಿರ್ಝರಮುದಗ್ರಕಿರೀಟಮಣಿಪ್ರಕಾಶಮೊಂ |
ದಿದನವಧಾತು ಬದ್ಧಫಣಿಯುಂದಮರರ್ಕ್ಕಡೆಯುಲ್ಕೆ ಕಟ್ಟಿದ ||
ಗ್ಗದಫಣಿ ಗಂಡಮಂಡಳಮದಾಂಬುಗೆ ಪಾರ್ದ್ದಿರಪುನ್ಮದಾಳಿ ನೀ |
ರದಮೆನೆ ಮಂದರಂಬೊಲೆಸೆವಾನೆಮೊಗಂ ಮಿಗೆ ಮಾಳ್ಕವಿಘ್ನಮಂ|| ೭

ಅಹಿತತಮೋಪಹಂ ದನುಜಸಂಹೃತಿಶಕ್ತಿಧರಂ ಪ್ರಭಾಕರಂ |
ಮಹಿತಮಹೋದಯಂ ಕಮಳಬಂಧುರಸಸ್ಮಿತವಕ್ತ್ರಭಾಸುರಂ ||
ಬಹುಕರರಂಜಿತಂ ವಿಹೃತದೋಷನನಾರತಮೆನ್ನ ಹೃತ್ಪಯೋ |
ರುಹಕುರೆ ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ || ೮

ಸ್ಥಿರಕಾಯಂ ಸತ್ಸಹಾಯಂ ಶಮಿತವಿತತಮಾಯಂ ಸುರವ್ರಾತಗೇಯಂ|
ಗುರುಶೃಂಗಂ ಸಾಧುಸಂಗಂ ಮದನಮದವಿಭಂಗಂ ಮಹೇಶಾಂತರಂಗಂ ||
ವರವೇಷಂ ಚಿತ್ರಭೂಷಂ ಪದವಲಯಿತಶೇಷಂ ಸದಾಸತ್ಯಭಾಷಂ |
ಪರಿರುಂದ್ರಂಭೂತಿಸಾಂದ್ರಂ ಕುಡುಗೆಮಗೆವಿತಂದ್ರತ್ವಮಂ ಶ್ರೀವೃಷೇಂದ್ರಂ||

ಸಕ್ಷಮ ದಕ್ಷಶಿಕ್ಷಣವಿಚಕ್ಷಣ ಸುಕ್ಷಣಲಕ್ಷಣೇಕ್ಷಣಾ |
ರಕ್ಷಿತಲಕ್ಷಿತೇಶ್ವರಮುಮುಕ್ಷುಜಿತಾಕ್ಷ ಮಹೋಕ್ಷಲಕ್ಷ ಘಾ ||
ಲಾಕ್ಷ ತರಕ್ಷುರಾಕ್ಷಸವಿಪಕ್ಷ ವಳಕ್ಷಸರಕ್ಷದೇಹಮೋ |
ಹಕ್ಷಯದಕ್ಷ ರಕ್ಷಿಪುದಧೋಕ್ಷಜಪಕ್ಷ ಶಿವಾಕ್ಷಿಸಂಭವಾ || ೧೦

ಸದಮಳಧರ್ಮರೂಪನಭವಾಗಮಸಾರಕಳಾಕಳಾಪನು |
ನ್ಮದಮದನಪ್ರಲೋಪನಕಳಂಕ ಸದದ್ವಯತತ್ವದೀಪನ ||
ಭ್ಯುದಯವಹಪ್ರತಾಪನತಿಭಕ್ತಿವಶೀಕೃತ ಶೈಲಚಾಪನಾ |
ತ್ತದಯಜಿತತ್ರಿತಾಪ ಬಸವೇಶ್ವರನೀಗೆಮಗೀಶಭಕ್ತಿಯಂ || ೧೧

ವೃಜಿನವ್ರಾತಮನೊಕ್ಕಲಿಕ್ಕಿ ಮದಮಾತಂಗಂಗಳಂ ಸೀಳ್ದುತಾ |
ಳ್ದಜಗದ್ವಿಶ್ರುತವರ್ತಿಕೀರ್ತಿಯನಸಂಗೋದ್ರೇಕಮಂ ಮೆಟ್ಟಿ ಮು ||
ಟ್ಟಿ ಜಡಂಪೊರ್ದ್ದದಸಾಧುಬೋಧಮನಶೇಷತ್ಯಾಗಮಂ ಯೋಗಮಂ |
ಸುಜನಗರ್ಗ್ಗಿಪಭಿನ್ನಚನ್ನಬಸವೇಶಂ ಮಾಳ್ಕೆ ಸುಜ್ಞಾನಮಂ || ೧೨

ಅರಿವರ್ಗಧ್ವಂಸಮಂ ಪೂಣ್ದೆಸಗಿ ತಳೆದು ಪಂಚಾಂಗಸನ್ಮಂತ್ರಮಂ ಪೊ |
ರ್ದ್ದಿರೆ ಸತ್ವಂ ಸತ್ಪ್ರಜಾಪಾಲನೆಯ ನೆಗಳ್ದುಪಾಯಂಗಳಂಸಾರ್ದ್ದುಶಕ್ತಿ ||
ಸ್ಫುರಣಂ ಕೈಗಣ್ಮೆ ತಂತ್ರೋದಿತಗುಣಗಣಮಂ ತಾಳ್ದವೋಘಪ್ರಭುತ್ವಂ |
ದೊರೆಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯುಮಂವಾಳ್ಪುದೆಮ್ಮೊಳ್||

ದುರಿತತಮಃಪತಂಗನಮಳಾರ್ಥವಿವೇಚನಸತ್ಪ್ರಸಂಗನೀ |
ಶ್ವರಲಸದಂತರಂಗನಭವಾಗಮವಾರಿಜ ದಿವ್ಯಭೃಂಗನ ||
ಕ್ಷರಪರಲಿಂಗಸಂಗನತಿಶಾಂತಿನಿರಸ್ತಜಡಾನುಷಂಗನೊ |
ಲ್ದುರುತರಸಿದ್ಧಲಿಂಗಯತಿತುಂಗ ನೊಡರ್ಚುಗೆ ಸಜ್ಜನೇಷ್ಟಮಂ || ೧೪

ಶಿವನೊಡನುಂಡು ಶಂಕರನನಂಗನೆಯಂಗಣಕಟ್ಟಿ ಶಂಭುವಿಂ |
ಗವಯವಮಿತ್ತು ಶರ್ವನೊಡನಕ್ಷಮನಾಡಿ ಭವಂಗಮರ್ಚಿಜ ||
ಕ್ಷುವನಭವಂಗೆ ಪಾಲೆರೆದು ಭರ್ಗನೊಳರ್ಪಿಸಿ ಸರ್ವಮಂ ಶಿವಾ|
ಧವನೊಲವೆತ್ತರಿಂದೆಮಗೆ ವಂದ್ಯರನಿಂದ್ಯರವದ್ಯವರ್ಜಿತರ್ || ೧೫

ಕಂದ|| ಸುಜನವರನತಪದನ ಸದ |
ಸುಜನವರದನತುಳನಾದರಸಿಕನ ವಿಳಸ ||
ನ್ನಿಜಗುಣಯೋಗಿಯ ನಿರುಪಮ |
ನಿಜಗುಣಯೋಗಿಯ ಪದಾಬ್ಜಕಾನತನಪ್ಪೆಂ || ೧೬

ವೃ|| ರೇಣುಕರಾಮುಪಂಡಿತ ಮಹಾಮರುಳಾರ್ಯರ ಮಾಯಿದೇವರಂ |
ಜಾಣನ ಜಕ್ಕಣಾರ್ಯನ ಜಗನ್ನುತಮಲ್ಹಣಮಲ್ಲಣಾರ್ಯರಂ ||
ಪ್ರೀಣಿತಶಂಭುಶಂಕರಹರೀಶ್ವರರಾಘವಕೇಶಿರಾಜರಂ |
ಮಾಣದೆ ಬಣ್ಣಿಸುತ್ತೆರಗಿ ಪೇಣ್ಪಡೆವೆಂ ಪರಮಾರ್ಥಸಿದ್ಧಿಯಂ || ೧೭

ವೃ|| ನುತಿಪೆಂ ವಿಶ್ರುತವೀರಶೈವಶರಧಿಶ್ರೀಸೋಮನಂ ಸೋಮನಂ |
ಜಿತವಾದಿವ್ರಜಸದ್ಬುಧಸ್ತುತಲಸತ್ಪತ್ಪದ್ಮನಂ ಪದ್ಮನಂ ||
ತತಗರ್ವೋದ್ಧತದುರ್ವಿದಗ್ಧಜನತಾಹೃದ್ಭೀಮನಂ ಭೀಮನಂ |
ಸತತಾರಾಧಿತ ಶಂಕರೀರಮಣಪಾದಾಂಭೋಜನಂ ಭೋಜನಂ || ೧೮

ಧರೆಯೊಳ್ಮೇಣ್ಪುಟ್ಟಿಪುಟ್ಟುತ್ತುರುಳ್ವನರರ ಮೇಲುಜ್ಬ್ಚಿಕಬ್ಬಂಗಳಂ ಪ |
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ಕೆಟ್ಟುಪೋದರ್ ||
ಹರಿದೇವಂ ದೇವದೇವೋತ್ತಮನ ಶರಣರಂಪಾಡಿ ಕೈವಲ್ಯಲಕ್ಷ್ಮೀ |
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾಸಸ್ಸಾಟಿಯಪ್ಪರ್|| ೧೯

ಕಂ|| ವರ್ಣತತಿಮಾತೃಜನಕರ |
ಪರ್ಣಾಪರಮೇಶರೆಂಬನಿಗಮೋಕ್ತಿಯನಾ ||
ಕರ್ಣಿಸಿ ತನ್ನುತಿಗೆಯ್ಯದ |
ದುರ್ಣರಕೃತಿಕರನೆ ಲಬ್ಧವರ್ಣವರಾಕಂ || ೨೦

ರಸೆಯೊಳ್ರಸವತ್ಕವಿತೆಯು |
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ ||
ನಿಸರಂ ಸುರರಂ ಪೊಗಳ್ವುದು |
ಕಸವರಮಂ ಕಳೆದು ಕಸಮನಾಂತವೊಲಕ್ಕುಂ || ೨೧

ಆದರಿಂದೆ ಮಹಿತಮಹಿಮಾ |
ಸ್ಪದನಂ ಶಿವನಂ ತದೀಯಶರಣವ್ರಜಮಂ ||
ಪದೆದು ಮುದವೊದವೆ ಬಲ್ಲಂ |
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ || ೨೨

ವೃ|| ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ|
ಸರಸಪದಾರ್ಥಮುಂ ತಡಕಿ ಕಾಣದೆ ಕಳ್ದು ಪರೋಕ್ತಯುಕ್ತಿಯಂ ||
ವಿರಚಿಸುತಂತುವಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ |
ಲುರಿಚರ ತೋರ್ಪದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ || ೧೩

ಕಂ|| ಅಳಿಗಬ್ಬಿಗನೊರ್ವ್ವಂ ಮಂ |
ಜುಳಯುಕ್ತಿಯನೊಂದನೊಂದಿ ಸರಿವರ್ಪ್ಪನೆಯ||
ಗ್ಗಳ ಕವಿಗೆರನ್ನವೊಂದಂ |
ತಳೆದಹಿ ರತ್ನಾಕರಕ್ಕೆ ಸರಿವಂದಪುದೇ || ೧೪

ಸಕಳಕಳಾನಿಧಿನಿಕಟದೆ |
ಸುಕರರಸಪ್ರಕಟಕಾವ್ಯಮೆಂಬಮೃತಪಯೋ ||
ಧಿ ಕರಂ ಪೆರ್ಚ್ಚುಗುಮಲ್ಲದೆ |
ಕುಕವಿಬುಧಪ್ರಭೃತಿಯಿದಿರೊಳೇಂ ಪೆರ್ಚುಗುಮೋ || ೧೫

ಕೃತಿಕೃತಕೃತಿಯಂ ಕ್ಷಿತಿಯೊ |
ಳ್ಮತಿರಹಿತರ್ತ್ತಿಳಿಯರೆಂದು ಪಳಿಯೆಂ ಮುಳಿಯೆಂ ||
ರತಿಲಾಲಸ ರಮಣೀ ಸಮು |
ರತಿಯಂ ಕ್ಲೀಬರ್ಕ್ಕಳೆಂತುಮೇನರಿದಪರೇ || ೧೬

ಬೇರೆನಿಸಿ ಮಿಸುಗುವಲರ್ಗ |
ಳ್ಬೇರುವನರುಗಂಪಿನೊಳ್ವಿಶೇಷಮನರಿವಂ ||
ತಾರಡಿ ನಾನಾಕೃತಿಯೊ |
ಳ್ತೋರುವನವಭಾವಭೇದಮಂ ಬುಧನರಿವಂ || ೧೭

ವೃ|| ಭುವನವಡೆ ಭೋಜರಾಜನ ಮಹಾಸಭೆಯೊಳ್ಬಹುಶಾಸ್ತ್ರಕೋವಿದ |
ರ್ಸ್ಸವಿ ಸಲೆ ಪೊಣ್ಮೆ ಪಾಡುವವರೇನಿರರೇ ತೆಗೆ ಕಾಳಿದಾಸಮು ||
ಖ್ಯವಿವಿಧಸತ್ಕವೀಂದ್ರರ ಜಸಂ ಬಿಡದಿನ್ನುಮಿರುತ್ತೆ ತೋರ್ಪವೋ |
ಲವರ ಜಸಂ ವಿರಾಜಿಪುದೆ ಸತ್ಕವಿಯೊಳ್ಸರಿವರ್ಪ್ಪನಾವನೋ || ೧೮

ಕಂ|| ಆರಾರೇರಶರ್ಶಾಸ್ತ್ರ |
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ ||
ತಾರತ್ನಂ ದೊರೆಗುಮೆ ಮಾ |
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ || ೨೯

ಕಲಿಸಿದೊಡೇಂ ಬಕ್ಕರ್ಕಮೆ ಸ |
ಲ್ಲಲಿತಕವಿತ್ವಂ ನಿಸರ್ಗಸುಭಗಂ ರಮಣೀ ||
ವಿಲಸಿತ ರತಿರಸ ರಸಿಕತೆ|
ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ || ೩೦

ನಿಂದಿಸುವದ್ದುರ್ಜನರೆಂ |
ಬೊಂದುಭಯಂಬೆತ್ತು ಸುಕವಿ ರಚಿಸನೆ ಕೃತಿಯಂ ||
ಮಂದೇಹರಭಯದಿಂದರ |
ವಿಂದಸಖಂ ನಿಜಮಯೂಖಮಂ ಪಸರಿಸನೇ || ೩೧

ಕಿರಿಯಕೃತಿ ಪಿರಿದೆನಿಕ್ಕುಂ |
ಪೆರರರ್ಥಕೆ ಕೈದುಡುಂಕದಿರೆ ಸತ್ಕವಿಗಂ ||
ಕಿರಿಯಸಿರಿ ಪಿರಿದೆನಿಕ್ಕುಂ |
ಪೆರರರ್ಥಕೆ ಕೈದುಡುಂಕದಿರೆ ಮನುಜಂಗಂ || ೩೨

ಮಿಸುನಿಯದೊಂದಾದೊಡದೇಂ |
ಪೊಸತೊಡವೆನಿಸುತ್ತೆ ಬೇರೆಬೇರೆನಿಸುವವೋಲ್ ||
ರಸವತ್ಕವಿತಾಮಾರ್ಗಂ |
ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ || ೩೩

ಭವ್ಯಸ್ಸತ್ಕೃತಿವೇಳ್ದ|
ಕ್ಕರ್ಕವ್ಯಾಲಾಪಾಂಸ್ತ್ವ ವರ್ಜಯೇದೆಂಬುದಸ||
ತ್ಕಾವ್ಯನಿಬಂಧನಮುದರಿಂ |
ಸೇವ್ಯಂ ಸತ್ಕಾವ್ಯಮುವನಿಯೊಳ್ಬುಧಜನದಿಂ || ೩೪

ವೃ॥ ಮೊದಲಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮಿೂ ಧರಿತ್ರಿಯೊ |
ಳ್ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ||
ಗದಿಪರೊ ಬೇರೆನುತ್ತೆ ನುಡಿವಳ್ಕಜಕಾರಸವಂಗೆಪುತ್ರಸಂ |
ಪದದೊದವೇಕೆ ಬೇರೆ ಪರಪುತ್ರರನೀಕ್ಷಿಪತುಷ್ಟಿಸಾಲದೇ || ೩೫

ಎರವಿನ ಪಚ್ಚವಮಂ ತಳೆದಿದಕ್ಕೆ ಣೆವಾರದಿದೆಂದು ಲೋಗರಾ |
ಭರಣಮನೇಳಿಪಂತೆ ತನಗಿಲ್ಲದೆ ಸಾರಕವಿತ್ವಮನ್ಯಕಾ ||
ವ್ಯರುಚಿರಪದ್ಯಮಂ ಪರಿಸಿ ಸತ್ಕವಿನಿರ್ಮಿತಪದ್ಯಮಿಂತಿದ |
ಕ್ಕೊರೆಯೆ ಎನುತ್ತೆ ಕಾಳ್ಗೆಡೆವನಂ ನಗದಿರ್ಪ್ಪರೆ ಬಲ್ಲಕಬ್ಬಿಗರ್ || ೩೬

ಕಂ॥ ಕೃತಿಕಾದಂಬಿನಿ ರಸಮಂ |
ಕ್ಷಿತಿಪಸಭಾಕ್ಷಿತಿಗೆ ಸುರಿವಸಮಯದೆ ಖಲಗ ||
ರ್ಜಿತಘನಗರ್ಜಿತವೊದವಿದೊ |
ಡತಿರಸವಿಸರಪ್ರಸಾರಕಾರಣಮಲ್ತೇ || ೩೭

ಅಜನಜಗರಗರದಿಂದ |
ಭ್ರುಜಶಿಖಿರವದಿಂದೆ ಪುಲಿಯಕಾಯ್ಪಿಂ ನಿಸದಂ ||
ವೃಜಿನಘನಕುಜನಜನಮಂ |
ಸೃಜಿಸಿದನಲ್ಲದೊಡವಂಗೆ ಜಗಮಂಜುವುದೇ || ೩೮

ಸ್ಥಿತಿಯೊಳ್ಸುಜನಂ ಸುಖದಂ |
ಮೃತಿಯೊಳ್ಕುಜನಂ ಜಗಜ್ಜನೌಘಕ್ಕಾದ್ಯಂ ||
ಮೃತಿಯೊಳ್ದುಃಖದನಂತ್ಯಂ |
ಸ್ಥಿತಿಯೊಳ್ಪರಿಕಿಪ್ಪೊಡಿರ್ವ್ವರುಂ ಸರಿಯಲ್ತೇ || ೩೯

ವೃ॥ ಪರಪರಿವಾದಮಂ ನೆಗಳ್ವುದೇ ಜಪಮನ್ಯಮನಃಪ್ರಸೂನಮಂ |
ಕೊರಗಿಪುದೇ ತಪಂ ಪೆರರ ಜೀವಿತಮಂ ಪರಿದಿಕ್ಕುವಂದಮೇ ||
ಪರತರಶೀಲಮಾದರಿಸಿ ಲೋಗರಮರ್ಮಮನೈದೆ ಭೇದಿಪೊಂ |
ದಿರವೆ ಪೊದಳ್ದಜಾನಮೆನೆ ದುರ್ಜನತಾಪಸನೇಂ ಕೃತಾರ್ಥನೋ || ೪೦

ಕಂ|| ಕಡಿವಡೆದುದೊ ನಂಜಿನ ಮು |
ಳ್ಳುಡಿದುದೊ ಕರ್ಬೊನ್ನ ಸರಳೆ ಕೀಲಿಸಿದುದೊ ಮೇ||
ಣಡರ್ದುದೊ ಮೂಕಗ್ರಹಮೆನೆ |
ಮಿಡುಕದು ಖಳರಸನೆ ಸುಕವಿಕಾವ್ಯಸ್ತವದೊಳ್ || ೪೧

ಇಲ್ಲದದೋಷಮನಲ್ಲಿಯೆ |
ಸೊಲ್ಲಿಪನದನೆಲ್ಲಿ ತಪ್ಪನೋ ಖಳನಿದನೆ ||
ನ್ನಲ್ಲಿ ನೆರೆ ತಿಳಿದೆನಬ್ಧಿಯೊ |
ಳಿಲ್ಲದವಿಷಮಂ ಮಹಾಹಿಯೇಂ ತೋರದೆ ಪೇಳ್ || ೪೨

ಖಲಕರ್ಣಬಿಲದೊಳಿಳಿದು |
ಜ್ಜ್ವಲಕೃತಿರಸದಿಂದೆ ನಂದಿತಕ್ಕುಂ ದ್ವೇಷ ||
ಜ್ವಲನಮುದಲ್ಲದೆ ತನ್ಮುಖ |
ವಲಯಮನಾವರಿಸಿ ಪೊಗೆಯದೇಂ ತೋರುಗುಮೇ || ೪೩

ಘನಮಾರ್ಗಸುಭಗಸತ್ಕಾಂ |
ತಿನಿಯುಕ್ತಂ ವಿಗತದೋಷಮಮೃತರುಚಿಸ್ಪ ||
ರ್ಧಿ ನವೀನಕಾವ್ಯರವಿ ದು |
ರ್ಜನಘೂಕವ್ರಜಕಸಹ್ಯಮಂ ಪುಟ್ಟಿಸುಗುಂ || ೪೪

ತಿಳಿದನಿತನನುಭವಿಸಿ ನೆರೆ |
ತಿಳಿಯುದುದಂ ತಿಳಿದರಿಂದೆ ತಿಳಿವುದು ಕೃತಿಯೊ ||
ಳ್ಪೊಳೆವರ್ಥಮನದನೆ ಖಳಂ |
ತಿಳಿಯದೆ ತಾಂ ಪಳಿಯೆ ಪಳಿಗೆ ಪಕ್ಕಾಗಿರನೇ || ೪೫

ಸಲೆ ಸತ್ಕೃತಿಯೊಳ್ದೋಷಮ |
ನಲಸದೆ ನಡೆ ನೋಡಿನೋಡಿ ಕಾಣದೆ ಮನದೊ ||
ಳ್ಮಲಮುಲನೆ ಮರುಗುವೀಕೋ |
ಟಲೆಯಿಂ ಖಳನೆಂತು ಬರ್ದುಕುವಂ ಭೂತಳದೊಳ್ || ೪೬

ಅದರಿಂ ದೋಷಾಭಾಸಮು |
ನೊದವಿಪರೊಂದೆಡೆಗೆ ದುರ್ಜನಸ್ತುತ್ಯತು ಎಂ||
ಬುದನನುಕರಿಸಿ ಕವೀಂದ್ರ |
ರ್ಪುದಪಿಂ ಕೃತಿಯೊಳ್ಪರೋಪಕೃತಿ ಪರತಂತ್ರರ್ || ೪೭

ಕಂ|| ಪಳಿಯುಲ್ಬಲ್ಲಂನೆಗಳ |
ಲ್ಬಳನೇಂ ಬಲ್ಲನೆ ನವೀನಕಾವ್ಯಮನಿಳೆಯೊಳ್ ||
ತೊಳಗುವರವಿಯುಂ ಮಸುಳಿಪ |
ಜಳಧರಮದರಂತೆ ಜಗಮನೇಂ ಬೆಳಗುಗುಗುಮೇ || ೪೮

ಸುಕವಿಗುಣರಚಿತಕೃತಿಜಂ |
ಪಕಮಾಲಿಕೆಗಕಟ ಮಳಿನನಮಳಿನ ಸುಮನಃ ||
ಪ್ರಕರಮನಲೆದೆರಗುವಧೂ |
ರ್ತಕದಂಬಭ್ರಮರನಿವಹಮೇ ನೆರಗುಮೇ || ೪೯

ರಸಿಕಕವಿರಚಿತಕೃತಿಮಾ |
ನಸದೊಳ್ವಿಹರಿಪವಿದಗ್ಧವಿಮಳಮರಾಳಂ ||
ವಸಿಯಿಕುಮೆ ಕುಕವಿಕೃತಕೃತಿ |
ವಿಸರತ್ಪಲ್ವಲದೊಳಬುಧಬಕಸೇವಿತದೊಳ್ || ೫೦

ವೃ|| ಒರೆಯೆ ಸುವರ್ಣರೇಖೆ ವಿಗೆ ಬಾರದೊಡಂ ಪೊಸಚಿನ್ನದಂತೆ ಕಂ|
ಡರಸಿದೊಡಿಕ್ಷುಕಾಂಡಮೆನೆ ಸೀಯ್ಯನೆ ಸದ್ರಸಮುಣ್ಮದಿರ್ದೊಡಂ ||
ಸರಗೊಳಿಸುತ್ತೆ ತಾಳೆ ಮಣಿಮಾಲಿಕೆಯಂತೆ ಕೊರಲ್ಗೆ ಕಾಂತಿಯಂ |
ನೆರಪದೊಡಂ ರಸಜ್ಞಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್ || ೫೧

ಕಂ || ಕವಿವಿಬುಧರ ಕಿವಿಯೊಳ್ಸೂ |
ಸುವಸವರಸಮಿಳಿದು ತೀವಿ ತನುವಂ ಮನವಂ ||
ಕವಿದು ಪೊರಸೂಸಿತೆನೆ ಪೊ|
ಣ್ಮುವಸುಖಜಾಪ್ಪಂ ತುಳುಂಕೆ ಪೇಳ್ವುದು ಕೃತಿಯಂ || ೫೨

ವೃ|| ಶಿವವಕ್ತ್ರೋದ್ಭಸ್ಮರೇಣುಪ್ರಭವನೆನಿಸಿಯುಂ ರೇಣುಕೇಶಾಖ್ಯೆಯುಂ ತಾ |
ಳ್ದವನೀರಕ್ಷಾರ್ಥಮೀಶಂ ಬೆಸಸೆ ಧರಣಿಯೊಳ್ಕೊಲ್ಲಿಪಾಕೇಶನೊಳ್ಸಂ ||
ಭವಿಸುತ್ತುಂ ಜಂಗಮಾಕಾರದೆ ಸುಳಿದಖಿಳಕ್ಷೇತ್ರಮಂ ಪಾವನಂಗೆ|
ಯ್ದುದ್ವಿಶೇಷೌನ್ನತ್ಯದಿಂ ಕುಂಭಜಮುಖಮುನಿಪವ್ರಾತಮಂ ಬೋಧಿಸುತ್ತುಂ||

ಖಗತಿಯೊಳೈದಿ ಲಂಕೆಗೆ ವಿಭೀಷಣನಿಷ್ಟಮನಿತ್ತು ಸಿದ್ಧರಂ |
ಬಗೆಗೆಡಿಸುತ್ತೆ ಬಿಜ್ಜಳನನಳ್ಕಿಸಿ ನೇತ್ರಮನಿತ್ತು ತೆಲ್ಲಿಗಂ ||
ಗೆ ಗರುಡವಾಹಕಂಪನಮನಿಲ್ಲೆನಿಸುತ್ತೆ ನಿಜೋರುತೇಜದಿಂ |
ದಗಣಿತಮಾದಪೆಣ್ಸೆರೆಗಳಂ ಬಿಡಿಸುತ್ತುರುವಿಕ್ರಮಾರ್ಕನಾ|| ೫೪

ಅಭಿಮತವಿತ್ತು ಖರ್ಪರನ ಭಂಗಿಸಿ ಯಕ್ಷನ ರಕ್ಷಿಸುತ್ತೆ ಬಂ|
ದಭವನನುಜ್ಞೆಯಿಂ ಮದುವೆನಿಂದು ಮಹೀಶ್ವರಪುತ್ರಿಯರ್ಕಳೊಳ್ ||
ವಿಭವದೆ ತದ್ವಧೂತತಿಯೊಳಗ್ಗದ ಭೋಗಮನಾಂತು ರೇವಣ |
ಪ್ರಭು ಪಡೆದಂ ಮಹೋತ್ಸವದೆ ರುದ್ರಮುನೀಶ್ವರನೆಂಬಪುತ್ರನಂ || ೫೫

ಕಾರುಣ್ಯಂಗೆಯ್ದು ಸದ್ದೀಕ್ಷೆಯನೆಸಗಿ ಲಸಚ್ಚಿತ್ಕ್ರಿಯಾಮಾರ್ಗಮಂ ಪೇ|
ಳ್ದಾರಾಜತ್ಸೂನುಗಾಚಾರ್ಯತೆಯನೊಸೆದು ತಾನಿತ್ತುಮೇಶಾಜ್ಞೆಯಿಂದಿಂ ||
ತೀರ್ವೇಳ್ನೂರ್ವತ್ಸರಂಗಳ್ನೆರೆಯೆ ಭರದೊಳಾಕೊಲ್ಲಿಪಾಕೇಶನೊಳ್ಪೊ |
ಕ್ಕಾರಾಧ್ಯಂ ಮುಕ್ತಿರಾಮಾರಮಣನೆನಿಸಿದಂ ರೇಣುಕಾಚಾರ್ಯವರ್ಯಂ|| ೫೬

ರುದ್ರಮುನೀಂದ್ರನಾಮಮುನಿಮುಖ್ಯನಿಳಾತಳದಲ್ಲಿ ಪೆರ್ಮೆವೆ |
ತ್ತದ್ರಿಜೆಯಾಣ್ಮನಗ್ಗದಮಹತ್ತ್ವಮನೆಲ್ಲೆಡೆಯಲ್ಲಿ ತೋರುತುಂ ||
ಕ್ಷುದ್ರಮತಂಗಳಂ ಜಯಿಸಿ ಜೆಳ್ಜಸಮೆಣ್ದೆಸೆದೀವೆ ಸಂತತಂ |
ಭದ್ರಚರಸ್ವರೂಪನೆಸೆದಂ ನಿಗಮಾಗಮಶಾಸ್ತ್ರಪಾರಗಂ || ೫೭

ಆಗುರುನಾಥವಂಶದೊಳೆ ಪುಟ್ಟಿದನೊರ್ವನಖರ್ವಸರ್ವಶೈ |
ವಾಗಮವೇದಿ ನಿರ್ಜಿತಮನೋಜನಿಳಾತಳರುದ್ರಮೂರ್ತಿ ಸ ||
ದ್ಯೋಗಿವರೇಣ್ಯನಾನತಸುರಾಗನರಾಗನಗಣ್ಯಪುಣ್ಯಶೋ |
ಭಾಗತವಿಗ್ರಹಂ ವಿಪುಳಶೈವಸುಧಾಂಬುಧಿಶರ್ವರೀಶ್ವರಂ || ೫೮

ಜ್ಞಾನನಿದಾನನಾನತಜನಪ್ರಸರಾಮರಭೂರುಹಂ ಸುಧಾ |
ಭಾನುಸಮಾನಕೀರ್ತಿ ಶಿವಮೂರ್ತಿ ಮುನೀಶ್ವರ ಚಕ್ರವರ್ತಿ ಧಾ||
ತ್ರೀನವಿತಾನಮಾನಿತಪದಂ ಪದೆದೊಪ್ಪಿದನುತ್ಪ್ರಭಾವನು |
ದ್ಧಾನನವೀನ ನಾಮಚರಪುಂಗವನಂಗಜಮಾನಮರ್ದನಂ || ೫೯

ಆಶಿವಯೋಗಿಹಸ್ತಕಮಲೋದರದೊಳ್ಮಿಗೆ ಪುಟ್ಟಿಭಕ್ತಿಯಿಂ |
ಶ್ರೀಶಿವನಂಘ್ರಿಯಂ ಭಜಿಸಿತತ್ಕೃಪೆಯಿಂ ಘನಶಿಷ್ಯವೃಂದಮಂ ||
ದೇಶಿಕಶೇಖರಂ ಪಡೆವುತಾತ್ಮಸಮಾನರನುರ್ವಿಗನ್ನದಾ |
ನೀಶನೆನಿಪ್ಪನಾಮಮಭಿರಾಮತೆವೆತ್ತಿರೆ ತೋರ್ದನೂರ್ಜಿತಂ || ೬೦

ಶಿವನ ಗುಣಂ ಪುರಾಂತಕನ ವಿಕ್ರಮಮಿಂದುಕಳಾಕಪರ್ದನು|
ತ್ಸವಮಹಿರಾಜಭೂಷಣನ ಮೈಮೆ ಮಹೇಶನ ಭಾಗ್ಯಮಂಬಿಕಾ ||
ಧವನ ಜಸಂ ಗಿರೀಶ್ವರನ ಗೌರವಮೊಬ್ಬುಳಿಗೊಂಡು ಪುಟ್ಟಿದಂ |
ತೆವೊಲೊಗೆದಂ ತದೀಯಕರಕಂಜದೆ ರೇವಣಸಿದ್ಧದೇಶಿಕಂ || ೬೧

ಕಂ|| ಧರಣೀರಮಣೀಹೃದಯಾಂ |
ಬುರುಹದವೋಲ್ಮೆರೆದು ತೋರ್ಪದನುಗೂರೊಳಬ್ಭ ||
ಸುರಕರ್ಣಿಕೆಯೆನೆ ರಾಜಿಪ |
ವರಮಠದೊಳ್ಪರಮಹಂಸನೆನೆ ರಂಜಿಸಿದಂ || ೬೨

ವೃ|| ಶಿವಪೂಜಾರತಿಯಿಂ ರತೀಶ್ವರಜಯಪ್ರಾಗಲ್ಭ್ಯಸದ್ವೃತ್ತಿಯಿಂ |
ವಿವಿಧಾಮ್ನಾಯವಿಚಾರದಿಂ ಶರಣಗೋಷ್ಠೀಸಾರಸಲ್ಲಾಪದಿಂ ||
ಭುವನಸ್ತುತ್ಯನಶೇಷಶಿಷ್ಯತತಿಯಿಂ ತಾನೊಪ್ಪಿದಂ ಶಂಭುಸಂ |
ಭವತದ್ರೇಣುಕರೂಪ ರೇವಣಮಹಾಯೋಗೀಂದ್ರ ಪಂಚಾನನಂ || ೬೩

ಕಂ|| ವರವಾಣಿ ವಿಬುಧಸೇವಿತ |
ಚರಣಂ ಕಲ್ಯಾಣಗರ್ಭನಾಗಿಯುಮಜನಂ ||
ತಿರೆ ಜಡಜಜನೆನಿಸದೆ ತ |
ದ್ಗುರುಕರಕಂಜಾತಜಾತನೆನಿಸಿದನೀತಂ || ೬೪

ವೃ|| ಮಣಿಯುದವಾನ್ಯರಿಲ್ಲ ತಲೆವಾಗದವಾದಿಗಳಿಲ್ಲ ಬಂದು ಸಂ |
ದಣಿಸದಸಂತರಿಲ್ಲ ನಡೆನೋಳ್ಪೊಡೆ ಬಾರದರಾಜರಿಲ್ಲ ಕೂ ||
ರ್ತ್ರಿಣಿಸದಧೀರರಿಲ್ಲ ನುತಿಗೆಯ್ಯದಕಬ್ಬಿಗರಿಲ್ಲ ಸಾರಸ |
ದ್ಗುಣಮನೆನಲ್ಧರಾತಳದೊಳೊಪ್ಪಿದನಾಚಿಕವೀರದೇಶಿಕಂ || ೬೫

ಕ್ಷೀರಪಟೀರಹೀರಘನಸಾರಸುಶಾರದನೀರದೋರುಮಂ |
ದಾರತುಷಾರವಾರವರಹಾರಸರೋರುಹಸಾರಸಾರಿಬೃಂ ||
ದಾರಕವಾರಣಾರುಚಿರನಾರದತಾರಸವಿೂರಭುಗ್ವರೋ |
ದ್ಗಾರಯಶಂ ವಿರಾಜಿಸಿದುದೆಣ್ದೆಸೆಯೊಳ್ಚಿಕವೀರದೇವನಾ || ೬೬

ಜನನುತಶಾಂತಿಭೂಷನ ಜಗಜ್ಜನವಂದ್ಯನ ಧರ್ಮಪೂರ್ಣಕೋ |
ಶನ ಧರಣೀಶಪೂಜ್ಯನ ಶುಭಾವಹಭಾವನ ಶೈವಪಾರಿಜಾ ||
ತನ ಮಧುರಸ್ವಭಾವನ ಮಹಾಮಹಚಿತ್ತನ ಮನ್ಮಥಾರಿರೂ |
ಪನ ಚಿಕವೀರದೇವನ ಚಿದಂಬರಶಂಬರಜಾತಮಿತ್ರನಾ || ೬೭

ಕರಕಂಜಾತಸುಜಾತನುತ್ತಮಜನಾನಂದಾಬ್ಧಿರಾಕಾಸುಧಾ |
ಕರನುದ್ಯತ್ಕವಿತಾಲತಾರ್ಜಿತಯಶಃಪುಷ್ಪೋದಯಂ ಸಾಂಬಶಂ ||
ಕರಪಾದಾಬ್ಜಮಧುವ್ರತಂ ಸುಕವಿವೃಂದಸ್ತೋತ್ರಪಾತ್ರಂ ಷಡ |
ಕ್ಷರದೇವಂ ಸರಸಪ್ರಬಂಧಸುಭಗಾಂಭೋಜಪ್ರಭಾವಲ್ಲಭಂ || ೬೮

ಕಂ|| ಜಸವೆತ್ತು ಪೆರ್ಮೆವಿೂಗೆ ರಂ |
ಜಿಸೆ ವಸುಧಾತಳದೊಳಖಿಳಕಳೆಗಳನೊಳಕೊಂ ||
ಡೆಸೆವಬುಧರಾಜರಾನಂ |
ದಿಸಿ ಸಲೆ ಕೊಂಡಾಡಿ ಕೂರ್ಮೆಯಿಂದಿಂತೆಂದರ್ || ೬೯

ಎಳವರೆಯದೊಳಖಿಳಕಳಾ |
ವಿಳಾಸಮಂ ಕಂಡು ಮಚ್ಚಿಬರೆ ಕವಿತಾಕೋ ||
ಮಳೆಯುವಳ್ಗೆರ್ದೆಯಿತ್ತುಂ ಯತಿ |
ತಿಳಕಂ ನೀನೆನಿಪುದಿಳೆಗಿದಚ್ಚರಿಯಲ್ತೆ || ೭೦

ಇಂಗಡಲೊಡನಾಡಿಯೊ ನೆರೆ |
ದಿಂಗಳಸೋದರವೊ ಸುದತಿಯಧರಾಮೃತದಿಂ ||
ಪಿಂಗಿದುಗುರುವೊ ಸುಧಾರಸ |
ಮಂ ಗೆಲ್ದಂಕವೊ ಭವದ್ವಚಸ್ಸಮುದಯಮೋ || ೭೧

ವೃ|| ನಿನಗೆನಿಸರ್ಗಮಲ್ತೆ ನಿರಹಂಕೃತಿ ನಿರ್ಮಲಬುದ್ಧಿ ಶುದ್ಧವ |
ರ್ತನೆ ಶಿವಯೋಗಮಾಗಮವಿಚಾರತೆ ಸದ್ಗುರುಭಕ್ತಿ ಶೈವಕಾ ||
ವ್ಯನಿವಹಸತ್ಪುರಾಣತತಿತರ್ಕಸಮಂಚಿತಷಟ್ಸ್ಥಲಾಂಕಶಾ |
ಸ್ತ್ರನಿಚಯಸಾರದರ್ಶನಮಿಳಾಪತಿಪೂಜಿತಪಾದಪಂಕಜಾ || ೭೨

* ಎಂದು ಮನಂದಂದು ಕೀರ್ತಿಸಿ ಮತ್ತಮಿಂತೆಂದರ್ *

ಶ್ರೀಮತ್ಕೈಲಾಸದೊಳ್ಶಂಕರನಿರೆ ಸಭೆಯೊಳ್ಬಂದು ಮೆಯ್ಯಿಕ್ಕಿಬೊಮ್ಮಂ|
ಸ್ವಾಮಿ ಶ್ರೀಕಂಠನಿಮ್ಮಾಜ್ಞೆಯೊಳೆ ಗುಹನನೊಲ್ದೋದಿಸಲ್ಕೆಂದು ಮುನ್ನಾಂ||
ಪ್ರೇಮಂಬೆತ್ತೊಪ್ಪವೋಂಕಾರಮನೆಬರೆಯೆ ಕೋರ್ಥೋಸ್ಯಮೇಬ್ರೂಹಿಯೆಂದೆಂ|
ಬೀಮಾತಂ ಪೇಳೆ ಮುಂಕೇಳ್ವುದು ಲಘುವೆನೆ ಪೊಯ್ದಂ ಕಶಾದಂಡದಿಂದಂ||

ಕಂ|| ವೇದಾಂಗವದನನಿವನೊ|
ಳ್ವಾದಿಸುವುದಯುಕ್ತಮೆಂದು ತತ್ಪ್ರಣವಕ್ಕಾ ||
ನೋದಿದೆನುಚಿತಗ್ರಂಥಮ |
ನಾದರದಿಂ ದೇವ ಪನ್ನೆರಳ್ಸಾಸಿರಮಂ || ೭೪

ವೃ|| ಆದನಾಕರ್ಣಿಸಿ ಜಾಡ್ಯಬುದ್ಧಿ ತೊಲಗೆಂದೇಳ್ತಂದಸಿಲ್ಲಿಂದೆಮೇ |
ಲೆ ದಯಾವಾರಿಧಿ ನೀಂ ನಿರೂಪಿಸೆನೆ ಕೇಳೆಂದೋದಿದಂ ಶಂಭು ಸಂ ||
ಮದದಿಂ ದ್ವಾದಶಲಕ್ಷಮಂ ಪ್ರಣವದರ್ಥಗ್ರಂಥಮಂ ಕೇಳ್ದು ಷ |
ಡ್ವದನಂ ದ್ವಾದಶಕೋಟಿಯುಂಟೆನೆ ಮಹೇಶಂ ಮೆಚ್ಚಿ ಸಂಪ್ರೀತಿಯಿಂ|| ೭೫
ಅಂದಗಜಾತೆಗಾಸೊರೆವಕಾಲದೊಳಾಲಿಸಿ ಬಾಲನೀಕುಮಾ |
ರಂ ದಿಟಮಂತದಂ ಮರೆದನಲ್ಲೆನುತುಂ ಪೊಗಳ್ದಲ್ಲಿ ಪೋಗು ಸೈ ||
ಪೊಂದಿದಚೋಳಮಂಡಳದ ಶೈವಸಮೂಹಕೆ ಮಂತ್ರದರ್ಥಮಂ |
ಕುಂದದೆ ಬೋಧಿಸೆಂದುಸಿರ್ದುಕಂಜಜನಂ ಕರೆದೊಲ್ದು ಶಂಕರಂ || ೭೬

ವಾಗೀಶಾಹ್ವಯಮಾಂತು ಪುಟ್ಟಿ ತಿಳಿ ನೀನೀಮಂತ್ರದರ್ಥಂಗಳಂ |
ಪೋಗೆಂದಂದೊಡಗೂಡಿ ಮೇಣ್ಕಳಿಪೆಜೋಳೋರ್ವೀತಳಕ್ಕೈದಿ ಸ ||
ದ್ವ್ರಾಗಂ ಕೈಮಿಗೆ ತಾಮುವಂಗರಿ ಪುವಾಗಳ್ಪಿನ್ನೈನಾರರಿಂ |
ಬಾಗಿದ್ದೋರ್ಂದಿತಿಹಾಸಮುಂ ದ್ರವಿಡಭಾಷಾಭೇದದಿಂ ಪೇಳಿದರ್ || ೭೭

ವೃ|| ಆಕಥೆಯಂ ಕೃತಾರ್ಥಸುಮನೋಲತೆಯಂ ವರಮಲ್ಲಣಾರ್ಯರು|
ರ್ವ್ವೀಕವಿರಾಜರಾಜಿನುತಮಾಗಿರೆ ವರ್ಣಕದಿಂದೆ ಭಾವರ ||
ತ್ನಾಕರಮಾಗಿ ಪೇಳ್ದರದನೊಪ್ಪಿರೆ ವಸ್ತುಕಮಾಗಿ ಪೇಳ್ವುದಾ |
ಲೋಕಿತಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜದಿಂ || ೭೮

* ವ|| ಎನೆ ಮನಂದಂದು *

ಕಂ|| ಮೃದುಮಧುರ ಪದವಿಲಾಸಾ |
ಸ್ಪದರಸವಿಸರಪ್ರಕಾಶಕರ್ಣಾಟಕವಿ ||
ತ್ವದೊಳೊರ್ವ್ವನೆ ಪೆಸರ್ವಡೆದ |
ಗ್ಗದಹರಿಹರನುದಿತಮಾರ್ಗದಿಂದಿದನೊರೆವೆಂ || ೭೯

ಮೊದಲೊರೆದ ಕೃತಿಗಳಿರೆ ಪೇ |
ಳ್ವುದು ಮೆರೆಯದಿದೆನ್ನದಿರ್ಕ್ಕೆ ವಿಬುಧವರ್ಮ್ಮದಲ ||
ಗ್ಗದಸಕ್ಕದಮಿರೆ ಕನ್ನಡ |
ಮುದಯಿಸಿ ರಂಜಿಸದೆ ಕರ್ಣಕಮನೀಯತೆಯಿಂ || ೮೦

ಕಾವ್ಯಮೆನಿಸಿದ್ದುರ್ವಿಬುಧಸು|
ಸೇವ್ಯಂ ಘನರಸಮಿದೆನಿಸಿ ಭಂಗವಿರಹಿತಂ ||
ಭವ್ಯಗುಣಮೆನಿಸಿ ಕುಜನಾ|
ಭಾವ್ಯಂ ಮತ್ಕೃತಿ ಚಮತ್ಕೃತಿಪ್ರದಮಲ್ತೆ || ೮೧

ವೃ||. ಸರಸಿಜದಂತೆ ಸಾರಗುಣಮರ್ಣ್ಣವದಂತೆ ರಸಾರ್ದ್ರಮರ್ಕನಂ |
ತಿರೆಘನಮಾರ್ಗಶೋಭಿ ವನಿತಾಜನದಂತಿರೆ ಭಾವಜಾತಿಬಂ ||
ಧುರಮಮರಾದ್ರಿಯಂತೆ ವಿಬುಧಾವಳಿಸೇವಿತಮಿಂದುಬಿಂಬದಂ |
ತಿರೆ ಸುಕರಪ್ರಸಿದ್ಧಮೆನಿಕುಂ ವಿಳಸತ್ಕೃತಿ ಸನ್ಮನೋಜ್ಞನಾ || ೮೨

ಅತಿರಸವೃತ್ತ್ಯಲಂಕೃತಿಸಮನ್ವಿತ ಪದ್ಧತಿ ಸಾರವಿಜ್ಞಮ |
ತ್ಕೃತಿಕರಭಾವಸಂಗತಿ ನವೀನಗುಣೋನ್ನತಿ ಸತ್ಕವೀಂದ್ರಸಂ ||
ತತಿಸರಸೋಕ್ತಿಸನ್ನುತಿ ಬುಧವ್ರಜಸಂಮತಿ ಮಂಜುಳಾರ್ಥಸು |
ತಿಸ್ಥಿ ನವರೀತಿ ಸದ್ರತಿಯೊಳಡಚ್ಚುರ್ವುದೀಕೃತಿ ಸದ್ಗುಣಾಂಕನಾ || ೮೩

ವೃ|| ತೆಂಬೆಲರಂತೆ ತುಂಬುವೆರೆಯಿಂ ಪೊರವೊಣ್ಮುವಜೊನ್ನದಂತೆ ಪೆ |
ಣ್ದುಂಬಿಯ ಗಾನದಂತೆ ಪೊಸಸುಗ್ಗಿಯ ನಂದನದಂತೆ ನಲ್ಮೆಯಿಂ ||
ದಂ ಬಿಗಿದಪ್ಪಿದಂಗನೆಯ ಪೆರ್ಮೊಲೆಸೋಂಕಿನ ಸೌಖ್ಯದಂತೆ ಚಿ |
ತ್ತಂಬಿಡದಪ್ಪುದೀಕೃತಿ ಷಡಕ್ಷರದೇವಕೃತಂ ರಸಜ್ಞರಾ || ೮೪

ನುತರಸಸಂಪದಂ ಪದಮುದರ್ಥಸಮನ್ವಿತಮರ್ಥಮಾರ್ಯಸಂ |
ಮತಗುಣರಂಜಿತಂ ಗುಣಮುದಾತ್ತನವಸ್ಥಿತಿವೃತ್ತಿ ವೃತ್ತಿ ನಿ ||
ರ್ಮಿತಸರಸಾನುಭಾವಮುರುಭಾವಮುದಂಚಿತರೀತಿ ರೀತಿವಿ |
ಶ್ರುತಸದಲಂಕೃತಿ ಸ್ಫುರದಲಂಕೃತಿ ರಂಜಿಪುದೀಪ್ರಬಂಧದೊಳ್ || ೮೫

ಕಂ|| ವಿತತಪುರಾತನಕವಿಕೃತ |
ಕೃತಿಭೂಷಣಭೂಷಿತಾಂಗಿ ಭಾರತಿ ಭುವನ ||
ಸ್ತುತಕಾಂತಿಗುಣಮಿಳಿತಮ |
ತ್ಕೃತಿನವಸೀಮಂತರತ್ನಮಂ ತಳೆದೆಸೆವಳ್|| ೮೬

ವೃ|| ಕಡೆಗಾಣಗ್ಗಡವಿಷ್ಣು ಮುಖ್ಯವಿಬುಧರ್ಕಲ್ಪಾಂತಪರ್ಯಂತಮಾ |
ಮೃಡಮಾಹಾತ್ಮ್ಯಮನಾಗಳುಂ ಪೊಗಳ್ದುಮೆಂದೆಂಬಾಗಳಾಂಪೇಳ್ವೆನೆಂ ||
ದೊಡೆ ಕಿಂಚಿಜ್ಜ್ಞನದೆಂತು ತೀರ್ದಪುದೊ ಮೇಣಂತಾದೊಡಂ ತಚ್ಛಲಂ|
ಬಿಡಿದಿಂದಾಗಿಪೆನೆನ್ನಮೆಲ್ನುಡಿಗೆ ಬಲ್ಲರ್ಮಜ್ಜೆ ಸಾಫಲ್ಯಮಂ|| ೮೭

ಅನುಚಿತಮಲ್ತೆ ಯೋಗಿಜನಮಂಡನ ನೀಂ ಕೃತಿವೇಳ್ವುದಿಲ್ಲಿಕೇ |
ಳ್ಮನಸಿಜಕೇಳಿಮುಖ್ಯಜನರಂಜನವರ್ಣನೆಗೈವುದೆಂದು ಸ ||
ಜ್ಜನರಿದನೆನ್ನದಿರ್ಕೆ ಶಿವಯೋಗಿಹರೀಶ್ವರಮುಲ್ಲಣಾರ್ಯರಿಂ |
ಇನಪೊಸಕಬ್ಬಮಂ ಸೆಗಳ್ದರಾನವರಂತಿರೆ ಪೇಳ್ವೆನಿಂತಿದಂ || ೮೮

ಕಂದ|| ನರಸೊಮ್ಮರ್ನೆಸೆಯೆ ಸಲೆ ಶಂ ।
ಕರನಂ ನೆರೆ ಮಾಳ್ಪಮಹಿಮೆಯುಂ ತಳೆದಷಡ ||
ಕ್ಷರಮಂತ್ರದಮಳಕಥನಮ ।
ನೊರೆವೆನ್ನಿಂದನ್ಯರೊಳರೆ ಧನ್ಯರ್ಜಗದೊಳ್ || ೬೯

* ಅಂದೆಂತೆಂದೊಡೆ *

ವೃ|| ಅಂಭಃಕುಂಭೀನಕುಂಭೀನಸಮಕರ ಮಹಾಕೂರ್ಮಕೀರ್ಣೋರ್ಮಿಮಾಲಾ
ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧ್ರವಿಸ್ಫಾರಪಿದ್ಯು ||
ತ್ಸಂಭಿನ್ನಾಂಭೋಭೃದುದ್ಯತ್ತಟಚಟುಳಚಳನ್ಮೀನಫೇನಪ್ರತಾನಂ ।
ಶುಂಭದ್ಗಂಭೀರಿಮಂ ರಂಜಿಸಿದುದಮಮ ದತ್ತೇಂದ್ರಭದ್ರಂ ಸಮುದ್ರಂ ||

ಕಂ|| ಯಮುನಾನದಿ ರೋಮಾಳಿವೊ ।
ಲಮರೆ ಮಹೀರಮಣಿ ನಿಜಮಹೀಧರಜಘನ ||
ಕ್ಕೆ ಮುದಂ ಮಿಗೆ ತೆಗೆದುಟ್ಟವೊ ।
ಲೆ ಮನೋಜ್ಞಾಂಬರಮನೆಸೆದುದಂಬುನಿಧಾನಂ || ೭೧

ವ|| ಮತ್ತಮಲ್ಲಿ ||

ತನುಜನ ತೇಜಮನಪಹರಿ ।
ಪನಿವನೆನುತ್ತಬ್ಧಿ ಮುಳಿದು ಸಂಧ್ಯಾರುಣಸೂ ||
ರ್ಯನ ಕಿರಣಮನುರೆ ಸೆರೆವಿಡಿ ।
ದನೆನೆ ವಿರಾಜಿಪುದು ವಿದ್ರುಮಂ ಸದ್ರುಜಿಯಿಂ || ೭೨

ಜಲಕರಿನಿಕರಂ ಪುಷ್ಕರ ।
ಮಲರೆ ಕರಂ ನಿಮಿರೆ ಫೂತ್ಕರಿಸೆ ಸಿಡಿದಲಸ ||
ಜ್ಜಲಕಣಮನಮಳಮುಕ್ತಾ ।
ಫಳಮೆಂದುರೆ ಮುಗ್ಧಖಚರಿಯುಕ್ಕೈರ್ಯಿಡುವರ್ || ೭೩

ಪಡೆದುದುಗಡ ವೊದಲಿಂದುವ ।
ಕಡಲಿದು ಮೇಣೆಂದು ಪಡೆದುದುಡುವಿತತಿಯನೆಂ ||
ಬೆಡೆಗೆಡೆಯೊದುದು ಜಡನಿಧಿ ।
ಸಿಡಿಪೆಪ್ಪಿಡಿದಿಡಿದವಾರಿಕಣಗಣದಿಂದಂ || ೭೪

ಎಲೆಜಲಧಿ ಜಿಷ್ಣುಚಕಿತಾ |
ಜಲಪಾಲಕ ಕಾವುದೆಮ್ಮನೆನುತುಂಕರ್ಗ್ಗ ||
ಳ್ತಲೆ ಖರಕರಕರಭಯದಿ |
ಹ್ವಲವಿಪ್ಪರ್ಣಂತದರತೀರದೊಳ್ಮುಗಿಲೆಸೆಗುಂ || ೯೫

ಜಲನಿಧಿ ಜಲಮಂ ಜಲಭೃ|
ತ್ಕುಲಕ್ಕೆ ನಲಿದಿತ್ತುದತ್ತಮಿತ್ತನದೀ ನಿ ||
ರ್ಮಲಸಲಿಲಂ ದೊರೆದುದುಗಡ |
ನೆಲದೊಳ್ಕೊಟ್ಟಂಗೆ ಬಡತನಂಬಂದಪುದೇ || ೯೭

ಘನದಬರವಪ್ರಯೋಜನ |
ಮೆನುತರಿದುಂ ಜಡಧಿ ಜಡಮನಿತ್ತುದದಂ ನೆ ||
ಟ್ಟನೆ ಪೊತ್ತುದು ಜಳದಂ ವ್ಯ |
ರ್ಥನಿಯುಕ್ತಮಿದೆಂದು ಬಗೆವೊಡಿದುಚಿತ್ರತರಂ || ೯೮

ವೃ|| ಜಲನಿಧಿ ಜಂಭವೈರಿಗರಿಯಂ ಗಿರಿಯಂ ಬಿಡು ಬೇಗವೆಂದು ಬಂ |
ದುಲಿವವೊಲೊಪ್ಪೆ ಸುಸ್ತನಿತಮುಜ್ಜ್ವತಟಿತ್ಕರವಾಳನಾಂತತ ||
ಜ್ಜ್ವಲದಭಟಂಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿಭೂ |
ತಲದೊಳೆ ಸತ್ವಶಾಲಿ ಪಗೆಗೇಂ ಮರೆವೊಕ್ಕನನೀಯಲಾರ್ಪನೇ || ೯೯

ಕಂ|| ಎರಗಿದನಿರಿಮುಗಿಲೊಳ್ನಿರೆ |
ಮಿರುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ ||
ತೊರೆಯೆರೆಯಂ ತೆರೆಗೈಗಳಿ |
ನುರದೆಸೆ ಕೆಮ್ಮೀಂಗಳೇಂ ಮನಂಗೊಳಿಸಿದುವೋ || ೧೦೦

ವೃ|| ಎನ್ನೊಳ್ಪುಟ್ಟಿದಚಂದ್ರನಿಂದೆ ಪಡೆಗುಂ ಸಸ್ಯಾಳಿ ಸಂಪತ್ತನಂ |
ತೆನ್ನೊಳ್ಪುಟ್ಟಿದ ಲಕ್ಷ್ಮಿಯಿಂದೆ ಪಡೆಗುಂ ಸೌಭಾಗ್ಯಮಂ ಧಾತ್ರಿ ಮೇ ||
ಣೆನ್ನೊಳ್ಪುಟ್ಟಿದವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು ತಾ |
ನೆನ್ನೊಳ್ಪೇಳ್ಪರಿಯಾವನೆಂದುಲಿವವೋಲುದ್ಘೋಷಿಕುಂ ಸಾಗರಂ || ೧೦೧

ಆಳಿಯಂ ಪೂಗಣ್ಣನೆನ್ನೀಮಗಳೆ ಜಪಳೆ ಪುತ್ರಂ ಕರಂ ರಾಜಯಕ್ಷ್ಮ |
ಕುಳನೆನ್ನೈಶ್ವರ್ಯಮಂ ನಿರ್ಜರರೆ ಕವರ್ದರೆನ್ನೊಳ್ಪಿಸಂ ಪುಟ್ಟಿತೆನ್ನಂ ||
ಕಳಶಪ್ರೋದ್ಭೂತನಂದೀಂಟಿದನಕಟ ಮಹಾಭಂಗಮಂ ತಾಳ್ದೆನೆಂದಂ |
ದೊಳಗಂಭೋರಾಶಿಚಿಂತಾಗ್ನಿಯನೆತಳೆದವೋಲೌರ್ವನಂತಸ್ಥಮಿರ್ಕುಂ||೧೦೨

ವಚನ|| ಮತ್ತಂತಡಿಗೊಂಡೆಡೆವಿಡದೆ ಮಡಲ್ತು ಬಳೆದ ತರುಣತಮಾಲತರುವನ ದೊಳಿಡಿದು ಕಡುಗೊಬ್ಬಿ ಪಬ್ಬಿದಮಬ್ಬಿ ಮಿಗವಕ್ಕೆಗನೊಳಾದಪಗೆತನಮಂ ಬಗೆಗೊಂಡು ತಜ್ಜನಕವನನಿಧಿಯಂ ಕನಲ್ದು ಸುತ್ತವೊತ್ತರಿಸಿ ಮೊತ್ತಂಗೊಂಡು ಪತ್ತುಗೆಗುಂದದೊತ್ತಿಮುತ್ತಿದುದೆಂಬೊಪ್ಪಮನಪ್ಪುಗೆಯ್ದಳಿಯ ಬಣ್ಣಮಂ ಪಳಿದು ನೀರುಣಲೆಂದುಸಾರೆವಂದು ತೀರದೊಳ್ನಿಂದ ನೀರದಂಗಳ ವಾರದಿಂ | ಆನೀರದಂಗಳೊಳ್ವಾರಿವಾಹವಾಹನೊಳೊದವಿದ ವೈರದಿಂ ವಾರಿಧಿಯೊಳ್ಪೊಕ್ಕಭೂರಿಭೂಧರಂಗಳ್ಪಳಂಚಲೆಂದು ಪಟುತೆಯಿಂದಿದಿರ್ಚಿ ನಿಂದುನೆಂಬಂತೆ ಸಾರ್ತಂದದಂ ಪ್ರತಿಗಜವ್ರಜಮೆಂದು ಸರಿಸದೊಳ್ನಿಂದು ಕೊಡಂಕೆ ಚಲಿಸೆ ಕೋಡವೊನೆಯೊಳೀಡಿರಿಯೆ ಮುಗಿಲ್ಮುತ್ತುಗಳ್ಪಿರಸು ಜಲಕಣಗಣಂ ಝುಲ್ಲನುಗೆ ಮಿಗೆಮೆರೆವಂಬುಸ್ತಂಬೇರಮಂಗಳಿಂ| ಆಸ್ತಂಬೇರಮಂಗಳನಂಬುದಂಗೆತ್ತು ದಂತಕಾಂತಿಯಂ ಗೊಂಚಲ್ಮಿಂಚೆಂದು ಗರ್ಜನೆಯಂ ಪರ್ಜನ್ಯಜನ್ಯಧ್ವನಿಯೆಂದು ಮುಂದುಗೆಟ್ಟು ತೊಟ್ಟನೆ ಕಂಡಕಡೆಗೆ ಬಡಬಂಗಳ್ಕಿ ಶಂಖಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ನೆಗೆದು ತಳರ್ವ ತರುಣ ಮರಾಳಂಗಳಿಂ| ಆ ಮರಾಳಂಗಳ ಗರುದುರುಗಲ ತುದಿಗಳಿಂ ಕೆದರ್ದುರುಳ್ವ ವಿಮಳಜಳಕಣಗಣಮಂ ಕಡಲೊಳ್ಬಡಬಾನಲಜ್ವಲಜ್ಜ್ವಾಲೆಯಿಂ ಶುಕ್ತಿಪುಟಂಗಳ್ಬಿಳಿಲನೆ ಸಿಡಿದೊಡೆದವರಿಂದುಚ್ಛಳಿಸಿದಚ್ಛಮುತ್ತಂದು ತುಡುಂಕಲವ್ವಳಿಪ ಖೇಚರಾಂಗನೆಯರಂ ನೆರೆನೆಗೆವನಿಡುಮೀಂಗಣ್ಗಳಿಂ ಕಂಡು ಕೆಂಬವಳಮೆಂಬ ತಂಬುಲರಸಂ ಸೂಸೆ ಶುಕ್ತಿಯಿಂ ಪೊರಪೊಣ್ಮುವಸುಣ್ಮುತ್ತೆಂಬ ಸುಲಿಪಲ್ಲ ಸೂಸುವೆಳಗು ಥಳಥಳಿಸಿ ಪೊಳೆಯೆ ಬೆಳ್ನೊರೆಯೆಂಬಹಸನರುಚಿ ಪೆಸೆನೆಸಗೆ ಪಸರಿಸೆ ತ್ರೊಳಪಸೀಳ್ದೆರೆಯೆಂಬ ನಳಿತೋಳ್ಗಂ ನೀಡಿನದೀನಾರಿಯರರುಣಸರಸಿಜಮೆಂಬ ಕರತಳಮಂ ಗಳಿಲನೆ ಪೊಯ್ದುರಯ್ಯುಮೆನೆಮೆಯ್ಯುದಿರೆ ಮತ್ತೆಮತ್ತೆ ಮೂಣನೆ

ಗಹಗಹಿಸಿ ನಕ್ಕಪನೆಂಬಂತೆ ಪವನಹತಿಪ್ರಚಲಿತತರಂಗಸಂಘಸಮುದ್ಘೋಷಣದಿಂ ತಳ್ತುರತ್ನಾಕರಂ ರಮಣೀಯವಾಗಿಪ್ಪುದಂತುಮಲ್ಲದೆ ||

ವೃ|| ಪವಳಮೆನೀಳ್ದಕೆಂಜಡೆ ಮೊಗಂ ಶತಪತ್ರಮುದೀರ್ಣಫೇನಮೊ |
ಪ್ಪುವಭಸಿತಂ ಕರೋಟಿ ಸುಳಿ ಕಂಬುಕದಂಬಕಮಸ್ಥಿಮಾಲೆಮೀ |
ನ್ಪ್ರವಿಮುದಘೂರ್ಣಿತಾಕ್ಷಿ ಜಳಸರ್ಪನೆ ಕೂರಸಿ ವೀಚಿಬಾಹುವ |
ರ್ಣವನವಭೈರವಂಗೆ ಮಣಿಬುದ್ಬುದಕಿಂಕಿಣಿ ಕಣ್ಗೆರಂಜಿಕುಂ || ೧೦೩

ಅಂತುಮಲ್ಲದೆಯುಂ

ವೃ|| ಘುಳಿಘುಳಿಸುತ್ತೆ ಬಪ್ಪತೆರೆಯಿಂ ಕರೆಯಿಂ ನೊರೆಯಿಂಬಿನೊಳ್ಕರಂ |
ಬಳೆದತಮಾಲನೀಲವನದಿಂ ಘನದಿಂ ಬಿನದಂಬುಗುತ್ತೆ ಸಂ |
ಚಳಿಸುವಹೀನಮೀನಕುಲದಿಂ ಬಲದಿಂ ಜಲದಿಂ ಸಿಡಿಲ್ದನಿ |
ರ್ಮಳತರಶುಕ್ತಿಯಿಂದೆ ಹರಿಯಿಂ ಕರಿಯಿಂ ಗಿರಿಯಿಂದದೊಪ್ಪುಗುಂ|| ೧೦೪

ವ|| ಮತ್ತಮಾಸಮುದ್ರಂ ರುದ್ರನಂತೆ ವಿಷವಿಷಧರಭರಣನುಂ| ಸುಪರ್ಣಪತಾಕನಂತೆ ಶಂಖಚಕ್ರಕರಾಂಬುಜ ಕಲಿತನುಂ|ವಿರಿಂಚನಂತೆ ಸುರಸಭಾಕಾಂತನುಮಮರಲೋಕದಂತನಿಮಿಷಸಂತಾನಾಶ್ರಯನುಂ | ಅರಣ್ಯದಂತೆ ನಗನಾಗವಿಲಸಿತನುಂ| ದಿವದಂತಹಿಮಕರಮಂಜುಲನುಂ| ಸುರಪಥದಂತುಡುಪತರಣಿಗಮನರಮಣೀಯನುಂ|ದ್ವಿಪಪ್ರವಿಷ್ಟವನದಂತೆ ಸುಪ್ರವಾಳಭಂಗಭಾಸುರನುಂ|ಶರದ್ಘನದಂತೆ ಮುಕ್ತಾಂಬುಕಣಮನೋಹರನುಂ| ಭೂತಲದಂತೆ ಸದಾನದೀನತಾಸಹಿತನೆನಿಸಿರ್ದನಂತುಮಲ್ಲದೆ

ವೃ|| ಯಮಿಯಂತಂಬರದಂತೆ ಹಂಸನಿಲಯಂ ಪದ್ಮಾಭಿರಾಮಂ ರಮಾ |
ರಮಸಂತಾನಿಧಿಯಂತೆ ಪುಷ್ಕರಯುತಂ ಮತ್ತೇಭದಂತರ್ಕನಂ ||
ತೆ ಮಹಾಮಾರುತಿಯಂತೆ ಚೈತ್ರಕುಜದಂತುದ್ಯತ್ಪ್ರವಾಳಾಶ್ರಯಂ |
ಸುಮದಂತುತ್ತಮನಂತೆ ಸಂಭೃತರಸ ಶ್ರೀಗಾಗರಂ ಸಾಗರಂ || ೧೦೫

ಪೃಥುತರಮಧ್ಯಕಂಕಣಮೆ ಸುತ್ತಿದ ಪನ್ನಗನಾಗೆ ತತ್ಫಣಾ |
ಪ್ರಥಿತಸುರತ್ನಮಾಗೆ ಮಣಿಸಾನು ಸುರರ್ಪ್ಪಿರಿದಾಸೆಯಿಂದೆ ಮೇ |
ಣ್ಮಥಿಯಿಸಲೆಂದು ಮಂದರಮನಲ್ಲಿರದಿಟ್ಟರೆನಿಪ್ಪಭಾವಮಂ |
ಕಥಿಯಿಸುವಂತೆ ಮೇರು ಮೆರೆದಿರ್ದುದು ಮಧ್ಯದೊಳಾಪಯೋಧಿಯಾ||೧೦೬

ನುತನಕ್ಷತ್ರಾಭ್ರಷ್ಟಮುಕ್ತಾವೃತಮಮೃತಮಯೂಖಾರ್ಕಸದ್ದರ್ಪಣಂ ತ |
ದ್ಗತಶೃಂಗೋತ್ತುಂಗದಂಡಾಮರವರಸರಿದುದ್ಯದ್ಧ್ವಜಂ ರತ್ನರುಕ್ಷಿ |
ತ್ರಿತಪಾಥೋಭೃತ್ಪಟಂ ಶಂಕರಗೃಹಕಲಶಂ ದೇವರಾಜಾದಿದೇವ |
ಪ್ರತಿಮಂ ಸ್ವರ್ಣಾಚಲಾಲಂಕೃತರಥಮೆಸೆದತ್ತೀಶ್ವರಾವಾಸಯೋಗ್ಯಂ||೧೦೭

ಮೇವಮುಗಿಲ್ಗಳಿಂ ಮುಸುಕಿ ಮೋಹಿಪಭೂಧರಮೊಂದುಪಕ್ಕದೊ |
ಳ್ತಾವರೆಗಣ್ಣನಂತಿರೆ ಧರಾಧರಮೊಂದು ಸಧಾತು ನಿಂದವಾ ||
ಣೇವರಸಂತೆ ತಳ್ತಿರೆ ಮೊದಲ್ಬುದಿಗಾಣಿಸದಿರ್ದ್ದಸಾಂದ್ರತೇ |
ಜೋವಹಲಿಂಗದಂತೆ ಕನಕಾಚಲಮುಜ್ಜ್ವಲಮಾದುದುರ್ವಿಯೊಳ್ || ೧೦೮

ಕಂ|| ಹರನಿರ್ಪ್ಪಗಿರಿಯಿದೆಂದಾ |
ದರದೆ ನಭೋಲಕ್ಷ್ಮಿ ಭಗಣವಿಚಕಿಲಸುಮದಿಂ ||
ದಿರದರ್ಚಿಸಿ ಬೆಳಗುವಬಂ |
ಘುರದೀಪದತೆರದೆ ಹಿಮಕರಂ ಬಲವರ್ಪ್ಪಂ || ೧೦೯

ಖರನಖರದೆ ಹರಿ ಗಿರಿಕರಿ |
ವರಶಿರಮಂ ಸೀಳ್ದು ಕೆದರ್ದಮುತ್ತಿನಮಣಿಗಳ್ ||
ತರುಗಳೊಳೆಡೆವಿಡದಮರ್ದಂ |
ತಿರುತಿರ್ಪ್ಪವು ತಪ್ಪಲಲ್ಲಿ ಮಿಗೆ ತಾರಗೆಗಳ್ || ೧೧೦

ಸಾರಸಸಖನಾನಗಕಾ |
ಸಾರಸಮುತ್ಪನ್ನಕಮಳಮಂ ಕೀಳ್ತಾಂತಂ ||
ದಾರಿಯೊಳಲ್ಲದೊಡೆ ನಭ |
ಶ್ಚಾರಿಗೆ ನೆಲನರಿಯೆ ನಳಿನಮೇಂ ದೊರೆದಪುದೇ || ೧೧೧

ನಗದ ಗಗನೇಚರಿಯ ನು |
ಣ್ಬೊಗರುಗುವಮೊಗಂ ಮೃಗಾಂಕನುಂ ಸಂಧಿಸೆ ತ ||
ನ್ಮೃಗಮದತಿಲಕಂ ಪತ್ತಿರೆ |
ಜಗಮುರಿಯುದೆ ಟವಿುದೆಂಬುದಿಂದುವಕಂದಂ || ೧೧೨

ಗುರುತರತರುತಳದೊಳ್ಕಿ |
ನ್ನರಿಯರ ಸರಕೆಳಸಿ ಬಳಸದಿರೆ ನಿಜಹರಿಣಂ ||
ಹರಿಣಾಂಕಂ ಸಲೆ ನಿಲೆ ತ |
ತ್ತರುಣಿಯರಿದು ಸುಕರಮುಕುರಮೆಂದೀಕ್ಷಿಸುವರ್ || ೧೨೩

ಮುನಿದಿನಿಯುಳಿನಿಯನೊಳ್ದ |
ಲ್ನನೆದೀವಿದಜಾದಿಯಲ್ಲಿ ಮೃಗರೆದಿರೆ ತ ||
ದ್ವನಿತೆಯ ನಿಡುಜಡೆಗಂಡದ |
ನನುವಿಸುವಂ ರಾಹುವೆಂದು ರಜನಿಪನದರೊಳ್ || ೧೧೪

ಚಪಲಾಕ್ಷಿಯರಾಗಿರಿಯೊ |
ಳ್ತಪನಾತಪಮೈದೆ ಸುಟ್ಟೊಡಿರಲಾರದೆ ಪಾ ||
ರಿ ಪಯೋಧರದೆಡೆಯೊಳ್ಪೀ |
ತಪಯೋಜಾಕರದೆ ಪೊಕ್ಕು ಜಳಮಂ ಕಳೆವರ್ || ||೧೧೫

ವೃ|| ವಿರಹಿಣಿಯಂತೆ ತದ್ಗಿರಿಯ ತಂಗೊಳದೊಳ್ನೆಲಸಿರ್ಪಪದ್ಮಿನೀ |
ತರುಣಿಯ ಚಾರುಕೋರಕಕುಚಂಗಳನುತ್ಕರದಿಂದಿನಂ ಸಮಂ ||
ತಿರದಮರ್ದ್ದಂಟಿ ಕಂಟಕಿತಮಾದಲತಾಂಗಮೆ ಕಂಪಿಸಂತೆ ತೆ |
ಳ್ದಿರೆ ಪೊಯೆ ತೋರ್ಪುದೇಳ್ದಬೆಮರಂತಿರೆ ತದ್ಗತಶೀಕರೋತ್ಕರಂ || ೧೧೬

ಪರಿತಂದಾಗಿರಿಯೊಂದುತಪ್ಪಲೆಳವುಲ್ಲಂ ಮೇದು ಮೆಯ್ಮೆರ್ಚಿ ನಿ |
ರ್ಜರಕಾಂತಾನನಚಂದ್ರನಿಂ ದೊಸರ್ದಚಂದ್ರಾಶ್ಮಾಂಬುವಂ ಪೀರ್ದ್ದು ಕಂ ||
ನರಗೀತಕ್ಕೆ ಕಡಂಗಿ ಕಾಮಧುಘಮುದ್ಯತ್ಕ್ಷೀರಮಂ ಕೆಚ್ಚಲಿಂ |
ಸುರಿಯಲ್ತಳ್ತು ಸುಧಾಂಗನಾದನದರೊಳ್ನಾಂದಿಂದುವೇನೆಂದಪೆಂ || ೧೧೭

ಅರಿಗಿರಿವೈರಿ ವಾರಿಧರಗುಪ್ತಚರರ್ಕ್ಕಳನಟ್ಟಿಕಂಡು ತ|
ದ್ಗಿರಿ ನೆರೆ ತಳ್ತಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ವಪ್ರೋ ||
ಲಿಗೆ ನೆಳೆಮಿಂಚು ಕಣ್ಪನಿಪೊನಲ್ಪರಿತರ್ಪ್ಪಪೊಲೊಪ್ಪೆ ವೃಷ್ಟಿ ಶೋ |
ಕರವದ ಮಾಳ್ಕೆಯಿಂದಪರಪೆರ್ಮೊಗಳಗೊಪ್ಪುಗುಮಲ್ಲಿ ತಪ್ಪಲೊಳ್ || ೧೧೮

ಚರಿಪನಿಳಿಂಪಕಾಂತೆಯರ ಪಜ್ಜದ ಪಜ್ಜೆಯಕಾಂತಿ ಕಣ್ಗೆ ಮುಂ |
ಬರಿಯೆ ಕರುಂಕೆಗೆತ್ತೆಳಸಿ ಚಂದ್ರನ ಪುಲ್ಲೆ ತುಡುಂಕಲೆಂದು ನಿಂ ||
ದಿರೆ ಪರಿವೊಜ್ಜರಂಬಿಡಿದು ಪುಟ್ಟಿದಪುಲ್ಗಳನೀವರಲ್ಲಿ ತ
ತ್ತರುಣಿಯರಂದದಕ್ಕೆ ನಿಜನೇತ್ರವ ನೇತ್ರದೆ ಪೋಲ್ತನಣ್ಪಿನಿಂ || ೧೧೯

ಕಂ|| ಎರಪಸರಥರದ ತುರುಗ |
ಲ್ಕರೆವಘನೋಪಳಕದಂಬಮುಡುಗಣಮನೆ ಮೇ ||
ಣ್ತರಿಸಂದು ನುಂಗಿ ಕಳ್ತಲೆ |
ನೆರೆಯುಗುಳ್ವೊಂದೊಪ್ಪವೊಪ್ಪೆ ತಪ್ಪಲೊಳೆಸೆಗುಂ || ೧೨೦

ಮುಗಿಲಿಂದೆ ತಟಿಲ್ಲತೆ ಮಿಗೆ |
ಚಿಗಿದೊಗೆವಂದದೊಳೆ ನೆಗೆವಖಚರಿಯ ಮುಡಿಯಿಂ ||
ದುಗುವಲರ್ಗಳ್ಕರಮೆಸೆಗುಂ |
ಮುಗಿಲಿಂಮುಗಿಲೊಗೆದು ಕರೆವಕರಕಂಗಳವೋಲ್ || ೧೨೧

ವೃ|| ಗಿರಿಶೃಂಗಾಗ್ರದೆನಿಂದು ನೆಟ್ಟನಿದಿರೊಳ್ತೋರ್ಪಿಂದುವಂ ನೋಡಿಪಂ |
ಕರುಹಂ ತಪ್ಪದಿದೆಂದು ಮಧ್ಯದ ಕಳಂಕಂ ಕಂಡು ಮತ್ತಾಳಿಯೆಂ ||
ದು ರಣತ್ಕಂಕಣಹಸ್ತನಂ ನೆಗಪಿ ನೋವುತ್ತಿರ್ಪಗಂಧರ್ವನಂ |
ದರಿಯಂ ಕಿನ್ನರಿಯರ್ಕರಂ ನಗುವರಾಸ್ಫಾರ್ಜಲಪ್ರಾಂತದೊಳ್|| ೧೨೨

ನಗತಟನಂದನಸ್ಥಿತಲತಾಭವನಂಗಳೊಳಾಂತಸಂಗಕೇ |
ಳಿಗಳನೆ ಖೇಚರೀನಿವಹಮಾಗಸಕಾಗಳೆ ಪಾರಿಪೋಗಲು ||
ಜ್ಜುಗಿಸಿ ಬಳಲ್ದು ಪಾರಲಳವಿಲ್ಲದೆಕಮ್ಮುಗಿಲೇರಿ ನಲ್ಲರೊ |
ಳ್ನಗುತೆ ವಿಳಾಸದಿಂ ತಳರ್ವುದಲ್ಲಿಯಮಿಂಚಿನ ಚಂಚಲೇಕ್ಷಣಂ || ೧೨೩

ಕಂ|| ಪೊಸನುಸಿಲೊಳೆಸಗೆ ರಮಣಂ |
ಮಿಸುಗುವನೆಲೆನೊಲೆಯೊಳೆಸೆವನಖಪತಿಯುನವಂ ||
ಮುಸುಕುವದೆರೆದೆರಗಿ ನೋಡು |
ತ್ತಸವಸದಿಂ ನಾಲಿದಪ್ಪುವರ್ಪೀಜುರಿಯರ್ || ೧೨೪

ವೃ|| ಮುಳಿದು ನಿಜೇಶನೊಳ್ಪರಿಕರ್ಮುಗಿಲೊಳ್ಮರೆಗೊಂಡು ಗಾಳಿಯಿಂ |
ತಳರ್ದೊಡದಾಗಸಕ್ಕೊಡನೆ ತಾಂ ತಳರುತ್ತಿರೆ ಸೋರ್ವಕರ್ಪಿನು ||
ತ್ಪಳದಳಮಾಲೆಯಾಂತಕಬರೀಭರದಿಂ ಕರಿವಾನ ಕರ್ಜ್ಜಕಂ |
ಗೊಳಿಸುವಸೋಗೆಯುಂ ಕೆಳೆತನಕ್ಕದು ತಾಳ್ದುದೆಸಲ್ವಿರಾಜಿಕುಂ || ೧೨೫

ವಚನ|| ಇಂತು ಸಕಳವಿಭವಸಮಗ್ರಸಮುಜ್ಜ್ವಳವಿಲಾಸಂಬಡೆದು ರಂಜಿಪಾಪೊಂಬೆಟ್ಟದ ನಿತಂಬದೊಳಿಂಬುವಡೆದ ಜಂಬೂ ಜಂಬೀರ ಪನಸ ಪಾಟಳೀ ರಸಾಲ ಸಾಲ ತಮಾಲ ತಾಲ ಹಿಂತಾಲ ನಾಳಿಕೇರ ನಾರಂಗ ಲುಂಗ ಲವಂಗ ಪೂಗ ಪುನ್ನಾಗ ನಾಗಕೇಸರ ಕರ್ಣಿಕಾರ ಖರ್ಜೂರ ಕರ್ಪೂರಕದಳೀಷಂಡಕ ಮಲಷಂಡಂಗಳಿಂದಿಡಿದು ಕಡುಬೆಡಂಗಾದ ಸಾರ್ವರ್ತುಕವಾದ ಸದಮಳತ ಪೋವನದ ಪರಮಪವಿತ್ರತೆವೆತ್ತ ಪರ್ಣಶಾಲೆಯೊಳ್ ಇಟ್ಟವಿಭೂತಿಯ ತೊಟ್ಟ ರುದ್ರಾಕ್ಷದುಟ್ಟ ಮೃಗಾಜಿನದ ಬಿಟ್ಟೆಳಲ್ವ ಕೆಂಜಡೆಯ ಕಟ್ಟಿದ ಕರಣಂಗಳ ನಟ್ಟ ನಿರೀಕ್ಷಣದ ಮುಟ್ಟಿಮಾಳ್ಪ ಜಪದ ಮಿಟ್ಟನೆಮಿಡುಕದಂಗದ ನೆಟ್ಟನೆನಿಂದ ಮನದ ತೊಟ್ಟನೆ ತೋರ್ಪ ಸಾತ್ವಿಕದ ದಿಟ್ಟಿಗಚ್ಚರಿಗೊಳಿಪ ಕಟ್ಟಣಕದಕಡುಮೈಮೆ ಯಾಂತತಪೋಧನರಿರ್ಪ ತಾಣದಲ್ಲಿ.

ವೃ|| ಉಡುಗುತ್ತಲ್ಲಿರ್ಪುದುದ್ಯಜ್ಞಮುರಿ ರಜಮನಾತಾಣದೊಳ್ಸ್ತಿಕೈಸೀ |
ರಿಡುತುಂಸಮ್ಮಾರ್ಜನಂಗೈವುದು ಸುರಿವುದು ಮುಕ್ತಾಘುಮಂ ಮೇಘಮುಂದಂ ||
ಬಡೆಪಂತಲ್ಲಲ್ಲಿ ರಂಗಂಗೊಳಿಪುದು ಸುಮನೋರೇಣುವಿಂ ಮಾರುತಂ ಸಂ |
ಗಡವೆಲ್ಲಂ ಮೆಲ್ಲನಾತಾಪಸರ್ಗೆ ಪರಿಚಯುಂಮಾಳ್ಪವಾಗಳ್ಮೃಗಂಗಳ್ ||

ವಚನ|| ಮತ್ತಮಲ್ಲಿ,

ವೃ|| ಸುಮಮಕರಂದದಿಂದೆ ಕಪೆ ಕೈದೊಳೆದಾದ್ರುಮಪತ್ರಪಾತ್ರೆಯಂ |
ಸಮೆದದರಲ್ಲಿ ತುಂಬಿ ತುಳಿದೊಂದದಪೂಗಳಸ್ಮೈಡೆ ತುಂಬಿಕೊಂ ||
ಡಮರ್ದಮರ್ದಂತೆ ತೋರ್ಪಗಿಳಿಮುಟ್ಟದಪಣ್ಗೊನೆಯಾಂತು ಒಂದು ಸಂ |
ಯಮಿಗಳ ಮುಂದೆ ನಿಂದೆರಗಿ ಕಾಣ್ಕೆಯನಿತ್ತುದತೀವಭಕ್ತಿಯಿಂ || ೧೨೭

ವ|| ಮತ್ತಮೊಂದು ಪವಿತ್ರಸತ್ರಶಾಲೆಯಲ್ಲಿ,

ವೃ|| ಹೋಮದಕುಂಡದಿಂ ಕಡೆಸಿಡಿಲ್ದು ಪೊದಳ್ದಿರೆ ಕಂಡು ಕೆಂಡಮಂ |
ಕಾಮಿಸಿ ಗೇರಪಣ್ಣೆನುತೆ ಪಣ್ಣನೆ ಪೊರ್ದ್ದಿ ತುಡುಂಕೆ ಕೈಸುಡಲ್ ||
ಭೂಮಿಗೆ ತರ್ಗ್ಗಿ ಕುರ್ಗ್ಗಿ ಮಿಗೆ ಪಲ್ದೆರೆದುಃಪ್ಪೆನುತೂದಿ ಪುರ್ಬ್ಬಿಡು |
ತ್ತಾಮುನಿಪುತ್ರರಂ ನಗಿಸಿ ಪರ್ರೆಸುತೇಡಿಸಿತೊಂದುಕೋಡಗಂ || ೧೨೮

ವ|| ಮತ್ತಮೊಂದುದೀರ್ಣಮಹಿಮಾಕೀರ್ಣವರ್ಣಪೂರ್ಣಪರ್ಣಶಾಲೆಯಲ್ಲಿ

ವೃ|| ಯಮಮುಖ್ಯಾಷ್ಟಾಂಗಯೋಗಂಸಮನಿಸೆಹೃದಯಾವಾಸದೊಳ್ಶಂಭುಪಾದಾ
ಬ್ಜಮನೋರಂತಿಟ್ಟು ಕಟ್ಟುಬ್ಬಟೆಯ ಪವನನಂ ಕಟ್ಟಿ ಕೈಕೊಂಡು ಬೋಧ ||
ಕ್ರಮಮಂ ದೇಹೋಹಮೆಂದೆಂಬುದನುಡುಗಿ ನಿಜಾನಂದಮಂ ನೆಮ್ಮಿ ಭಿನ್ನ|
ಭ್ರಮೆಯಂಕೀಳ್ತಿಕ್ಕಿಮುಕ್ತಿಪ್ರಮದೆಯನೊಲಿಸಲ್ಸಾಲ್ವರಿರ್ದರ್ಮುನೀಂದ್ರರ್

ವ|| ಪೆರತೊಂದುಕುಸುಮಕಿಸಲಯಮಹಿತಮಂದಾರ ಮಹೀಜಾತ ಸಂಜಾತ ಮಧ್ಯಪ್ರದೇಶದಲ್ಲಿ,

ವೃ|| ಶಿವಕಥೆವೇಳ್ವ ಶಂಕರಪುರಾಣಮನಾಲಿಪ ಶೈವತತ್ವಮಂ |
ವಿವರಿಪ ಶಂಭುವಂ ಪಡೆದು ಕೀರ್ತಿಪ ಹೃದ್ಗೃಹದಲ್ಲಿ ಶೈಲಜಾ ||
ಧವನನೆ ನೆಟ್ಟು ಜಾನಿಪ ಮಹೇಶನನರ್ಚಿಪ ಸೋಮನಾಮಮಂ |
ಸವಿನುಡಿಯಿಂದೆ ಬಣ್ಣಿಸುವ ಬರ್ದಿನ ತಾಪಸವರ್ಯರೊಪ್ಪಿದರ್|| ೧೩೦

ವ|| ಅಲ್ಲಿ ಮತ್ತಮೊಂದುತಳಿರ್ತತರುಣತಮಾಲತರುವನದ ತಳದ ತಣ್ಣೆಳಲ ಪಳಿಕುವಾಸರೆಯಪರ್ಣಶಾಲೆಯಲ್ಲಿ,

ವೃ|| ಕರಿಯನೆ ನೆಮ್ಮಿ ಸಿಂಗಮದನಂಟಿ ಮಹಾಶರಭಂ ಶಿರೋದ್ವಯಂ |
ಕರಮದನೊಂದಿ ಸಾರ್ದುರ್ ಪುಲಿ ಪುಲ್ಲೆಯನಲ್ಲಿಯ ಮೌನಿಮಧ್ಯದ ||
ಲ್ಲಿರುತೆ ಮುದಂಬಡುತ್ತೆ ನೆರೆದಾಲಿಪುದದ್ಭುತಮೆಂಜಿನಂ ಪೊದ |
ಳ್ದರಗಿಳಿಯೋದುವೀಶ್ವರಪುರಾಣಮನಾದರದಿಂದನಾರತಂ || ೧೩೧

ಎಳಮಿಂಚಂ ಪೋಲ್ವಬಂಬಲ್ಜಡೆ ಬಳೆದಘನಶ್ಮಶ್ರು ಭಸ್ಮತ್ರಿಪುಂಡ್ರಂ |
ತೊಳಪುದ್ಯದ್ಭಾಳಮಾಲಂಬಿತವಿಳಸಿತರುದ್ರಾಕ್ಷಮಾಲಾಳಿ ಹಸ್ತೋ ||
ಜ್ಜ್ವಳದಂಡಂ ಯೋಗಪಟ್ಟಂ ಮೃಗದಸದಜಿನಂ ವಲ್ಕಲಂ ಲಾಗುಳಂ ನುಂ |
ಜುಳಮುಂದಸ್ಮೇರವಕ್ತ್ರಂ ಮಿಸುಗೆ ಜರಿಯಿಪತ್ತರ್ಪ್ಪಲೊಳ್ತಾಪಸೇಂದ್ರರ್ ||

ವ|| ಮತ್ತಮೊಂದುನಗತಟದ ಸರಸಸರೋವರದ ತೀರದಲ್ಲಿ,

ವೃ|| ಪಗೆಯಂ ಕೈಬಿಸಮಾಗಿಪೊಂದಿ ಬಗೆಯಂ ತಾಳ್ದಲ್ಲಿ ಕಾಸಾರವಾ |
ರಿಗತಂ ತಾನೆಸೆಸಿರ್ದುರ್ ಮಾಡಿ ತನಮಂ ತತ್ಪಾಣಿಯಾನಂಬುಜಂ ||
ನಗದೊಳ್ಬರ್ಪ್ಪ ಮೃಗಾಂಕನಂ ಪಿಡಿದುದೆಂಬಂತುತ್ಪಲಾಪಾತ್ರಮಿದಂ |
ನೆಗಳ್ದೊಪ್ಪುಗುಂಡಿಗೆಯಾಂತದಕ್ಷಿಣಕರಂ ತೋರ್ದಿರ್ತ್ತು ಯೋಗೀಂದ್ರನಾ||

ವ|| ಮತ್ತೊಂದೆಡೆಯೊಳಿತ್ತರಂಬಿಡಿದೊತ್ತರಿಸಿ ಒಳೆದಕ್ಷಿಣವೇಣುಕುಂಜದ ಮಂಜುಳಸ್ಥಾನದಲ್ಲಿ,

ಕಂ|| ಒತ್ತರಿಸಿ ಸುತ್ತಿ ಮೆಯ್ಯೊ |
ಳ್ಪುತ್ತಿಡೆ ಬೇರಿಳಿಯೆ ಜಡೆಗಳಿಡಿಕಿರಿದಹಿಗ ||
ಳ್ಪತ್ತಿ ಪರಿದಾಡುತಿರೆ ನಡು |
ನೆತ್ತಿಯ ಪೆರ್ಜೊರ್ಡರನೊರ್ವನೀಕ್ಷಿಸುತಿರ್ದಂ || ೧೩೪

ಅಡರ್ದು* ನಿಡುಜಡೆಯೆಡೆಯೊಳಹಿ |
ಯಡಂಗೆ ತನ್ಮಸ್ತಕಸ್ಥಫಣಮಣಿ ಪದಪಂ ||
ಪಡೆದುದು ತನ್ಮುನಿಪನ ತಲೆ |
ಯೆಡೆಯಣ ಚಿರ್ಜ್ಯೋತಿ ಜಿಗಿದು ಪೊರಪೊಣ್ಮಿದವೋಲ್ || ೧೩೫

ವ|| ಮತ್ತಮಲ್ಲಿ ಸಲ್ಲೀಲೆಯಿಂ ವಲ್ಲಭನೊಡನೆ ಮೆಲ್ಲನಿಳಿದು ತಳಿರ್ತಕಂಕೇಳಿವನಮಧ್ಯದ ಮಲ್ಲಿಕಾಮಂಟಪದಲ್ಲಿ ಪಸರಿಸಿದ ಮಿಸುಪಕುಸುಮದೆಸಳ ಪೊಸವಸೆಯಮೇಲೆ ನಲ್ಲನೊಡನೆ ಜಲ್ಲದಿಃ ಕುಳ್ಳಿರ್ದು ಫುಲ್ಲಶರಕೇಳಿಯಿಂ ಮನಂ ತಣಿಯೆ ತನುಕರಗಲನುಭವಿಸಿ ಬಳಲ್ದೆಲರ್ವಟ್ಟೆಗೆ ಪಾರಲಳವುಗೆಟ್ಟ ಬಟ್ಟಜವ್ವನದ ಬಿರ್ಜ್ವೋದರಿಯುಗಂ ಪೆಗಲೊಳ್ಪಿಂಪಿಂ ತಳೆದು ತಳರ್ವವಿಪುಳವಿದ್ಯಾಧರಗರ್ಗ ಸಹಾಯಮಾಗಿ ಪೊತ್ತೆತ್ತಲುಜ್ಜುಗಿಪ ಕಮ್ಮರ್ಗಿಲ್ಗೆ ಕಬ್ಬುರ್ವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತೆತ್ತುವ ಗಂಧವಹನ ಪಿಂದುಗೊಂಡು ಮುಂಡಳಿಸಿ ಮರಿಮುಗಿಲಂತೆ ಪಾರ್ವಮುದಮಧುಕರಪ್ರಕರದಿಂ | ಮತ್ತಮೊಂದೆಡೆಯೊಳ್ದರದಳಿತವಿಮಳದಳವಿಪುಳ ಪರಿಮಳಮಿಳಿತಕುಸುಮವಿಸರವಿಳಸಿತ ಮಧುರಮಧುಮುದಿತತರುಣಮಧುಕರನಿಕರಪರಿವೃತಮೃದು ಳಕಿಸಲಯಮಹಿತ ಪಾರಿಜಾತಮಹೀಜಜಾತಮೂಲ ಹರಿಶಿಲವಿಶಾಲಶಿಲಾತಳದೊಳ್ಸಂದಣಿಸಿ ಗೊಂಡಣಂಗೊಂಡು ಕುಳ್ಳಿರ್ದು ಸುರಸುದತಿಯರ ಸೆರಪಿನೊಳೊ

ರ್ಪ್ವಮನ್ನಣೆಯ ಕಿನ್ನರಕನ್ನೆ ತನ್ನ ಜೆನ್ನಕಿನ್ನರಿಯಂ ತೆಗೆದು ಮೇಳಂಗೈದಾಳಾಪಿಸಿ ಕೊರಲಬೆರಲ ಸಂಚುಗೂಡಿ ನುಣ್ಚರಂಡೆಗೆಯೆ ಕೇಳ್ದೊಡನೆ ಪೆಡೆಯೆತ್ತಿದ ಕಾಳಾಹಿಯೆಂಬಂತೆ ನಿಡುಜಡೆ ಕಡುಬೆಡಂಗುವಡೆಯಲೆಳಸಿ ಬಳಸಿ ಬಂದು ನಿಂದು ಸುತ್ತಿ ಮುತ್ತಿ ಮೇಪಂ ತೊರೆದು ಮೆಯ್ಯಂ ಮರೆದಭ್ಯರ್ಣದೊಳಾಕರ್ಣಿಪ ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪದೇಶಿಪಂತೆ ದೇಸಿವಡೆದು ಮುರಿದಿಟ್ಟಿ ಪರಿದಿಟ್ಟಿ ಸೆರೆ ಪುರೆಯೆ ಮೊಗಸಸಿಯ ಮುಗುಳ್ನಗೆಜೊನ್ನದಿಂ ಮುನ್ನಲರ್ದ ಕನ್ನವುರದ ಕನ್ನೈದಿಲೊಳಿರದೆರಗಿ ಝೇಂಕರಿಪ ಮಧುಕರಿ ಮದನನಾಣತಿಯಿಂ ಜಾಣಿಂದೊಡನೆ ಸುತಿಯೆಚ್ಚರಿಸಿದಪುದೆಂಬಂತೆಸೆಯೆ ಕೇಳ್ವರಕರ್ಣಕುಹರಕಾಸಾರಂ ತುಂಬಿ ಪೊರಸೂಸಿ ಪೊನಲಿಟ್ಟು ಪರಿವಂತೆ ಪಿಂಗದೆ ಸಂಗೀತಸುಧಾರಸವೃಷ್ಟಿಯಂ ಸುಧಾಕಾದಂಬಿನಿಯಂತೆ ಕರೆಯೆ ಕೂರ್ಮೆಯಿಂ ಕೇಳ್ದು ವಸಂತಂ ಸಂತಸಂಬಟ್ಟು ಮರದುದಿಯೊಳಿದ್ದುರ್ವ ಮಚ್ಚಿ ಪುಷ್ಪಾಂಜಲಿಗರೆವನೆಂಬಂತೆ ಪವನಪಾತದಿನಾಯುವತಿಯ ಮೇಲೆ ತತ್ಕುಜದ ಸೆಳೆಗೊಂಬಿನಿಂ ಕಳಿದು ಕವಿವಕಮ್ಮಲರ್ಗಳಿಂ | ಮತ್ತಮೊಂದೆಡೆಯೊಳ್ಬಿಸಿಗದಿರನ ಬಿಸಿಪಸಿಲ್ಮೆಯ್ಯಂ ಪೊಯ್ಯೆ ತನುಲತೆ ಮುಗಳ್ತಂತೆ ತಳ್ತಿಡಿದು ತೀವಿದಘರ್ಮಜಳಕಣದಿಂ ಭಗಣಮಂ ತಳೆದ ಗಗನಲಕ್ಷ್ಮಿನಗದ ಪೆರ್ಮೆಯನೊರ್ಮೆ ಕೂರ್ಮೆಯಿಂ ನೋಡಲೆಳೆತಂದಳೆಂಬಂತೆಂದಂಬಡೆದಿಳಿತಂದು ಕಂದರದೊಳ್ನಿಂದು ಕಂದಿದಮೊಗದಾವರೆಯುಂ ಕಾಂತಿಗುಂದಿದ ಕಣ್ಣೈದಿಲುಂ ಬಳಲ್ದಕುಚಕೋಕಮಿಥುನಮುಂ ಕೊರಗಿದತೋಳ್ವಳ್ಳಿಯುಂ ನೀರ್ವೀಗಿಸುವಂತೆ ವಿಪುಳಪುಳಿನವಿದಳಿತನಳಿನ ವಿಮುಳಕುಮುದ ಕಲ್ಹಾರ ಸುರಭಿಮಿಳಿತ ತುಹಿನಶೀತಳಸಲಿಲಸಂಭೃತ ಸರಸಿಜಾಕರಮಂ ಸಂತಸಂಮಿಕ್ಕು ಪೊಕ್ಕು ಮುಗಿಲಿಂ ಮುತ್ತು ಸುತ್ತಿಂ ಸೂಸುವಂತೆ ಮುಡಿಯಿಂ ಮುಗುಳುದಿರೆ ಕುಚಕಮುಳಕುಟ್ಮಳಕ್ಕೆ ಮುಖಚನ್ದ್ರಸತ್ತಣಿಂ ಭೀತಿ ಬೇಡೆಂದು ಕುಸುಮಶರಂ ಪೊಸವಿಸಿಲ ಗವಸಣಿಗೆದುಡಿಸಿದಂತೆ ಮನೋರಮಣಂ ರತಿಸಮಯದೊಳ್ನಿಜಕರದಿಂ ತೊಡೆದ ಕುಂಕುಮಪಂಕಂ ಜಳನೊಳೆಡಿವನೆರೆದು ತರಳತರತರಂಗಪಾತದಿಂ ವಿಕಚಕನಕ ಕಮಳ

ಪರಾಗಪಟಳಂ ಸುರಿದು ಪರಿದಂತೆ ಪಸರಿಸೆ ಕಮಳವನದೊಳೆರಗಿದ ಪರಮೆದುರು
ಗಲೆಂಬಂತಲ್ಲಿ ಚಿಕುರನಿಕರಮೆಸೆಯೆ ಸಲಿಲಕೇಳಿಯನಾಂತು ಬಳಲ್ಕೆಗಳಿದ್ದೈದಿ ತನ್ನಗ
ಪಕಾಂತಿಯನೆಳವಿಸಿಲ್ಗೆತ್ತು ಮೆಯ್ಯೊಡ್ಡಿ ನಿಂದಂಬುಜಂ ತುಂಬಿಗಳ ಬಂಬಲಂಮ್ಮೈ
ದಡಪುವಂತೆ ನುಣ್ಗುರುಳ್ಗಳಂ ನೆಳಲುವಕರಾಬ್ಜಂ ಕಂಗೊಳಿಸೆ ತೋರ್ಪ ಗಂಧ
ರ್ವಸುಂದರಿಯರಿಂ | ಮತ್ತಮೊಂದೆಡೆಯೊಳ್ಗಗನಕ್ಕೊಗೆವಮುಗಿಲೊಡನೆ ನೆಗೆದು
ಪಾರ್ವರ್ಲ್ಲಿ ನಿಜಾರುಣಾಧರಮನವಲೋಕಿಸಿ ರಸಾಲದಳಬಿಂಬಫಳಭ್ರಾಂತಿಯಿಂ
*ಕರ್ದುಂಕಲೆಂದೈತಂದು ಸೆಟ್ಟನೆ ಕಟ್ಟಿದಿರೊಳ್ನಿಂದ ಪರಪುಟ್ಟಪಂಡಿತವಕ್ಕಿಗಳಂ
ನಿಜಕರಾಗ್ರದಿಂ ಪಿಡಿದೊಡಗೊಂಡು ಪೋಗಿ ನಿಜಗೃಹದೊಳೋವಿಯಾಗಿಳಿಯ
ಮುದ್ದುತನಕ್ಕೊಲ್ದು ವಾತ್ಸ್ಯಾಯನಮನೋದಿಸಿ ರಸಾಲರಮಣನೆಂಬ ಪೊಸವೆ
ಸರನಿಟ್ಟು ಕಳಕಂಠನ ಕಳರವಕ್ಕೆ ಮಚ್ಚಿ ನಿಚ್ಚಂ ಸವಿಸವೆಯದಸಾರಸಂಗೀತಮಂ
ಕಲಿಸಿ ಮಾಕಂದಮಧುರನೆಂದು ನಾಮಕರಣಂಗೆಯ್ದನಂತರಂ ಸಿಂಗರಂಬಡೆದು
ಕನಕನಗದ ನಂದನಮಧ್ಯದ ಮಂದಾರತರುತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾ
ಕುಸುಮಮಾಲಿಕಾಲಂಕೃತಕುಸುಮಮಂಟಪದೊಳರೆವಿರಿದಕೆಂಜಾದಿಯ ನನೆದು
ರುಗಲ ಸಿಂಹಾಸನದಮೇಲೆ ತಳಿರಗದ್ದುಗೆಯಲ್ಲಿ ಚೈತ್ರನೆಂಬ ಚಿಪ್ಪಿಗಂ ಮಾಂದ
ಳಿರ್ವಟ್ಟೆಯೊಳ್ಶಿರೀಷಕುಸುಮಮಂ ತುಂಬಿ ಕಮಳಕಂಟಕಸೂಚಿಯಿಂ ಕಮ
ಳಸೂತ್ರಮಂ ಕೋದುಪೊಲಿದಿರಿಸಿದಮಲಂಗುಮೂಷೆಯಂ ಮೋಡಿಯೊಳೊರಗಿ
ಬಳಸಿ ಶಶಿವಸಂತಾದಿಗಳೋಲೈಸಿ ನಿಲೆ ಶೃಂಗಾರಸಾರಸರ್ವಸ್ವಮಂಗಂಬಡೆದಂತೆ
ಕಂಗೊಳಿಪನಂಗಚಕ್ರೇಶ್ವರಂ ತನ್ನಂಗನೆಯಾದ ರತಿದೇವಿಯೊಡನೊಡ್ಡೋಲಗಂಗೊ
ಟ್ಟಿರ್ಪ ವೇಳೆಯರಿದು ಭೋಂಕನೈದಿ ಸಾದರಂ ಮಿಗೆರತಿಕಾಮರ್ಗೆ ಮಣಿದು
ಚಿತಸ್ಥಾನದೊಳ್ಕುಳ್ಳಿರ್ದ್ದಾಪಿಕನಿಂ ಮಾರವೀರನ ಬರೆದಬಿರುದಾವಳಿಯಂ ಪಾಡಿ
ಸುತ್ತುಮಾರಾಜಶುಕನಿಂ ತಾನುಸಿರ್ದ*ಮದನವಿಜಯಮೆಂಬಸರಸಕಾವ್ಯಮಂ
ಸಭೆ ಕೇಳ್ದು ತಲೆದೂಗಲೋದಿಸುತ್ತುಮವೆರಡಂ ಕಾಣ್ಕೆಗೊಟ್ಟಿಚ್ಚೆಗಾರ್ತಿ ಪಚ್ಚೆವಿ
ಲ್ಲಿನಿಂ ಮುಚ್ಚುಮಡಿದಚ್ಚುವಿಗೆ ತಳಪ್ಪೊರ್ಚ್ಚೇರಿಗಣ್ಣಪೆಚ್ಚಿರ್ನಚ್ಚರಿಯುಂ |

ಮತ್ತಮೊಂದೆಡೆಯೊಳ್ಸೋಗೆನವಿಲಂತೆಸೆವ ಸೋರ್ಮುಡಿಗೆ ಮೊಲ್ಲೆಯಮುಗುಳಂ ತುರುಂಬಿ, ಅರೆವೆರೆಯಂತೆ ಮೆರೆವಪಣೆಗೆ ಕಳಂಕನಮರ್ಚ್ಚುವಂತೆ ಕತ್ತುರಿಯ ಬಟ್ಟಿ ಜೊಟ್ಟನಿಟ್ಟು, ಮದನಂ ವದನಲಕ್ಷ್ಮಿಯನೋಜೆಯಿಂ ಪೂಜಿಸಿದಸಂಪಗೆಯೆಸೆ ಸೊಂಪುಗರೆವನಾಸಿಕಕ್ಕೆ ನರುಸುಯ್ಗಂ ಪಂಪಡೆದು ರತಿಯ ಮುಡಿಗೆ ಮುಡಿಯಲ್ಯೋಗ್ಯಮಕ್ಕೆಂದು ಮಲ್ಲಿಗೆಮುಗುಳಂ ಸೇರಿಪಂತಾಣಿಮುತ್ತಿನ ಮೂಕುತಿಯಂ ಸಾರ್ಚಿ, ಮದನಮದಗಜದ ಕುಂಭದಂತಿಂಬುವಡೆದ ಬಟ್ಟಮೊಲೆಗೆ ತಲೆಮಾಲೆಯನಲಂಕರಿಪಂತೆ ಕಂಠಮಾಲೆಯಂ ನೆಲೆಗೊಳಿಸಿ, ಕಂಜದಂತೆ ರಂಜಿಪ ಕರಯುಗಳಕ್ಕೆ ರವಿಕಿರಣಮಂ ತುಡಿಸುವಂತೆಸುವರ್ಣಮಣಿವಲಯಮಂ ಕೈಗೊಳಿಸಿ, ರೋಹಣಾಚಲಮೆಂಬೂಹೆಗೊಳಗಪ್ಪ ಘನನಿತಂಬಮಂಡಳಕ್ಕೆ ಮಾಲೆಗೊಂಡ ಮಣಿಗಣಮಂ ಸೇರಿಪಂತೆ ನೂತ್ನರತ್ನಕಾಂಚಿಯನಮರ್ಚ್ಚಿ, ಯನಂಗನಿಷಂಗಮೆನೆ ಕಂಗೊಳಿಪ ಜಂಘೆಗಳ್ಗಿಣಸಂಬಂಧಿಪಂತಂದುಗೆಯ ನಂದಂಗೊಳಿಸಿ, ನುಣ್ದೊಡೆಗಳೆಂಬರಂಭಾಸ್ತಂಭಂಗಳ್ಕಂದದಂತೆ ಬೆಳ್ದಿಂಗಳಿಂ ಬಾಸಣಿಸುವಂತೆ ಬೆಳ್ವಟ್ಟೆಯನುಟ್ಟು ಸಿಂಗರಂಗೈದು, ಕಡೆಗಣ್ಣ ಕದಿರ್ದ್ದರುಗಲ್ಕುಡಿಮಿಂಚಂ ಕೆದರೆ ಬಿಂಬಾಧರದ ಕೆಂಬೆಳಗಿಸೊಡನೆಸುಲಿಪಲ್ಲ ಸುಣ್ಬೆಳಗು ಮೊಗಸಿರಿಯ ಪ್ಸೈಸಿರಿಯಂ ಪಸರಿಸುವಂತೆ ಪಿಸುಪಂಗಲತೆಯ ಪೊಸಕಂಪು ಪಿಸೆದೀವೆ, ಮದನೇಳ್ದ ಮದನಗಜದ ಮದಲಕ್ಷ್ಮಿಯಂತೆ ಸೊಕ್ಕುಂಜವ್ವನೆ ಸೊಗಯಿಪ ವಿಮಳಕಮಳಾಕರದ ತೀರದ ವಿಶದಶಶಿಮಣಿಭಿತ್ತಿಯಂ ನೆಮ್ಮಿ ಜೆನ್ನೆಸೆಯೆ ಸಿಂಗರಂಗೈದು, ಕಾದಂಬನಿಯ ಬರವಂ ಬಯಸುವ ಮಯೂರನಂತೆ ತನ್ನ ಬರವಂ ಬಯಸುತ್ತೆ ಕುಳ್ಳಿರ್ದ್ದ ಮನದನ್ನನೆಡೆಗೆ ತನ್ನಿಚ್ಛೈತರ್ಪ್ಪಲ್ಲಿ ನಿಜಪ್ರತಿಬಿಂಬಮವಂ ನೆಮ್ಮಿರ್ದ್ದ ಚಂದ್ರಕಾಂತಭಿತ್ತಿಯೊಳ್ಕಾಣ್ಬೋಳೆಯಲ್ಪ್ರತಿಯುವತಿಯೆಂದು ಬಗೆದು ಕನಲ್ಕೆ ಕೈಮೀರೆ ಮುಳಿದು ಮುಗಿಲ್ವಟ್ಟೆಗೆ ಗಳಿಲನೆ ನೆಗೆಯೆ ತನ್ನ ನೆಳಲ್ಸಿಗಲ್ಲ ನೆಲಗಟ್ಟಿನೊಳ್ತೊಟ್ಟನೆ ತೋರೆ ನೋಣೋದ್ರೇಕದಿಂ ಮುಂದುಗಾಣದೆ ಧರೆಗೀವಳ್ಕೆತ್ತು ಮೂರ್ಛೆವೋದ ಮನದನ್ನನಂ ಕಂಡು ಕರುಣಾರಜ್ಜು ಸೆಳೆದಂತೆ ತಳ್ವದೀತಂದು ತೆಗೆಮುಗಿದಪ್ಪುತ್ತೆ ಸುತತರ

ತಳವಿಳಸಿತವಿಕಚವಿಚಕಿಲನಿಚಯನಿಚಿತರುಚಿರತರ ಮಲ್ಲಿಕಾಮಂಟಪಕ್ಕೊಡಗೊಂ
ಡು ಪೋಗಿ ಸಳನಳಿಪೆಳದಳಿರ ಪೂವಸೆಯೊಳಿರ್ವ್ವರುಂ ಕುಳ್ಳಿರ್ದ್ದು ಬಳ್ಳಿವರಿವ
ಕಟಾಕ್ಷದಿಂದಡರೆ ನೋಡಿ ಮದನಾನುರಾಗಂ ಕೈಗಣ್ಮೆ ಮನಂಬಂದಬಂಧದಿಂ
ಸವಿಸವೆಯದಸುಸಿಲಸೊಗಮನನುಭವಿಸಿ ತದ್ದಂಪತಿಗಳ್ಪೋಗೆ, ಪಾಸಿನೊಳ್ಪತ್ತಿದ
ಕಜ್ಜಳಮಂ ಸೂಸಿದನರುದಂಬಲಮನುದಿರ್ದಂಗರಾಗಮಂ ಕೆದರ್ದಮೃಗಮದ
ರಜಮಂ ಜಗುಳ್ದಪೂಮಾಲೆಯಂ ಮಗುಳ್ದು ಮುಸುರ್ವಳಿಗಳಂ ಕಂಡು ಕಾದ
ಲರ್ನ್ನೆರೆದು ತಳರ್ದತಾಣಮಿದೆಂದು ಜಾಣಿಂ ಕೆಳದಿಯರಂ ಕರೆದು ತೋರಿ ಮು
ಗುಳ್ನಗೆನಗುತ್ತನಂಗನಿಂಗಿತದಂಗಮಂಪಿಂಗದೆ ಪೊಗಳ್ವದೇವಾಂಗನೆಯರಿಂ|ಮತ್ತ
ಮೊಂದೆಡೆಯೊಳಜಗರಮುಗುಳ್ದ ಗರಳದುರಿಯ ಪೆರ್ಬ್ಬೊಗೆಪೊಯ್ಯೆ ಗಗನದಿಂ ಜ
ಗುಳ್ದುರುಳ್ದವಿಧುರವಿಗಳಂತೆಸೆವ ರವಿಮಣಿಚಂದ್ರಕಾಂತಂಗಳಿಂ ರವಿಶಶಿಗಳ್ಗೆ
ರಾಹುಭ್ರಾಂತಿಗುಡುವಿಂದ್ರನೀಲದ ಕೋಡುಂಗಲ್ಗಳಿಂ, ಸಪ್ತಾಶ್ವನಶ್ವಂಗಳ್ಗೆ ಶಶ್ವಂ
ದೂರ್ವ್ವಾಂಕುರಶಂಕೆಯಂ ಭೋಂಕನೊಡಚ್ಚುವ ಪಚ್ಚೆಗಲ್ಗಳಿಂ,ಹರಿಯೊಳ್ಪು ರು
ಡಿಸಿ ಗಿರಿವರಂ ವಜ್ರಮನಾಂತ ಬೆಡಂಗನಾಗಿಪ ವಜ್ರಶೃಂಗದಿಂ, ಹರನೋಲಗಕ್ಕೆ
ಹರಿಸದಿಂ ಪೋಗಿ ಬರ್ಪ್ಪಸುರಖಚರಕಿನ್ನರಗರ್ಗ್ಗವಾಸಮಾದ ರನ್ನಗವಿಗಳಿಂ,ತಾಪ
ಸರೇಪೊಳ್ತುಂ ನೆಲೆಗೊಂಡ ತಪೋವನಂಗಳಿಂ, ಪಾರ್ವಪಕ್ಕಿಗಳಿಂ ನೆಗೆವ ಮೃಗೇಂ
ದ್ರಂಗಳಿಂ, ಚಲ್ಲವರಿವ ಪುಲ್ಲೆಗಳಿಂ, ಸಮ್ಮದಂಬಡೆವ ಪೊಂಮಱಿಗಳಿಂ, ಪರಿವ ಪುರು
ಹಾಮೃಗಂಗಳಿಂ ನೆರೆದುಪರಿವ ಕರಿಗಳಿಂ ಸಾರಿಬರ್ಪ್ಪ ಭೇರುಂಡಂಗಳಿಂ ನಲಿವ ಪುಲಿ
ಗಳಿಂ, ನಿಲುಂಪಿದನೊಲಂಗಳಿಂ, ಪೆಡೆಯೆತ್ತುವ ಗಡಣದಹಿಗಳಿಂ, ಕೋಡಿಡುವ
ಕೋಳ್ಮಿಗಂಗಳಿಂ, ಸರಿಪಮರೆಗಳಿಂ, ಮೆಲ್ಲನೆಬರ್ಪ್ಪಜಲ್ಲಿಮಿಗಂಗಳಿಂ, ಬಹುವಿಧದ
ವಿಹಗಂಗಳಿಂ, ನೂತನಂಬಡೆದಜ್ಯೋತಿರ್ಲತೆಗಳಿಂ, ರಮಣೀಯಮಾದಮರತರುಗ
ಳಿಂ, ಸುರಚಿರವಾದ ಸುರಧೇನುಗಳಿಂ, ಸಂತತಮೆಸೆವಚಿಂತಾಮಣಿಯಕಣಿಯಿಂ,
ಪರುಷದರೆಯಿಂ, ಪರಿವಸಿದ್ಧರಸದಿಂ, ಫಣಿಪತಿಗಮಾದೊಡಂ ಗಣಿಸಲರಿದಾದ ಘ

ನಮಹಿಮೆಯೊಂತ ಶಿವಲೋಕಮುಂ ತನ್ನ ನೆತ್ತಿಯೊಳ್ಪೊತ್ತಲಂಪಿನ ಪೆಂಪಿಂಗೆ ಪಕ್ಕಾದ ಸರ್ವಪರ್ವತಸಾರ್ವಭೌಮನಖರ್ವಸಂಪದಂಮಿಗೆ ಮೆರೆವುತ್ತಿರ್ದುದಂತುಮಲ್ಲದೆಯುಂ.

ವೃ|| ನಮದಮರವಧೂಟೀಕುಂತಳಸ್ರಸ್ತಮಾಲಾ |
ಸಮುದಿತಮಕರಂದೋತ್ಸಿಕ್ತಪಾದಾಂಬುಜಾತೆ ||
ಕಮನಕಮಳಜಸ್ತ್ರೀಗೀಯಮಾನಾಂಕಮಾಲಾ |
ಸಮುದಯೆ ದಯೆಯಿಂದಂ ದೇವಿರಕ್ಷಿಪ್ಪುದೆನ್ನಂ || ೧೩೮

---

ಗದ್ಯ|| ಇದುವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾ
ಪಟಲ ಪರಿವೃತಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋ
ಭಯಕವಿತಾವಿಶಾರದ ಶ್ರೀಷಡಕ್ಷರದೇವವಿರಚಿತಮಪ್ಪ
ರಾಜಶೇಖರವಿಳಾಸವಿಪುಳಪ್ರಬಂಧದೊಳ್ ಪೀಠಿಕಾ
ರಚನಾಸಮುದ್ರಮೇರುಗಿರಿವರ್ಣನಂ,
ಪ್ರಥಮಾಶ್ವಾಸಂ ಸಂಪೂರ್ಣ್ಣಂ.



# ದ್ವಿತೀಯಾಶ್ವಾಸಂ



ಕಂ|| ಶ್ರೀಪಾರ್ವತೀಪಯೋಧರ |
ಲೇಪಿತಮೃಗಮದವಿಲಿಪ್ತವಕ್ಷಸ್ಸ್ಥಳಸು ||
ರ್ವೀಪಾಲನಶೀಲಂ ಕರು |
ಣಾಪಾಂಗಂ ಪಾಲಿಕೆಮ್ಮನುರೆ ಶಿವಲಿಂಗಂ || ೧

ಅಂತೆಸೆವಮೇರುಗಿರಿಗೆ ಸ |
ಮಂತೊಪ್ಪುವದಕ್ಷಿಣಾಶೆಯೊಳ್ಘನಧರಣೀ ||
ಕಾಂತೆಯ ಸೀಮಂತದ ರ |
ತ್ನಂ ತಾನೆನೆ ಚೋಳಮಂಡಳಂ ಸೊಗಯಿಸುಗುಂ || ೨

ವೃ|| ದಳಿತಾಂಭೋಜಾಳಿತಳ್ತೊಪ್ಪುವಕೆರೆಕುಮುದಂತೀವಿತೋರ್ಪ್ಪರ್ಬ್ಜಷಂಡಂ |
ಕಳಹಂಸಶ್ರೇಣಿಯಿಂ ರಂಜಿಪಪೊಳೆ ಬೆಳೆಯಿಂ ಬಾಳ್ವಕೈ ಪೂಗಳಿಂ ಕಂ ||
ಗೊಳಿಪುದ್ಯತ್ಪುಷ್ಪವಾಟೀಕುಳಮಲರ್ದಲರಿಂ ಕಾಯ್ಗಳಿಂ ಪಣ್ಗಳಿಂ ಮಂ ||
ಜುಳಮಾದುದ್ಯಾನಮಾನಾಡೊಳೆ ಪಿರಿದೆಸೆಯುತ್ತಿರ್ಪ್ಪುದಲ್ಲಲ್ಲಿ ನಿಚ್ಚಂ|| ೩

ತರುಸಂತಾನಮದೊಪ್ಪೆ ತನ್ನತಟದೊಳ್ನೀರಾಟಕೆಂದೆಯ್ದಿ ಸಾ |
ರ್ದ್ದರೆ ದಿವ್ಯದ್ವಿಪಮಿಂಬುಗೊಂಡು ಜಳಮಂ ರಂಭಾದಿಗಳ್ಸೇವಿಸು ||
ತ್ತಿರೆ ಕೂರ್ಪಿಂದವಗಾಹಿಸುತ್ತನಿಮಿಷವ್ರಾತಂ ಕರಂ ತೋರೆ ನಿ |
ರ್ಜರಗಂಗಾನದಿ ತಾನಿದೆಂಬತೆರದಿಂ ಕಾವೇರಿ ಕಣ್ಗೊಪ್ಪುಗುಂ || ೪

ಕಂ|| ಶರಸಿಧಿಯೊಳೊಗೆದವಿಷಮಂ |
ಧರಿಯಿಸಿ ಸುರರಂ ಸಮಂತು ಪೊರೆದಭವಂಗೀ ||
ಧರೆ ಪಾಸಿದಸಡೆಮುಡಿಯೆನೆ |
ಕರಮೆಸೆದುದು ವಿಮಳಗುಣದಿನಾನದಿ ಪದಪಿಂ || ೫

ವೃ|| ದರದಳಿತಾಂಬುಜಾನನದೊಳೊಪ್ಪುವಕತ್ತುರಿಬೊಟ್ಟಿನಂತೆ ಸಾ |
ದ್ರ್ಧರಲಳಿ ತೊಟ್ಟಮುತ್ತುಗಳಿವೆಂಬಿನವೊಪ್ಪಿರೆ ಶೀಕರಾಳಿ ಬೆ ||
ಳ್ನೊರೆ ಸಿರಿಕಂಡದಣ್ಪಿನೆ ವಿರಾಜಿಸೆ ಪದ್ಮಪರಾಗವಾಸೆ ವಾ |
ಶ್ವರಜಪಲಾಕ್ಷಿ ಪೊಚ್ಚಪೊಸವೆಣ್ಸಲೆ ಸಿಂಗರವಾಂತು ತೋರಿದಳ್ || ೬

ಪರಿಗತಕೃಷ್ಣವೇಣಿಯುರರೀಕೃತಪುಷ್ಕರೆ ಸಿಂಧುರಾಗಬಂ |
ಧುರೆ ಧೃತತುಂಗಭದ್ರೆ ಜಿತಭಾನುಜೆ ಗೋಮತಿ ಧೂತಪಾಪೆ ಭಾ ||
ಸುರತರಲೋಕಪಾವನೆ ನತಾಘಲತಾಸಿ ಸಮಸ್ತದೇವತಾ |
ವರಣೆ ಕವೇರಕನ್ಯೆಕೆಳೆಗೊಂಡಳನೇಕನದೀವಿಳಾಸಮಂ || ೭

ಕಂ|| ಚಾರುಪಯೋಧರೆ ಮಜಿಮಾ |
ಧಾರೆ ಸದಾನಿಮಿಷಸೇವ್ಯರಸಯುತೆ ವರಶೃಂ ||
ಗಾರಾಜಿತೆಯೆನಿಸುವ ಕಾ |
ವೇರಿ ಧರಾಕಾಮಧೇನುವೆನಿಪುದು ಪುಸಿಯೇ || ೮

ವಚನ|| ಎಂಬನೆಗಳ್ತೆವಡೆದಾತರಂಗಿಣಿ ತಡಿಗೊಂಡು ಬಳೆದರೆವಿರಿದ ಸರಸಿಜದ ರಲ ಸರಸಪರಿಮಳಕೆ ವೊರೆದೆರಗುವಪರಮೆವರಿದುರುಗಲಿಂ ತೊರೆಯೆರೆಯನೊಳ್ಪುರುಡಿಸಿ ನೀಲರತ್ನಮಂ ಧವಳನಳಿನಶುಕ್ತಿಯೊಳ್ಪಡೆದಪಳೆಂಬಂತಿಂಬುವಡೆದು, ಪಾಳಿಯಿಂ ಜಳಕೇಳಿಗೈದು ತಳರ್ದತುಂಬುಜೌವನದ ನಿತಂಬಿನಿಯುರ ಕುಂಭಕುಚದಿರುಂಬಿನೊಳಿಂಬುವಡೆದು ತುಂಬಿದಮಿಗಸೊಕ್ಕುಗೆಸರಿಂ ಮೈಗಚ್ಚಿ ಕೊಳ್ವಮದಗಜಂಗಳ ಕಟತಟದ ಮದಕರ್ದಮದಿನೊಡವೆರೆದು ಕಲಂಕಿ ಕಲಸಿ ಕಡುಗರ್ಪ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು, ತೀರದೇಶದಪುಳಿನತಳದೊಳೋರಣದಿನಡಿಯಿಡುವರಸಂಚೆವರಿಗಳ ಮೆಲ್ನಡೆಗೆ ಸಿಟ್ಟಿಪಬಟ್ಟಜೌವನೆಯರ ದಿಟ್ಟಿ ತಾಗದಂತೆ ಕಟ್ಟಳ್ಕರಿಂ ತೂಪಿರಿದಪಳೆನೆ ತುರುಗಿ ತೂರಿ ಸಿಡಿವಸೀರ್ಪ್ಪನಿ ಕಡುಜೆಡಂಗುವಡೆಯೆ ಸುಸಿಲೆಸಗಿ ಬಳಲ್ದು ಬಸವಳಿದು ಪಸಿದಜಕ್ಕವಕ್ಕಿ ಮೆಲಲೆಂದು ಸಾರ್ತಂದು ಮೃದುಮೃಣಾಳಮಂ ಮುರಿಪೆತ್ತಿ ಸೊಂಪೆನೆಂದಳಿರವವ್ಯಾಜದಿನಳ್ಪನಳಿನಿಯಂ ಸೆರೆನೆಗೆವನಿಡುಮೀಂಗಣ್ಗಳಿಂ ಸಿಕ್ಕಿನೋಡಿ ಘುಳುಘುಳಿಸಿ ಮೊರೆವನೆವದಿಂ ಪಲ್ಮೊರೆ

ದು ತೆರೆದೋಳನೆತ್ತಿ ಕಳೆಗೊಂಡು ಪೊಜೆವಂತೆ ತಳ್ತು ಪಾಯ್ದುಸಿಡುವಾಸಿಯಿಂ ರಂಜಿಸಿ ನೀರಾಟಕೆಳಸಿ, ತೀರದೇಶದೊಳ್ನಿಂದ ವಾರನಾರಿಯರ ನಿಡುಜಡೆಯ ಪಡಿನೆಳಲನೊಳಕೊಂಡು ನಿಜಸಲಿಲನಿರ್ಮಲತೆಯಿಂ ನಾಗಲೋಕದ ನಾಗಿಣಿಯರಂ ತೋರ್ಪಂತೆ ತೋರ್ಕೆವಡೆದು, ನೀರ್ವೊರ್ಗೆಯಲೆಂದು ನಿಲುಂಬಿನಿಂದ ಪೌರಸಿತಂಬಿನಿಯರ ಕರಘಟಿತಘಟಪಟಳಮುಂ ಕಂಡಗಸ್ತ್ಯಜನಕಂಗಳನೇಕಂಗಳೀಂಟಲೆಳ್ತಂದುವೆಂದಳ್ಕಿ ನಡುಂಗುವಂತೆ ಪವನಪ್ರಪಾತಚಲಿತಕಲ್ಲೋಲಮಾಲೆಯಿಂ ಕಂಪಿಸಿ, ಕುಡಿಗೊಂಡ ಬೆಳ್ನೊರೆಯಿಂ ಕರೆಕತ್ತರಿಸಿದಂಬರದಂತಿಂಬುವಡೆದು, ಮತ್ತಮಿತ್ತರಂಬಿಡಿದು ಬಿತ್ತರಂಬಡೆದು ಬಳೆದ ಚೂತಚಂಪಕ ಕುಟಜ ಕುರವಕ ತಿಲಕ ಬಕವಕುಳ ಲಿಕುಚ ತಮಾಲ ತಾಲಹಿಂತಾಲ ಪೂಗಪುನ್ನಾಗ ಕದಳೀಕಂಕೇಳಿ ನಾರಂಗ ನಾಳಿಕೇರ ಪನಸ ಪಾಟಲೀ ಜಂಬುಜಂಬೀರ ಕದಂಬಕಪಿತ್ಥಲವಂಗ ದಾಡಿಮ ದ್ರಾಕ್ಷಾ ಮಾಲತೀ ಮಲ್ಲಿಕಾ ಜಾತಿ ಯೂಥಿಕಾ ಮುಖಲಲಿತ ಲತಾವಿತಾನವನದಿಂ ಪರಿಶೋಭಿಪಪೆದು, ಜಪತಪೋನುಷ್ಠಾನಪರಾಯಣಪರಮತಪೋಧನನಿವಹಸ್ನಾನಪಾನಾನುಕೂಲೆಯೆನಿಸಿ, ತನ್ನ ನೆನೆದರಂ ನಿರ್ಮಲರಂ ಮಾಡುತ್ತೆ, ಕಂಡರಂ ಕಲುಷರಹಿತರೆನಿಸುತ್ತೆ, ಮುಳುಂಗಿದರ ಮೋಹಮುಂ ಪರಿಯುತ್ತೆ, ಸೇವಿಸಿದರ್ಗೆ ಸುಕೃತಮುಂ ಸಾರ್ಚುತ್ತೆ, ಮನಕ್ಕೆ ಮನೋಹರಮೆನಿಸಿ ನುತಿಪೊಡತರ್ಕ್ಯಮಾಗಿ ಪರಮಪವಿತ್ರರೂಪಿಣಿ ಪರಿದೊಪ್ಪುತ್ತುಮಿರ್ಪ್ಪಳಂತು ಮಲ್ಲಪೆಯುಂ||

ವೃ|| ಇಳೆಯುಂ ಪಾಲಿಪಸೈಪಿನೊಂದುಬೆಳೆಯುಂ ಚಂದ್ರಾಶ್ಮಸದ್ರಶ್ಮಿನಿ |
ರ್ಮಳೆಯುಂ ನಿರ್ಮಿತಶರ್ಮಘರ್ಮಫಳೆಯುಂ ಪದ್ಮೋತ್ಪಲೋತ್ಫುಲ್ಲಸಂ |
ಕುಳೆಯುಂ ಕೋಕಬಳಾಕಹಂಸಬಳೆಯುಂ ಡಿಂಡೀರಪಿಂಡೌಘಮುಂ |
ಜುಳೆಯುಂ ಪೆಂಪಿನಲಂಪನಾಳ್ದಪೊಳೆಯುಂ ಪೇಳ್ಪಣ್ಣೆ ಸಲ್ಪುರ್ಕ್ಕಮೇ || ೯

ವ|| ಎನಿಸಿರಂಜೆಸಿದ್ದುದದರತಟನಿಕಟಪ್ರದೇಶದಲ್ಲಿ

ವೃ|| ಬಳಸಿರೆ ನೀಲನೀರಜವನಂ ಕರೆಯುಂಬಿನಪೊಲ್ಪೊಡರ್ಪ್ಪಿನಿಂ |
ಬೆಳೆದೆಳಗೆಂಪನಾಂತ ಕಡೆಗದ್ದೆಗಳಂತರವರ್ಣದಂತೆ ಕಂ ||
ಗೊಳಿಸೆ ಶುಕಾಳಿ ಚಿತ್ರಮೆನೆ ರಂಜಿಸೆ ಪಚ್ಚೆಯಸೇಲೆಯಂ ಧರಾ |
ಲಲನೆ ವಿಳಾಸದಿಂ ತಳೆದಳೆಂದೆನೆ ಶಾಲಿಯಗದ್ದೆ ತೋರುಗುಂ || ೧೦

ವ|| ಅಂತುಮಲ್ಲದೆಯುಂ

ಕಂ|| ತೂಗುತೆ ತೊನೆಯುತೆ ಬಳ್ಕುತೆ |
ಬಾಗುತೆ ಕಂಪಿಡುತೆ ಕನರುಚಿದಾಳುತ್ತುಂ ||
ರಾಗಿಸುತೆ ರಂಜಿಸುತೆ ಸೊಂ |
ಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ || ೧೧

ಗಿಳಿಗಳ ಬಳಗಂ ಗಳಗಳ |
ನಿಳಿದೊಳಪೊಕ್ಕೆಳಸಿ ಬಳಸಿ ಖರಚಂಚುಪುಟಂ ||
ಗಳಿನುಡಿವುದೆಂದಗಿದು ನೀ |
ಗ್ಗಳನೊಳಪೊಕ್ಕಂತೆ ನೆಲ್ಲಗರ್ದೆಗಳೆಸೆಗುಂ || ೧೨

ಪಾಲ್ದುಂಬಿದ ಸಾಲ್ದೆನೆಗಳ |
ನೆಲ್ದುರುಗಲನೊಲ್ದು ಸೀಳೆ ಗಿಳಿ ಭಯಭರದಿಂ ||
ಜೋಲ್ದಿಳೆಗಿಳಿವಂತಿರೆ ಬಂ |
ಬಲ್ದೆರೆಯೊಳ್ಪೊಳೆದು ಮಡಿಯನೀರೊಳ್ತೋರ್ಕುಂ || ೧೩

ಅರಗಿಳಿ ಸೀಳ್ದೊಡೆ ಮಡಿಯೊ |
ಳ್ಸುರಿದಿರೆ ನೆಲ್ಪಾಲ್ತದಂಬುವಂ ಹಂಸಂ ಬೇ ||
ರಿರಿಸುತಮರ್ದಿಂಟಿ ಕಾಣುತೆ |
ಸಿರವೊಲೆವಂತೊಲೆವಕಳಮೆಗಳ್ಕಣ್ಗೆಸೆಗುಂ || ೧೪

ಎಳಗಿಳಿಗಳ ಬಳಗಂ ಗಳ |
ಗಳನಿಳಿತಂದೆಳಸಿ ಬಳಸಿ ಸುಳಿದೊಳಪುಗುತುಂ ||
ನಳನಳಿಸಿ ಬೆಳೆದು ಕಳಿಯದ |
ಕಳಮೆಯ ಕಣಿಶಂಗಳಂ ಕರಂಖಂಡಿಸುಗುಂ || ೧೫

ವೃ|| ಬಡನಡು ಬಳ್ಕೆ ಬಟ್ಟವೊಲೆ ಮೇಲುದನೆತ್ತೆ ನಿತಂಬಮುಂಡಳಂ |
ಪೊಡರೆ ಕಪೋಲರಂಗದೊಳೆ ನರ್ತಿಸೆ ಕನ್ನವುರಂಸರಾಗವಿ ||
ಕ್ಕಡೆಗೆಡೆಯಾಡೆ ನೋಟಮುಳಿಯುತ್ತಿರೆ ಸೋವುರ್ಮಡಿ ಬಂದು ನಿಂದು ಪೆ |
ಣ್ಗಡಣಮುದಲ್ಲಿ ಪಾರಿಪುದು ಕೈರವದಿಂದಿಡುತುಂ ಶುಕಾಳಿಯುಂ || ೧೬

ವ|| ಮತ್ತಂ

ವೃ|| ತಾವರೆಗಾವೊಳಾಗಿಸಿದಬಿಲ್ಲದರೀರೆಳೆಯೇರಿಸುತ್ತೆ ಜೆ|
ಲ್ವಾವರಿಸಿರ್ದ್ದತದ್ವಳದಪಟ್ಟೆಯ ಮಧ್ಯದೊಳಿಟ್ಟು ಕಟ್ಟಿ ಭೃಂ ||
ಗಾವಳಿಯೆಂಬಮಿಂಟವಿಡಿದಂಟಿಸಿ ಗೆಂಟಿನೊಳಿಟ್ಟು ಪಾರಿಪ |
ತ್ರೀವಿದಕೀರಮಂಡಳಿಯನಲ್ಲಿಯ ಪಾಮರಿಯರ್ನ್ನಿರಂತರಂ|| ೧೭

ವ|| ಅವರೊಳೊರ್ವಪಾಮರಿ

ಕಂ|| ಅರಗಿಳಿಯಂ ಸೋವಲ್ಸರ |
ಸಿರುಹೇಕ್ಷಣೆ ನಿಂದು ಕುಮುದವಂ ಕೀಳ್ತಿಡೆ ಶಂ ||
ಬರರಿಪುವಿಸೆ ಭೀಂಕೃತಿಯೊಡೆ |
ವೆರೆದತದಸ್ತ್ರಮನೆ ಸಾಳಿರವಮದು ಪೋಲ್ಗುಂ || ೧೮

ವ|| ಮತ್ತಮೊಂದೆಡೆಯೊಳೊರ್ವ್ವಮತ್ತಕಾಶಿನಿ ಗಿಳಿಯಂ ಪಾರಿಪಲ್ಲಿ

ಕಂ|| ಎಳೆಯುಳ ಕಣ್ಗದಿರೋಡುವ |
ಗಿಳಿಗಳ ಬೆಂಬತ್ತಿ ಸುತ್ತಿ ಮುತ್ತಿರೆ ತೋರ್ಕ್ಕುಂ ||
ಪೊಳೆವಿಡುವಲೆಯಿಡೆಯುವಳವ |
ನೊಳಗಾಗಿಸಿದಂತೆ ನೋಳ್ಪಪಥಿಕರ್ಗ್ಗಳ್ || ೧೯

ವ|| ಮತ್ತಮೊಂದೆಡೆಯೊಳೊರ್ವಳ್ ವೃತ್ತಕುಚದ ಮತ್ತಗಜಗಮನೆ

ಕಂ|| ಏರುಂಜೌವನೆ ಮೇಲುದು |
ಜಾರೆ ಕೆಲಂಪೋರೆ ತೋರವೊಲೆಗಳ್ಮೊದಲೊ ||
ಳ್ವಾರಿಸಿದಳ್ಯುವಧೃತಿಯಂ |
ಪಾರಿಸಿದಳ್ಬಳಿಕೆ ಗಿಳಿಯ ಕರತಳರವದಿಂ || ೨೦

ವ|| ಇಂತಸಂತಜನಮನಸ್ಸೂಚೀಸೂತ್ರಮಾದ ಕಳಮಕ್ಷೇತ್ರದನತಿದೂರದ ಭೂರಮೆಯ ಸಿಂದೂರ ಸೀಮಂತರೇಖೆಯಂತೆ ಜೆಂಬುಡಿ ತಳ್ತುಕಂಗೊಳಿಪಘಂಟಾಪಥದ ಪರಿಸರದಲ್ಲಿ

ವೃ|| ಎಳಗೌಂಗೊಳ್ಗಂಬದಿಂ ಬಾಳೆಯ ತೊಲೆಯಿನಳಿಸ್ಫಾರಕಲ್ಹಾರಪುಷ್ಪಂ |
ಗಳ ಘಂಟಾಶ್ರೇಣಿಯಿಂ ಕೇತಕಿಯ ದಳದ ಕಿಳ್ಜಂತೆಯಿಂಬಾಳವೇರ್ಪ್ಪ ||
ಗಳ ಕೇರಿಂ ಬಾಲಸತ್ಪಲ್ಲವದ ಪೊದಕೆಯಿಂದಿಕ್ಷುದಂಡಗಳಿಂ ಕ |
ಣ್ಗೊಳಿಕುಂ ನಾನಾಲತಾಂತಪ್ರಸರಯುತಂಗಳ್ಪ್ರಪಾಮಂಟಪಂಗಳ್|| ೨೧

ವ|| ಅಲ್ಲಿ

ಕಂ|| ಪಚ್ಚಪಸಿವರೆಯದಲರ್ಗಳ |
ಪಚ್ಚದ ಶತಪತ್ರಸೂತ್ರದಂಬರದ ತೊಳ ||
ಪ್ಪಚ್ಚಸಿಮೊಗದ ಸೊಗಯಿ |
ಪ್ಪಚ್ಚರಸಿಯರಂತೆ ಮೆರೆವತರುಣಿಯರೆಸೆದರ್ || ೨೨

ವ|| ಅಂತೊಪ್ಪುವಶ್ರಾಂತಪಥಶ್ರಾಂತಪಾಂಥಸಂತಾನನಯನಪಾಂಥಪ್ರತಾನಲಾವಣ್ಯರಸ ಪ್ರಪಾಶಾಲೆಯರಪ್ಪ ಬಾಲೆಯರೊಳೊರ್ವ್ವಳ್ ಲೀಲೆವಡೆದು

ವೃ|| ತೊಳಗುವಚಂದ್ರಕಾಂತಕಲಶಂಬಿಡಿದಂಬುಜನೇತ್ರೆ ನೀರನಂ |
ಜಳಿಪುಟದಲ್ಲಿ ನಿಂದೆರೆಯೆ ತನ್ಮಧುರಾಧರ ರಾಗಮಿಶ್ರತ ||
ಜ್ಜಳಮರುಣಾಂಬುವೆಂದುಸಿಕನಿರ್ಪ್ಪದನೀಕ್ಷಿಸಿ ನಕ್ಕೊಡಾಕೆಯ |
ಜ್ಜ್ವಳದಶನಾಂಶುಮಿಶ್ರಮದು ಶಂಕೆಯನೋಡಿಸೆ ಪಾಂಥನೀಂಟಿದಂ || ೨೩

ಕಂ|| ಕರತಳಗತಜಳಬಿಂಬಿತ |
ತರುಣೀನೇತ್ರಮನೆ ನೋಡಿ ಪೆರನೊರ್ವ್ವಂ ತ ||
ತ್ಪರಿಮಳಕೆಂದಿಟ್ಟಸಿತಾಂ |
ಬುರುಹಮಿದೆಂದೀಂಟಲೊಲ್ಲದೀಕ್ಷಿಸುತಿರ್ದ್ದಂ || ೨೪

ವೃ|| ಉಗುರ್ಗಳನುಣ್ಗದಿತ್ತೊರ್ಗಳಪಪಾಂಗಶಶಿಪ್ರಭೆ ಸಾರಸೌರಭಂ |
ಸೊಗಯಿಪಸುಯ್ಯೆಲರ್ಕ್ಕರಕವಾರಿಯೊಳಾಗಿಸೆ ನಿರ್ಮಳತ್ವಮಂ |
ನೆಗಳ್ದತಿಶೈತ್ಯಮಂ ಮೃದುಸುಗಂಧಮನಿಂದುನಿಭಾಸ್ಯೆ ನೂಸಮಾ |
ರ್ಗಗನೆರ್*ತಣ್ಪನಾನೆ ತನು ಬೋಳಿಪಿಕಾಂಕ್ಷಿಸೆ ನೀರನೀಂಟಿದಂ || ೨೫

ವ|| ಮತ್ತಮಲ್ಲಿಪೆರತೊಂದರವಟ್ಟಿಗೆಯೊಳೊರ್ವ್ವಂ ||

ವೃ|| ನೀರೆರೆವಚ್ಚಜೌವನೆಯ ಮೇಲುದು ಮೆಲ್ಲನೆ ಜಾರೆ ಗೌರರು |
ಕ್ಚಾರುಕುಚಂಗಳೆಂಬಕಳಶಂಗಳ ಕಾಂತಿಪಯಃಪ್ರವಾಹಮಂ ||
ಪೀರುತೆ ಕಣ್ಗಳಿಂ ಮರೆದು ನೀರ್ಗುಡಿವಂದಮನಾದು ನಿಂದು ನಿ |
ಸ್ಸಾರಮುಖಂ ಮನೋಭವನ ಬಾಣದ ಬಾರಿಗೆ ಬಂದನಧ್ವಗಂ || ೨೬

ವ|| ಅಂತುಮಲ್ಲದೆಯುಂ

ವೃ|| ಅರಲಿಂಪಣ್ಣಿಂ ಮರಂ ಪೆಣ್ಗಿಳಿಯಿನಳಿಯಿನುದ್ಯಾನಮಂಭೋಜದಿಂದೀ|
ವರದಿಂ ಕಾಸಾರಮಾಸಾರದೆ ಪೊಸಬೆಳೆಯಿಂ ಭೂಮಿ ಭೂಮೀಜದಿಂ ತ ||
ಣ್ಣೆರಲಿಂ ಮಾರ್ಗಂ ಮರಾಳೋತ್ಕರದೆ ನೆರೆವಚಕ್ರೌಘದಿಂ ಸಿಂಧು ಸಿಂಹೋ|
ತ್ಕರದಿಂ ಪೇರಾನೆಯಿಂ ಕಾನನಮಿಡಿದೆಸೆಗುಂ ದೇಶದೊಳ್ನಿಂದಜಸ್ರಂ||೨೭||

ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ|
ಪುದಿದೆತ್ತಂ ನವಸೌರಭಂಬಡೆದಸದ್ಭೃಂಗಾಳಿಯಿಂ ಗಾಳಿಯಿಂ ||
ಮದವತ್ತಾಮ್ರಮುಖಪ್ರತರ್ಜನಕರಸ್ತ್ರೀಶಾಳಿಯಿಂ ಶಾಳಿಯಿಂ|
ತದಿಳಾಮಂಡಳಮೊಪ್ಪುಗುಂ ಕ್ರಮುಕದೊಳ್ಪೊಂಬಾಳೆಯಿಂಬಾಳೆಯಿಂ||೨೮

ವ|| ಮತ್ತಮಾಜನಪದಂ ಸಮುದ್ರಂತೆ ಸದಾರವಿಭವೋಪೇತಮು ಮ
ನಂತಾತಿಶಯಾನ್ವಿತಮುಂ ನಾಕಲೋಕದಂತೆ ಸುರಾಗನಂದನಾಶ್ರಿತಮುಂದಿ
ರೌಘಮುಂ ವಿಮಳಾಪ್ಸರೋಗಣ ವಿರಾಜಿತಮುಂ ಅಳಕಾನಗರದಂತಗಣ್ಯಪುಣ್ಯ
ಜನಮಿಳಿತಮುಂ ಧನಸನಾಥೈಲಬಿಲೋಪಯುಕ್ತಮುಂ ಅಂತಪುರದಂತೆ ಮಹಾ
ಮಹಿಷೀಮಂಡಿತಮುಂ ಗೋರಾಜಿತಾಂತಸ್ಥಿತಿ ಘೋಷಾಂಚಿತಮುಂ ಕಾಗರ್ಗ
ಳದಂತೆ ವಿತತಕಾಸಾರಘನವನೋರ್ಜಿತಮುಂ ಮಿಳಿತಶಿಳೀಮುಖಕದಂಬಸುಮ
ನೋಗಂಧಪಹ ವಿಜೃಂಭಿತಮುಂ ತಪೋವನದಂತೆವೋಲ್ಪ ಪಾವನಡಂಬರಮು
ಮನೇಕಶಾಖಾಶ್ರಿತದ್ವಿಜಧ್ವನಿಮನೋಜ್ಞಮುಂ ಭೈಷಜ್ಯಸಂಗ್ರಹದಂತೆ ಬಹು
ಧಾನ್ಯಕಧಾತ್ರೀ ಸಂಯುಕ್ತಮುಂ ಸಾರರಸೌಷಧಿಸಮೇತಮುಂ ಸರೋವರ
ದಂತೆ ಕಳಮಹಿತಧ್ವನಿಹಂಸಯಾಸಕಾಂತಮುಂ ಕಮಳಾಭಿರಾಮುಮಮೆನಿಸಿ
ರಮಣೀಯಮಾಗಿಪ್ಪುದಂತುಮಲ್ಲದೆ

ಕಂ|| ದ್ವಿಜಹತಿ ವನಿತಾಧರದೊ |
ಳ್ವ್ರಜಾತಿಪಾತಂ ಮದಾಳಿಕುಳದೊಳ್ಬನದೊ ||
ಳ್ಕುಜನಾಳೀಕಾಕರಸಂ |
ಭಜನಂ ತಲೆದೋರ್ಕುಮಲ್ಲದಿಲ್ಲಾನಾಡೊಳ್ || ೨೯

ಬಡತನಮುಂ ಮಾಂದ್ಯಮುಮಿ |
ಟ್ಟೆಡೆಯುಂ ಚಪಲತೆಯುಮಧಿಕತರ ಕುಟಿಲತೆಯುಂ ||
ಮಡದಿಯ ನಡು ನಡೆ ಮೊಲೆ ಕಂ|
ಣ್ಗಡೆಕುರುಳೊಳ್ತೋರ್ಕುಮಲ್ಲಿ ತಲೆದೋರುಗುಮೇ || ೩೦

ಎನಗೆ ಪಗೆ ಧರ್ಮಮದನಿದು |
ವಿನಯದೆ ತಳೆದಿರ್ಪುದೆಂದು ಮುಳಿದಂತೆವೊಲಾ ||
ಜನಪದಮನಧರ್ಮಂ ತೊರೆ |
ದನಿಶಂ ತದ್ರಿಪುಧರಿತ್ರಿಯೊಳ್ನೆಲಸಿರ್ಕುಂ || ೩೧

ವ|| ಇಂತ ಖರ್ವವಿಭವಾವಾಸಮಾದ ಚೋಳದೇಶದ ಮಧ್ಯದೇಶದಲ್ಲಿ

ವೃ|| ಕ್ಷಿತಿವಧು ತಾಳ್ದಲಂಕೃತಿಯಿದೆಂದೆಸಿಸಿರ್ಪುದುಸಾರವಸ್ತುಸಂ |
ಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರನಿ ||
ರ್ವೃತಿಕರ ರಾಜಪದ್ಧತಿ ಸದಾಶ್ರಿತಸಂತತಿ ದತ್ತನಿರ್ಜರ |
ಸ್ಥಿತಿ ನುತಿವೆತ್ತಧರ್ಮವತಿಯೆಂಬಪುರಂ ವಿತತಪ್ರಭಾವದಿಂ || ೩೨

ವ|| ವಿಳಾಸೈಕದೇಶಮಾದಾಪುರದಬಹಿಃಪ್ರದೇಶದಲ್ಲಿ

ಕಂ|| ಇರುಳೊಸರ್ವಚಂದ್ರಮಣಿಬಂ|
ಧುರತತ್ಪುರಸಾಲದಂಬು ಬಳಯಿಸೆ ಬೆಳೆವಾ ||
ಪುರನಂದನಮಂ ಹರಹರ |
ಸುರನಂದನವೆಂದು ಬಣ್ಣಿಸಲ್ಬಗೆವುಗಮೇ || ೩೩

ವ|| ಎಂಬಪಿರಿಯಸಿರಿಯನಪ್ಪುಗೈದು

ಕಂ|| ಪರಿಗತರಂಭಾಸುಮನ |
ಸ್ಸ್ಫುರಿತಪ್ರಮದಾಳಿಮಂಜುಘೋಷಾಂಚಿತಮು ||
ಚ್ಚರಿವಡೆದುಪೋಲ್ತು ಮೆರೆದುದು |
ಪುರನಂದನಮುಮರ್ದು ಮಿಸುಪಸುರನಂದನಮಂ || ೩೪

ವೃ|| ಕಳರವಮಿಲ್ಲದಿರ್ಪ್ಪಿಕನಂಚೆಗಳಾಡದಪೂಗೊಳಂ ಫಳಾ |
ವಳಿ ಬಳಸಿಲ್ಲದಿರ್ಪ್ಪಪೊಸಮಾವಿನಿವಾತುಗಳಾಡದಿರ್ಪ್ಪಪೆ ||
ಣ್ದೆಳಿಯಳಿರಾಜಿ ರಾಜಿಸದತಾವರೆ ಪೂಗುಡಿ ಮೂಡಿ ತೋರದಿ|
ರ್ಪ್ಪೆಳಲತೆ ಮೆಲ್ಲಿತಲ್ಲಡೆಲರಿಲ್ಲೆನೆ ತದ್ವನಮೇಂ ಮನೋಜ್ಞಮೋ || ೩೫

ವ|| ಮತ್ತಮಲ್ಲಿ||

ವೃ|| ಆರನೇರಿಲ್ನಿಂಬೆ ಕಂಕೆಲ್ಲಿ ಪಲಸು ಬಕುಳಂ ಬಾಳೆ ಪೇರೀಳೆ ತಾಳೀ |
ತರು ತೆಂಗುಂಕೌಂಗು ಸಪ್ತಚ್ಛದಕದಳಿ ತಮಾಲಂ ಲಸಚ್ಚಂಪಕಂ ಪಾ ||
ದರಿ ಪುನ್ನಾಗಂ ರಸಾಲಂ ತಿಲಕಕುರವಕಂ ಕರ್ಣಿಕಾರಂ ಕದಂಬಂ |
ಸಿರಿಸಂಶ್ರೀಪರ್ಣಿದಾಳಿಂಬಮುರಮುದುರ್ಸಾಲ್ಗೊಂಮುಕಣ್ಗೊಪ್ಪುತಿರ್ಕ್ಕುಂ

ಎಳನನೆತೀವಿತೋರ್ಪ್ಪ ಮೊನೆಮಲ್ಲಿಗೆ ತಾವರೆ ತೀವಿತೋರ್ಪ್ಪತಂ |
ಗೊಳಮಳಿ ತೀವಿ ತೋರ್ಪ್ಪಮಧುದೂತಿಯುಲತ್ತ್ರವೆತೀವಿತೋರ್ಪ್ಪಪಾ ||
ಟಳಿ ಗಿಳಿತೀವಿತೋರ್ಪ್ಪಪೊಸಮಾವುತಳಿರ್ಚ್ಚಿಪೆ ತೀವಿತೋರ್ಪ್ಪಮಂ |
ಜುಳತರಮಾದಶೋಕೆ ಮೆರೆದಿರ್ಪ್ಪುದು ತದ್ವನಮಧ್ಯದೇಶದೊಳ್ || ೩೭

ವ|| ಮತ್ತಮಲ್ಲಿ||

ಕಂ|| ಬಲವಪ್ಪಾರಡಿ ಬಗ್ಗಿಪ |
ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿ |
ರ್ಪ್ಪಲಜೊರ್ಂಪಂ ಕಾತೊರಗುವಫ |
ಲಾಳಿ ತಳ್ತಿರೆ ರಸಾಲಭೂರುಹಮೆಸೆಗುಂ || ೩೮

ವೃ|| ಅಲರ್ಗಂಪಿಂಗೆರೆಗಿರ್ದ್ದತುಂಬಿಗಳ ಬಂಬಲ್ಕಾರ್ಮುಗಿಲ್ಪಲ್ಲವಾ |
ವಳಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ ನಿರಾ ||
ಕುಲಮೊಂದಿರ್ಪ್ಪಶುಕಾಳಿ ಶಕ್ರಧನುವೆಂಬಂತಾಗೆ ಮೇಘಾಗಮಂ |
ಬೋಲದೇಂ ಸೂಸಿದುದೋ ಮರಂದರಸವೃಷ್ಟಿ ವ್ರಾತಮಂ ಮಾಮರಂ ||

ಕಂ|| ಸ್ಮರನಲ್ಲಿ ನೆಲಸಿ ನೆಲೆಗೊಂ |
ಡಿರೆ ಮಾಮರದತ್ತ ಗಿರಿಶನುರಿಗಣ್ಣುರಿ ಬಂ |
ದಿರದಡರ್ದು ಸುತ್ತಿ ಮುತ್ತಿದ |
ಪರಿಯಂ ಪಸರಿಪುದು ಜೆಲ್ವಜೆಂದಳಿರ್ದುರುಗಲ್ || ೪೦

ಮಲ್ಲಿಗೆ ಮಾಮರದೆಳದಳಿ |
ರಲ್ಲಿ ಮುಗುಳ್ತೊಡರೆ ಮುಗುಳ್ಗಳೆಸೆದುವು ಸಂಧ್ಯಾ ||
ಸಲ್ಲಲಿತ ತಾರಕಾಳಿವೊ |
ಲಲ್ಲಿಳಿವಾರಡಿಗಳೆಳೆವತಮವೆನಿಸಿರ್ಕ್ಕುಂ || ೪೧

ಅಳಿಗಳ ಗಿಳಿಗಳ ತಳಿರ್ಗಳ |
ಫಳಂಗಳಲರ್ಗಳ ವಿಶೇಷವರ್ಣದಿನೆಸೆಗುಂ ||
ತಳತಳಿಪಪಂಜರತ್ನದ |
ನಿಳಯುವಿದೆನೆ ಮದನನೃಪತಿಗದು ಮಧುರಚಿತಂ || ೪೨

ತರುಣಾಮ್ರತರುಯುಗಳವುದ |
ಕರಿಗಳ್ಕಾದಲ್ಕೆ ನಿಲೆ ಮನೋಜನ ಬಿನದ ||
ಕ್ಕಿರದಡರ್ದವನಾದರ್ದ |
ಬ್ಬರಿಪರ ಪರಗೈವಪರಭೃತಂಗಳ್ಪೋಲ್ಗುಂ || ೪೩

ವೃ|| ತುದಿಗೇರಿರ್ದ್ದೊಂದುಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ |
ಬ್ಬಿದಮಲ್ಲೀವಲ್ಲಿಯೇ ಬಲ್ಪೊರಜಿ ಸಿಚಿತಭೃಂಗವ್ರಜಂ ನೀಲಶೋಭಾ ||
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ರಾ |
ತದ ನಾದಂ ವಾದ್ಯಮಾಗಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ||

ಕಂ|| ಎಲರಲೆಯೆ ಕೆಲಕೆ ತೊಲಗಿದ |
ಚಲಶಾಖೆಯ ತಳಿರ ತುಡುಕಲಾತುರಿಪಪಿಕಂ ||
ಗೆಲೆವೆಂದುದು ಮುಳಿದು ಕೆಲ |
ಕ್ಕೊಲೆದಳ ಚೆಂದುಟಿಯ ಚುಂಬಿಸಲ್ತವಕಿಪನಂ || ೪೫

ವ|| ಮತ್ತಮಲ್ಲಿ ||

ಕಂ|| ಚೆಂದಳಿರದು ಮೊಂದಳಿರೆನೆ |
ಸಂದಣಿಸಿದಪಣ್ಗಳಿಗಳೆನೆ ತಾನುಂ ಮಾ ||
ಕಂದಮೆನಿಸಲ್ನೆಗಳ್ಚಿದ |
ಚಂದಮನಾಂತತೆ ನೇರಿಲಲ್ಲೆಸದಿಕ್ಕುರ್ಗಂ || ೪೬

ಮಿಡಿ ಪಚ್ಚೆಯಪರಲೆನೆ ಕೆಂ |
ಪಿಡಿದರೆವಣ್ಪದ್ಮರಾಗಮೆನೆ ತನಿವಣ್ಕ ||
ಪ್ಪಿಡಿದಿಂದ್ರನೀಲಮನೆ ಮಣಿ |
ಗಡಣಮನಾಂತಂತೆ ನೇರಿಲೆಸೆದುದು ಬನದೊಳ್ || ೪೭

ಅಮರ್ದಿನಿದನಿದರಿನಿದನೆಲೆ |
ಯಮರರೆ ಸರಿನೋಳ್ಪುದೆಂದು ನಿಜರಸಮನಿಳಾ ||
ರಮೆ ಮರಕತಕಳಶದೆ ತುಂ |
ಬಿ ಮೇಲೆನೀಡಿದಪಳೆಂಬವೋಲ್ತೆಂಗೆಸೆಗುಂ || ೪೮

ಬಿಡದಾಲವಾಲಜಲದೊ |
ಳ್ಕಡುಗೆಂಪಿಡಿದಿಡಿದಬೀಜರದನದ ಚೆಲ್ವಂ ||
ನಡೆನೋಳ್ಪಂತಿರೆ ತೋರ್ಕ್ಕುಗಂ |
ಪಡಿನೆಳಲಿಂಬಾಗೆ ಬಾಗಿ ರಸದಾಳಿಂಬಂ || ೪೯

ಜಲದಜಲದಕ್ಕೆ ಜಲವ |
ತ್ಫಲಮಾವುದು ತೆಂಗಿದರ್ಕ್ಕೆ ಕುಡದಾಯ್ತೇನಂ ||
ಸಲಪಿದಿಳೆಗೆಂದೆರಗಿ ನವ |
ಫಲಂಗಳೀವಂತೆ ಬಾಗಿ ಬಾಳೆಗಳೆಸೆಗುಂ || ೫೦

ಕಂ|| ಘನತರಫಳಮಂ ಬೇರಿಂ |
ಕೊನೆವರೆಗಂ ತಾಳ್ದಬಕ್ಕೆವಲಸಿನ ಪಣ್ಗ ||
ಳ್ಮನಸಿಜನ ಮಲಗುಮೂಜೆಯ |
ನನುಕರಿಪುವು ನೋಳ್ಪಮನುಜನಿಕರಕಜಸ್ರಂ || ೫೧
ಗಗನೇಚರಿಯುಗ್ಗಗನದೆ |
ನೆಗೆತರುತುಂ ಬನದ ಕೌಂಗಿನೆಳಅಡಕೆಗಳಂ ||
ಮಿಗೆ ಪಚ್ಚೆವರಲಿವೆಂದು |
ಜ್ಜುಗಿಪತ್ತ್ರಡಲೆಂದು ಬಂದು ನಿಂದದರೆಡೆಯೊಳ್ || ೫೨
ಅಲರಂಬಂ ಕುಸುಮಸಮು |
ಜ್ಜ್ವಲಲಿಂಗಮನರ್ಚಿಸಲ್ಕೆ ನಿಲಿಸಿದದೀಪಾ ||
ವಳಿಯ ಘನಸ್ತಂಭಂಗಳ |
ವೊಲದೇಸೆಸೆದುವೊ ಸಪುಷ್ಪಚಂಪಕತರುಗಳ್ || ೫೩
ಬನಗಲ್ತಲೆಯುಂ ಕಮಳಾ |
ಪ್ತನ ಕದಿರುಂ ಕಾದಿ ಮಡಿಯುತಿಳಿಯುಂ ಚಾಂಪೇ ||
ಯನಿಕಾಯಮಾದುವಲ್ಲದೊ |
ಡೆನಸುಂ ತದ್ದ್ವಯಕೆ ಪಗೆತನಂ ಸಮನಿಪುದೇ || ೫೪
ಕೆಂಬಟ್ಟೆಯ ಗೂಡಾರಮ |
ನಿಂಬರಿದು ಬಸಂತನೆಯ್ದೆ ಪೊಯ್ದನೊ ಮದನಂ ||
ಗೆಂಬಂತೆ ಮುಸುಕಿ ತಳಿರ್ಗಳಿ |
ನೇಂ ಬಂದುದೊ ಕಣ್ಗನೇಕಶಾಖಮಶೋಕಂ || ೫೫
ತಳಿರ್ಗಳೆ ದಳ್ಳುರಿ ಮುಸುಕಿ |
ರ್ದ್ದಳಿಗಳೆ ಪೊಸಮಸಿಗಳಾಗೆ ಮದನನ ಬಾಣಾ ||
ವಳಿಯುಂ ಕಾಸಲ್ಬೈತ್ರೋ |
ಜ್ಜ್ವಳಕಾರುಕುನಿಟ್ಟ ಕುಂಮಟಂಬೊಲದೆಸೆಗುಂ || ೫೬

ವೃ|| ಅಲರ್ವಿಲ್ಲಂಗಜವೀರ ನಿನ್ನ ಪಗೆಯಾವಂ ಕಾಯ್ದುವಂ ಬೈದುಃ ಮೇ |
ಣ್ಕಲುಷಂಗೂಡಿದೆಯೆಂದು ವರ್ಜಿಸಿದನನ್ನಂ ಬಂದೆನಿಂದಾಂ ನಿರಾ ||
ಕುಲಮೆನ್ನೊಂದೆಸಳಂ ತೊಡರ್ಚ್ಚಿ ಬಿಡು ನಿನ್ನೀಬಿಲ್ಲೊಳಾಂ ಗೆಲ್ವೆನೆಂ |
ದುಲಿವಂತುದ್ಭ್ರಮರಸ್ವನಂ ಸೊಗಯಿಸಿತ್ತಾ ತಾಣದೊಳ್ಕೈರ್ತಕಂ || ೫೭

ಕಂ|| ಹರನೊಳ್ಪಿಸಿನುಡಿದಘುಮಂ |
ಪರಿಹರಿಸಲ್ನಿಜರಜೋವಿಭೂತಿಯಿನಂಗಂ ||
ಬೊರೆದಕ್ಷಮಾಲೆಯುಂ ಮೇ |
ಣ್ತಿರುಪುವವೊಲ್ಭೃಂಗಮಾಲೆಯಿಂದದು ಮೆರೆಗುಂ || ೫೮

ವೃ|| ಕೊಳನೊಂದಿದ್ದುದು ಕಣ್ಗೆ ಕೌತುಕಮನೀಯುತ್ತಲ್ಲಿಯುತ್ಫುಲ್ಲದ್ಬಹಿ |
ರ್ಮಳಪಾನೀಯದಿನುರ್ವಿಬರ್ಪತೆರೆಯಿಂ ಕನ್ನೈದಿಲಿಂ ನೈದಿಲಿಂ ||
ದಳಿಯಿಂದಂ ಕಳಹಂಸೆಯಿಂ ಕಮಳದಿಂ ಕೋಕಂಗಳಿಂ ಮೀಂಗಳಿಂ |
ಜಳಶೈವಾಳದಿನಿತ್ತರಂಬಿಡಿದಭೂಜಾತಾಳಿಯಿಂ ಪಾಳಿಯಿಂ || ೫೯

ಕಂ|| ಅಲರಂಬನಂಬುಗಳ ಬೆಳೆ |
ವೊಲಮುಲರ್*ಕ್ಕಿಗಳ ಗೀತಶಾಲೆ ಸರೋಜೋ ||
ತ್ಪಲಸಖರ ರಾಣಿವಾಸದ |
ನೆಲೆ ಮಂದಾನಿಲನ ಕೋಶಮಾಕಾಸಾರಂ || ೬೦

ವೃ|| ಪರಿಗತರಾಜಹಂಸರುಚಿರಂ ಜಿತಮಾನಸಮುನ್ನತಾಳಿಬೃಂ |
ದರುಚಿವಿಕೀರ್ಣಸಾರಸರಜೋಮರುದನ್ವಿತ ಪುಷ್ಪಕಂ ಪಯೋ ||
ಧರವರಚಕ್ರಮಂಡಿತ ಸಮಂಗಳಸೌಮ್ಯಕವಿಪ್ರಯುಕ್ತಮಂ |
ಬರದವೊಲೇಂ ಮನಂಗೊಳಿಸಿತೋ ಪೊಸಮೀಂಗಳಿನಂಬುಜಾಕರಂ || ೬೧

ವ|| ಅಂತುಮಲ್ಲದೆಯುಂ

ವೃ|| ಕಳಹಂಸೀಚಾರುಚಂಚೂದಳಿತಗಳಿತ ಬಾಲಾಬ್ಜಬೀಜಾಳಿಮುಕ್ತಾ |
ಕಳಿತಂ ಷಟ್ಪಾದಪಕ್ಷಾಹತಿಪತಿತಪಯೋರುಟ್ಪರಾಗಾರುಣಶ್ರೀ ||
ಮಿಳದುದ್ಯದ್ವರ್ಣಕಂ ಕಂದಳಿತಕಮಳಚಿತ್ರಂ ಪ್ರವಿಷ್ಟಾರ್ಕದೋಜಿ |
ರ್ಜ್ವಳಿತಂಕಾಸಾರವೊಂದಾರತಿ ರತಿರಚಿತಂಕಂತುಗೆಂಬಂತೆತೋರ್ಕ್ಕುಂ|| ೬೨

ವೃ|| ಸರದೊಳ್ಮಾರ್ಪ್ಪೊಳೆಪರ್ಕಮಂಡಳಮುಮುಲ್ಲೊಕ್ಕಿರ್ದ್ದತೀರಕ್ಷಮಾ |
ಜರಜಃಪೂರಿತಪುಷ್ಪಬೃಂದಮುಮುದೇಂ ಚೆಲ್ವಾಯ್ತೊ ತತ್ಪಂಕಜಾ ||
ಕರಚಾರುತ್ವಕೆ ಮಚ್ಚಿ ತೂಗೆ ಶಿರಮಂ ಮೇಲಂಬರಶ್ರೀಯ ಸುಂ |
ದರಸೀಮಂತದ ರತ್ನಮುಂ ಮುಡಿಯ ಪುಷ್ಪವ್ರಾತಮೊಕ್ಕಂದದಿಂ || ೬೩

ರತಿಕಾಮರ್ಮಲ್ಲಿಕಾಮಾಲತಿಗಳ ಲತಿಕಾಗೇಹದೊಳ್ತಾಳ್ದಮೋಘಂ |
ರತಿಕೇಳೀಶ್ರಾಂತಿಯಂ ತತ್ಸರದೊಳೆ ಜಳಕಂಬೊಕ್ಕಪರ್ಪ್ಪೇಗೆ ಸೂಸಿ ||
ತ್ತು ತದೀಯಸಾಂಗಾಂಗರಾಗಂ ಪಿರಿದೆನೆ ಕರಮೊಪ್ಪಿತ್ತು ಕಂಜಾತಕಲ್ಹಾ |
ರತಟಕ್ಷ್ಮಾಜಾತ ಪುಷ್ಪಪ್ರಜರಜಮಳಿಪಕ್ಷಾನಿಲೋದ್ಧೂತಮೆತ್ತಂ || ೬೪

ಕಂ|| ನಿಜಪತಿಯಭಿಧಾನಮನೀ |
ದ್ವಿಜನಾಂತುದು ಮಾಣದೆಂದು ಹಂಸಂಗಾಸಿ ||
ರಜನಿ ಪದೆದಿತ್ತಮುಕ್ತಾ |
ಸ್ರಜಮೆನೆ ತತ್ತನುವೊಳಿಡಿದಜಳಕಣಮೆಸೆಗುಂ || ೬೫

ನೀರಕ್ಷೀರಪರೀಕ್ಷಾ |
ಧೀರತೆಗಾನಲ್ಲದಿಲ್ಲೆನುತೆ ಮುಡಿಗಿಕ್ಕಿ ||
ತ್ತಾರಾಜಹಂಸನೆನೆ ಖಗ |
ವಾರದೆ ಗರಿಗೆದರೆ ಜರಿದಗರಿ ನೆರೆ ಮೆರೆಗುಂ || ೬೬

ಮೊರೆವಳಿನಿಯ ರವಮಿಷದಿಂ |
ದರವಿಂದಿನಿ ಪಾಡೆ ಮಚ್ಚಿ ಮುತ್ತಿನ ಸರಮಂ ||
ಸರಸಿ ತೆರೆಗೈಯೊಳೀವಂ |
ತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ || ೬೭

ಅಂಬುಪ್ರತಿಬಿಂಬಿತರವಿ |
ಬಿಂಬಮೊಳೊಡೆಪೆರೆಯಲೆಂದು ಕಮಳಿಸಿ ಘನಮೋ ||
ಹಂಬಡೆದು ಮುಳುಗಿದಂತೆ ನಿ |
ಲುಂಬದಕೆರೆ ಪೊಯ್ಯ್ಯ ಮುಳುಗುತುಂ ಮೋಹಿಸುಗುಂ || ೬೮

ಕಂ|| ಆರಡಿಯೆರಗಿದೊಡೆ ಕೆಲಂ |
ಜಾರುತೆ ತರುಣಾಂಬುಜಂ ತರಂಗಾಹತಿಯಿಂ ||
ತೋರಿದುದಿನಿಯುಂ ಚುಂಬಿಸೆ |
ನೀರೆ ಮೊಗಂದಿರುಪುವಂದಮಂ ಮುಳಿಸಿಂದಂ || ೬೯

ಅಲರ್ದ*ಮೊಗದಿಂದೆ ಸರುದಂ |
ಬುಲಮುಗುಳ್ದ*ಳ್ಳಿನಿ ಪಜ್ಜೆವಡಿಗದೊಳೆಂಬಂ ||
ತಲರ್ದಲರಿಂದುಗುತುಂ ಕೇ |
ಳಿಲೆಯೊಳ್ಮಧುಮಿಶ್ರತದ್ರಜಂ ರಂಜಿಸುಗುಂ || ೭೦

ದಳಿತಾಬ್ಜದಿಂದಮೊಂದೊಂ |
ದಳಿಗಳ್ನಿಗೆನೆಗೆದು ಮತ್ತಮೆರಗುತ್ತಿರೆ ತ ||
ನ್ನಳಿನಿ ಹರಿನೀಲದಿಂ ಕೆಂ |
ದಳದೊಳ್ತಿರಿಕಲ್ಲಸಾಡುವಂತೆವೊಲೆಸೆಗುಂ || ೭೧

ಮತ್ತಮಾಕಾಸಾರದಲ್ಲಿ,

ವೃ|| ಕುವಳಯಕುಟ್ಮಳಾವಳಿಯ ಪೆರ್ಗ್ಗಳೆಯುಂ ನೆಗೆದೇರಿ ಲಾಗಿಸು |
ತ್ತಿ ವನಜವಲ್ಲರೀನಿಬಿಡಕಂಟಕಸೂಚಿಸಿಬದ್ಧಯಂತ್ರದೊ ||
ಳ್ತವೆ ನುಸುಳ್ದೇ*ರಿ ಪಾಸೆವಿಳಿಯೊಳ್ಪರಿದಾಡಿ ತರಂಗಸಂಘಸಂ |
ಭವರವವಾದ್ಯಕಾಡಿದುದು ಕೂಡೆ ಝಷಂ ಪೊಸಡೊಂಬಸೆಂಬಿನಂ || ೭೨

ತೊರೆದಪಯೋಧರಂ ನವಮರಂದರಸಾಮೃತಪೂರ್ಣಕುಟ್ಮಳಂ |
ಪಿರಿಯದೆ ಸಿಂಡತುಂಬಿ ಸೊಡರ್ವ*ಕ್ಕಿನ ಜೊಟ್ಟು ಪಲಾಶವಾಸೆವಿ ||
ಸ್ಫುರಿತಮರಾಳನೊಂದುಶಿಶುವಾಗಿರೆ ಜಾಣತಿಯಂತೆ ಕಣ್ಗೆದೇಂ |
ಸುರುಚಿರಮಾಯ್ತೊ ನೀರಜನಿ ನೈಜರಜೋರಜನೀವಿರಾಜಿತಂ || ೭೩

ಜಗಮಂ ಪುಟ್ಟಿಪನೆನ್ನ ಸೂನು ಬುಧರಂತಲ್ತೆನ್ನದಿಕ್ಕೆನ್ನವೋ |
ಲ್ಜಗದೊಳ್ಪೂರ್ಣರಜೋಗುಣಾನ್ವಿತನದಂತಿಕ್ಕಾರ್ತಸಂ ಶೂಲಿ ಸುಂ ||
ಮುಗೆ ಕೊಂದಂಗಡ ನೋಡಿಮೆಂದಜಕಪಾಲಂಜೊತ್ತು ಪೇಳ್ವಂತೆ ಹಂ |
ಸಗತಾಂಭೋಜಮದೊಪ್ಪಿದತ್ತು ಮಧುಬಾಷ್ಪಾಳಿಸ್ವನಾರ್ತಸ್ವರಂ || ೭೪

ಕಂ|| ತೀರಮಹೀರುಹನಿಕರಂ |
ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾ ||
ಸಾರಂ ಬೃಂದಾರಕತರು |
ವಾರಮನೊಳಕೊಂಡು ಪೆಂಪುವಡೆದಂಬುಧಿಯಂ || ೭೫

ವೃ|| ನಳಿನೀನಾಳಮದೆಂಬ ಕಂಬಮನೆ ಕಟ್ಟುತ್ತಲ್ಲಿ ಚಕ್ರಂಗಳಂ |
ಬಲಸತ್ಸಂಗ್ರಹಣಂಗಳಂ ಪಿಡಿದು ಮೇಲೆತ್ತುತ್ತೆ ತತ್ಸೀಕರಾ ||
ವಳಿಘರ್ಮಾಂಬುವನಾಂತು ಪಂಕಜರಜೋಮೃದ್ಧೂಳಿಯುಕ್ತಂ ಸರ ||
ಸ್ಸ್ಥಳದೊಳ್ಮಾರನಮಲ್ಲನಂತೆ ಸುಳಿದಂ ಮೈದೋರಿ ಮಂದಾನಿಲಂ || ೭೬

ವ|| ಮತ್ತಮಾಪುರದ ಬಹಿರ್ವನಂ ದರದಳಿತಕುಸುಮವಿಸರವಿಳಸಿತಪರಾಗಪಟಲಸುರಭಿಲಲಿತಲತಾಲಿಂಗಿತ ತರುಣರಸಾಲತರುನಿಕರದೆಳಗೊಂಬಿನೊಳ್ಕಳ್ಳಿರ್ದಂಕುರಮನವಲೋಕಿಸಿ ಭೋಂಕನೆತುಡುಂಕಿ ನಿಜಚಂಚುವಿಂದುಡಿದು ಕರ್ದುಂಕಿ ಜಗುಳ್ವರಸಧಾರೆಯಂ ಮಗುಳ್ದು ಸೇವಿಸಿ ಚಂಚತ್ಪಂಚಶರನ ಬಂಚದರಂತೆ ಮುಂಚಿ ಪಂಚಮದಿಂಚರಮಂ ಪಂಚಮೆನೆ ನೆಗಳ್ದು ಸಂಗಡಿಸಿದ ಕೆಂಗಣ್ಬಕ್ಕಿಗಳಿಂ | ಮತ್ತಮಲ್ಲಿ ಸಲ್ಲೀಲೆಯಿಂ ನಲ್ಲಳೊಡನೆ ಸುಸಿಲೆಸಗಿ ಬಳಲ್ದು ಜಾಯಾರಿ ಕಟ್ಟಿದಿರೊಳ್ತೊಟ್ಟನೆಲರಲೆಯೆ ಸಾರೆವಂದು ಸೆಳೆಗೊಂಬಿನೊಳಿಂಬುವಡೆದ ತನಿವಣ್ಣಂ ಮನವಾರೆ ನೋಡಿ ಸಂತಸಂಮಿಕ್ಕು ಪೊಕ್ಕು ಪಕ್ಕದಿಂದಪ್ಪಿಮಿಂಚುವಚಂಚುವಿಂ ಸೆಳೆದು ಸೀಳ್ದು ಗಳಿಲನೆ ಗಳಿಯಿಪರಸಾಸಾರಮಂ ಮನೋರಮಣನಿನಿಯಳಬಿಂಬಾಧರರಸಮಂ ಸವಿವಂತೆ ಸವಿದು ಚೀತ್ಕಾರಂ ಪೊಣ್ಮೆ ಕಣ್ಮುಚ್ಚಿ ತನ್ನ ನಚ್ಚಿನನಲ್ಲಳಂ ಗರಿಸನ್ನೆಯಿಂ ಕೆಲಕ್ಕೆ ಕರೆದಕ್ಕರಿಂ ಮುಕ್ಕುಳಿಸಿ ಚಂಚುಗೂಡಿಗಾಡಿಯಿಂದೆರೆದವಳ್ಗೂಡಿ ಕುಸುಮಪರಾಗಮೆಂಬಂಗರಾಗಮಂ ತಳೆದು ಮುಂದೆ ಮಂದಾನಿಲನಿನೊಗೆತಂದಚೆಂದಳಿರ್ದುರುಗಲ್ಪಿಗುರಿಯಾಗೆ ಕೆಲದೊಳಲರ್ವಕ್ಕಿಗಳ ನೊಲೆವರಸಾಲಲತಾಸರಲ ಶಾಖಾಗ್ರದೊಳ್ತೂಗುವ ಪೂಗುಡಿ ಧವಳ ಚಾಮರನು

ಸಿಸೆ ಪಾಡುವಪರಮೆದುರುಗಲ ಸರಸರವಸಂಗೀತಮಿಂಬುವಡೆಯೆ ಕಳಕಂಠನ ಕಂಠ
ಸಿನದಂ ವಂದಿಧ್ವನಿಯಂತೆಸೆಯೆ ನಟ್ಟಗೊಂಬಿನ ತುತ್ತತುದಿಯೊಳಲರ್ವಡಿ
ನೆಗೆದು ಮಂದೈಸಿ ಮಂಡಳಿಸಿ ಧವಳಾತಪತ್ರಲಕ್ಷ್ಮಿಯಂ ತಳೆಯೆ ರಾಜಶುಕ
ನಾಮಕ್ಕಿದುಚಿತಮೆಂಬಂತೆ ಮೆರೆದು ಸೋಜಿಗಮನೆ ರಾಜಿಸುವ ರಾಜಶುಕಸಮಾ
ಜದಿಂ | ಮತ್ತಮಲ್ಲಿ ಸಲ್ಲೀಲೆಯಿಂ ಮೆಲ್ಲನಲೆವಮೆಲ್ಲೆಲರಿಂದುಳ್ಳಲರ್ದ ಮಲ್ಲಿ
ಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ಪತ್ತೆ ಕರ್ಚಿ ಕಳೆಯ
ಲೆಂದು ಸಂದಣಿಸಿ ಗೊಂದಣಿಗೊಂಡೈದುತರವಿಂದಾಕರದರವಿಂದಬೃಂದ ಮರಂದ
ರಸಮೊಳ್ಮುಳುಂಗಿ ಪಿಂಗದೆ ಪಸಿವಿನೆಸಕದಿಂದೆಸಳಕುಸುಂಕರೊಳ್ಮುಸುಂಬಿಟ್ಟ
ಮಿಸುಪಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ಕೆಲದ ಪುಂಡರೀಕದೊ
ಳ್ಮಂಡಿಸಿದ ಮರಾಳಮಂಡಳಿಗಕಾಂಡಜಳದಮಂಡಳಶಂಕೆಯಂ ಭೋಂಕನಾಗಿಸಿ
ಮೇಗಣ್ಗೆ ಪಾರಿಸಿ ಪರಕಲಿಸಿ ಪಾಡುವ ಪರಮೆವರಿಗಳಿಂ | ಮತ್ತಂ ಜಾತಿಯೂಥಿ
ಕಾಮಲ್ಲಿಕಾಮಾಲತೀಲತಾಮಂಟಪಂಗಳೊಳ್ನೆರೆದು ಸೆದೆವಟ್ಟಕಾದಲರ ಸುಯ್ಯೆಲ
ರ ನರುಗಂಪಿನೊಡವೆರೆದು ಸೊಂಪುಗರೆವ ಚಂಪಕಮುಕುಳದೀಪಂಗಳನಲೆದು ಫಲ
ಭಾರಮಂ ಪೊರಲಾರದೆ ನಿಂದು ಬಳ್ಕಿ ಬಸವಳಿವ ಬಾಲರಸಾಲಂಗಳ ಮಕರಂದ
ಘರ್ಮಜಲಕಣಮನುದಿರ್ಚಿ ಮೈಸಾರ್ಚಿ ಸರಳಶಾಖೆಗಳಂ ಪೊತ್ತೆತ್ತಿ ಕುಸು
ಮವಿಸರಸುರಭಿರಜಮಂ ಕೊರಲ್ಕುಸಿವಿನಂ ಪೊತ್ತು ಪಿಂದುಗೊಂಡು ಬರ್ಪಿಂದಿಂದಿ
ರಬೃಂದದ ಝುಂಕಾರರವವ್ಯಾಜದಿಂ ಪೊರಲಾರದೆ ನರಳ್ದು ನಿಂದುನಿಂದು ಬರ್ಪ
ಮಂದಾನಿಲಂಗೆ ಕರುಣಿಸಿ ಕೈಗೊಟ್ಟಪುವೆಂಬಂತೆ ಕೆಂದಳಿರಂದಂಬೆತ್ತಡ್ಡಗೊಂಬಿಂ
ದೆಡ್ಡಮಾದಸೆಕಾಶೋಕಾನೋಕಹಂಗಳಿಂ | ಮತ್ತಂ ವಸಂತರಾಜಂ ವನಲಕ್ಷ್ಮಿ
ಯೊಡನೆ ಸುಸಿಲಿಸಗಲೊಡನವಳ ನಿಡುಮುಡಿಯಿಂ ಕುಚಕುಂಭದಿಂ ತನುಲತೆಯಿಂ
ಸುರಿದು ಪಸರಿಸಿದ ಕುಸುಮವಿಸರಕುಂಕುಮರೇಣುಘರ್ಮಜಳಕಣಂಗಳೆಂ
ಬಂತೆ ತರುತರುಗಳ ಸೆಳೆಗೊಂಬುಗಳೊಂದೊಂದನೊರಸೆ ಸುತ್ತಂ ಸೂಸಿ ಬಿಡದೆಲ್ಲೆ
ಡೆಯೊಳ್ಜೊಪ್ಪಿದ ಲಲಿತಲತಾಂತ ಪರಾಗಮಕರಂದಸಂದೋಹದಿಂ ದಳಿತಧವಳಕು
ಸುಮವಿಸರದಿಂ ಕಳಕಂಠನ ಕಳಕಳಧ್ವನಿಯಿಂ ನಾಕಲೋಕದ ನಂದನಮಂ ನಗು
ವಂತೆ ನಳಿನಬಾಣನ ಕೇಳೀನಿಳಯಮೆಂಬಂತೆ ಬನಸಿರಿಯ ಜನದಡೆಯಂತೆ ಚೈತ್ರ

ರಾಜನ ಚಿತ್ರಶಾಲೆಯುಂತಲರಂಬನ ಬಲದ ಗರುಡಿಯೆಂಬಂತೆ ಲತಾನರ್ತಕಿಯ ನರ್ತನಶಾಲೆಯುಂತೆ ಕಲಕಂಠನ ಸಂಗೀತ ಭವನವಂತೆ ರಾಜಶುಕಂಗಳ ಭೋಜನ ಶಾಲೆಯುಂತೆ ಮಧುಪಪಾಂಥಪ್ರಪಾಶಾಲೆಯುಂತೆ ರಥಾಂಗಕಾಮುಕರ ರತಿಶಾಲೆ ಯುಂತೆ ಮನೋಹರಮಾಗಿರ್ಪುದಂತುಮಲ್ಲದೆಯುಂ

ಕಂ|| ಸುರತರುಯುತನಂದನಮಂ |
ಸುರತರುಣಿಯರೆಳಸದಿನಿಯರೊಡನೇತ್ತರುತುಂ ||
ಸುರತರುಚಿದಾಳ್ದುಘನಭಾ |
ಸುರತರುತಳದಲ್ಲಿ ನೆರೆವರಾವುಪವನದೊಳ್ || ೭೭

ಇಂತೊಪ್ಪುವಾಪುರೋಪವನವನಮಧ್ಯದಲ್ಲಿ

ವೃ|| ನಳಿನಪರಾಗರಂಗಮನೊಡರ್ಚಿ ಮರಂದರಸಾಭಿಷಿಕ್ತಭೂ |
ತಳದೊಳೆ ಸಾರ್ಚಿ ಚಂಪಕದ ಕುಟ್ಮಳದೀಪಮನೊಕ್ಕ ಪುಷ್ಪಸಂ ||
ಕುಳಮನೆ ಪಾಸಿ ತೋರಣಮನಾಗಿಸೆ ಚಂದಳಿರಿಂದೆಲರ್ಪಿರ್ಕೀ |
ಕಳರುತಿ ವಾದ್ಯಮಾಗೆ ಭಜಿಪಂ ಸಲೆ ಕುಂತು ಲತಾಂತಲಿಂಗಮಂ || ೭೮

ವ|| ಮತ್ತಮಾವನಂ ವನಧಿಯುಂತೆ ವಲ್ಲಕಿಯುಂತೆ ವರಪ್ರವಾಳ ಮಂಮಾಚಿತಮುಂ ಸುತ್ರಾಮನಂತೆ ಸುಜನನಂತೆ ಸುಮನೋಮನೋಜ್ಞಮುಂ ಕಮಳದಂತೆ ಕಳಹಂಸನಂತೆ ಕಮಳಾಕರಾಭಿರಾಮಮುಂ ನೀರದಂತೆ ನಿಷಂಗದಂತೆ ನಿಬಿಡಶಿಳೀಮುಖಮುಂ ರಾಜಚಿತ್ತದಂತೆ ರಮಣೀಹೃದಯದಂತೆ ರಸಾಲಸಮುದಂಚಿತಮುಂ ವಿರಹಿಯುಂತೆ ವಿಧಿವಾಹನದಂತೆ ವಿಕಳಧ್ವನಿವಿಳಸಿತಮುಂ ಬಗೆಯುಂತೆ ಬಾನಂತೆ ಬಹುಲತಾರಾರಾಜಿತಮುಂ ಸಗ್ಗದಂತೆ ಸಮರದಂತೆ ಸಂರಂಭಾನ್ವಿತಮು ಮೆನಿಸಿದುದಂತುಮಲ್ಲದೆ,

ಕಂ|| ಅಲಕಾಳಿರುಚಿರಮಾವನ |
ವಲಯಂ ತಿಲಕೋಪಶೋಭ ಸರದಜ್ಞ ಪಿಮಂ ||
ಜುಲವಿಂದುಕಾಂತರುಚಿರೋ |
ಜ್ಜ್ವಲಾಧರಸ್ಥಾನಮಾಸ್ಯಮೆನೆ ನೆಲಸಿರ್ದುದು|| ೭೯

ವೃ|| ಮೊರೆದೆತ್ತಂ ದಾನಧಾರಾಸುರಭಿಗೆರಗುವಿಂದಿಂದಿರಶ್ರೇಣಿಯಂ ಪೋ |
ಯ್ದುದ್ದ ರಟತ್ಕರ್ಣಾಗ್ರದಿಂದಂ ತಗುಳೆ ಮಗುಳೆ ತತ್ಪುಷ್ಕರಂಗಂಡು ರಕ್ತಾಂ||
ಬುರುಹಂಗೆತ್ತಾದ್ದುರ್ದ ಸಾತ್ತ್ವಂದೆರಗೆ ಬಿದಿರ್ದು* ದಂತಾಗ್ರಕುಂಭಾಗ್ರಕಾಂತಿ
ಸ್ಫುರಣಂ ಕೈಗಣ್ಮೆ ತನ್ನಂದನದೆಡೆಯೊಳೆ ರಾಜಿಪ್ಪುವಾಗಳ್ಗಜಂಗಳ್ || ೬೦

ವ|| ಮತ್ತಮಲ್ಲಿ

ವೃ|| ಕರಿವರಗಂಡಮಂಡಳಗಳನ್ಮದಕರ್ದಮಮುಗ್ನಮತ್ತಷ |
ಟ್ಚರಣಗಣಂ ವಿರಾಜಿಪುದು ತದ್ರದನದ್ಯುತಿಚಂದನಚ್ಛಟಾ ||
ಪರಿಪಿಜಿತಂ ಸಿತಂ ಪ್ರಕಟಕುಂಭತಟಸ್ಫುಟಮೌಕ್ತಿಕವ್ರಜಂ |
ಸುರಿವಮದಾಂಬುಧಾರೆಯೊಡಗೂಡಿ ಕರಂ ಪೊರಪೊಣ್ಮೆ ತೆಂಪನಂ || ೬೧

ಕಂ|| ಭಯರಹಿತಜ್ಜಯಸಹಿತ |
ನ್ನಯವಿಜಿತಹ್ಜಯಮನೇರಿ ಬಹುವಿಧಗತಿಯಿಂ ||
ರಯದಿಂ ಪರಿಯಿಪವೈಹಾ |
ಳಿಯ ಬಯಲಿಂ ತಳ್ತು ತದ್ವನಂ ರಂಜಿಸುಗುಂ ||

ವ|| ಇಂತನಂತಜನ ವಿಲೋಚನರಮಣೀಯಮಾದ ವನವಳಯದಿಂದ ಮೊಳಗೆ

ವೃ|| ಘನಸತ್ತ್ವೈವ್ಯಸನಂತರತ್ನರುಚಿ ಲಾವಣ್ಯಪ್ರಭಾವಸ್ಥಿತಂ |
ವಿನತಾನಂದನವಾಹಸಂಶ್ರಯನುದಾತ್ತಾಭಂಗವಿಕ್ರಾಂತವಾ ||
ಜಿನಿ ತಾನೀಸರನಾಥನೆನ್ನವೊಲೆನುತ್ತಂಭೋಧಿ ತಾಂ ಬಂದು ನಂ |
ದನೆಯಿತ್ತಲ್ಲಿಯೆ ನಿಂದಪೋಲ್ಪರಿಖೆ ಚೆಲ್ವಂ ಬೀರಿ ಕಣ್ಗೊಪ್ಪುಗುಂ || ೬೩

ಕಂ|| ಮಣಿದೆನೆಗಳ ಮಾಪ್ಪೊಳಪಂ |
ಫಣಿಪಸ್ಫಟಿಗೆತ್ತು ನೋಳ್ಪಖೇಚರಿಯರ ಕ ||
ಣ್ಬೊಣರ್ಗಳ್ಮಾ*ಪೊಳೆವಂದಮ ||
ನಣಕಿಪುವಗಳಮಳಜಳದೊಳಂಬುಚರಂಗಳ್ || ೬೪

ಅಂತಳೆದಿಳೆಯುಂ ಭುಜದೊ |
ಳ್ತಾಂ ತಳೆದಂ ನೃಪತಿಯೆಂದು ವೇಲಾಚಲವೋ ||
ರಂತೈದಿ ನೋಡಿ ಕುತುಕ |
ಸ್ವಾಂತಂ ನಿಂದಂತೆ ಸಾಲವೇಂ ಸೊಗಯಿಸಿತ್ತೋ || ೮೫

ಖರಕರತುರಗೋತ್ಕರಖರ |
ತರಖುರಘಟ್ಟನದಿನಾದಕುರುಪೆನೆ ಮೆರೆಗುಂ ||
ಸುರುಚಿರ ಕೋಟಾಚಕ್ರದ |
ತರವಿಡಿದಿಡಿದೆಸೆವಬಟ್ಟದೆನೆಯೆಡೆಯೆಡೆಗಳ್ || ೮೬




ಘನಕೇತನಪಟದಗ್ರದೊ |
ಳಿನಬಿಂಬಂ ಬಂದು ನಿಂದು ಮಧ್ಯಂದಿನದೊ |
ಳ್ಕನಕಮಯದರ್ಪಣಂ ತಾ |
ನೆನೆ ಪೊಳೆವುದದೆಂದೊಡದನದೇಂ ವರ್ಣಿಪುದೋ || ೮೭

ಪೊಂದೆನೆಗಳ್ಖರಕರಗರ |
ದಿಂದಂ ಕರಗುಗುಮಿವೆಂದು ಪುರರಾಜಂ ನೀ ||
ರೊಂದಿದಸಿತಪಟತತಿಯುಂ |
ಕುಂದದೆ ಮುಸುಕಿದವೊಲಬ್ಜಜನುಮಲ್ಲಿಕರ್ಕ್ಕಂ || ೮೮

ಮತ್ತಂ

ವೃ|| ಆಪುರಭರ್ಮಹರ್ಮ್ಯರುಚಿ ಪೊಂಬಿಸಿಲಂತಿರೆ ರಾತ್ರಿಯೊಳ್ನೃಪ |
ವಾರ್ಪಗೆಯೊಳ್ವಿರಾಜಿಪರಥಾಂಗಯುಗಂ ಸೆರೆದಿರ್ಪುದಂಬುಜ ||
ಶ್ರೀ ಪರಿದೆತ್ತವೋಸರಿಸಳಲ್ಲಿ ವಿಳಾಸದೆ ನಿಂದು ನಿರ್ಜರ |
ಸ್ತ್ರೀ ಪಡೆದೊತ್ತಿ ಮೇಲುದನಭೀಕ್ಷಿಪಳುತ್ಕುಚದೊಳ್ನಖಾಂಕಮಂ || ೮೯

ವ|| ಅಂತುಮಲ್ಲದೆಯುಂ

ಕಂ|| ತಳರ್ವೆಳವೆಣ್ಗಳ ನಯನಾಂ |
ಜಳರುಚಿಚಂದ್ರಿಕೆಯನಾಂತು ಪೊಂದು ಡಿಗೆಗಳು || (ದೊ)
ಜ್ಜ್ವಳಕಿರಣಮೆಂಬಬಿಸಿಲಂ |
ತಳೆದಲ್ಲಿಯ ಸೋಮಸೂರ್ಯವೀಧಿಗಳೆಸೆಗುಂ || ೯೦

ಲಯಗ್ರಾಹಿವೃತ್ತಂ

ಧೀರಜನರಿಂಶ್ರುತಿವಿಚಾರಪರರಿಂಲಸದುದಾರಗುಣರಿಂದುರಿತದೂರಶಿವಭಕ್ತ್ಯಾ |
ಚಾರಯುತರಿಂನಿಗಮಸಾರಮತರಿಂ ಸುಭಗದಾರರತರಿಂಹರಿಕುಮಾರವರಮಾರಾ
ಕಾರಮಹರಿಂ ವಿವಿಧವೀರಭಟರಿಂ ವಿಜಿತಶೂರಪರರಿಂ ತುರಗವಾರಗಜಶಿಕ್ಷಾ |
ಭಾರವಹರಿಂವಿಳದಪಾರಧನರಿಂ ಮೆರೆಗುಮಾರುಚಿರಪಟ್ಟಣಮಿಳಾರಮಣ
[ಯುಕ್ತಂ|| ೯೧

ಕಂ|| ಆಧರ್ಮವತಿಯಪುರದ ಮ|
ಹಾಧರ್ಮ್ಮಯುತರ್ಗೆ ಸುರರ್ಗೆ ಮೈವೆತ್ತುದು ತಾಂ ||
ಸಾಧರ್ಮ್ಯಮೆಂದು ಬಿದಿ ಮಿಗೆ |
ವೈಧರ್ಮ್ಯಮನನಿಮಿಷತೆಯನವರೊಳ್ನೆಗಳ್ದಂ || ೯೨

ವೃ|| ಶಿವಪದಪದ್ಮಮಂ ಪದೆದು ಪೂಜಿಪ ಶೈವಪುರಾಣಮಂ ಮಹೋ |
ತ್ಸವದಿನೊರಲ್ದು ಕೇಳ್ವ ಶಿವಭಕ್ತಸಮರ್ಚನೆಗೈವ ಸಂತತಂ |
ಶಿವಸದನಂಗಳಂ ರಚಿಪ ಸಾರಶಿವಾಗಮಪೂಗದರ್ಥಮಂ |
ವಿವರಿಪ ಶೈವಧರ್ಮಪರರಿಂ ಮೆರೆದತ್ತು ಪುರಂ ನಿರಂತರಂ || ೯೩

ವ|| ಆ ನಗರಾಂತರಾಳದಲ್ಲಿ

ವೃ|| ಮನೆಮನೆದಪ್ಪದೊಪ್ಪಿದುದು ವೀಣೆಯ ಮೆಲ್ಲುಲಿ ರಾಜಕೀರನಿಂ |
ಪಿನನುಡಿ ಪಾಸದಿಂಚರಮುದಾರಮೃದಂಗರವಂ ಶಿವಸ್ತುತಿ |
ಸ್ವನಮುರುಘಂಟಿಕಾರುತಿಯಜೀಯಜಯಧ್ವನಿ ಸಾಮಗಾನನಿ |
ಸ್ವನಿತಮಶೇಷಶಾಸ್ತ್ರನಿನದಂ ಘನಶಂಖದ ನಾದಮಾವಗಂ || ೯೪

ವ|| ಮತ್ತಮಲ್ಲಿ

ಕಂ॥ ಧನದಂ ಭಿಕ್ಷುಸಖಂಗೆ |
ಘನಿತಂ ಧನಮಾಯದಾದನಾನಾಮಮಂ ಸುಂ |
ಮನೆ ಬಂದುದೆಂದು ನಗುತುಂ |
ಧನದಾಪ್ತನನಲ್ಲಿ ಮನ್ನಿಪರ್ಘನಧನದರ್ ॥ ೯೫

ಪುಲಿದೊವಲಂ ಗಜದಜಿನಮು |
ನೆಲೆನೀನುಡದಿರ್ಬಿಡೆಂದು ಬಿಡಿಸುತೆ ಮೃಡನಂ |
ಸುಲಲಿತದಿವ್ಯಾಂಬರಮಂ |
ನಲಿದುಡಿಸುವದೂಸಿಗರ್ಕರಂ ನೆಲಸಿರ್ಪರ್ ॥ ೯೬

ಸುರರೆಲ್ಲಂ ಸುತ್ತಲ್ಕಂ |
ಬರವೊಂದದು ಪಳೆಯದೆಂದು ಪಳಿದದನೆಸೆಗುಂ |
ಪುರಜನರೆಲ್ಲಂ ಕೊಳಲಾ |
ಪುರದೊಳ್ಬಹುನೂತನಾಂಬರಂಗಳ ಪಸರಂ ॥ ೯೭

ಶರಧಿ ನಿಜಾತ್ಮಜೆಯೆನಿಸುವ |
ಪುರಲಕ್ಷ್ಮಿಗೆ ಕಳಿಪಿದಮಳರತ್ನವ್ರಾತಂ |
ತರವಿಡಿದೆಸೆದಪುದೆನೆ ಸುಂ |
ದರಮಾದುದು ರನ್ನವಸರದೊಳ್ಮಣಿವಿಸರಂ ॥ ೯೮

ವ॥ ಮತ್ತಂ

ಕಂ॥ ಅರಸನ ತೋಳೊಳ್ನಲೆ ನೆಲ |
ಸಿರುತುಂಮಣಿಗರ್ಭೆ ಪಡೆದಮಣಿಗಣಮದು ತ |
ತ್ಪುರದೆಡೆಯೊಳ್ನೆಲಸಿದುದೆನೆ |
ಸುರುಚಿರನವರತ್ನರಾಶಿ ಪಸರದೊಳೆಸೆಗುಂ ॥ ೯೯

ವೃ॥ ಅಳಿಕುಲ ನೀಲಜೇಲಮದು ಮೌಕ್ತಿಕವೃಂದಮನಾಂತು ಕಣ್ಗೆ ದೇಂ |
ತೊಳಗಿದುದೋ ಪಳಚ್ಚನೆಸೆವಂಗಡಿವೀಧಿಯೊಳಲ್ಲಿ ಕೇತನಂ |
ಗಳ ಗಳೆ ತಾಗಿ ತಟ್ಟುಗಿಯೆ ತಾರೆಗಳೊಬ್ಬುಳಿಗೂಡಿ ತದ್ಧರಾ |
ವಳಯದ ಮೇಲೆ ತಾಂ ಪರಿದು ಬಿಳ್ದನಭಸ್ಥಳಖಂಡದಂತೆವೋಲ್ ॥ ೧೦೦

ಕಂ|| ಅನುದಿನಮಿನಘನರುಚಿಯುಂ |
ಜನಿತೋತ್ಸವದಿಂದೆ ಸೇವಿಸಿದವನಜಂಗಳ್ ||
ಜನಪನ ಪುರಸರದೆ ಪಳ |
ಜ್ಜನೆ ಪೊಳೆದಲರ್ದಂತೆ ಕಂಚುವಸರಂ ತೋರ್ಕುಂ || ೧೦೧

ಗಗನಶ್ರೀ ರವಿಯೊಂದಂ |
ಮಿಗೆ ತಳೆದೊಡೆ ಪುರುಡಿಸುತ್ತೆ ಪುರರಮೆ ತಳೆದ |
ಳ್ಖಗಬಿಂಬಶತಮನೆಂದೆನೆ |
ಸೊಗಯಿಸಿದುದು ತೊಳಪಕಂಚುಗಾರರ ಪಸರಂ || ೧೦೨

ವನಿತಾಮಧುರಾಧರದಿಂ |
ಪನೆ ಬಯಸಿ ಬೆಳತ್ತುದೆನಿಪಬೆಳ್ಳಿಲೆ ಬಿಡದೇಂ |
ನೆನೆಯಿಸಿದುದೊ ತರುಣೀಜನ |
ಘನವಿರಹಾಪಾಂಡುಗಂಡಮಂಡಳದಿರವಂ || ೧೦೩

ವೃ|| ಸುರಮಿಯ ದುಂಡದಂಡೆ ಪೊಸಮಲ್ಲಿಗೆಯ್ಯೆರಸಮುನ್ಮದಾಳಿಬಂ |
ಧುರನವಮಾಲತೀತ್ರಿಸರವೊಪ್ಪುವಸಂಪಗೆವೂವಿನೊಜ್ಜರಂ |
ಸುರಚಿರಕುಂದಬೃಂದದಶಿಖಾಸ್ರಜಮೆಂಬಿವನಬ್ಜಸೂತ್ರದಿಂ |
ವಿರಚಿಪಮಾಲೆಗಾತ್ತಿಯರ ಮಂತಣಮೊಪ್ಪುಗುಮಲ್ಲಿ ಸಂತತಂ || ೧೦೪

ಪರಿಮಳಸಂಭ್ರಮಭ್ರಮರವಿಭ್ರಮಭೃನ್ನಿಜದೃಷ್ಟಿಘೃಷ್ಟಭಾ|
ಸುರಸುಮಮಾಲೆಯಿಂ ಸಮಧು ತದ್ರಜಮೊಕ್ಕಿರೆ ಪದ್ಮಪತ್ರದೊಳ್ ||
ತರುಣವಿಟನ್ನಿರೀಕ್ಷಿಸಿ ಕದಂಬಕದಂಜಮಿದೆಂದು ಬಂದು ಸುಂ |
ದರಿಯರ ಮುಂದೆ ನಿಂದು ಬೆಲೆಯಿತ್ತದನೊಯ್ವರತೀವರಾಗದಿಂ || ೧೦೫

ಕಂ|| ನೀಲಪಟಾಂಚಿತಕಂಚುಕ |
ಬಾಲಾಬಾಹಾಲತಾಗ್ರದೊಳ್ಮೆರೆದುದು ಪೂ |
ಮಾಲೆ ವಿಧುಂತುದಮುಖದಿಂ |
ಸಾಲಿಟ್ಟೆಳೆವಿಂದುವಮೃತಕಣಮಂಜರಿವೊಲ್ || ೧೦೬

ತಾರಗೆಗಳನೋರಂತಿರೆ ।
ವಾರಿಜಮುದು ತೆಗೆದು ಕಟ್ಟಿ ಸೆರೆಯೊಪ್ಪಿಸುವಂ ।
ತಾರವಿಗೆಸೆದುದು ರಮಣೀ ।
ಚಾರುಕರಂ ನೆಗಪಿ ಮಾಲೆಯಂ ಮಲ್ಲಿಗೆಯಾ ॥ ೧೦೭

ವ॥ ಇಂತೆಸೆವ ಮಾಲೆಗಾರ್ತಿಯರಂಗಡಿಯ ಮುಂಗಡೆಯಲ್ಲಿ

ವೃ॥ ಮೊದಲೊಳ್ಕುಂಕುಮಮಿಟ್ಟು ಮತ್ತೆ ನವಕಸ್ತೂರೀರಜಂಬೊಯ್ದು ಮೇ।
ಣ್ಬೆದುವಂ ಸಾರ್ಚಿ ವರಾಂಗಿ ಗಂಧಮನೊಡರ್ಚಲ್ತೇಯೆ ಕಣ್ಗೊಪ್ಪಿದ ।
ತ್ತದು ಚಂದ್ರಾಶ್ಮದ ಸಾಣೆಗಲ್ರ್ಕಮದೆ ಮೂವಣ್ಣಂಗಳಂ ತಾಳ್ದು ತ ।
ತ್ಸುದತೀಪಾಣಿಪಯೋಜಮರ್ದನಕೆ ಪಕ್ವಾದಿಂದುವೆಂಬಂತೆವೋಲ್ ॥ ೧೦೮

ವೃ॥ ಚಂದ್ರಕಾಂತಶಿಲೆಯಲ್ಲಿ ನವಶ್ರೀಖಂಡಮನಿಟ್ಟು ಕರಾಬ್ಜದಿಂ ।
ಚಂದ್ರಿಕಾಲಸದಪಾಂಗೆಯರುದ್ಯತ್ಸೌರಭನಿಶ್ವಸಿತಾಂಗಿಯರ್ ।
ಸಾಂದ್ರಚಂದನದ ಘಟ್ಟಿಗೆ ನೀರಂ ಪಾರದೆ ಮಾಳ್ಪುದನೀಕ್ಷಿಸು ।
ತ್ತಿಂದ್ರನಂದನನ ಪೋಲ್ವಭುಜಂಗರ್ಕೌತುಕದಿಂ ತಲೆದೂಗುವರ್ ॥ ೧೦೯

ಹಾರಂ ಕುಂತಳಮುಯ್ಯಲಾಡೆ ಜಘನಾಭೋಗಂ ಪಯೋಭೃದ್ದ್ವಯಂ ।
ಸಾರಂ ನರ್ತನಮಾಡೆ ಚಿಟ್ಟುಮುರಿಯುಂ ಪೆಣ್ದುಂಬಿಯುಂ ಘ್ರಾಣಸಂ ।
ಚಾರಂ ಮಾರುತನಾಡೆ ಪಾಟ್ವಳಿಗಳಿಂ ಕರ್ಣೋತ್ಪಲಂ ವೇಣಿಯುಂ ।
ಸೇರುತ್ತುಂತಿರಿಕಲ್ಲನಾಡೆ ತೆಗೆವಶ್ರೀಖಂಡಮಂ ಬಾಲೆಯರ್ ॥ ೧೧೦

ವ॥ ಮತ್ತಮಾಸುಗಂಧವಿಪಣಿಯಲ್ಲಿ

ವೃ॥ ತುರುಬಿದಯಾಥಿಕಾಕುಸುಮಮಂಜರಿಯೊಳ್ನರುಗಂಪನುಂಡು ಪಾ ।
ರ್ದ್ದರಗಲೊಡರ್ಚಿ ಮುಂಡಳಿಸಿ ಮಲ್ಲಳಿಗೊಲ್ಪಳಿಪಿಂಡು ಕಾಮುರ್ಗಿಲ್ ।
ಗುಂಗಳ ಸಾಲ್ಗಳಿಂ ಸುರಿವತನ್ಮಧು ವೃಷ್ಟಿಯದಾಗೆ ಗಂಧಮಂ ।
ಸೆರೆ ತೆಗೆವಜ್ಜಜೌವನೆಯ ಸೋಮ್ಮುರ್ಡಿ ತಾಂ ನವಿಲಂತೆ ನರ್ತಿಕುಂ ॥ ೧೧೧

ನೃಪಸೇವಾಯಾತಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾ |
ನಪರವ್ಯಾಯಾತಗಂಧದ್ವಿಪಗಣಘನಘಂಟಾಪ್ರಘೋಷಂ ಪಣಸ್ತ್ರೀ |
ವಿಪುಳಾಗಾರಸ್ಥಳೀನಿರ್ಗಮಿತವಿಟವಪುಸ್ಸೌರಭವ್ಯಾಪ್ತಭೃಂಗೀ |
ಚಪಲಧ್ವಾನಂ ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ|| ೧೧೨

ವ|| ಅದಲ್ಲದೆಯುಂ

ವೃ|| ನಡೆವೆಳವೆಣ್ಗಳುನ್ನತಕುಚಂಗಳ ಕುಂಕುಮರೇಣು ಸೂಸೆ ಸೋ |
ಮ್ಮುಡಿಯೆಡೆಯಲ್ಲಿ ತಾಳ್ದಮೃಗನಾಭಿಜಪುಷ್ಪರಜಃಪ್ರತಾನಮೊ |
ಗ್ಗುಡಿಸಿರೆ ಬೀದಿಯಲ್ಲಿ ಬಿದುವೊಳ್ಬಿಡದೊಟ್ಟಿಕೊಳುತ್ತೆ ಗಂಧಮಂ |
ಪಡೆದೆಡೆಯಾಡುತಿರ್ಪ್ಪಕರಿ ತಾಳ್ದುದು ಗಂಧಗಜಾಭಿಧಾನಮಂ || ೧೧೩

ಕಂ|| ಲೋಲಾಕ್ಷಿಯರ್ಮೈದುತ್ತಿರೆ |
ಸಾಲಿಟ್ಟವರಳಕಗಂಧಕೊಡನೈತರುತುಂ |
ರೋಲಂಬಮಾಲೆಮೇಲದು |
ನೀಲದ ನಡೆತೋರಣಂ ಬೊಲೇನೊಪ್ಪಿದುದೋ || ೧೧೪

ಕಿಳಿರ್ವ*ಶ್ವಂಗಳ ನಿನದಂ |
ತಳರ್ವ*ಗಜಂಗಳ ನಿಬದ್ಧನಿಗಳಧ್ವನಿ ಕೆಂ |
ದಳಿರ್ವ*ಣ್ಣದ ಕೇತನದೊ |
ಳ್ಮಿಳಿರ್ವ*ರುಘಂಟಾನಿನಾದಮಲ್ಲಿಡಿದಿರ್ಕ್ಕುಂ || ೧೧೫

ವೃ|| ಪಜ್ಜೆಯತೋರಣಂ ಕನಕದುಯ್ಯಲಪೂರ್ವಸುರೇಂದ್ರರತ್ನದಿಂ |
ದಚ್ಚಿರಿದಿರ್ದ್ದವೇದಿಕೆ ಸುಧಾಕರಕಾಂತದ ಸೆಜ್ಜೆ ಕಾಂತಿಯಂ |
ಬಿಚ್ಚಳಿಪಜ್ಜಬಜ್ಜರಗದಂ ನವಮೌಕ್ತಿಕಸೌಧಮಾಲೆ ಕ |
ಣ್ಗಚ್ಚರಿಯಾದರನ್ನವನೆ ರಯ್ಯಮದಲ್ಲಿಯ ಸೂಳೆಗೇರಿಯೊಳ್ || ೧೧೬

ಕಾಮಶಾಸ್ತ್ರಮನೋದುಗುಂ ಗಿಳಿ ಪೇಳ್ಗುಮಂತದರರ್ಥಮಂ |
ಪ್ರೇಮದಿಂ ಜಳಿಸಾದ್ರ್ರಸಾರಿಕೆ ಬೀಣೆಯಂ ನೆರೆ ಬಾಜಿಕುಂ|
ಸೋಮರತ್ನಸಜೀವಪುತ್ರಿಕೆ ಪಾಡುಗುಂ ಕಳಕಂಠಿಗಳ್ |
ಕಾಮನುದ್ಘಮಚಾಪಸೋಲಗಿಸಿರ್ಪ್ಪನಚ್ಚರಿಯೆಂಬನಂ || ೧೧೭

ಲಲಿತರಗಳೆ|| ಅಲ್ಲಿ ಮಣಿಭವನದೊಳ್ಸಲ್ಲಲಿತಸೌಧದೊಳ್ | ಪೊಸತಪ್ಪಸೆಜ್ಜೆಯೊ
ಳ್ಮಿಸುಪನೆಲೆವನೆಗಳೊಳ್|ಪನ್ನೀರ್ಗಳಂ ಮಿಂದು ಜೆನ್ನೆಸೆಯಲೈತಂದು| ಬಿಳಿಯ
ಸವುರಮನುಟ್ಟುಪೊಳೆವಂದುಗೆಯನಿಟ್ಟು | ಮುಂಚುತುಂಸಡಗರಿಸಿ ಕಾಂಚಿ
ಯನಲಂಕರಿಸಿ | ಘುಸೃಣರಸದಣ್ಪಿಟ್ಟುಮಿಸುನಿರವಕೆಯತೊಟ್ಟು | ತೊಳ
ತೊಳಪತೋರಮಾಣಿಕದಮಾಲೆಯನಾಂತು | ತಳತಳಿಪ ಪಂಚರತ್ನದ ಪದಕ
ಮುಮನಾಂತು | ಭುಜಮಕರಿಕೆಯ ಬಾಹುಪೂರಕಟಕಂಗಳಂ | ನಿಜರುಚಿ
ಯನುಗುಳ್ವ*ನವರತ್ನದುಂಗುರಗಳಂ | ತಳೆದಾಣಿಮುತ್ತುಗಳ ಹತ್ತುಸರಮಂ
ಧರಿಸಿ | ಕಳಿವೆತ್ತಪೊಸರತ್ನದೋಲೆಯನಲಂಕರಿಸಿ| ತೋರೆಮುತ್ತಿನ ಮೂಕುತಿ
ಯನಾಂತು ಕಂಪೆಸೆವ | ಸಾರಮೃಗಮದದ ತಿಲಕಮನಾಂತು ನುಣ್ಪೆಸೆವ |
ತೆಳ್ಗದಂಪಿಂಗೆ ಮಕರಿಕೆಯನಂದಂಗೊಳಿಸಿ | ಯೊಳ್ಗುರುಳ್ಗೆ* ಮುತ್ತಿನಬಲೆಯ
ನೊಲ್ದು ಕೈಗೊಳಿಸಿ | ಮಾಲತಿಯ ಮಾಲೆಯಂ ನಿಡುಜಡೆಯೊಳಳವಡಿಸಿ |
ಲೀಲೆಯಿಂ ಕರ್ಣದೊಳ್ಕರ್ಣಪೂರಮನಿರಿಸಿ | ಕಡೆಗಣ್ಣ ಕಾಂತಿ ಕುಸುಮಾಸ್ತ್ರ
ಮಂ ಕರೆಯುತಿರೆ| ಕುಡುವುರ್ಬ್ಬು ಕುಡುವಿಲ್ಲಜೆಲ್ವ ಸೈಗರೆಯುತಿರೆ| ಕೆಂಬಲ್ಲ
ನುಣ್ಪೆಳಗು ದೆಸೆದೆಸೆಗೆ ಪಸರಿಸಿರೆ | ಬಿಂಬಾಧರದ ಕಾಂತಿ ಕೆಂಬರಲನಿಳಿಪುತಿರೆ|
ತೊಡೆವೆಳಗು ತಳತಳಿಸೆ ನಿಡುಮುಡಿಯ ನಳಿ ಬಳಸೆ | ಮುಖರಸಂ ತುಳ್ಕುತಿರೆ
ನಖದ ರುಚಿ ನಿಳ್ಕುತಿರೆ | ನಡೆಗಂಜೆ ತೊಡರುತಿರೆ ನುಡಿಗೆ ಗಿಳಿಯೊಡನೆ ಬರೆ |
ಮೊಲೆ ಮೇಲುದೊತ್ತರಿಸೆ ಸಲೆ ಜೆಲ್ವು ಬಿತ್ತರಿಸೆ| ಘನನಿತಂಬಂ ಜಡಿಯೆ ತನು
ಮಧ್ಯಮದು ಸೆಡೆಯೆ | ನೋಡೆ ನಡೆಗೆಡಿಸುತುಂ ಕೂಡೆ ಕೆಳೆಗೊಳಿಸುತುಂ |
ಬೇಟಮಂ ಪೆರ್ಚ್ಚಿಸುತೆ ಕೂಟಮಂಮುಚ್ಚಿಸುತೆ| ಕಳಗಳದ ಕಳರವದ ಚಳದ
ಳಕಮಿಳದಳಿಕ | ದೆಳನಗೆಯ ಕಳೆಯುಗೆಯ ಸರಸಿಜದ ಸಿರಿವೊಗದ |
ಗುರುಕುಚದ ವರಕಚದ ಚದುರಿಡಿದ ಮೃದುವಡೆದ | ಸವಿನುಡಿಯ ತಳಿ
ರಡಿಯ| ಪುರವಾರನಾರಿಯರ್ಸ್ಮರಮಸುಕುಮಾರಿಯರ್| ಸುರತರಣಧೀರೆಯ
ರ್ಸ್ಮರಸಗುಣಸಾರೆಯರ್| ಪೊಸಸೇಸಿವೆತ್ತು ಸಂತತಮಿಂತು ರಾಜಿಪರ್ಕು
ಸುಮಶರನಂ ರತಿಯನನುದಿನಂ ಪೂಜಿಪರ್ ||

ವೃ|| ಆವಾರಾಂಗನೆಯಕ್ಕರ್ಗಳಾಸ್ಯಕಮಳಂ ಮಂದಸ್ಮಿತಜ್ಯೋತ್ಸ್ನೆಯಿಂ |
ತೀವಿರ್ದ್ದಂ ನಯನೋತ್ಪಳಂ ಕನಕತಾಟಂಕಾರ್ಕಬಿಂಬಪ್ರಭಾ |
ಶ್ರೀವಿನ್ಯಾಸಕಮಾಗಿಯುಂ ಮುಗಿದುದಿಲ್ಲೇಕೆಂಬೊಡೀತಾಣದೊ |
ಳ್ಳಾವಂ ಕಿತ್ತಡಿಯಿರ್ಪ್ಪನಾತನ ಮಹತ್ತ್ವಂ ತಾನಿದೆಂಬಬ್ಬುಧರ್ || ೧೧೮

ಕೆಂಬವಳಂಬೊಲೊಪ್ಪುವರುಣಾಧರಮಂ ಗಿಳಿ ಬಿಂಬಮೆಂದು ತಾಂ |
ಚುಂಬಿಸಲಾಟಿಸುತ್ತಿರೆ ಕರಾಗ್ರದೊಳೊಯ್ಯನೆ ನೋಡಿ ತಮ್ಮಬಾ |
ಯ್ದಂಬುಲಮಿಕ್ಕೆ ವಾರವಧುಗಳ್ಸವಿದಾಸ್ಯದೆ ಕೆಂಪನಾಂತುದ |
ಲ್ಲೆಂಬೊಡದೆಂತು ಸಾದ್ದ್ರದೊ ತದಂಚಿತಚಂಚುಗೆ ಕೆಂಬರಲ್ಗದಿರ್ ||೧೧೯

ಮತ್ತಂ|| ಉದಯಂಬೆತ್ತೊಪ್ಪುವರ್ಕಂಘನರುಚಿಕಲಶಂ ಕಾಂಚನೋದಂಚಿತಂಪ|
ಬ್ಬಿದಸಂಧ್ಯಾರಾಗಮೊಪ್ಪಂಬಡೆದೆಸೆವಮಹಾಪದ್ಮರಾಗಾಂಶು ತಾನಾ |
ಗೆ ದಿಟಂ ಪೂರ್ವಾದ್ರಿಯೆಂಬಂತೆಸೆಗುಮವಿರತಂ ಭೂಮಿಕಾಧಾರಕಂ ಕಾಂ |
ತಿದಸದ್ವಾತಾಯನಪ್ರಸ್ಫುರಿತಮುಮ*ದುರ್ಗಾಣಿಕ್ಯಮಾಣಿಕ್ಯಹರ್ಮ್ಯಂ|| ೧೨೦

ವ|| ಅಂತೆಸೆವನಿರ್ಮಿತಶರ್ಮಭರ್ಮಹರ್ಮ್ಯದೊಳ್ಕೂರ್ಮೆಯಿಂ ಪೆರ್ಮೆವೆತ್ತು

ಕಂ|| ಪದಪದಮರ್ದಿರೆ ಸುಧಾಸಾ |
ರದ ರದನಚ್ಛದದ ರದದ ರುಚಿ ಬೆರಸೆ ಲಸ |
ನ್ಮದಮದನಾಗಮಮಂ ತ |
ಪ್ಪದೆ ಪದೆದುಪದೇಶಿಪರ್ಪ್ಪಿದಗ್ಧೆಯರದರೊಳ್ || ೧೨೧

ಮತ್ತಂ|| ನೆಲೆವಾಡದ ನೆಲೆನೆಲೆಯೊ |
ಳ್ನಲೆಮೊಲೆಯೊಳ್ತಳೆದು ವೀಣೆಯಂ ಬಾಜಿಸುತುಂ |
ನೆಲೆಗೊಂಡಿರ್ಪುದು ಸತತಂ |
ನೆಲೆಯಾದಲತಾಂಗದಂಗನಾಜನಮಾಗಳ್ || ೧೨೨

ವೃ|| ಇದು ಚಿತ್ರಂ ಬಾಳೆಮಿನ್ಮಿಂಚನೆ ಕರೆದಪುದಂಭೋರುಹಂ ಚಂದ್ರಿಕಾಸಂ|
ಪದಮಂ ಬೀರುತ್ತುಮಿಲ್ಲಿರ್ದ್ದಪುದು ಮಧುಕರಶ್ರೇಣಿ ತಾರಾಳಿಯಂ ತಾ|
ಳ್ದಿದು ಚಾಂಪೇಯಪ್ರಸೂನಂ ವಿಚಕಿಲಮುಕುಲಂಬೆತ್ತುದೆಂದಲ್ಲಿ ಹರ್ಮ್ಯಾ |
ಗ್ರದವಾರಸ್ತ್ರೀಯರಂ ಶಂಕಿಪರವಯವಮಂ ನೋಡಿದಭ್ರಾಂತಿಯಿಂದಂ|೧೨೩

ವ|| ಅಂತುಮಲ್ಲದೆಯುಂ

ವೃ|| ಪುರಸೌಧಾಗ್ರಸ್ಥಿತಾತ್ಮೇಶ್ವರವಿರಹಶಿಖಾವಹ್ನಿಖಾತಪ್ತಕಾಂತಾ |
ಕರಕಂಜಾತಾಸಿತಾಂಭೋರುಹನಿಹತತದುದ್ಯದ್ದ್ವಿರೇಫಪುಂಜಮಂಜು ||
ಸ್ಫುರದಂಕಾಂಕಂ ಮೃಗಾಂಕಂ ತದಧಿಕಮುಖರುಕ್ತಸ್ಕರಂ ಪೂರ್ಣಸಪ್ಪಂ|
ವರಯುಕ್ತದ್ಯೋಷಿದಾಸ್ಯಾಹೃತಸಕಲಕಲಂಸಕ್ರಮುಂಕುಂದುತಿರ್ಪ್ಪಂ|೧೨೪

ವ|| ಮತ್ತಮಾಪುಟಭೇದನಸ್ಫುಟಪ್ರದೇಶದಲ್ಲಿ

ವೃ|| ಪರವೇದಂವಾದ್ಯನಾದಂ ಸೆರೆದಿರೆ ಕುಸುಮಾಮೋದಮಾಹ್ಲಾದವಾದಂ|
ನರಪಾರಂ ನರ್ತಕೀರಂಜಿತನಟನಮುದಾರಾಂಗನಾಗೀತಸಾರಂ |
ಸ್ಫುರದತ್ಯಂತಾಂಶುತತ್ಯನ್ವಿತನವಮಣಿಭಿತ್ತ್ಯಂಚಿತಂ ದೇವನುತ್ಯಂ |
ಸುರಕಾಂತಂತನ್ನಿಶಾಂತಂಕರಮೆಸೆಗುಮನಂತಪ್ರದೀಪಾಳ್ಯಪಾಂತಂ೧೨೫

ವ|| ಮತ್ತಂ

ವೃ|| ತುಂಗಮೃದಂಗಮಂಗಳರವಂ ಕಹಳಾಧ್ವನಿ ತಾಳನಿಸ್ವನಂ |
ರಂಗದಪಾಂಗಸಂಗತನಟೀನವನರ್ತನ ಮಾಗಮಪ್ರಘೋ ||
ಷಂಗಳಭಂಗಶಂಖನಿನದಂ ಬಿನದಂಬಡೆದಿರ್ದ್ದಭಕ್ತಲೋ |
ಕಂಗಳ ಕಂಗಳಂಗವಿಸೆ ಸಂಗಳಿಸಿರ್ಪ್ಪವು ಲಿಂಗಗೇಹದೊಳ್ || ೧೨೬

ಕಂ|| ಆಲಿಂಗಾಲಯಶಿಖರ|
ಸ್ಥೂಲೋನ್ನತಕನಕಕಳಶಮದು ಗಗನಶ್ರೀ ||
ಪಾಲಂಗೀವುದು ಕಾನಕ |
ಚೇಲದ ಚೆಲ್ವಂ ನಿರಂತರಂ ನಿಜರುಚಿಯಿಂ || ೧೨೭

ಮೃಡಸೇವೆಗೆ ಬಿಡುಗಣ್ಣ |
ನ್ನೆಡೆತರಲೆಂದಜನೊಡರ್ಚ್ಚಿ ಸಿಟ್ಟಣಿಗೆಯುಸಿ ||
ರ್ಕ್ಕಡೆಯಿಟ್ಟನೆಂಬಪೆಂಪಂ |
ಬಡೆದಂಬರಚುಂಬಿ ಗೋಪುರಂ ಕರಮೆಸೆಗುಂ || ೧೨೮

ಅಮರಾಪಗೆಯೊಳ್ಮಿಂದಂ ।
ದಮರಿಯರಾಗೋಪುರಾಗ್ರದೊಳ್ನಿಂದದರ ॥
ಗ್ರಿಮಕನಕಕಲಶರುಚಿಯನ ।
ಹಿಮಕರಕರಮೆಂದು ಕೇಶಮಂ ಪಸರಿಸುವರ್ ॥ ೧೨೯

ಹರಗೃಹದಿಂ ನೆಗೆದು ನಭೋಂ ।
ತರಕ್ಕೈದುವ ಧೂಪಧೂಮದಾಮೋದಕ್ಕಂ ॥
ಬರಲಕ್ಷ್ಮಿ ನಿಜಶಿರೋಜೋ ।
ತ್ಕರಮಂ ಬಿಚ್ಚಿದವೊಲಬ್ದಮಗ್ರದೊಳೆಸೆಗುಂ ॥ ೧೩೦

ಅಲ್ಲಿ ಧರಾಸುರವಿಸರಂ ।
ಮೆಲ್ಲನೆಮಾಳ್ಪತುಳಹೋಮಧೂಮಂ ಪುಗೆ ಕ ॥
ಣ್ಣಲ್ಲಿ ಸಲೆ ಮೇಲೆ ನಡೆಯ ।
ಲ್ಸಲ್ಲದೆ ರವಿ ದಕ್ಷಿಣೋತ್ತರಾಯಣನೆನಿಪಂ ॥ ೧೩೧

ವ॥ ಇಂತನಂತವಿಭವ ಸನಾಥಮಾಗಿ ಪೆರ್ಮೆವೆತ್ತಾ ಪುರಮಧ್ಯದಲ್ಲಿ

ವೃ॥ ಕನಕಕವಾಟಕೋಟಿಘಟಿತಸ್ಫುಟರತ್ನಮರೀಚಿವೀಚಿ ಚಂ।
ದನಘನಸಾರಸೌರಭಸಮಾವೃತಭೃಂಗರಮಾಧಿವಾಸವಾ ॥
ಸನಳಿನಮಿಂದುಕಾಂತಗೃಹಕಾಂತಿಜಳಂ ಲಲನಾಕ್ಷಿ ಕೈರವಂ ।
ಘನತರ ರಾಜಹಂಸನಿರೆ ರಾಜಗೃಹಂ ಕೊಳದಂತೆ ರಂಜಿಕುಂ ॥ ೧೩೨

ವ॥ ಅಂತೊಪ್ಪುವಂತಃಪುರದ ವಜ್ರಮಯಬಹಿಃ ಪ್ರಾಕಾರದಂತರಾಳದೊಳಗೆ

ಕಂ॥ ಮರಕತರತ್ನದ ಪೊಸಮಂ ।
ದುರದೊಳ್ದಯರಾಜಿ ಮೆರೆದುದದರುದ್ವ್ರಜಿತ॥
ಕ್ಷಿತಿ ತತ್ಪ್ರತಾಪಮದುಭಾ ।
ಸ್ಕರಾಶ್ವವೃಂದಮನೆ ತಂದು ಸೆರೆಯಿಕ್ಕಿದವೋಲ್ ॥ ೧೩೩

ತಾರಾಚಲಘನಗುಹೆಯೊಳ |
ಗೈರಾವತಮಿರ್ಪ್ಪ್ಪತೆರದೆ ಶಶಿಮಣಿಸೌಧಾ ||
ಗಾರದೆ ತದ್ರುಚಿಧವಳಾ |
ಕಾರಾನ್ವಿತಭದ್ರಗಜಮದೇನೊಪ್ಪಿದುದೋ || ೧೩೪

ತೊಳಪನಿಜರುಚಿಸುಧೆಗೆ ಬಗೆ |
ಯೆಳಸಿ ಕರಂ ನಿಂದಭೀಕರಾಹಿಗಳನಿದೇಂ ||
ತಳೆದುದೊ ಪೇಳೆನೆ ಶಸ್ತ್ರಾ |
ವಳಿಯಂ ತಳೆದಮಳಶಸ್ತ್ರಶಾಲೆಯದೆಸೆಗುಂ || ೧೩೫

|| ಅಲ್ಲದೆಯುಂ ||

ವೃ|| ವರಕರ್ಪೂರಪರಾಗರಂಗಮುರುಕಸ್ತೂರೀಪ್ರಲಿಪ್ತಂ ಸುಮೋ |
ತ್ಕರಮಾಲಾಕಲಿತಂ ಪ್ರದೀಪಪಟು ಧೂಪಾಮೋದಿ ಚಿತ್ರಾಂಬರಾ ||
ವರಣಂ ರತ್ನವಿತಾನರಂಜಿತಮುದಂಚತ್ಪಂಚವಾದ್ಯಂ ಸುಧಾ |
ಕರಕಾಂತೋಪಳನಿರ್ಮಿತಂ ಗಿರಿಶಪೂಜಾಮಂದಿರಂ ರಂಜಿಕುಂ || ೧೩೬

ವ|| ಮತ್ತಮಂತಃಪುರಮೆಂಬಸರೋವರದ ಸಿರಿಯ ಕರುಮಾಡಂಗಳಂತೆ ಸೆವಕರುಮಾಡಂಗಳುಂ ಕರುಮಾಡಂಗಳ ಸೊದೆವೆಳಗಂ ಸೊದೆಗೆತ್ತು ಸಾರೆವರ್ಪ್ಪದೀಹದಂಜೆಗಳುಂ ದೀಹದಂಜೆಗಳ್ಗೆ ಕಾಮ್ಮುಗಿಲೆಂಬಶಂಕೆಗೊಟ್ಟದಿಚ್ಛುರ್ಐಂದ್ರನೀಲನಿಳಯಂಗಳು ಮಿಂದ್ರನೀಲನಿಲಯಂಗಳ ಕಬ್ಬೊರ್ಳಪಂ ಕಳ್ತಲೆಗೆತ್ತಗಲ್ಪಗೃಹಸರೋವರಚಕ್ರಂಗಳುಂ ಗೃಹಸರೋವರಚಕ್ರಂಗಳ್ಗೆ ಪಾಸೆಯೆಂಬಾಸೆಗುಡುವಬಾಸೆದಳೆದು ನೀಮ್ಮುಳುಗುವನಿತಂಬಿನಿಯರುಂ ನೀಮ್ಮುಳುಗುವನಿತಂಬಿನಿಯರ ನಿಡುಜಡೆಯಂ ಜಳೋರಗಮೆಂದು ತಡಿವಿಡಿದು ನೋಳ್ಪನೃಪಕುಮಾರಿಯರುಂ ನೃಪಕುಮಾರಿಯರ ಕಟಾಕ್ಷರುಚಿಯಂ ಬಿಚಕಿಲಮಾಲೆಯೆಂದೆರಗಲ್ಪಳಿಪಮದಮಧುಪಂಗಳುಂ ಮದಮಧುಪಂಗಳ್ಗೆ ಪುಷ್ಕರಭ್ರಾಂತಿಗುಡುವಪುಷ್ಕರದಿಂಮೆರೆವಮದಕಳಭಂಗಳುಮಾಮದಕಲಭಂಗಳಂ ಮೇಚಕಾಚಲಮೆಂದಾರೋಹಿಪಲೀಲಾಮಯೂರಂಗಳುಂ ಲೀಲಾಮಯೂರಂಗಳ್ಗೆ ಪೊಸಮಿಂ

ಜಂ ಪಸರಿಪಮಿಸುನಿವನೆಗಳುಂ ಮಿಸುನಿವನೆಗಳ ಮಿಸುಪ ಕಾಂಯಂತಿ ಬಿಸಿಲೆಂದು ಪೆರದೆಗೆವಚಪಳಚಕೋರಂಗಳುಂ ಚಪಳಚ ಕೋರಂಗಳ್ಗೆ ಚಂದ್ರಿಕೆಯಂ ಪರಪುವ ಚಂದ್ರಮಣಿಕುಟ್ಟಿಮಂಗಳುಂ ಚಂದ್ರಮಣಿಕುಟ್ಟಿಮಂಗಳಂ ತಿಳಿಗೊಳಂಗಳೆಂದಡಿಯಿಡಲಂಜಿ ಪೆಡಂಮೆಟ್ಟುವಕಿರುವೆಂಡಿರುಂ ಕಿರುವೆಂಡಿರಲ ತಗೆಯಡಿವಜ್ಜೆಯಂ ಕಂಡು ತಾಂದಳಿರೆಂದು ಕರ್ದುಂಕುವಕೇಳಿಕಳಕಂಠಿಗಳುಂ ಕೇಳಿಕಳಕಂಠಿಗಳಂ ಪುರುಳಿಗಳೆಸಿಸಿವಾಳ್ವಪಸುರ್ವರಲಪಂಜರಂಗಳುಂ ಪಸುರ್ವರಲ ಪಂಜರಂಗಳೊಳ್ಮಾರ್ಪೊಳೆವನಿಜತುಂಡ ಪ್ರತಿಬಿಂಬಮಂ ಬಿಂಬಫಳಂಗೆತ್ತು ತುಡುಂಕುವ ತಾಮ್ರತುಂಡಂಗಳುಂ ಸಂಗಳಿಸಿ ಮಂಗಳಮಂ ಕಂಗೊಳಿಸಿದುರ್ವಂತುಮಲ್ಲದೆ ||

ವೃ|| ರಮಣೀಕಂಕಣಕಿಂಕಿಣೀಕ್ವಣಿತಮಿಂದ್ವಾಸ್ಯಾಕರಾಂಭೋರುಹ |
ಭ್ರಮಿತಾಂಭೋಜಮಿಳದ್ಭ್ರಮದ್ಭ್ರಮರಝುಂಕಾರಂ ಸುಬಿಂಬಾಧರಾ |
ಸಮುದಂಚತ್ಕರಶಾರಿಕಾಶುಕರವಂ ಕೂಜತ್ಪಿಕಾಲಾಪಿನೀ |
ಕ್ರಮಸಂವಾದಿತಸಾಧುನಾದವಹವೀಣಾರಾವಮುಜ್ಜೃಂಭಿಪ್ಪುಗುಂ || ೧೩೭

ಕರುವಾಡಂ ಕಣ್ಗೆವಂದತ್ತಮೃತಕರಶಿಲಾನಿರ್ಮಿತಂ ಭರ್ಮಬದ್ಧ |
ಸ್ಫುರದುದ್ಯತ್ಪದ್ಮರಾಗಾಂಚಿತಕಲಶಮಿನಗ್ರಾವದೀಪ್ಯದ್ವಿಟಂಕಾ |
ವರಣಂ ವೈಡೂರ್ಯವೇದೀವಿದಿತಮುರುಹರಿತ್ಕುಟ್ಟಿಮಂ ವಜ್ರಕುಡ್ಯಂ |
ಹರಿನೀಲಸ್ತಂಭಮುದ್ವಿದ್ರುಮಲಸದರರಂ ಮೌಕ್ತಿಕದ್ವಾರಬಂಧಂ || ೧೩೮

ಕಂ|| ಸೊದೆವೆಳಗಂ ಸುಧೆಗೆತ್ತಾ |
ಬಿದಿಯ ಮರಾಳಂ ಸರಾಗಮುರುತರಸೌಧಾ |
ಗ್ರದೆನಿಂದುದೆಂಬಭಾವಮ |
ನೊದವಿಪುದಿರುಳದರ ತುದಿಗೆ ಬಂದಮೃಗಾಂಕಂ || ೧೩೯

ಅದರಗ್ರದಲ್ಲಿ ಪಾಡುವ |
ಸುದತೀಗೀತಮನೆ ಕೇಳ್ದು ಸುರಪಶು ಸುರಿದ |
ಗ್ಗದಪಾಲ್ಸರಿ ಪಸರಿಸಿತೆನೆ |
ಬಿದುಗದಿರ್ಗಳನಿಳಿಪಸೊದೆಯದೇಂಸೊಗಯಿಸಿತೋ || ೧೪೦

ಅಮರಿಯರಾನೃಪಹರ್ಮ್ಯಾ |
ಗ್ರಮುಹಾಧ್ವಜಪಟದ ಮರೆಯೊಳಡಗಿರೆ ಬಿನದ |
ಕ್ಕಮರರಸವಸದೆ ತನ್ಮುಕುರ |
ರಮಣವರ ಕಪೋಲಮೆಂದು ಚುಂಬಿಸುತಿರ್ಪರ್ || ೧೪೧

ವೃ|| ಕುಂಡೆಗಣ್ಣಿಂ ಕಾವನಂ ಬಂಕರೆಯುತೆಕುಡುವುರ್ವಿಂದೆಜರ್ವುತ್ತೆಮಗ್ಗೆ|
ಯೆಡೆಯೊಳ್ಕುಳ್ಳಿರ್ದ್ದಕೀರಂನುಡಿದನುಡಿಯನಾಕರ್ಣಿಸುತ್ತೊರ್ನ್ಮೆ ಕೈಯೊಳ್
ಪಿಡಿದಂಭೋಜಾತದಿಂ ಸುಯ್ಗ್ಗರಪಳಿಗಳಸೋವುತ್ತೆ ಮಂದಸ್ಮಿತಂ ಮುಂ |
ದಿಡೆ ಚಂಚಜ್ಜ್ಯೋತ್ಸ್ನೆಯಂಸೌಧದೊಳೆಸೆವುದಳುಂಬಂ ನೃಪಸ್ತ್ರೀಕದಂಬಂ ||

ಮತ್ತಂ|| ಹಿಮಷಂಡಂ ಫೇನಖಂಡಂ ತುರಗತತಿ ತರಂಗಾಳಿ ಪೇರಾನೆ ನೀರಾ|
ನೆ ಮಹಾಹರ್ಮ್ಯಾಳಿ ಭೀತಾಚಲಮಭವಗೃಹಂ ಭೈತ್ರಮುತ್ಕೇತು ತತ್ಕೇ |
ತುಮಣಿವ್ರಾತಂ ತದುದ್ಯನ್ಮಣಿಗಣಮುರುಸೌಧಾಂಶು ದುಗ್ಧಂ ಧರಿತ್ರೀ |
ರಮಣಾಗಾರಂ ಮಣಿದ್ವೀಪಮಿದೆನೆ ಪುರಿ ರತ್ನಾಕರಂಬೋಲ್ಮನೋಜ್ಞಂ||೧೪೩

ಕಂ|| ಆನಗರಿಯೊಳೆಸೆದಿರ್ಪ್ಪಂ |
ಶ್ರೀನಾಯಕವಿಭವನಭವಪದಭಕ್ತನಿಳಾ |
ಮಾನಿನಿಯುರಸಂ ಸರಸಂ |
ಭೂನುತಸತ್ಯೇಂದ್ರಚೋಳರಾಜಾಹ್ವಯದಿಂ || ೧೪೪

ವ್ಯಾನಮ್ರಶ್ರೀಮುಖಸುರವಧೂವಕ್ತ್ರಪದ್ಮಪ್ರಭಾಂಭ |
ಸ್ನಾನೋನ್ಮೀಲತ್ಪದಕಮಳೆ ಕಲ್ಯಾಣಿ ಕಲ್ಯಾಣಶೈಲಾ |
ನೂನಾಸ್ಥಾನಾಶ್ರಿತಸಿತಗಳಾಂಕಸ್ಥಳಾರೂಢೆ ಗೌರೀ |
ನೀನೆನ್ನಂ ರಕ್ಷಿಪುದು ಸತತಂ ಸತ್ಯವಾಣೀ ಮೃಡಾನೀ || ೧೪೫

ಗದ್ಯ|| ಇದು ವಿನಮದಮರವರಮಕುಟತಟಘಟಿತ ಮಣಿಗಣಮಹಾ
ಪ್ರಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿ
ರುಂದ್ರಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನ
ಮಾನಿತ ಶ್ರೀಮದುಭಯಕವಿತಾವಿಶಾರದ ಶ್ರೀಷಡ
ಕ್ಷರ ದೇವವಿರಚಿತಮಪ್ಪ ರಾಜಶೇಖರವಿ
ಳಾಸವಿಪುಳಪ್ರಬಂಧದೊಳ್ದ್ರಾವಿ
ಡದೇಶಾದಿವರ್ಣನಂ.
ದ್ವಿತೀಯಾಶ್ವಾಸಂ
ಸಂಪೂರ್ಣಂ.



# ತೃತೀಯಾಶ್ವಾಸಂ.



ಕಂ|| ಶ್ರೀತುಹಿನಗಿರಿಸುತಾಕರ |
ಜಾತಕ್ಷತಕಲಿತಕಂಧರಂ ನಿಜರುಚಿನಿ ||
ರ್ಧೂತಯಮಿಹೃದಯತಮಸಂ |
ಪ್ರೀತಿಯೊಳೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವೃ|| ಹರಚರಣಾರವಿಂದಮಕರಂದಮಧುವ್ರತನೀಶಭಕ್ತಭ |
ಕ್ತಿರಸಸುಧಾಬ್ಧಿಸೋಮನಭಿರಾಮಶಿವಸ್ತುತಿಪೂರ್ಣಕರ್ಣನೀ ||
ಶ್ವರಯುಜನಾನುರಕ್ತನಭಿಯುಕ್ತಗುರೂಕ್ತಮತಾನುವರ್ತಿ ಶಂ |
ಕರಪರಮಂತ್ರತಂತ್ರನಿಪುಣಾಗ್ರಣಿ ಭೂವರವಾರಶೇಖರಂ || ೨

ಅಕಳಂಕಾನನಮಿಂದುವಂ ಗೆಲೆಧರಾಭಾರಾವಹಂ ಬಾಹುದಿ |
ಗ್ಯಕರಿಶ್ರೀಕರಮಂ ಕರಂ ಜರಿಯೆ ಚಂಚದ್ರಶ್ಮಿವಿಸ್ಮೇರದೃ ||
ಷ್ಟಿಕಳಾಪೇಕ್ಷಣಮಬ್ಜಮಂ ಪಳಿಯೆ ಸೌಂದರ್ಯಾಂಗನೀಶಾಂಘ್ರಿಸೇ |
ವಕನಾದರ್ಪಕನಂ ತಿರಸ್ಕರಿಸಿದಂ ಶ್ರೀಚೋಳಭೂಪಾಲಕಂ || ೩

ಕುಳಭೂಭೃತ್ಪರಿಪಂಥಿ ಪಾವಕಮುಖಂ ಪಾಕಾಪಹಂ ಧ್ವಸ್ತದು |
ರ್ಗಳಸುದ್ವೀತಕುಲೀನವೃತ್ತಿ ಸತತಂ ಸಂಕ್ರಂದನಂ ಸದ್ಗುಣೋ ||
ಜ್ಜ್ವಳಸತ್ಯೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದುನಾ |
ಣ್ಚಳಿದಾಗಳ್ಗಡ ನಿದ್ರೆಗೈದಪನೆ ಪಕ್ಷಸ್ಪಂದಮಂ ಮಾಳ್ಪನೇ || ೪

ವ|| ಅಂತುಮಲ್ಲದೆ,

ವೃ|| ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನ್ನೈದೆ ಬಿಚ್ಚಿ ವಿ |
ಸ್ಫುರಿತತದುತ್ಪ್ರತಾಪತಪನಾತಪದಾರಿಸಿ ಸೂಡಿ ತಾರಕೋ ||
ತ್ಕರಕುಸುಮಂಗಳಂ ತಳೆದು ಚಂದ್ರಿಕೆಯೆಂಬ ವಿಶಾಲಚೇಲಮಂ |
ಧರಣಿಪಕೀರ್ತಿಕಾಂತೆ ವಿಧುದರ್ಪಣಮಂ ನೆರೆ ನಿಂದು ನಿಟ್ಟಿಪಳ್ || ೫

ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ ।
ರದನಂವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ ಮಂಗಳಾ ॥
ಸ್ಪದನಾಸಾಮುಕುಳಂ ಸುಚಂಪಕಸುಮಪ್ರಖ್ಯಂ ಗಳಂ ಶಂಖಸಂ ।
ಪದಮುದ್ಯದ್ಭುಜಯುಗ್ಮಮೇ ಭುಜಗರಾಜಸ್ಪರ್ಧಿ ಭೂಪಾಳನಾ ॥ ೨೪

ರೂಪದು ಪುಷ್ಪಚಾಪನನುದಗ್ರಯಶಂ ಸಸಿಯಂ ಸುಭಾಗ್ಯಮಾ ।
ಶ್ರೀಪತಿಯಂ ಪ್ರತಾಪಮಿನನಂ ಘನಧೈರ್ಯಗುಣಂ ಧರಾಧ್ರಮಂ ॥
ಕೋಪಮುದಗ್ನಿಯಂ ಸುರತರಂಗಿಣಿಯಂ ದಯೆ ಗೆಲ್ದು ತೋರದಾ ।
ಭೂಪನ ಖಡ್ಗಮೊಂದೆ ಸಲೆ ಗೆಲ್ದುದೆ ವೈರಿನರಾಧಿನಾಥರಾ ॥ ೭

ತ್ವರಿತಗತಿಪ್ರಯುಕ್ತತುರಗೋತ್ಕರಸತ್ಖುರಘಟ್ಟನೋತ್ಥಿತೋ ।
ದ್ಧುರರಜಮರ್ಕಮಂಡಲಮನಾವರಿಸುತ್ತಿರೆ ತತ್ಪ್ರತಾಪದಿಂ ॥
ಪರಭವಮಾಂತಮಾಳ್ಕಿಯೊಳೆ ಮಾಸಿದದರ್ಪಣದಂತದೊಪ್ಪೆ ಸಿ ।
ರ್ಜರಕರಿ ಪಾಂಸುಕೇಳಿಯನೊಡರ್ಚ್ಚುಗುಮಲ್ಲಿ ಜಯಪ್ರಯಾಣದೊಳ್ ॥ ೮

ಕೃತಶುಂಭದ್ವೇಷಿ ಚಂಚತ್ತನು ವಿಬುಧಪತಿಸ್ತುತ್ಯೆ ಕಲ್ಯಾಣಿ ತೇಜೋ ।
ನ್ವಿತೆ ದೃಪ್ಯಚ್ಚಂಡಮುಂಡಪ್ರಹರಿಣಿ ರಿಪುದುರ್ಗಘ್ನಿ ಸೌವರ್ಣಕೋಶ ॥
ಸ್ಥಿತೆ ರೌದ್ರಶ್ರೀಸಮಾಲಂಬಿತೆ ಶುಭಕರವಿಖ್ಯಾತೆ ರಕ್ತಾಂಗವಿಭ್ರಾ ।
ಜಿತೆ ವಿದ್ಯುದ್ದ್ಯೋತಿ ತದ್ದೋರ್ಭುಜನಸಿಲತಿಕಾಕಾಳಿ ಕಣ್ಗೊಪ್ಪುತಿರ್ಪ್ಪಳ್ ॥ ೯

ವ॥ ಮತ್ತಮಾನರೇಂದ್ರನುಪೇಂದ್ರನಂತೆ ಸದಾನಂದಕರಾಜಿತನುಂ ಕ ಮಳಭವನಂತೆ ಸಕಳವಿಬುಧಸಂಸೇವಿತಸಾರಸೋನ್ನತಪೀಠಾಸೀನನುಂ ಸುರೇಂದ್ರ ನಂತೆ ಸಹಸ್ರನೇತ್ರಾಶ್ರಿತವಿಪುಳವಿಗ್ರಹಪರಬಲಾಪಹನುಂ ವೀತಿಹೋತ್ರನಂತೆ ವಿತತ ಕಾಂತಾತತಮೋಹನುಂ ದಂಡಧರನಂತೆ ಕುಜನತಾಪಕಾರಿಯುಂ ರಾಕ್ಷಸೇಶ್ವ ರನಂತೆ ಸದಾನವವಿಭವನುಂ ಪಾಶಹಸ್ತನಂತೆ ಘನಸಿಂಧುರಾಜಿತಾಪ್ರಮೇಯ ಬಲನುಂ ಸಮೀರಣನಂತೆ ನಿಜಸತ್ವಸಮುದ್ಧೃತಪರಭೂಪರಾಗನುಂ ಧನೇಶ್ವರ ನಂತೆ ಮಹಾಪದ್ಮಾಶ್ರಿತಕೋಶನುಂ ಈಶಾನನಂತೆ ಚಂದ್ರೋಪಲಸಿತಾಂಗ ವ್ರ

ಷೇಂದ್ರಗಮನನುಂ, ಕೃತಪದ್ಮಾನಂದನಾಗಿಯುಂ ಸಕಲಕಳಾನಿಧಿಯುಂ, ಕುವಲಯಾಧಿಪನಾಗಿಯುಮನಂತರತ್ನನುಂ, ಪ್ರಬಳತೇಜಸ್ವಿಯಾಗಿಯುಮಂಧಕಾರಾತಿರುಚಿಯುಂ, ಮಹಾಮಹಿಮರಾಶಿಯಾಗಿಯುಂ ಸುರಾಗನುಂ, ಸುಧರ್ಮಾಧಿಷ್ಠಿತನಾಗಿಯುಂ ಗೋತ್ರಪ್ರಿಯನುಂ, ಭೂಜನಕುಳಾಶ್ರಯನಾಗಿಯುಮವನಸ್ವಭಾವನುಂ, ಮಹಿತನಯಯುಕ್ತನಾಗಿಯುಮನವಗ್ರಹಸ್ತುಂಅತನುವಿಭೂತಿವಿಳಸಿತನಾಗಿಯುಮಶೇಷಭರಣಕರನೆನಿಸಿರ್ದನಂತುಮಲ್ಲದೆ

ವೃ|| ವನದಂತಿಂದ್ರನ ಲೋಕದಂತೆ ಸುಮನೋವಾಸಂ ಸುಧಾಧಾಮನಂ |
ತಿನನಂತುತ್ಕಮಲಾಶ್ರಯಂ ಗಗನದಂತಬ್ಜಾಕ್ಷನಂತ್ಯೈದೆ ದಿ ||
ವ್ಯನವೀನದ್ವಿಜರಾಜರಂಜಿತಸಭಂ ಸತ್ಕಾವ್ಯದಂತಬ್ಧಿಯಂ |
ತೆ ನಿತಾಂತಂ ಸರಸಂ ವಿರಾಜಿಸಿದನಾರಾಜೇಂದ್ರಪಂಚಾನನಂ || ೧೦

ಪತಿ ನಿದ್ರಾಸಕ್ತನಾದಂ ಜಡಧಿಯೊಳದರಿಂ ಜಾಡ್ಯನಾದಂತೆ ಭಂಗಾ |
ನ್ವಿತನಾದಂ ತಂದೆ ಕುಂಭೋದ್ಭವನಿನದು ವಲಂ ತಳ್ತಪಾಂಗಿದೆ ಪುತ್ರಂ ||
ಕೃತಶಂಭುದ್ವೇಷದಿಂ ಮೆಯ್ಯಳಿದನದು ಮಧುಸ್ನೇಹದಿಂದಾದವೋಲೆಂ |
ದುತದುದ್ವ್ಯಾಮೋಹಮಂತಾಂತೊರೆದುಸಿರಿನರಾಧೀಶನಂ ಸಾರ್ದುಬಾಳ್ದಳ್

ವ|| ಇಂತೊಪ್ಪುವಿಳಾಕಾಂತನಂತಃಪುರಕಮಳದೊಳ್ಕಮಳೆಯಂತೆ ಕಮನೀಯತೆಯನಪ್ಪುಗೈದು

ಕಂ|| ಅಮೃತಮಯವಾಣಿ ಪರಿಲಸ |
ದಮೃತಾಧರೆಯಮೃತಕಿರಣಮಂಡಳ ಮುಖಿ ತಾ ||
ನಮೃತಮತಿಯೆಂಬಪೆರ್ವೆಸ |
ರಮರ್ದಿರೆ ತನ್ಮಹಿಪಮಹಿಳೆ ಕರಮೆಸೆದಿರ್ದಳ್ || ೧೨

ವೃ|| ಲೋಕಾಲೋಕನಚಿತ್ರಪುತ್ರಿಕೆ ಲಸಲ್ಲಾವಣ್ಯಲಕ್ಷ್ಮೀಮುಖ |
ಶ್ರೀ ಕಲ್ಯಾಣಯಶೋನಿಧಾನೆ ರತಿರತ್ನಜ್ಯೋತಿ ವಿಖ್ಯಾತಶೈ||
ವಾಕೂಪಾರಶಶಾಂಕಮಂಡಳಿ ಕಳಾಸಸ್ಯಾವಳೀಧಾತ್ರಿ ಸು |
ಶ್ಲೋಕಾನೇಕಗುಣಾಬ್ಜಪದ್ಮಿನಿ ವಿಳಾಸಂಬೆತ್ತು ಕಣ್ಗೊಪ್ಪಿದಳ್ || ೧೩

ಕಂ|| ಕಳರವಜಿತಕೋಕಿಳೆ ಕೋ |
ಮಳೆ ಮಲಯಜಗಂಧಿ ಗಂಧಗಜಪತಿಗತಿಮಂ ||
ಜುಳೆ ಮಧುಕರಕುಂತಳೆ ಮಂ |
ಗಳಮಯಿಮಾಧುರ್ಯ ಗುಣಗಣೋಜ್ಜ್ವಳೆ ಮೆರೆದಳ್ || ೧೪

ವೃ|| ಪಾರದತುಂಬಿಯುಂ ಕರೆಯೊಳೊಂದಿರದಿಂದುವ ನಿಂದುದರ್ಶನ |
ಕ್ಕಾರಡಿಗೊಳ್ಳದಂಬುರುಹಮುಂ ಬಿರಿಸಾಗದರನ್ನಮುಂ ಕೆಲಂ ||
ಜಾರದಚಕ್ರಮುಂ ಜರಿದು ಪೇಳದನುಣ್ಮಳಲೊಟ್ಟಿಲಂ ಫಲಂ |
ದೋರದಬಾಳೆಯುಂ ಬಲಿಯದೊಪ್ಪುವಶೋಕನವಪ್ರವಾಳಮುಂ || ೧೫

ಕಂ|| ಪಡೆಯುದುದಂ ಮುಂ ಪಡೆದಂ |
ಜಡಜಭವಂ ಜಡನೆನಿಪ್ಪನುಡಿಯ ತೊಡಂಕಂ ||
ಬಿಡಿಸಲೊಡರ್ಚಿದನೆಂದೆನೆ |
ಮಡದಿಯ ದಿವ್ಯಾಂಗಮೇಂ ಮನಂಗೊಳಿಸಿದುದೋ || ೧೬

ವ|| ಅಂತುಮಲ್ಲದೆಯುಂ

ವೃ|| ಸುಲಿಪಲ್ಕೆಂಪವಳಂಬೊಲೊಪ್ಪುವಧರಂ ಭೃಂಗಾಳಕಂ ನುಣ್ಗೊಪ |
ಲ್ತಿಲಪುಷ್ಪೋಪಮನಾಸಿಕಂ ನಗೆಮೊಗಂ ನೀಳ್ದಕ್ಷಿಗಳ್ನುಣ್ಗೊರ ||
ಲ್ವಿಲಸದ್ದೋರ್ಲತೆ ಕೆಂದಳಂ ಘನಕುಚಂ ಗಂಭೀರನಾಭೀಲಸ |
ದ್ವಲಯಂ ಪೂರ್ಣನಿತಂಬಮೊಳ್ದೊಡೆ ಪದಾಬ್ಜಂ ಮಂಜುಳಂ ಕಾಂತೆಯಾ ||

ಕುಮುದನಯನಂ ಕುಂದಸ್ಮೇರಂ ಲಸದ್ದ್ವಿಸಜಾನನಂ |
ಸಮದಗಮನಂ ಸಾಮೋದಾಂಗಂ ಸುಧಾಮಧುರಾಧರಂ ||
ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ |
ಕಮಳಚರಣಂ ಕಣ್ಗೊಪ್ಪಿತ್ತುಧರಾಧಿಪಕಾಂತೆಯಾ || ೧೮

ವ|| ಮತ್ತಂ

ವೃ|| ತನುಗೆಳವಟ್ಟರೂಪು ಘನರೂಪ ನಲಂಕರಿಪಟ್ಟಜೌವನಂ |
ಮನಕಿಸಿದಾದಜೌವನಕೆ ತಕ್ಕವಿಳಾಸತೆ ಸದ್ವಿಳಾಸಮುಂ ||
ಘನಮನಿ ಪಾಳ್ಪಜಾಣ್ಮೆ ಪೊಸಜಾಣ್ಮೆಯನುಪ್ಪಿಪಸದ್ಗುಣಂ ನೃಪಾಂ |
ಗನೆಗೆಸೆದತ್ತು ಸದ್ಗುಣಮನೇಗೆಯೊಳೊಂದಿಪಶ್ರೀವಸಂಪದಂ || ೧೯

ಕಲಹಂಸೀಯಾನೆಕಂಜಕ್ರಮೆ ಕುಮುದವಿಶಾಲಾಕ್ಷಿ ಸಚ್ಚಂದ್ರಿಕಾಮಂ|
ಜುಲಲೀಲಾಪಾಂಗೆ ಕುಂದಸ್ಮಿತೆ ಘನಕಬರೀಭಾರೆ ಭೂಭೃನ್ನಿತಂಬೋ ||
ಜ್ವಲೆ ಸಿಂಹೀಮಧ್ಯೆ ಬಿಂಬಾಧರೆ ಶುಕವಿಲಸದ್ವಾಣಿ ತಾನಾದಪಾಂಗಿಂ |
ದೆ ಲತಾತನ್ವಂಗಿ ಕಲ್ಪದ್ರುಮಸಮನೃಪನೊಳ್ಕೂಡಿ ಬಾಳುತ್ತುಮಿರ್ದಳ್ ||

ಕಂ|| ಗುಣಮನೊಳಕೈದು ತೋರ್ಕುಂ |
ಮಣಿ ಮಹಿಯೊಳದೆಂಬುದುಚಿತ ಮವನೀಶಶಿರೋ |
ಮಣಿಯನೊಳಕೈದುದಾಪೆ |
ಣ್ಮಣಿಯ ಗುಣಂತಾನಿದೆಂಬುದೇನಚ್ಚರಿಯೋ || ೨೧

ವ|| ಮತ್ತಮಾಸತ್ಯೇಂದ್ರನರೇಂದ್ರಂಗೆ

ವೃ|| ಶಿವಲಿಂಗಾರ್ಚಕನಾರ್ಯಸಂಗತಿರತಂ ತೇಜೋನ್ವಿತಂ ರಾಜನೀ |
ತಿವಿದಂ ವಿದ್ವದಮರ್ತ್ಯರತ್ನನಮಳಸ್ವಾಂತಂ ಪರಕ್ಷ್ಮಾಧವ ||
ಸ್ತವನೀಯಂ ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂ |
ಕವಚಸ್ಕಂ ಪತಿವೋಹಿನಾಮದಿನಲಂಪಿಂ ಮಂತ್ರಿಪಂ ರಾಜಿಪಂ || ೨೨

ಅರಸನ ಧರ್ಮಕೋಶಮೆರಡಂ ಪರಿವರ್ಧಿಪನೀಶಭಕ್ತರೈ |
ತರೆ ಪೊಡಮಟ್ಟು ಪೂಜಿಪನರಾತಿನರಾಧಿಪರೆಲ್ಲರಂ ನಿಜೇ ||
ಶ್ವರಚರಣಾಬ್ಜಕಾನತರನಾಗಿಪನುತ್ತಮಮಂತ್ರಭಕ್ತಿಯಿ |
ಸ್ಫುರಿತನಿಜಪ್ರತಾಪದಿನನಂ ಪತಿವೋಹಿಯೆನಿಪ್ಪಮಂತ್ರಿಪಂ || ೨೩

ಪರರಾಜಶ್ರೀಕರಾಕರ್ಷಣಕರಣಕರಂ ಸೂರ್ಯಸೂತಂಬೊಲಂಭೋ |
ಧರವಾಹಂಬೊಲ್ವಿಪಕ್ಷಕ್ಷಿತಿಭೃದುರುಬಲಧ್ವಂಸಿ ಪದ್ಮಂಬೊಲುದ್ಯ ||
ತ್ಪುರಿಣದ್ಧಶ್ರೀಗುಣಾಂಕಂ ರಜನಿಕುವಲಯಂಬೊಲ್ವಲಂ ಸೋಮಪಾದಾ |
ಬ್ಜರುಚಿಸ್ನಿಗ್ಧಂ ಸದಾವೋದರಸರಸನುದಂಚತ್ಸಮುದ್ರಂಬೊಲಾತಂ || ೨೪

ಕಂ|| ಆಮಂತ್ರಿಮೌಳಿಮಣಿಗೆ ಮ |
ಹಾಮಹಿಮಮಹೀಶಮೌಳಿಮಣಿ ಚೋಳಧರಾ |
ಭಾಮಾಧಿಪತಿ ಮನೋಜ್ಞ |
ಶ್ರೀಮಹಿತಂ ಪೃಥುಳಭಾಗ್ಯಮಂ ಪಡೆದಿತ್ತಂ || ೨೫

ವ|| ಅಂತಿತ್ತ ಸಂಪದಮನವನನವರತಮನುಭವಿಸುತುಮಿರ್ದ್ದ

ವೃ|| ತನಯರ್ಕ್ಕಳ್ತನಗಿಲ್ಲಮೆಂದು ಪಿರಿದಾಯಾಸಕ್ಕೆ ಪಕ್ಕಾದಕಾ |
ಮಿನಿಯುಂ ಸಂತಮಿಡುತ್ತೆ ಚಿದ್ಘನಶಿವಾಚಾರ್ಯಾಂಘ್ರಿಯುಂ ಪೊರ್ದ್ದಿ ಸೇ ||
ವನೆಗೆಯ್ಯುತ್ತವರಿತ್ತಮಂತ್ರಬಲದಿಂ ಸತ್ಪುತ್ರನಂ ಪೆತ್ತು ತ |
ತ್ತನಯಾನಂದಿತನಿರ್ದ್ದನಾನೃಪಸಭಾವಾರಾಶಿಚಂದ್ರೋದಯಂ || ೨೬

ವ|| ಅಂತಾಪತಿಮೋಹಿಮಂತ್ರಿಪಂ ನಿಜಸುತಂಗೆ ಮಿತವಚನಾಭಿಧಾನ
ಮನಿಟ್ಟು ಕಟ್ಟಳ್ಕರಿಂ ಸಲಪುತ್ತಮಿರ್ಪ್ಪಿನಮೊಂದುದಿವಸಂ

ವೃ|| ಹರಿಪೀಠಾಸೀನನುದ್ಯತ್ಸಚಿವನಿಚಯಸಂಯುಕ್ತನುದ್ದೀಪ್ತದಿವ್ಯಾ |
ಭರಣಾಂಚತ್ಕಾಯನುರ್ವೀಶ್ವರನಿಕರನಿಷೇವ್ಯಾಂಘ್ರಿಪದ್ಮಂ ಪಯೋಧ್ಯು |
ದ್ಧರನವ್ಯಾಂಗಾಂಗನಾಚಾಲಿತಚಮರರುಹದ್ವಂದ್ವಪಾರ್ಶ್ವಂ ಜಯಸ್ವ |
ಸ್ವರಭಾಸ್ವದ್ವಂದಿವೃಂದಸ್ತುತನವನಿಪನೊಡ್ಡೋಲಗಂಗೊಟ್ಟನಾಗಳ್ || ೨೭

ವ|| ಅಂತೊಡ್ಡೋಲಗಂಗೊಟ್ಟಿರ್ದ್ದ ನಿಜಾಮಾತ್ಯನಪ್ಪಪತಿಮೋಹಿಯಂ
ನಿರೀಕ್ಷಿಸಿ

ಕಂ|| ಲೀಲೆ ಮಿಗೆ ನುಡಿದನಾನರ |
ಪಾಲಂ ಪತಿಮೋಹಿಯೊಡನೆ ಪದಪಿಂ ಪರಮೋ ||
ಕ್ಷಾಲಂಬಮೆನಿಪಕಾಶಿಗೆ |
ಕಾಲಾರಿಗೆ ಪೋಗಿ ಜಹ್ನುಜಾಂಬುಗಳಿಂದಂ || ೨೮

ವೃ|| ತುಂಬಿ ಸಹಸ್ರಕುಂಭದಭಿಷೇಕಮನಾಗಿಪೆನಾಗಮೋಕ್ತಮಾ |
ರ್ಗಂಬಿಡಿದಂಬಿಕಾಪತಿಗೆ ಮನ್ಮನದಿಷ್ಟಮಿದಲ್ತೆ ತಳ್ವದೇ ||
ಳೆಂಬುದುಮಿಂಬುವೆತ್ತಪಣೆಗತ್ತುರಿಬೊಟ್ಟು ತದಂಘ್ರಿಪದ್ಮದೊ |
ಳ್ತುಂಬಿಯಿದೆಂಬವೋಲ*ಮರ್ದ್ದು ಪತ್ತಿರೆ ತಾಂ ಪೊಡಮಟ್ಟು ಮಂತ್ರಿಪಂ|| ೨೯

ಕಂ|| ನುಡಿದನೆಲೆಜೀಯ ನಿಮ್ಮೊ |
ಳ್ಮೃಡನೆಂದುಂ ನೆಲಸಿ ನಿಂದನದಱಿಂ ನೀಮಿ ||
ರ್ದ್ದೆಡೆ ಕಾಶಿಯಲ್ತೆ ಬೇರಿ |
ನ್ನೆಡೆಯಾಡಲದೇಕೆ ತರಿಸೆನಾನದಿಯುದಮಂ || ೩೦

ವೃ|| ಜವದಿಂದಿಲ್ಲಿಗೆನುತ್ತೆ ಧರ್ಮವತಿಗೇಳ್ದೊರ್ಗಾವುದಂಬೆತ್ತಶಾಂ |
ಭವಲೀಲಾಗೃಹಮಾದಕಾಶಿಯನದೀತೋಯಂಗಳಂ ಮಂಗಳೋ ||
ತ್ಸವದಿಂ ಭೂವರವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೊರ್ವ್ವರಿಂ |
ದವನಂದೈದಿಸಿದಂ ಸುವರ್ಣಘಟದಿಂ ತಾನೆಂದೊಡೇಂ ಪೆರ್ಮೆಯೋ|| ೩೧

ವ|| ಅಂತು ಘನಕನಕಘಟೀಸಹಸ್ರದಿಂ ಭಾಗೀರಥೀಭದ್ರಮಯಾಂಬುವನೈದಿಸಲೊಡನೆ ಸಂಭ್ರಮಂ ಮಿಗೆ

ವೃ|| ತಳೆದಾನಂದಮನಾನರೇಂದ್ರತಿಳಕಂ ಪೂಜಾಗೃಹಂಬೊಕ್ಕು ನಿ |
ರ್ಮಳಕಾಯಂ ಭಸಿತಾಕ್ಷಮಾಲಿಕೆಗಳಂ ತಾಳ್ದಂಗದೊಳ್ತನ್ನದೀ |
ಜಳದಿಂ ಮಂತ್ರಯುತಂ ಶಿವಾಗಮವಿದಂ ತೂರ್ಯಸ್ವನಂ ಪೊಣ್ಮೆಮಂ |
ಗಳಲಿಂಗಕ್ಕಭಿಷೇಕಮಂ ರಚಿಸಿದಂ ಮಾಹೇಶ್ವರಪ್ರಾವೃತಂ || ೩೨

ಅನಂತರಂ ||

ಘನಘನಸಾರಕುಂಕುಮವಿಲೇಪನದಿಂ ಧವಳಾಕ್ಷತಂಗಳಿಂ |
ವನರುಹಕೈರವಪ್ರಸರದಿಂ ನವಸೌರಭ ದಿವ್ಯಧೂಪದಿಂ ||
ದಿನರುಚಿದೀಪದಿಂದಿನಿದನಪ್ಪಿದ ಸಾರಸುಧಾನ್ನದಿಂ ಹಿಮಾಂ |
ಕನಿಯುತವೀಟಿಕಾವಿತತಿಯಿಂ ನೃಪನರ್ಚಿಸಿದಂ ಕಪರ್ದಿಯಂ || ೩೩

ವ|| ಅಂತುಮಾರಾಜಮೌಳಿಮಣಿಗೆ ರಾಜದ್ರಾಜಮೌಳಿ ಮಣಿಮಣಿದು ರಾಜವದುಪಚಾರಮನೋಜೆಮಿಗೆ ರಚಿಸಿ ||

ವೃ|| ತನು ರೋಮಾಂಚಮನೊಂದೆ ಮುಂದೆಸೆಯನಾನಂದಾಶ್ರುಗಳ್ಪಾರೆತೋ|
ರೆ ನವಂ ಗದ್ಗದಮುಣ್ಮೆ ಪೊಣ್ಮೆ ನಡುಕಂ ಘರ್ಮಾಂಬು ಕೈಗಣ್ಮೆಜಾ ||
ಣ್ಮೆ ನಿತಾಂತಂ ದೃಢಯೋಗ ರಾಗರಸದಿಂ ಚಿತ್ತಾಬ್ಧಿ ನೀರೇರೆ ಮಿಾ |
ರೆ ನರೇಂದ್ರಂ ಶಿವಲಿಂಗಸಂಗರತಿಯಂ ತಳ್ತಪ್ಪಿದಂತೊಪ್ಪಿದಂ || ೩೪

ವ|| ಮತ್ತಮಾಗಳ್

ವೃ|| ನುತಿಗೈದಂ ನುತರಾಜರಾಜನಗಜಾತಾಕಾಂತನಂ ಕಾಂತನಂ|
ಶಿತಶೂಲಾಹತನಾಗನಾಗಭರಣಭ್ರಾಜಿಷ್ಣುವಂ ಜಿಷ್ಣುವಂ ||
ದಿತನಂ ವಿಶ್ರುತದೇವದೇವನನುದಾರ ಶ್ರೀದನಂ ಶ್ರೀದನಂ |
ದಿತನಂ ದರ್ಶಿತಭಾವಭಾವಜತಮಶ್ರೀ ಸೋಮನಂ ಸೋಮನಂ || ೩೫

ವ|| ಅದೆಂತೆನೆ

ವೃ|| ಶ್ರೀಮತ್ಪೂರ್ಣಸುಖಾಬ್ಧಿ ನಿತ್ಯ ನಿರುಪಾಧಿಜ್ಯೋತಿ ವಿಖ್ಯಾತಮಾ |
ಯಾಮೋಹಾಮಯದೂರಸಾರನಿಗಮಾಂತಾಭೇದ್ಯ ಸದ್ರೂಪ ಚಿ ||
ದ್ವ್ಯೋಮಾಕಾರ ಯಮೀಂದ್ರಮಾನಸಸಮುಲ್ಲಾಸಾಸ್ಪದಾವಾಸ ನಿ |
ಷ್ಕಾಮ ಪ್ರೇಮ ಮಹೇಶ ರಕ್ಷಿಸೊಲವಿಂ ಶ್ರೀಶೈಲಜಾವಲ್ಲಭಾ || ೩೬

ತಳೆದತ್ತಬ್ಜಭವಾಂಡನಾಮವ ಭವದ್ವಾಮಾಕ್ಷಿ ಸಂಜಾತಭೂ |
ವಳಯಂ ಮೇಣದನೋವಿ ಮಿತ್ರವೆಸರಂ ತಾಳ್ದಿರ್ದುದಾದಕ್ಷಿಣೋ ||
ಜ್ಜ್ವಳನೇತ್ರಂ ಪಣೆಗಣ್ಣದಂ ದಹಿಸುಗುಂ ಕಾಲಾಗ್ನಿರೂಪಂ ನಿರಾ |
ಕುಳಮಿಂತಾಗಿರೆ ನಿರ್ವಿಕಾರನೆನಿಪೈ ಶ್ರೀಶೈಲಜಾವಲ್ಲಭಾ || ೩೭

ಪೆದೆವಿಲ್ಗಳ್ತಳೆದಿರ್ಕ್ಕೆ ಮೀಧರಣಿಯುಂ ಸೂತಂ ಕರಂ ಪುಟ್ಟಿಪಂ |
ಪದಪಿಂದೀಭುವನಂಗಳಂ ಪೊರೆಗುಮಾಬಾಣಂ ರಥಾಂಗಂಗಳಂ ||
ತದನುದ್ಯದ್ದ್ರುಚಿಯುಂ ವಲಂ ಬೆಳಗುಗುಂ ನಿನ್ನಶ್ವಮಾಕಮ್ಮ ಬೊ |
ಮ್ಮದ ಪಾಂಗಂ ಸಲೆ ಬೋಧಿಕುಂ ಬುಧರ್ಗೆ ಕೇಳ್* ಶ್ರೀಶೈಲಜಾವಲ್ಲಭಾ || ೩೮

ಹರಿಮುಖ್ಯಾಮರರಂ ಪಡಲ್ವಡಿಸಿ ಲೋಕಾನೀಕಮಂ ಪರ್ವಿ ನಾ |
ಬ್ಬರದೇಳ್ತರ್ಪವೊಲೊತ್ತಿ ಸುತ್ತಿ ಪರಿತರ್ಪತ್ಯುಗ್ರಹಾಲಾಹಲೋ ||
ತ್ಕರಮಂ ತಾಳದೊಡೋವೊದೇವಸತಿಯುಸ್ಸಿರ್ಮಂತಸಿಂದೂರರಾ |
ಗರಜಶ್ರೀಯನದೆಂತು ತಾಳ್ದಪರೊ ಪೇಳ್ ಶ್ರೀಶೈಲಜಾವಲ್ಲಭಾ || ೩೯

ಶಿವ ನಿನ್ನಂಘ್ರಿಯನಾವನೊರ್ಮೆ ನೆನೆವಂ ಸದ್ಭಕ್ತಿಯಿಂದಾತನಂ |
ದಿವಿಜರ್ಕಳ್ನೆನೆವರ್ತದಂಘ್ರಿಗೆರಪಂ ತಾನಾವನಾತಂಗೆ ಯೋ ||
ಗಿವರರ್ತಾವೆರಪರ್ಭವನ್ನುತಿಯನಾವಂ ಮಾಳ್ಪನಾಧನ್ಯನಂ |
ಸವಿವಾತಿಂ ನುತಿಗೈವುದಾಗಮಜಯುಂ ಶ್ರೀಶೈಲಜಾವಲ್ಲಭಾ || ೪೦

ನಿಗಮಂಗಳ್ಗೆ ಕಾಣಲಾರ್ತರವೆ ಭವತ್ಪಾದಾಬ್ಜಮಂ ನಿನ್ನನೇಂ |
ಪೊಗಳಲ್ಕಾರ್ತರೆ ವಿಷ್ಣುಮುಖ್ಯವಿಬುಧರ್ಯೋಗೀಂದ್ರರುಂ ಭಾವದೃ ||
ಷ್ಟಿಗಳಿಂ ಲಕ್ಷಿಸಲೇಂಸಮರ್ಥರೆ ಭವದ್ಭಕ್ತರ್ಕ್ಕಳೇ ಕಾಣಲುಂ |
ಪೊಗಳಲ್ಲಕ್ಷಿಸಲುಂ ವಲಂ ನೆರೆದಪರ್ ಶ್ರೀಶೈಲಜಾವಲ್ಲಭಾ || ೪೧

ಭವದೊಳ್ಬರ್ಪ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೇ |
ನವರೇನೀವರೆ ಮುಕ್ತಿಯುಂ ಭವಹರಂ ನೀನಲ್ಲದಿಷ್ಟಾರ್ಥಮಂ ||
ತವೆ ಮಾಡಲ್ಸುರಪಾದಪಂ ನೆಗೆಗುವಿಾಬಬ್ರೂರವೃಕ್ಷಂಗಳೀ |
ವುವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ || ೪೨

ಸುಲಭಂ ದೇವ ಭವತ್ಪದಾಬ್ಜಭಜನಾಸಕ್ತರ್ಗ್ಗೆ ಧರ್ಮಾರ್ಥಕಾ |
ಮಲಸನ್ಮುಕ್ತಿಗಳೆಂಬುದಂ ತಿಳಿದುಮೆನ್ನೀಮಾನಸಂ ನಿನ್ನನಿ ||
ಶ್ಚಳಭಕ್ತಿಸ್ಪೃಹೆಯೂನದಿರ್ಪ್ಪತೆರನೇಂ ಪೇಳ್ಮೋಹಮೋ ತನ್ನ ಮಂ |
ಜುಳಪುತ್ರಾಂಗಮನಿಕ್ಕಿದೊಂದುಮುಳಿಸೋ ಶ್ರೀಶೈಲಜಾವಲ್ಲಭಾ || ೪೩

ಕರದೊಳ್ತಾಳ್ದನಿಜೇಷ್ಟಲಿಂಗದೆ ಮನಂ ಪಂಚಾಕ್ಷರಂ ವಕ್ತ್ರದೊ |
ಳ್ಕೊರಲೊಳ್ತಳ್ತಶಿವಾಕ್ಷಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್ ||
ಗುರುಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ಪ್ಪಭಕ್ತಂಗದಾ |
ಸ್ಸರಿ ನೀನಾತನಧೀನನಲ್ತೆ ಸತತಂ ಶ್ರೀಶೈಲಜಾವಲ್ಲಭಾ || ೪೪

ವ|| ಅಂತು ಪೊಗಳ್ದು ಪೊಡಮಟ್ಟು ಮಗುಳ್ದು ಲಿಂಗಪೂಜೆಯುಂ ಸಾಂಗಮೆನೆ ರಚಿಸಿದನಂತರಂ

ಕಂ|| ಧನಕನಕವಸನಮಣಿಭರ |
ಣನಿವಹ ನವಗಂಧಮಾಲ್ಯವೀಟಿಕೆಗಳಿನಂ ||
ದನುನಯದಿಂದರ್ಚಿಸಿದಂ |
ಜನನಾಮಯಹರಣಶರಣಚರಣಾಂಬುಜಮಂ || ೪೫

ವ|| ಅಂತರ್ಚಿಸಿ ಪೊಗಳ್ದು ಮುಗುಳ್ದೆರಗಿ ಕೈಂಕರ್ಯಮನಾಂತವರಕಾರುಣ್ಯಮಂ ಪಡೆದರಸನನವರತಮಿಂತು ಪೊಳ್ತುಗಳೆವುತ್ತುಮಿರ್ದನನ್ನೆವರಮಂತವರದೊಳಮೃತಮತಿ ಮಹಾದೇವಿಯೊಂದುಪುಣ್ಯವಾಸರಸುಪ್ರಭಾತಸಮಯದೊಳ್ಶಿವಲಿಂಗಪೂಜಾನಂತರಂ ಪುರಾಣಮಂ ಕೇಳ್ವಲ್ಲಿ ಮಾರ್ಕಂಡೇಯಚರಿತಂ ಬರೆವರೆ ತದ್ಬಾಲಲೀಲೆಯನಾಕರ್ಣಿಸಿ ತನಗೆ ತನಯನಿಲ್ಲಪ್ಪುದರಿಂ ಸೆನೆದು ಬಿಸುಸುಯ್ದು ಕೆಲದೊಳಿರ್ದ್ದಕೆಳದಿಯೊಡನಿಂತೆಂದಳ್

ಕಂ॥ ಎಳವರೆಯುದೊಳೆಳೆಯರ್ಕ್ಕಳ ।
ನೆಳಸುತೆ ನಳಿತೋಳ್ಗಳಿಂದೆ ಬಿಗಿದಪ್ಪಿ ಮನಂ ॥
ಗೊಳೆ ತಳ್ತು ನೋಡಿ ಮುದ್ದಿಪ ।
ವಿಳಾಸವೊಂದಕ್ಕೆ ನೋಂತುದಿಲ್ಲಾಂ ಕೆಳದೀ ॥ ೪೬

ಶಿವಭಕ್ತಿಯಿಲ್ಲದನಬಾ ।
ಳ್ಕವಿತ್ವಮಿಲ್ಲದನಜಾಣ್ಮೆ ಕಳೆಯಿಲ್ಲದಪೆಣ್ ॥
ಜವಮಿಲ್ಲದಶ್ವಮುಂ ತನು ।
ಭವನಿಲ್ಲದಭಾಗ್ಯಮೆಂತುಮೇಂ ಮೆರೆದಪುದೇ ॥ ೪೭

ಅರಳೆಲೆ ಮಾಗಾಯ್ಕುಣಿಯು ।
ತ್ತಿರೆ ನುಣ್ಣೊಸಲೊಳ್ಕದಂಪಿನೊಳ್ಮೃದುಹಾಸ ॥
ಸ್ಫುರಿತಂ ಮೊಳೆವಲ್ಮಿನುಗು ।
ತ್ತಿರೆ ಪರಿದಾಡುವಕುಮಾರನೆಂದಾದಪನೋ ॥ ೪೮

ಕರತಳದಿಂದೆನ್ನಯನು ।
ಣ್ಬೆರಲಂ ಪಿಡಿದೇಳ್ದು ಜನನಿ ನಡೆದಪೆನೆನುತೊಂ ॥
ದೆರಡಡಿಯನಿಟ್ಟು ನಿರಿಯಂ ।
ಭರದಿಂ ತಳ್ಕೈಪಮಗನನೆಂದೀಕ್ಷಿಪೆನೋ ॥ ೪೯

ಅರಸನ ಪಿಂದೆಸೆಯೊಳ್ಮೆ ।
ಯ್ಗರೆದೆಲ್ಲಿರ್ದ್ದಪೆನೊ ಜನನಿ ಪೇಳೆನುತೊಲವಿಂ ॥
ಪರಿತಂದೆಳನಗೆ ಮಿನುಗು ।
ತ್ತಿರೆ ಕುವರಂ ಕೊರಲನೆಂದು ಬಿಗಿದಪ್ಪುವನೋ ॥ ೫೦

ವೃ॥ ಮಗನಂ ತಳ್ತುಮರ್ದಪ್ಪಿ ನೋಡಿ ಮೊಗಮಂ ಮುಂಡಾಡಿ ನೇಹಂ ಮನಂ ।
ಬುಗೆ ಮಾತಾಡಿಸಿ ಲಲ್ಲೆಗೈದು ನಗಿಸುತ್ತಿರ್ಕೈರ್ಗಳಂ ಸಾರ್ಚ್ಚಿ ಮಂ ॥
ಡೆಗೆ ಬಟ್ಟಾಡೆ ಕೆಲಕ್ಕೆ ಚಿಮ್ಮಿ ಮೊಲೆವಾಲಂ ಮತ್ತೆ ಜಾಯ್ಕ್ಕಾಡಿ ಮೆ ।
ಲ್ಲಗೆ ತೊಟ್ಟಿಲ್ಗಿದಿಟ್ಟು ತೂಗುವೆಳವೆಣ್ಣೇಂ ನೋಂಪಿಯಂ ನೋಂತಳೋ ॥ ೫೧

ಕಂ|| ಪಡಿಸೆಳಲಂ ಮಣಿಕುಟ್ಟಿಮ |
ಪೆಡೆಯೊಳ್ನಡೆ ನೋಡಿನೋಡಿ ದಾಯೆನುತುಂ ಕೈ ||
ದುಡುಕಲದು ತುಡುಕೆ ನಗೆ ನಗೆ |
ಕಡುಬಿನದಂಬಡೆವ ಕಂದನೆಂದಾದಪನೋ || ೫೨

ವೃ|| ಇಂತುಪಲುಂಬಿ ಪಂಬಲಿಸಿ ಭೂಷಣಮಂ ತೆಗೆದಿಟ್ಟು ಚಿತ್ತದೊ |
ಳ್ಚಿಂತೆಯನಾಂತು ಕಾಂತೆ ಬಿಸುಸುಯ್ಯೆಲರಿಂ ತನುವಲ್ಲಿ ಕಂದಿತೆಂ ||
ಬಂತಿರೆ ತನ್ನೊಳಾಳಿಯರಿದೇನೆನುತಳ್ಕಿರೆ ತಳ್ವದೈದಿದೇ |
ಕಾಂತನಿಕೇನಕ್ಕೆ ಧರಣೀಪತಿ ಬಂದೊಳಪೊಕ್ಕು ನೋಡಿದಂ || ೫೩

ಎಡಗೈಯಿಂದೊತ್ತಿ ಶಯ್ಯಾತಳಮನಿನಿಸು ಜಾರಿರ್ದುದಂ ಮೇಲುದಂ ಪೊಂ |
ಗಡಗಂ ಗಲ್ಕೆಂದು ಶಬ್ದಂಗುಡೆ ಬಲದಕರಾಂಭೋಜದಿಂದೇರನೂಂಕು ||
ತ್ತೊಡನುತ್ತುಂಗಸ್ತನಾಗ್ರಕ್ಕಿಳಿವಮುಡಿಯನಾಂತೌಂಕುತುಂಕಂಠದಿಂಮುಂ|
ಗಡೆಯೊಳ್ಕಂಡೇಳ್ವಳಂ ಕೈವಿಡಿದವಳೊಡನರ್ಧಾಸನಂಗೊಂಡನಾಗಳ್ || ೫೪

ವ|| ಅಂತು ಕುಳ್ಳಿರ್ದು ಕೂರ್ಮೆಯಿಂ ನಿರೀಕ್ಷಿಸಿ

ವೃ|| ಮೃಗಮದಗಂಧಿ ನಿನ್ನ ಮೊಗಮೆಂಬಸುಧಾಕರಬಿಂಬಮಿಂದು ಬೆ |
ಳ್ನಗೆತಿಳಿಜೊನ್ನಮಂ ತೊರೆದುದಿಂದುಟಿಚೆಂದಳಿರಿರ್ಪುಗುಂದಿದ ||
ತ್ತುಗಲದರಾಗಸಾಗರದ ಪೆರ್ಚುಗೆ ತಗ್ಗಿದುದಕ್ಷಿಕೈರವಂ |
ಮಿಗೆ ಕೊರಗಿತ್ತು ಚಿತ್ತಪರಿತಾಪಮಹಾತಪದಿಂ ಮನೋರಮೇ || ೫೫

ವ|| ಅಂತುಮಲ್ಲದೆಯುಂ

ವೃ|| ಕರಕಮಳಂ ಕಪೋಳಶಶಿಬಿಂಬಮನಪ್ಪಿದುದೇಕೆ ನಿನ್ನಭಾ |
ಸುರನಯನೋತ್ಪಳೋದ್ಗಳಿತ ಕಜ್ಜಳವಜ್ಜಳಬಿಂದುಬೃಂದಷ ||
ಟ್ಚರಣಗಣಂ ಕುಚಾಬ್ಜಮುಕುಳಕ್ಕೆರಗಿರ್ದಪುದೇಕೆ ಸುಯ್ಯೆಲ |
ರ್ಕೊರಗಿಪುದೇಕೆ ಪೇಳಧರಪಲ್ಲವಮಂ ತರಳಾಯತೇಕ್ಷಣೇ || ೫೬

ಕಂ|| ಅರುಣಾಂಬುಜನಾಳಮನಾ |
ವರಿಸಿದನವಫೇನಪಿಂಡಮಾಲೆಯ ಚೆಲ್ವಂ ||
ಪರಿಭವಿಸಿ ಮೆರೆದುದೇಕಿ |
ಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ || ೫೭

ಗುರುಜಘನಬಿಂಬಶಂಬರ |
ಹರಕರಿವರಕುಂಭಮಿಂಬುವಡೆದುದಿದಿಲ್ಲೇ ||
ಕರವಿಂದಾನನೆ ಮಣಿಗಣ |
ಸುರಚಿರತರಮೇಖಲಾಶಿರೋಮಾಲಿಕೆಯಿಂ || ೫೮

ಅಲರ್ಗಣೆಯನರ್ಚ್ಚಿಸಿದವಿಜ |
ಕಿಲಮಾಲೆಯನಾಂತಪೂರ್ಣಕುಂಭದ ಚೆಲ್ವಂ ||
ಗೆಲೆವಂದುದಿಲ್ಲ ಕುಚಮಂ |
ಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ || ೫೯

ಮದನಮಣಿದರ್ಪಣದ ಪದ |
ಪೊದವಿದಕದಪಿದು ಪೊದಳ್ದಮಕರಿಕೆಯಂ ತಾ ||
ಳದೆ ಕರೆವೆರಸದಶಶಿಬಿಂ |
ಬದ ಪೋಲ್ವೆಯನಾಳ್ದುದೇಕೆ ಕಮಳದಳಾಕ್ಷೀ || ೬೦

ವದನಾಂಬುಜಲಕ್ಷ್ಮಿಯನ |
ಪ್ಪಿದವೇಣ್ಯಸಿತಾಹಿಭೀತಬಾಲೇಂದುವಿಡೆಂ ||
ಬುದನೆನಿಸದೇಕೆ ನೊಸಲೊ |
ಳ್ಪದಮಳತರಭಸಿತಲಸಿತತಿಲಕಂ ರಮಣೀ || ೬೧

ಮೊಗಸಪಿ ನಯನಾಂಭೋರುಹ |
ಯುಗಳಮನಮರ್ದಪ್ಪಿ ಸಿಂದುದೆಂಜೇಪುರುಡಿಂ ||
ಜಗುಳ್ದಂತೆ ತೋರ್ಪ್ಪುದಿಲ್ಲೆಲೆ |
ಮೃಗಾಕ್ಷಿ ಪೇಳೇಕೆ ಕರ್ಣಪೂರದಸೆಬ್ಬಿಲ್ || ೬೨

ಕಾರಿರುಳೊಳಮರ್ದತಾರಗೆ |
ಗೋರಗೆಯೆನಿಸಿದ್ದುದಿಲ್ಲರಲ್ಮುಡಿಯೊಳಿದೇಂ ||
ಕಾರಣಮರಿಪೆನ್ನೊಳ್ಮದ |
ವಾರಣಮೃದುಯಾನೆ ನಿನ್ನಮನದುಮ್ಮಳಮಂ || ೬೩

ಮುದಕೋಕಿಳಕಳರವೆ ಸಂ |
ಮುದಕರಮೃದುವಾಣಿ ನಿನ್ನಮೊಗದೊಳ್ಪೊರಪೊ ||
ಣ್ಮಡೊಡಳಿರವಮಿಲ್ಲದಪ |
ದ್ಮದೊಳೆಣೆವಂದೆನಗೆಮಾಳ್ಪುದಿದು ಮನದಳಲಂ || ೭೪

ಆರಿಂದಾದುದು ಚಿಂತಾ |
ಭಾರಂ ಶಶಿವದನೆ ಪೇಳ್ವುದೆನ್ನೊಡನೆಂದಾ ||
ಭೂರಮಣಂ ಬೆಸಗೊಳೆ ಕರ |
ವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ || ೭೫

ಅವಧರಿಪುದಖಿಳಧರಣೀ |
ಧವನಿವಹಕಿರೀಟಕೋಟಿಮಣಿಗಣಘೃಣಿಸಂ ||
ಭವನವರವಿರುಚಿರುಚಿರಾಂ |
ಘ್ರಿವನೇರುಹಯುಗಳ ದೇವ ದೇವಿಯರಿರವಂ || ೭೬

ವಾಸ್ತವಪುರಾಣದೊಳ್ಪೃಥು |
ಳಸ್ತನಿ ಕೇಳ್ದಳ್ಮೃಕಂಡುಜೋಪಾಖ್ಯಾನ ||
ನ್ಯಸ್ತಮೃಕಂಡುಜಲೀಲಾ |
ವಿಸ್ತಾರಮನೆಲ್ಲಮಂ ವಸುಂಧರೆಯರಸಾ || ೭೭

ತನಗಿಲ್ಲಪ್ಪುದರಿಂದಂ |
ತನಯಬ್ಬಿಸುಸುಯ್ದು ಬಿಸುಟು ಮಣಿಭರಣಮಸೀ ||
ವನಿತೆ ವಸಂತಂ ತೊಲಗಿದ |
ವನಲತೆಯೆನೆ ಬಿನ್ನಸಿರ್ಪಳೆಲೆಧರಣೀಶಾ || ೭೮

ತನುವಲ್ಲಿಗೆ ಫಳಮಾವುದೊ |
ತನಯಂ ತತ್ತನಯನಿಲ್ಲದಿರೆ ವಿಫಳಂ ಕೇ ||
ಳ್ತನುವಲ್ಲಿಯುದರಿನೀಮಾ |
ನಿನಗೆ ಕರಂ ಚಿಂತೆ ನೆಗಳ್ದುದವನಿಪತಿಳಕಾ || ೭೯

ದೇವಿಯರ ಚಿತ್ತದನುವಿದು |
ದೇವಚ್ಚಿಗ್ತ್ತವಿಪುದೆಂದು ನುಡಿದಳ ನುಡಿಯಂ ||
ಭಾವಿಸಿ ಕಾಂತೆಯ ಚಿಂತೆಯ |
ನಾವಿಭು ತಾಂ ಪಚ್ಚುಗೊಂಡು ತಳೆದಿಂತೆಂದಂ || ೭೦

ವೃ|| ಶಿವಮುತವಾರ್ಧಿವರ್ಧನಶಶಾಂಕನನಂಗಜಮರ್ದನಾರ್ಚನೋ |
ತ್ಸವಸವನಪ್ರದೀಕ್ಷಿತನನಬ್ಜಕಳಾಧರಭಕ್ತಬೃಂದಬಾಂ ||
ಧವನನುಮೇಶಲಾಂಛನಧರಾಂಘ್ರಿಸರೋರುಹಭಕ್ತಿಯುಕ್ತನಂ |
ಕುವರನನೀಗಳೆನ್ನಬಗೆಯುಂ ಬಯಸಿರ್ದಪುದಂಬುಜಾನನೇ || ೭೧

ವ|| ಎಂದು ನುಡಿದಿನಿಯನನುಕೂಲವಚನಮಂ ಕೇಳ್ದು

ಕಂ|| ವದನಸ್ಥಿತವಾಣಿಯ ಕ |
ಣ್ಗಾದಿರುರ್ವ್ವಿದುದೆಂಬಭಾವಮಂ ಬೀರಿ ಲಸ ||
ದ್ರದನದ್ಯುತಿ ಪಸರಿಸೆ ತ |
ತ್ಸದತಿ ಮೃದೂಕ್ತಿಯೊಳೆ ಕಾಂತನೊಡನಿಂತೆಂದಳ್ || ೭೨

ವೃ|| ಪರರಾಜಾಶೇಷತೇಜಸ್ಸ್ಥಿತಿ ಕೆಡೆ ಕಮಳಾವೋದಮಿಂಬಾಗೆ ಧಾತ್ರೀ |
ಪರಿತೋಷಂ ಪೆರ್ಚೆ ಪೂರ್ವಕ್ಷಿತಿಭೃದಧಿಕರಾಗಂ ಸಮಂತಾಗೆ ಸನ್ಮಾ ||
ರ್ಗರುಚಿಪ್ರಸ್ಫೂರ್ತಿ ಜೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮ|
ದ್ವರಚೇತಃಪದ್ಮವಿೂಗಳ್ಬಯಸಿದಪುದು ಕೇಳ್ಭೂವಿಪಾಲಾವತಂಸಾ || ೭೩

ಕಂ|| ಗಿಳಿವರಿ ಮೆರೆಯದನಂದನ |
ಮಳಿಶಿಶು ವಿಹರಿಸದಪೂಗೊಳಂ ಕಳರವದಿಂ ||
ದೆಳಲಿಂಚೆಯಡಿಯಿಡದತ |
ಣ್ಬೆಳಲರ್ಭಕನಾಡದಂಗಳಂ ಮಂಜುಳಮೇ || ೭೪

ಎನೆ ನೃಪನೆಂದಂ ಕೇಳಂ |
ಗನೆ ನೀನೆಂದಂತೆ ತನಯನಂ ಪಡೆಯದೆ ಬಾ ||
ಳ್ವನ ಸಂಸಾರಮಸಾರಂ |
ತೆನೆಯಿಲ್ಲದನವಪಲಾಲದಂತಿರೆ ಧರೆಯೊಳ್ || ೭೫

ಸುರತುರುವಿರೆ ಸಿರಿವಡೆವುದು |
ಪಿರಿದೆ ಸರೋಜಾಕ್ಷಿ ಮದ್ಗುರೂತ್ತಮನೊಲ್ದೊ ||
ಪ್ಪಿರೆ ತತ್ಪ್ರಸಾದಬಲದಿಂ |
ಪಿರಿದು ಮದಿಷ್ಟಮನೆ ಪಡೆಯಲಕ್ಕುಮಮೋಘಂ || ೭೬

ಅದರಿಂ ಚಿಂತೆಯನುಳಿವುದು |
ಸುದತಿ ಸುಧಾಕರಧರಾಂಘ್ರಿಯಂ ಪೂಜಿಪುದ ||
ಭ್ಯುದಯಕರ ಧರ್ಮಮಂ ಮಾ |
ಳ್ಪುದು ದೊರೆತಪುದಲ್ತೆ ಭವದಭೀಪ್ಸಿತಮಬಲೇ || ೭೭

ಇಂತೆಂದು ತಿಳಿಪೆಧರಣೀ |
ಕಾಂತಂ ಬಗೆವಿಡಿದು ಚಿಂತೆಯಂ ತಾನುಳಿದಳ್ ||
ಕಾಂತೆ ಬಿಡದಾಪ್ತವಚನದಿ |
ನೇಂತಿಳಿವೊಡೆ ಚಿಂತೆಗೌಷಧಂ ಪೆರತುಂಟೇ || ೭೮

ವ|| ಅನಿತರೊಳವರಮನೋರಥಮಂ ನಿಮಿರ್ಚಲೆಂದು ಸೈಪು ಸಾಕಾರತೆವೆತ್ತುಬರ್ಪಂತೆ

ವೃ|| ಘನಮಹಿಮಸ್ಸ್ವವೃತ್ತರಭವಾರ್ಚಕರುಜ್ಜ್ವಲಲಿಂಗಸಂಗಸ |
ಜ್ಜನವಿನುತಶ್ರೀವಾಗಮವಿಶಾರದರಾರ್ಯರುದಾತ್ತಕೀರ್ತಿಮಂ ||
ಡನರುಚಿತಜ್ಞರಪ್ರತಿಮವೇದಶಿರೋಮಣಿಪಂಚವರ್ಣಚಿಂ |
ತನನಿಜಚಿತ್ತಚಿದ್ಘನಶಿವಾರ್ಯಗುರೂತ್ತಮರೆಯ್ದೆ ಸಾದರಂ || ೭೯

ಮಣಿಮಯತೋರಣಂ ಮುಕುರತೋರಣಮೊಪ್ಪಿರೆ ಮಂಗಳಧ್ವಜಂ |
ಕುಣಿಯೆ ಗಜವ್ರಜಂ ರಥಪದಾತಿತುರಂಗಮಸಂಘಮಲ್ಲಿ ಸಂ ||
ದಣಿಗೊಳೆ ಭೂರಿಭೇರಿಯಘನಸ್ವನಮೊಂದೆ ದಿಗಂತಮಂ ಗುರು |
ಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡನವಂ ನರಾಧಿಪಂ || ೮೦

ವ|| ಅಂತಿದಿರ್ಗೊಂಡು ಕಟ್ಟಿದಿರೊಳ್ಕಂಡು ಪುಷ್ಪಾಂಜಲಿಗೆದರ್ದು ಸಾಷ್ಟಾಂಗಪ್ರಣತನಾಗಿ ಸಾತ್ವಿಕಂ ಮಿಗೆ ನಿರೀಕ್ಷಿಸಿ ನಿಜಹೃದಯನಳಿನಮಿನ್ನೆವರ

ಏಂತಿರ್ದಪೆಂದರಿಪುವಂತೆ ಕರಕಂಜಮಂ ಮುಗಿದು ನಲವಿಂ ಸುತಿಗೈದು ಪರ
ಮಾನಂದಂ ಮಿಗೆ ಪರಕೆಯುಂ ಕೈಕೊಂಡು ಕೃತಾರ್ಥತೆಯನಪ್ಪುಕೈದು ಕನಕಮ
ಯಸುಖಾಸನನೊಳ್ಕೈಗೊಟ್ಟು ಮೂರ್ತಿಗೊಳಿಸಿ, ಮಕುಟವರ್ಧನರ್ಬ್ಬಳಸಿ ಬರೆ
ಮಹೋತ್ಸವಂಬೆರಸು ಧರ್ಮ್ಮಮುಂ ತರ್ಪ್ಪದಾನದಂತೆ ಜಸಮುಂ ತರ್ಪ್ಪಜಯದಂತೆ
ಸುಖಮುಂ ತರ್ಪ್ಪಸುಕೃತದಂತೆ ಸಾಹಸಮುಂ ತರ್ಪ್ಪಸತ್ತ್ವದಂತೆ ವಿನಯಮುಂ
ತರ್ಪ್ಪವಿವೇಕದಂತೆ ಪರಿಮಳಮುಂ ತರ್ಪ್ಪಪವಮಾನನಂತೆ ಶಿವನೊಲವಂ ತರ್ಪ್ಪಶಿವ
ಯೋಗದಂತೆ ಗುರುಕುಲೋತ್ತಂಸನಂ ನೃಪಕುಲೋತ್ತಂಸನಂತಃಪುರಕ್ಕೊಡಗೊಂ
ಡು ಬಂದು, ಮಣಿಖಚಿತ ದಿವ್ಯಸಿಂಹಾಸನದೊಳ್ಮೂರ್ತಿಗೊಳಿಸಿ ಪರಿಮಳೋ
ದಕದಿಂ ಪಾದಪ್ರಕ್ಷಾಳನಂಗೆಯ್ದು ಸಾದರಂ ಮಿಗೆ ಪಾದತೀರ್ಥಮಂ ತಳೆದು ವಿ
ವಿಧೋಪಚಾರಂಗೈದು ಸಚಿವನುಂ ತಾನುಂ ಸಮುಚಿತಾಸನದೊಳ್ತದನುಜ್ಞೆಯಿಂ
ಕುಳ್ಳಿರ್ದು ಬಳ್ಳಿವರಿವಭಕ್ತಿಗಡರ್ಪ್ಪಾಗಿ ತದೀಯಕಟಾಕ್ಷರುಚಿರರುಚಿಸಾಂದ್ರಚಂ
ದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ಬೆಳಗುಪಸರಿಸೆ ಮೆಲ್ಲನಿಂತೆಂದಂ.

ವೃ|| ಪಾವನದೇಶಿಕಾನ್ವಯಪಯೋಜನದಿನೇಶ್ವರ ನಿಮ್ಮ ಪಾದಸಂ |
ಸೇವನೆಯಿಂದರಲ್ದುದು ಮದೀಯಮನಃಕಮಳಂ ವಿವೇಕಮೆಂ ||
ಬಾವಿಮಳಾಕ್ಷಿಗಾದುದಖಿಳಾರ್ಥನಿರೀಕ್ಷಣಮಿಂದು ಧನ್ಯಸ |
ದ್ಭಾವಮನಾಂತೆನೆನ್ನವೊಲದಾರ್ಕೃತಕೃತ್ಯರಿಳಾತಳಾಗ್ರದೊಳ್ || ೮೧

ಕಂ|| ಎನೆ ಕೇಳ್ದು ಹರಿಸಮೊಗೆತರೆ |
ಮನಕ್ಕೆ ಕರುಣಾವಲೋಕನಂಗೈದೆ[illegible] ||
ವನಿತೇಶ ನಿನ್ನ ಮನದಿ |
ಷ್ಟಸಿಯೋಜನೆಗೆಯ್ವುದಾವುದದನರಿಪೆಂದರ್ || ೮೨

ವ|| ಎನೆ ಮುದಂಬಡೆದು

ಕಂ|| ದೇವಬಯಸಿರ್ದಪುದು ಮ |
ದ್ಭಾವಂ ಭವದೀಯವದನದಿಂ ತಿಳಿದಪೆನಂ ||
ದಾವಿಮಳಮೆನಿಪಶಿವಲೀ|
ಲಾವಳಿಯುಂ ಪೇಳ್ವುದೆನಗದಂ ದಯೆಯಿಂದಂ || ೮೩

ವ|| ಎಂದು ಭಕ್ತಿಭರದಿಂ ಪುತ್ರವರಮಂ ಬೇಳ್ಪುದಂ ಮರೆದಿಂತೆಂದು ಬಿನ್ನಪಂಗೆಯ್ದ ನರೇಂದ್ರನ ಬಗೆಗೆ ಮೆಚ್ಚಿ ಸಂತಸಂಬಟ್ಟು ನೀಡುಂ ನಿರೀಕ್ಷಿಸಿ ನಿಖಿಳ ಶ್ರುತಿಪುರಾಣಾಗಮಸಾರಮಪ್ಪ ಶಿವಲೀಲೆಯಂ ಪೇಳಲುಜ್ಜುಗಿಸಿ,

ಕಂ|| ಹೃದಯಕಮಳದೊಳೆ ನೆಲಸಿದ |
ಮದನಾರಿಯ ಮಕುಟದಗ್ರದೆಳವೆರೆಗದಿರು ||
ಣ್ಮಿದುದೆನೆ ಪಸರಿಸೆ ವಿಳಸ |
ದ್ರದನದ್ಯುತಿ ಮೊಗದೊಳಾಗಳವರಿಂತೆಂದರ್ || ೭೪

ವೃ|| ಮೊದಲೊಳ್ನಿಷ್ಕಳವಾಗಿ ನಿರ್ವಿಕೃತಿಯಿಂ ತಾನೊಂದೆ ಸಚ್ಚಿತ್ಸುಖಾ |
ಸ್ಪದಲಿಂಗಂ ಸತಮಾಗಿ ಪೂರ್ಣಮುರುಷಟ್ತ್ರಿಂಶತ್ಪರಂ ಶಕ್ತಿಯಂ ||
ಗದ ಸಂಪರ್ಕದೆ ಗಟ್ಟಿಗೊಂಡತಿಳಿನೆಯ್ಯಂತಾಮಹೇಶತ್ವಮಾಂ |
ತದು ತದ್ದೇಹದೊಳೊಲ್ದು ತಾಳ್ದುದುರುಲೀಲಾಜಾಲಮಂ ಭೂಮಿಪಾ|| ೭೫

ವ|| ಅದೆಂತೆಂದೊಡೆ

ವೃ|| ಸುರಗೋರ್ವೀರೊರ್ವರಸಿತ್ತು ದಕ್ಷನೊಸೆದಿರ್ಪತ್ತೇಳ್ತನೂಜಾತೆಯ |
ರ್ಸ್ವರಿಯೆಂಬಂತಿರೆ ಕೂಡಿರೆಂದುಕುಡೆ ವಿಾರುತ್ತೊರ್ವಳೊಳ್ಪ್ರೀತಿ ಸಂ ||
ದಿರೆ ಶಾಪಂಗುಡೆ ಕಂದಿ ಕುಂದಿ ತಪಮಂ ತಾನಾಂತಿರಲ್ಮೆಚ್ಚಿ ಶಂ |
ಕರನಾಕಾಶನದೀಮೃಣಾಳಮೆನೆ ತಚ್ಚಂದ್ರಾರ್ಧಮಂ ಸೂಡಿದಂ || ೭೬

ಮಂದಾರಾಮಳಪುಷ್ಪದೊಳ್ಪರಿಮಳಂ ಶ್ರೀದೇವಸದ್ರತ್ನದೊ |
ಳ್ಚಂದಂಬೆತ್ತೆಸೆದಿರ್ಪಕಾಂತಿ ನೆಲೆಗೊಂಡಿರ್ಪಂತೆ ತನ್ನೊಳ್ಸದಾ ||
ನಂದಂಬೆತ್ತೆಸೆದಿರ್ಪ್ಪವಾರಮಣಿಯೊಳ್ಕೂಡಿರ್ದ್ದಜಾಂಡಂಗಳಂ |
ಕಂದರ್ಪಾರಿ ಸಿಸೃಕ್ಷೆ ಸಾಕ್ಷಿ ಸುಮನಸ್ಸಂಪ್ರೀತಿಯುಂ ಮಾಡಿದಂ || ೭೭

ಒಮ್ಮೆ ಜಗತ್ತ್ರಯಕ್ಕೆ ಲಯಮಂ ರಯದಿಂದೆ ನೆಗಳ್ಚೆ ತನ್ನ ಚಿ |
ದ್ಧರ್ಮಮಸಳ್ಕರಿಂ ನೆಸೆಯೆ ತಾಂ ವೃಷಭಾಕೃತಿಗೊಂಡು ಮುಂದಿರಲ್ ||
ಕೂರ್ಮೆಯೊಳೇರಿ ಸಿಂದಸಿದು ಚಿತ್ರವಿಳಾತಳದಲ್ಲಿ ಧರ್ಮಿಮೇ |
ಲ್ಧರ್ಮದೊಳಿರ್ಪುದೆಂದು ವಿಬುಧರ್ಪೊಗಳುತ್ತಿರೆ ಪಾರ್ವತೀಶ್ವರಂ || ೭೮

ಸ್ಫೂರ್ಜದ್ಗರ್ಜದ್ಘನಾಡಂಬರರವಡಮರುಧ್ವಾನಮಿಂಬಾಗೆ ಗಂಗಾ |
ವಾರ್ಜಂಗಳ್ನೀಕರಂಗಳ್ಸುರಿಯೆ ಮೊರೆಯೆ ಸರ್ಪಾಳಿ ಜಂಝೇಭಚರ್ಮಂ ||
ಪರ್ಜನ್ಯಾಭಂ ಕಟೀಮಂಡಳದೆ ಪೊಡರೆ ಕಾಲಾನಲಾಕ್ಷಿಸ್ಫುರದ್ರೋ |
ಚಿರ್ಜಾಲಂ ಪೊಣ್ಮೆ ದಿಗ್ಭಿತ್ತಿಗಳೊಡೆಯೆ ಹರಂ ತಾಂಡವಂಗೆಯ್ಯುತಿರ್ದ್ದಂ ||

ತಪಮಿರ್ಪ್ಪದ್ರಿಜೆಯಲ್ಲಿ ಗೆಯ್ದು ವಟುವೇಷಂಬೊತ್ತು ನಾನಾಪ್ರಪಂ |
ಚಪರಾಲಾಪಮನಾಡಿ ನೋಡಿ ಮನಮಂ ಮುಚ್ಚುತ್ತೆ ಪೋಗೆಂದು ತ ||
ದ್ವಿಪುಳಾವಾಸಕಲಂಪಿನಿಂ ಕಳುಪಿ ಬಂದಾನಂದದಿಂ ನಿರ್ಜರಾ |
ಧಿಪರೇಳ್ತಂದಿರೆ ಶಂಭು ಕೂರ್ತ್ತು ಪಸೆನಿಂದಂ ತನ್ಮಹಾದೇವಿಯೊಳ್ || ೯೦

ಅಧರಿತಮನ್ಮಥಾಕೃತಿ ಮನೋಹರಮೂರ್ತಿ ವಿಳಾಸವಾಂತು ಬಂ
ದಧಿಗತರೂಪಯೌವನಸುರೇಂದ್ರಪುರೀಸುದತೀವಿತಾನಮಂ |
ಮಧುಸಖಬಾಣಪಾತಕೊಳಗಾಗಿಸಿ ಭಿಕ್ಷೆಯನಲ್ಲಿ ಬೇಡುತುಂ |
ವಿಧುಧರನೊಮ್ಮೆ ತಾಳ್ದನಧಿಕೋತ್ಸುಕ ಭಿಕ್ಷುಕಲೀಲೆಯಂ ನೃಪಾ || ೯೧

ಅಂಬಿನ ಶತ್ರು ಸತ್ತಿಗೆಯದರ್ಕ್ಕಗಿದಿರ್ಪ್ಪರಥಂ ನಿಜಾಶ್ವಮಾ |
ಲಂಬಿಸೆ ಕೋಡೊಳಿಟ್ಟು ಪೊರೆವಾನೆಯದಂ ಮದವೇರಿಪಾತನೇ ||
ನಂಬುಗೆವೆತ್ತಮಂತ್ರಿ ಗುಣಮಂ ಪರಿಪಾಲಿಪಬಿಲ್ಬಲಂ ತದ |
ಸ್ತ್ರಾಂಬಕಿಯಾಗಲೆಚ್ಚು ಮುಗುಳಂಬನನೀಕ್ಷಿಸಿ ಸುಟ್ಟನೀಶ್ವರಂ || ೯೨

ಶ್ವೇತನೆನಿಪ್ಪಪಾತಕಿ ಪಣಾಂಗನೆಗೆಂದರಲಂ ತರುತ್ತೆ ಧಾ |
ತ್ರೀತಳದಲ್ಲಿ ಬೀಳೆ ಗಿರಿಶಂಗೆ ಸಮರ್ಪಣಮೆಂದಸ್ಯೈಪು ರಂ ||
ಭಾತರುಣೀರತಂಗುಡಲವಳ್ಗೆ ಬೋಧಿಸೆ ತನ್ನನರ್ಚ್ಚಿಸಿ |
ಪ್ರಾರ್ತನನೊಯ್ಯಲೈದಿದಕೃತಾಂತನನದ್ದಿಸಿದಂ ಮಹೇಶ್ವರಂ || ೯೩

ನಾರಿ ಶರಂ ತದಂಗಜನೆ ಸಾರಥಿ ತತ್ಪದಶತ್ರುಮಿತ್ರರೇ |
ಸೇರಿದಗಾಲಿಗಳ್ತದಹಿತಂ ಪೆಡೆ ತದ್ಧೃತಮೇ ರಥಂ ತದಾ ||
ಧಾರಮೆ ಬಿಲ್ತದಗ್ರಚರತೃಪ್ತಿವಿಧಾಯಕಮುಶ್ವಮಾಗೆ ತ |
ನ್ನೋರಸಜಾತಿಜಾತಪುರಮಂ ಪುರವೈರಿ ಕನಲ್ದು ಸುಟ್ಟಿದಂ || ೯೪

ವರಕಂಜೋದ್ಭವನಿಂ ವರಂಬಡೆದು ದಿಕ್ಪಾಲರ್ಕ್ಕಳಂ ಪೊಯ್ದು ತ |
ತ್ತರುಣೀವೃಂದಮನೆಯ್ದೆ ತಂದು ಸೆರೆಯಂ ದೈತ್ಯಾರಿಯಂ ಕಟ್ಟಿಮೇ ||
ಲಿರದಿಟ್ಟಂದು ಜಲಂಧರಂ ಬರೆ ಜಯಾರ್ಥಂ ಪಾರ್ಥಿಯೊಳ್ಚಕ್ರಮಂ |
ಬರೆದಂಗುಷ್ಠದಿನೆತ್ತಿಸುತ್ತೆ ತಲೆಗೊಯ್ದಂ ಶರ್ವನಾಚಕ್ರದಿಂ || ೯೫

ಪುಟ್ಟಿಪೆನೀಜಗತ್ತ್ರಯಮನೆನ್ನೊಳೆ ವಿಶ್ವಮಿದಿರ್ಕ್ಕುಮಾಗಳುಂ |
ನೆಟ್ಟನೆ ಬೊಮ್ಮನಾನೆನುತಹಂಕರಿಸುತ್ತಿರೆ ವಿಷ್ಣು ವೇದಮಂ ||
ಪುಟ್ಟಿಸಿದಾತನೆಮ್ಮಸಭವಂ ಪರಬೊಮ್ಮವೆನಲ್ಕನಲ್ದು ಬೊ |
ಬ್ಬಿಟ್ಟೊಡೆ ಬೊಮ್ಮನೊಂದುತಲೆಯಂ ಪರಿದಾಂತನವಂ ಸದಾಶಿವಂ || ೯೬

ದಕ್ಷನೊಡರ್ಚ್ಚೆ ಮಾರಣಮಹಾಮಖಮಂ ನಿಜವೈರದಿಂದೆ ಕೇ |
ಳ್ದಕ್ಷಯರೂಪೆ ತತ್ಸುತೆಯೆನಿಪ್ಪುದನಂಬಿಕೆ ಪೋಗಿ ಸೀಗೆ ಕೇ ||
ಳ್ದಾಕ್ಷಣಮುಗ್ರಮೂರ್ತಿದಳದೆಯ್ದಿ ತದಾಪ್ತರನಿಕ್ಕಿ ಸೊರ್ಕ್ಕಿದಾ |
ದಕ್ಷನ ಮಸ್ತಕಂಗಡಿದು ವೀರಸಮಾಹ್ವಯನಾದನೀಶ್ವರಂ || ೯೭

ಘೋರಹಿರಣ್ಯಕಾಕ್ಷರುಧಿರೋನ್ಮದಿರಾಮದಮತ್ತನಾಗಿ ದೈ |
ತ್ಯಾರಿ ನೃಸಿಂಹಮೂರ್ತಿದಳೆದರ್ದಿಸುತಂತಿರೆ ಲೋಕಮಂ ಮನೋ ||
ಜಾರಿ ವಿಚಾರಿಸುತ್ತೆ ಶರಭಾಕೃತಿದಾಳ್ದಿರದೈದಿ ಸೀಳ್ದು ರ |
ಕ್ತಾರುಣಚರ್ಮಮಂ ತಳೆದತಿದ್ಯುತಿ ತತ್ತಮಮಂ ಕಳಲ್ಚಿದಂ || ೯೮

ಕ್ಷೀರಾಂಭೋರಾಶಿಯೊಳ್ಶ್ರೀಪತಿಯಿರೆಬಿದಿಯೇಳ್ತಂದುಯುದ್ಧಂಗುಡಲ್ತ
ಳ್ತೋರೋರ್ವ್ವರ್ಪ್ಪಾಶುಪತ್ಯಾಸ್ತ್ರದಿನಿಡೆಶಿಖಿಯಿಂಬೇಯೆ ಲೋಕಂಕೃಪಾಕೂ ||
ಪಾರಂ ವಾರಾಶಿಯೊಳ್ಪಜ್ಜಳಿಸಿ ಬಳೆದು ತನ್ಮಧ್ಯದೊಳ್ಲಿಂಗರೂಪಂ |
ಸಾರುತ್ತಂದರ್ಧನಾರೀಶ್ವರನವರ್ಗ*ಖಿಳರ್ಗ್ಗಳ್ಕರಿಂ ತಣ್ಪುಗೈದಂ || ೯೯

ಮಗಳೆಂದೀಕ್ಷಿಸದಂಟೆಭಾರತಿ ಮೃಗೀರೂಪಿಂದವಳ್ಪಾರೆ ತಾಂ |
ಮಿಗೆ ತನ್ನೊಂದುಪಶುತ್ವಮಂ ಪ್ರಕಟಿಪಂತಾಂತಲ್ಲಿ ತದ್ರೂಪಮಂ ||
ಬಗೆಗೊಂಡಟ್ಟಲವಳ್ಕಿವಂಗವಿದಿಡಲ್ಸ್ವಾಕಾರದಿಂ ವೇದಮಂ |
ಘೃಗಳಂ ಘ್ರಾಣಿಸುತೆಯ್ದೆ ತಚ್ಛಿರಮನೆಚ್ಚಂಕೇಳ್ಕಿರಾತೇಶ್ವರಂ || ೧೦೦

ಆರಡಿಗೊಂಡು ಮೂರಡಿಯನಾಬಲಿಯಿಂ ಬಲಿಗೊಂಡು ಭೂಮಿಯಂ |
ಮೂರಡಿಯಾಂತು ಮೀರಿ ಬಳೆದಿತ್ತನಸಿಕ್ಕಿ ರಸಾತಳಕ್ಕೆ ನಿಂ ||
ಪಾರಡಿವಣ್ಣದಾಗಸಕೆ ಕಾಲಿಡೆ ಖಂಡಿಸೆ ಬೊಮ್ಮನಿಟ್ಟನೀ |
ರ್ಮಾರಡಿಯಿಂದೆ ಕೊಳ್ವನನೆ ಕೊಂದವನಸ್ಥಿಯನಾಂತನಾಹರಂ || ೧೦೧

ಸುಣ್ಮಣಲಿಂದೆ ಮಾಡಿ ಶಿವಲಿಂಗಮನರ್ಚಿಸಿ ಧೇನುವೃಂದಮಂ |
ಜಾಣ್ಮೆಗೆ ತಂದು ಪಾಲ್ಗರೆಯೆ ಕಂಡೊದೆಯುತ್ತಿರೆ ತಂದೆ ಬಂದದಂ ||
ಪೊಣ್ಮೆ ಕನಲ್ಕೆ ಕೈಗೊಡಲಿಯಿಂದವನಂ ಪೊಡೆದಿಕ್ಕಿ ಮಿಕ್ಕು ಕೈ |
ಗಣ್ಮಿದಚಂಡನೆನ್ನಸುತನೆಂದು ಗಣೇಶತೆಯಿತ್ತನೀಶ್ವರಂ || ೧೦೨

ದೂರ್ವಾಸಂ ಶಂಭುನಿರ್ಮಾಲ್ಯಮನಮರವರಂಗೀಯೆ ತಾಸೊಲ್ಲದಿರ್ಪ |
ಗರ್ವಂಗಂಡಬ್ಧಿಯೊಳ್ಮೀಣ್ಣೆರಪೆ ಸಿರಿಯನೀಶಾಜ್ಞೆಯಿಂ ಶೇಷಸಂ ತಂ ||
ದುರ್ವೀಧ್ರುಕ್ಕಪ್ಪಿರ್ ಸುತ್ತುತ್ತೊಡನೆ ಕಡೆಯೆ ದೇಪಾದಿ ದೇವರ್ಮಹಾಶಾ|
ಪೂರ್ವಂ ಪುಟ್ಟಿರ್ದಮೃತ್ಯುಪ್ರಭವಿಷಮನದಂ ಕಂಠದೊಳ್ಸರ್ವನಾಂತಂ|| ೧೦೩

ಸುರರಿಪುಬಾಧೆಗಳ್ಕತೆ ಮುರಾರಿ ಪುರಾರಿಪದಾರವಿಂದಮಂ |
ಸರಸಿಜದಿಂ ಸಹಸ್ರದೆ ಸಮರ್ಚಿಪವೇಳೆಯೊಳೊಂದು ಕುಂದೆ ಕ ||
ಣ್ಮರಲನನೂನಭಕ್ತಿಭರದಿಂ ತೆಗೆದೇರಿಸೆ ಮೆಚ್ಚಿ ಚಕ್ರಮಂ |
ಸುರಚಿರಲೋಚನಾಬ್ಜಮನಮರ್ತ್ಯನದೀಧರನಿತ್ತನುರ್ವಿಪಾ || ೧೦೪

ವಾರಣದೈತ್ಯವೈರಿ ವರವಾರಣವಕ್ತ್ರನನೊಲ್ದು ಪೆತ್ತು ದಿ |
ಪ್ಯಾರುಣರತ್ನಮಂಡನಮನಿತ್ತು ಚತುರ್ದಶವಿದ್ಯೆಗಳ್ಗಿವಂ ||
ಕಾರಣನೆಂಬವೋಲ್ನೆಗಳ್ದು ಕಟ್ಟಿ ಗಣಾಧಿಪಪಟ್ಟಮಂ ಭವೋ |
ತ್ತಾರಣಪಂಚವಕ್ತ್ರನೆಸೆದಂ ಕನಕಾದ್ರಿಯೊಳದ್ರಿಜಾನ್ವಿತಂ || ೧೦೫

ಅಸುರನ ಬಾಧೆಗಳ್ಕಿಶಿಖಿಯಂ ಕರೆದಟ್ಟೆ ಮೃಡಂ ಮೃಡಾನಿಯೊ |
ಳ್ನಸಿಲೆಸಪಲ್ಲಿಗೆಯ್ದುತೆ ತದುದ್ಭವವೀರ್ಯಮನೀಂಟೆ ವಹ್ನಿವ ||
ಕ್ತ್ರಸಮಿತಿ ಗರ್ಭವಾಂತು ಶರದೊಳ್ಬಸಿರಂಕೊರೆದಿಕ್ಕೆ ಕೃತ್ತಿಕಾ |
ವಿಸರವಿವರ್ಧಿತಂ ಗುಹನಮಾತ್ಮಯನೊಪ್ಪಿದನಾಮೃಡಾಂಕದೊಳ್ ||೧೦೬

ಪದಕಟಕಾಹಿಗಳ್ಕೆ ಕಳೆಗುಂದೆ ರವೀಂದುಗಳಲ್ಲಿ ಕಿಳ್ತು ಸೂ |
ಸಿದನವರೌಪ್ಯಕಿಂಕಿಣಿಗಳಂತಿರೆ ತೋರೆ ಪೊದಳ್ದತಾರೆಗಳ್ |
ಏದಿತನಭಃಕಟಾಹತಟಮಂ ಬಗಿದುರ್ವ್ವಿ ಶಿವೈಕಪಾದಮಾ |
ಳ್ದುದು ಬಹಿರಂಬುಸಂಭವನವಾಂಬುಜಮೆಂಬಬೆಡಂಗನುರ್ವ್ವಿಪಾ || ೧೦೭

ತಿಳಿಯುಡೆ ಮುಕ್ತಿ ತನ್ನಪದಭಕ್ತಿಯಿನಪ್ಪುದೆನಿಪ್ಪುದಂ ಕಳಂ |
ಕಳಿಯದೆ ಚಿತ್ತದೊಳ್ನೆಗಳ್ದ ಕರ್ಮಕಲಾಪಮನನ್ಯಮಾರ್ಗದೊಳ್ ||
ತೊಳಲಿ ಭವಕ್ಕೆ ಒರ್ಪ್ಪಪಶುವರ್ಗಕೆ ಬೋಧಿಸಿ ಮೋಕ್ಷಮೀಯಲೆಂ |
ದೆಳಸಿ ಕೃಪಾಳು ತಾಳ್ದನೆಲೆಚೋಳ ಸುಖಾವಹಮೂರ್ತಿಲೀಲೆಯುಂ || ೧೦೮

ವಿಳಸದ್ವಿದ್ಯುಜ್ಜಟಾಮಂಡಳಮಮರನದೀಚಂದ್ರಖಂಡಾನ್ವಿತಂ ಮಂ |
ಜುಳಗಂಡಂ ಸರ್ಪಕರ್ಣಾಭರಣಕಲಿತಮಾಸ್ಯಂ ಮೃದುಸ್ಮೇರಮಿಂದೂ ||
ಜ್ಜ್ವಳಮಂಗಂ ಕಣ್ಗೆ ಚೆಲ್ವಾಗಿರೆ ವಟತರುಮೂಲಸ್ಥಿತಂ ಜ್ಞಾನಮುದ್ರಾಂ |
ಗುಳಿಯಿಂ ಶಿಷ್ಟಪ್ರಬೋಧಪ್ರದನೆಸೆದನವಂ ದಕ್ಷಿಣಾಮೂರ್ತಿದೇವಂ|| ೧೦೯

ಹರಿಬೊಮ್ಮರ್ಜಗದೀಶ ರಾವೆನುತಹಂಕಾರಕ್ಕೆ ಪಕ್ಕಾಗುತಿ |
ರ್ಪ್ಪರೆ ಕಾದುತ್ತಿರೆ ಕೋಟಿಸೂರ್ಯರುಚಿಯಿಂ ತನ್ಮಧ್ಯದೊಳ್ಮೂಡಿ ತಾ ||
ನುರುಲಿಂಗಾಕೃತಿಯಾಗೆ ಸೂಕರಮರಾಳಾಕಾರದಿಂ ಪೋಗಿಯುಂ |
ಪರಪಸ್ಮೂಲಮನಾನನಾಬ್ಜಮನವಕ್ಕಾರ್ಣಲ್ಕದೇನಾರ್ತರೇ || ೧೧೦

ಕಳೆ ಸಿರಿ ಧರ್ಮಮುತ್ಸವಮಭೀಪ್ಸಿತಮಂಗಳಮಂದಮಾತ್ಮನಿ |
ರ್ಮಳತೆ ಚಿರಾಯು ವೈರಿಪುರಶೂನ್ಯತೆ ತಜ್ಜಯಮೇಳ್ಗೆಯಾರ್ಪ್ಪನ ||
ಗ್ಗಳಕೃತಿ ಶಾಂತಿಯೊಳ್ಪು ಬಲಮಾಶ್ರಿತರಕ್ಷಣೆ ಪೆರ್ಮೆ ಕೂರ್ಮೆ ವ |
ತ್ಸಳತೆ ಜಸಂ ಸುಲೀಲೆ ಸುಖಮುಜ್ಜ್ವಳವಿದ್ಯೆ ವಿಮುಕ್ತಿಯೆಂಬಿವಂ || ೧೧೧

ಕಂ|| ಪಡೆವಂ ಪ್ರಮೋದದಿಂ ಕೇ |
ಳ್ದೊಡೆ ಕೇಳ್ನರನಾವನಾದೊಡಂ ಪೊಡವಿಯೊಳೀ ||
ಮೃಡನ ಘನಪಂಚವಿಂಶತಿ |
ವಡೆದೀಲೀಲೆಗಳಸೆಲೆಸರೇಂದ್ರಲಲಾಮಾ || ೧೧೨

ವೃ ಎನೆ ಕೇಳ್ದಾನಂದದುಗ್ಧಾಂಬುಧಿಯೊಳೆಮುಳುಗುತ್ತೇಳ್ದವೊಲ್ಕಂಪಮುಂ
[ಜುಂ |
ಮನೆ ರೋಮಾಂಚಂಗಳುಂ ಸಂಜನಿಸೆ ಬಗೆಗಡರ್ಪ್ಪಾಗೆ ಕೌತೂಹಲಂಘೋಂ||
ಕನೆ ತಾನೇಳ್ದಂಘ್ರಿಪದ್ಮಕ್ಕಮರ್ದು ಮಣಿದುಬಾಳ್ದೆಂಕೃತಾರ್ಥಾತ್ಮನಾದೆಂ|
ಮುನಿಮುಖ್ಯಾರಾಧ್ಯ ನಿಮ್ಮಿಂದೆನುತೆ ನುತಿಸುತುಂಮಂತ್ರಿ ಯುಂತಾನುಮಿ
[ರ್ದರ್ ||೧೧೩

ಸಾರಸಾರಸಮಾನಲೋಚನಕಾಂತಕಾಂತಿಯುತಾನನೇ |
ಭೂರಿಭೂರಿಪುಸಂಘಸಂಹೃತಿಶಕ್ತಿಶಕ್ತಿಸಮನ್ವಿತೇ ||
ಮಾರಮಾರಣದಕ್ಷದಕ್ಷಮದಾಪಹಾಂಕವಿರಾಜಿತೇ |
ಧೀರಧೀರತಿಪಾಲಪಾಲನಶೀಲೆ ಪಾಲಿಪುದಂಬಿಕೇ || ೧೧೪

ಗದ್ಯ || ಇದು ವಿನಮದಮರವರಮಕುಟತಟಘಟಿತಮಣಿಗಣಮಹಾ
ಪ್ರಭಾಪಟಳಪರಿವೃತಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂ
ದ್ರಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾಸಿ
ತೋಭಯಕವಿತಾವಿಶಾರದ ಶ್ರೀಷಡಕ್ಷರದೇವವಿರಚಿತಮ
ಪ್ಪರಾಜಶೇಖರವಿಳಾಸವಿಪುಳಪ್ರಬಂಧದೊಳ್ಕಥಾವತ
ರಣಶಿವಲೀಲಾವರ್ಣನಂ ತೃತೀಯಾಶ್ವಾಸಂ
ಸಂಪೂರ್ಣಂ



# ಚತುರ್ಥಾಶ್ವಾಸಂ.

ಕಂ|| ಶ್ರೀಶರ್ವಾಣೀಹೃದಯಕು |
ಶೇಶಯಹಂಸಂ ನಿಜಾಂಘ್ರಿಸೇವಕಜನತಾ ಕು ||
ಪಾಶಹರಂ ಪಶುಪತಿಪರ |
ಮೇಶಂ ಪೊರೆಗೆಮ್ಮನಾವಗಂ ಶಿವಲಿಂಗಂ || ೧

ವೃ|| ಮುಡಿಗಂಪಿಂಗಾದ್ರ್ದಸಾತ್ರ್ತಂದೆರಗೆಪರಮೆಗಳ್ಮಂಜುಮಂಜೀರನಾದ |
ಕ್ಕೊಡನೊಂದೊಂದಾಗಿ ಪಿಂದೈತರೆ ವಿಮಳಮರಾಳಂಗಳಾಳೀಜನಂ ಪಿಂ ||
ಗಡೆಯೊಳ್ಕೂತ್ತ್ರೈದೆಶೋಭಾವತಿಮೃದುಗತಿಯಿಂಬಂದುಪೂವಿಲ್ವಿನಮ್ರಂ |
ಬಡೆವಂತಂಗಂ ಬಳುಂಕಲ್ಮಣಿದಳವರ ದಿವ್ಯಾಂಘ್ರಿಯೊಳ್ದೇವಿಯಾಗಳ್|| ೨

ಕಂ|| ಪರಸಿರದರಧಿಕೋತ್ಸವದಿಂ |
ಗುರುಗಳ್ಮಗುಳ್ದ*ವಳಮನದಭೀಷ್ಟಮನಿಂತೆಂ |
ದಿರದರಿದರ್ ಶಿವಶಿವ ಶಂ |
ಕರಶರಣರ ಮಹಿಮೆ ಮಹಿಮೆಗೆ ಸಾಧಾರಣಮೇ || ೩

ಧರಣಿಪನುಂ ಸಚಿವನುಮು |
ಜ್ಜರಿವಡುತಿರೆ ಮಗಳೆ ಬಾರೆನುತ್ತೀಕ್ಷಿಸಿ ಶಂ ||
ಕರನಡಿದಳಿರಂ ಜಾನಿಸಿ |
ತರಳೆಗೆ ಪಂಚಾಕ್ಷರೋಪದೇಶಂಗೆಯ್ದರ್ || ೪

ತರುಣಿ ಭವದೀಯಪುಣ್ಯೋ |
ದರದೊಳ್ಪುಟ್ಟಿಗುಮಿನಾನ್ವಯಾಂಬುಧಿಚಂದ್ರಂ ||
ಪರಮಂತ್ರಮಿದನೆ ಜಪಿಸು |
ತ್ತಿರೆ ತಪ್ಪದಿದೆಂದು ದೇಶಿಕಂ ಕರುಣಿಸಿದಂ || ೫

ಎನೆ ನಂಬಿ ನಲಿದು ಮನದೊ |
ಳ್ನನೆಕೊನೆವೋದಳ್ಗುರೂಕ್ತಿಯಂ ಬಗೆಗೊಂಡಳ್ ||
ಜನಪತಿಯ ವದನಮಂ ಕ |
ಣ್ಗೊನೆಯಿಂ ನಡೆನೋಡಿ ನಾಡೆ ಮುದಮಂ ತಳೆದಳ್ || ೬

ವ|| ಅನಂತರಂ

ಆದಂಪತಿಯ ಸಪರ್ಯೆಯ |
ನಾದಂ ಕೈಕೊಂಡು ನೆನೆದುದಂ ನೆಗಳ್ದು ಮಹಾ ||
ವೋದಂ ಮಿಗೆ ನಿಜದೇಶಕೆ |
ಪೋದರ್ಚರ್ದ್ಧನಶಿವಾರ್ಯರುತ್ತಮಕಾರ್ಯರ್ ||                                ೭

ವ|| ಅಂತವರ್ಪೋಗಲೊಡನಿತ್ತಲ್

ವೃ|| ಶಿವಲಿಂಗಾರ್ಚನೆಗೈವುತುಂ ಶಿವಕಥಾಪೀಯೂಷಮಂ ಕರ್ಣದಿಂ |
ಸವಿಯುತ್ತುಂ ಶಿವಯೋಗಿವೃಂದಚರಣಾಂಭೋಜಂಗಳಂ ಪೂಜಿಸು ||
ತ್ತವರಿರ್ವರ್ಗುರುವಿತ್ತಮಂತ್ರಮನದಂ ಚಿತ್ತಾಂತದೊಳ್ಧ್ಯಾನಿಸು |
ತ್ತೆ ವಧೂವಲ್ಲಭರಿರ್ದ್ದರುತ್ಸವಯುತರ್ನಾನಾವಿನೋದಂಗಳಿಂ ||                 ೮

ವ|| ಅಂತಿರ್ಪಿನಮೊಂದುದಿವಸಂ

ವೃ|| ಮೊಗದೊಳಗೊಂದೆರಳ್ಮೊಡವಿಮೂಡೆ ಚಿಮುರ್ನಸುದೋರೆ ಕಾಂತಿ ಕೈ |
ಮಿಗೆ ಕದಪುಜ್ಜ್ವಳಂಬಡೆಯೆ ಮೆಲ್ಲಗೆ ಲಜ್ಜೆಯನೊತ್ತುಗೊಂಡು ತಾ ||
ನೊಗೆಯೆ ಘನಸ್ತನಂ ಬಿಗಿಯೆ ಸುಯ್ಯಿಸುಪಾಂತಿರೆ ಲೋಚನಾಂಚಲಂ |
ಸೊಗಯಿಸೆ ಕೆಂಕವಾಗಿ ಸತಿ ಪುಷ್ಪಿತೆಯಾದಳದೊಂದುಜಂಕದಿಂ ||               ೯

ಕರತಳದಲ್ಲಿ ತಾಳ್ದಸೆಳೆಯುಟ್ಟಿಳಗೆಂಪಿನಸೀರೆ ರನ್ನದಾ |
ಭರಣಮುರೋಜದೊಳ್ತಳೆದಕುಂಕುಮಲೇಪನಮುಂದವೀಯೆ ಜಿಂ ||
ಬರುಚಿರದಂತವಾಸೆ ವಸಿತಾಮಣಿ ಮಾಣಿಕವಾಂತು ನೋಳ್ಪುಭೂ |
ವರನ ವಿಲೋಚನಕ್ಕೆ ಪೊಸಮಾಣಿಕಪುತ್ತಳಿಯಂತಿರೊಪ್ಪಿದಳ್ ||                 ೧೦

ವ|| ಅಂತೆಸೆದು ಕಾಂತೆ ಚತುರ್ಥದಿವಸದೊಳ್ಕೆಳದಿಯರ್ಸುವಸುಗಂಧ ಸಲಿಲದಿಂ ಮಂಗಳಮಜ್ಜನಗೈದನಂತರಂ

ಕಂ|| ಪರಿಪೂರ್ಣಚಂದ್ರಬಿಂಬದ |
ಸಿರಿ ಕೆಂಗದಿರಂ ಕಳಲ್ಚಿ ತಳೆವಂತಿರೆ ಬಂ ||
ಧುರಚಂದ್ರಿಕೆಯಂ ರಾಗಾಂ |
ಬರಮಂ ತಾನುಳಿದು ತಳೆದಳಮಳಾಂಬರಮಂ || ೧೧

ವೃ|| ವಿಳಸತ್ಕರ್ಪೂರಸಂಮಿಶ್ರಿತಮಳಯಜಲಿಪ್ತಾಂಗಿ ಮುಕ್ತಾವಳೀಮಂ |
ಜುಳಭೂಷಾಭೂಷ್ಯೆ ಮಲ್ಲೀಕುಸುಮಮಿಳಿತಧಂಮಿಲ್ಲೆ ಶುಭ್ರಾಂಬರಶ್ರೀ ||
ಕಲಿತಶ್ರೋಣೀತಟಪ್ರೋಜ್ಜ್ವಳೆ ಭಸಿತಲಲಾಮಾಭಿರಾಮಾರ್ಧಚಂದ್ರಾ |
ಭಲಲಾಟಸ್ಥಾನೆ ಚಂದ್ರೋಪಳದಪರಿಜಿದೆಂಬಂತೆ ಕಣ್ಗೊಪ್ಪುತಿರ್ದಳ್ || ೧೨

ವ|| ಆಸಮಯದಲ್ಲಿ

ವೃ|| ವರರಾತ್ರೀಕಾಂತೆಸೂರ್ಯಾಸ್ತಮಯಸಮಯದೊಳ್ಸಂಜೆಗೆಂಪೆಂಬರಾಗಾಂ
ಬರಮಂ ತಾನುಟ್ಟು ತೊಟ್ಟೊಪ್ಪುವನವಭಗಣಸ್ವಚ್ಛಮುಕ್ತಾಳಿಯಂ ಸಿಂ ||
ಗರಿಸುತ್ತುಂ ಪದ್ಮಕೋಶಸ್ತನೆ ಚಪಲಚಕೋರಾಕ್ಷಿ ನಿಂದಿರ್ದೊಡಂದಿಂ |
ದಿರದಿಕ್ಕೆಂಬಾಳಿ ತೋರ್ಪಾಮುಕುರಮೆನೆ ಕರಂ ಮೂಡಿದತ್ತಬ್ಜಬಿಂಬಂ ||೧೩

ವ|| ಅಂತುಮಲ್ಲದೆಯುಂ

ವೃ|| ತನಗಿದಿರ್ವಂದು ನಿಂದರಜನೀವಧುವಂ ನಸುನೋಂಕಿದಾಕ್ಷಣಂ |
ಘನತಿಮಿರಾಸಿತಾಂಬರಮದೊಯ್ಯನೆ ಜಾರೆ ಸುಧಾಂಶುವಲ್ಲಭಂ |
ಮನದೊಲವಿಂದೆ ತನ್ನ ವಿತತಾಂಶುಕಮಂ ಪೊದಿಸುತ್ತೆ ಕೂಡುತಿ |
ರ್ಪನಿತರೊಳಲ್ಲಿ ಜೆಲ್ಲಿದಳಕಾಳಿಯ ಮೊಗ್ಗೆಗಳಲ್ತೆ ತಾರೆಗಳ್ || ೧೪

ವ|| ಎಸಿಸಿ ರಂಜಿಸುತ್ತುಮಿರ್ಪಿನಮಾಗಳಮೃತಮತಿಮಹಾದೇವಿ ಪರ್ವಿ ದಬೆಳ್ದಿಂಗಳೊಳ್ಬೆಳ್ದಿಂಗಳಧಿದೇವಿಯಂತೆ ಬೆಳ್ಸಸದನಂಬಡೆದಿರ್ದು ಮಂಗಳಾಂಗಿ ಲಿಂಗಪೂಜಾಗೃಹಂಬೊಕ್ಕು ಸಾಂಗಮೆನೆ ಲಿಂಗಪೂಜೆಗೆಯ್ದು ಸಿಜೇಶ್ವರಸೊಡನೆ ಹರಪ್ರಸಾದಸುಧಾಸ್ವಾದನಂಗೆಯ್ದು ಪರಿತುಷ್ಟಿವಡೆದು ಪರಿಮಳಿಪಕೈಗಟ್ಟಿಯಂ

ಕೊಂಡು ಕರ್ಪೂರಪರಿಮಳಂಬೆರೆದಸರಸತಾಂಬೂಲಮಂ ಸಖಿ ನೀಡೆ ತಳೆದು ವಿವಿಧ ವಿನಿಯೋಗದ ವಿಳಾಸಿನಿಯರ್ಬ್ಬಳಸಿ ಬರೆ ಮಣಿಪಾವುಗೆಯಂ ಮೆಟ್ಟಿ ವಿಳಾಸಂ ಮಿಗೆ ವಿದಗ್ಧಸಖಿಯ ಕರತಳಮಂ ಪಿಡಿದು ಮುಡಿಗಂಪಿಂಗೆ ಪರಮೆವರಿಗಳೆರಗಿ ನೇವರಿಸಿದಳಕಮುಂ ಕೆದರದಂತೆ ಕೆಳದಿ ಪಿಡಿದ ಕೆಂಡಸಂಪಗೆಯ ಬಿರಿಮುಗುಳಾಲ ವಟ್ಟಂ ಬಟ್ಟಮೊಗಕ್ಕೆ ಕಟ್ಟಿದಿರೊಳೆಸೆವಬಟ್ಟವೆರೆಯ ದಿಟ್ಟಿ ತಾಗದಂತೆ ಮರೆಗೈ ದಪ್ಪೋಲ್ಮೆರೆಯೆ ಮಿರುಪಸುಲಿಪಲ್ಲ ನುಣ್ಬೆಳಗು ಕಿರುವೆಳ್ದಿಂಗಳಂ ಕರೆಯೆ ಕಡೆಗಣ್ಣ ಕಾಂತಿ ಕಾವನಲರಂಬಂ ಕೆದರೆ ಬಿಂಬಾಧರದ ಕೆಂಬೆಳಗು ಮುಂಬರಿದು ಕುಂಭಕು ಚಕ್ಕೆ ಕೆಂಬರಲ ಸರಮಂ ಕಳೆಗೊಳಿಸೆ ಉಡೆನೂಲೊಳ್ತೊಡರ್ಚ್ಚಿದ ವಿವಿಧನವರತ್ನ ಕಿರಣಮುಟ್ಟಧವಳಾಂಬರಮಂ ಚಿತ್ರಾಂಬರಮನೊಡರ್ಚ್ಚೆ ಮಂಜುಮಂಜೀರ ಸಂಜನಿತಧ್ವನಿ ಪದನಖಮಯೂಖಮಾಲಾನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು ಮುನ್ನಂ ಕೈಗೆಯ್ದು ತನ್ನ ಬರವಂ ಬಯಸುತ್ತೆ ಮನೋರಮಣ ನಿರ್ದ್ದಮಣಿಭವನಮಂ ಸಾರ್ವ್ವಲ್ಲಿ ನೆವಂಗೊಂಡು ಕೆಳದಿಯರ್ತ್ತೊಲಂಗೆ ವಿಳಾಸ ದಿಂದೊಳಪೊಕ್ಕಳವಿಗಳಿದಸಂತಸದಿಂ ಕಾಂತನಿರ್ದ್ದಸಿರಿಮಂಚದಂಚೆದುಪ್ಪುಳಡಿಕಿ ಲ್ವಾಸಿನೊಳ್ಮೆಲ್ಲನೆ ಚೆಲ್ಲದಿಂಕುಳ್ಳಿರ್ದ್ದುಬಳ್ಳಿವರಿವನೇಹದಿಂದೊಡನೆ ಸಡಗರಿಸಿ ಗಾಡಿ ಮಿಗೆ ನೋಡುತ್ತು ಮಿರ್ಪ್ಪರ್ಗಳ್

ಕಂ|| ಮೊಳೆದೋರ್ಪ್ಪ ಪುಳಕಮಂಗದೊ |
ಳೆಳಸುವಕರಣಂಗಳುಣ್ಮು ವಿನಿವಾತು ಸುಖಂ ||
ದಳೆವಬಗೆ ಮೃದುಹಸಿತಮುಂ |
ಜುಳವದನಂ ಮೆರೆಯೆ ಸಾರ್ದ್ದರೊರ್ವ್ವರನೊರ್ವ್ವರ್ || ೧೩೪

ಕಾರಿರುಳ ತರಳತಾರಗೆ |
ಗೋರಗೆಯೆನೆ ಕುರುಳೊಳೆಸೆಯೆ ಮಲ್ಲಿಗೆ ಮಿಗೆ ನೀ ||
ಹಾರಕರವದನೆ ಮದನಾ |
ಕಾರಮನೋರಮಣನಂಕದೊಳ್ಕುಳ್ಳಿರ್ದ್ದಳ್ || ೧೩೫

ವೃ|| ನಿಮಿರ್ದ್ದಂಗಂ ಕಡುಚೆಲ್ವನೀಯೆ ವಳಿಗಳ್ಮೈಗುಂದೆ ಮಧ್ಯಂ ಬಳುಂ |
ಕೆ ಮರಲ್ದಕ್ಷಿ ವಿಳಾಸಮಂ ಕರೆಯೆ ಕಕ್ಷಸ್ಥಾನದೊಳ್ಗಂಪು ತೀ ||
ಡೆ ಮನೋಜ್ಞಸ್ತನಮುಬ್ಬೆ ಕಂಕಣಝಣತ್ಕಾರಂ ಕರಂ ಪೊಣ್ಮೆಸಂ |
ಭ್ರಮದಿಂ ತೋಳ್ಗಳನೆತ್ತಿ ಕಂಚುಕಮನಾಗಳ್ವಾಣಿಯಿಂ ನೂಂಕಿದಳ್ ||೧೭

ವ|| ಅನಂತರಂ.

ವೃ|| ಪದೆದಾಲಿಂಗಿಸಿ ಮುದ್ದುಗೈದು ಮೊಗದೊಳ್ವಕ್ತ್ರಾಬ್ಜಮಂ ಸಾರ್ಚಿಸಾ|
ರ್ಚಿದರಾಗಾಧರಮಂ ಕರ್ದುಂಕಿ ರತಿರಾಗಾಂಭೋಧಿ ಮೈವೆರ್ಚ್ಚುವಂ ||
ದದೆ ನಾನಾಕಳೆಗೂಡಿ ತಳ್ತು ತನುವೊಂದೆಂಬಂತೆ ಸಂಭೋಗಸಂ |
ಪದಮಂ ತಾಂ ಪಡೆದಂ ಪಯೋಜಮುಖಿಯೊಳ್ಭೂಪಾಲಪುಷ್ಪಾಯುಧಂ||೧೮

ಜನಿತಾನಂದಾಶ್ರುಪೂರ್ಣಂ ನಯನಮಧಿಕವರ್ಘರ್ಮಾಂಬುಕೀರ್ಣಂ ಕಪೋಲಂ|
ತನುರೋಮಾಂಚಪ್ರಯುಕ್ತಂಮೃದುಹಸಿತಸುಧಾಸಿಕ್ತಮಾಸ್ಯಾಂಬುಜಂಜುಂ
ಬನಕಿಂಚಿನ್ಮುಕ್ತರಾಗಂ ಲಸದಧರದಳಂ ಚಿತ್ತಮಾತ್ತಾನುರಾಗಂ |
ಸ್ತನಮಾಲುಪ್ತಾಂಗರಾಗಂರಸಭರಜಘನಾಭೋಗಮನ್ಯೋನ್ಯಯೋಗಂ ೧೯

ತನುಲತೆಘರ್ಮವಾರಿಕಣಕುಟ್ಮಳಮಾಂತಿರೆ ವಕ್ತ್ರಪದ್ಮದೊ |
ಳ್ಜನಿಯಿಸೆ ಸೊಂಪು ಕಂಪುವೆರಸಿರ್ದ್ದಳಸುಯ್ಯೆಲರುರ್ವ್ವಿ ತೀಡೆ ಭೋಂ ||
ಕನೆ ಕುರುಳೆಂತುಂಬಿ ನಲಿದಾಡೆ ತಳಿತ್ತಿರೆ ರಾಗವಾಂತು ತ |
ನ್ಮನವೆಸಿಸಿರ್ಪ್ಪವಾವು ರತಚೈತ್ರದೊಳೊಪ್ಪಿದರೊಲ್ದುಕಾದಲರ್ || ೨೦

ವ|| ಇಂತುಸಮಾನುರಾಗಸಂಜನಿತಸಮರತಿಸುಖಾನುಭವಪರಿಣತಾಂತಃ
ಕರಣರಾಗಿ ಕಾದಲರ್ಸ್ಸುಖನಿದ್ರೆಗೈಯುತ್ತುಮಿರೆಯಿರೆ ನಿಶಾವಸಾನಸಮಯದಲ್ಲಿ

ವೃ|| ಮದವದ್ದಿಗ್ಗಜೇಂದ್ರಮಂ ಸುರಸರಿತ್ಸಂಜಾತಕಂಜಾತಮಂ |
ಸದಲಂಕಾರವೃಷೇಂದ್ರನಂ ವಿತತರೋಚಿರ್ಗ್ಗಾತ್ರನಂ ಮಿತ್ರನಂ ||
ಉದುಗಲ್ಗನ್ನಡಿಯಂ ಸುಧಾಬ್ಧಿಯನಮರ್ತ್ಯಾಧಾರವಂ ಮೇರುವಂ |
ಮುದದಿಂ ಸ್ವಪ್ನದೆ ಕಂಡಳಾವಧು ಕಳಾಶ್ರೀಸಾಂದ್ರನಂ ಚಂದ್ರನಂ|| ೨೧

ವ|| ಮತ್ತಮಾಗಳ್

ವೃ|| ನೆರೆಯೊಳ್ಕೈದಿಲೆ ನಾಣ್ಚಿಪಂತೆ ನಗೆ ತಾರಾನಾರಿಯಸ್ತೋಮದ ಬಂ |
ದಿರುಳೆನ್ನಂ ಕರದಿಂದೆ ಮುಟ್ಟಿದನಿವಂ ದೋಷಾಕರಂ ವಕ್ತ್ರಮಂ ||
ಭರದಿಂ ಮುಚ್ಚಿದೆನೆಂದಿನಂಗಳೆನಿನಾದವ್ಯಾಜದಿಂ ಪೇಳೆ ತಾ |
ವರೆ ಪಾದಾಗ್ರದೆ ಸೂಂಕಿದಂ ಮುಳಿದವಂ ವಾರಾಶಿಯೊಳ್ಚಂದ್ರನಂ|| ೨೨

ಕಂ|| ದಿನಮಣಿ ಸೀನೆಲೆವನಿತಾ |
ಜನಮಣಿಯಾನೆಂದು ಚುಂಬಿಸಿದಪೂರ್ವದಿಶಾಂ ||
ಗನೆಯ ಮುಖಕುಂಕುಮಂ ನೆ |
ಟ್ಟನೆ ತಳ್ತಂತೆಸೆದುದರುಣರುಚಿ ದಿನಕರನಾ || ೨೩

ವ|| ಮತ್ತಂ

ಕಂ|| ಭುವನಜಭವಾಂಡಭವನಕೆ |
ಸವೆದುರುರವಿಬಿಂಬಮೆಂಬಬಾಂದಣದೊಳಪೊ ||
ಕ್ಕವಿರಳತದಂಡದ ಬಹಿ |
ಸ್ಸುವರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ || ೨೪

ವೃ|| ಪರೆದಿರೆ ನುಣ್ಗುರುಳ್ಗೊಸಲೊಳಾಳ್ದಿರೆ ಕಣ್ಗಡೆ ಕೆಂಪಸಿಟ್ಟಕ |
ಸ್ತುರಿಯ ಲಲಾಮಮುಜ್ಜಳಿಯಿಂದಂತಿರದೊಪ್ಪಿರೆ ಕೇಶಬಂಧಮೊಂ ||
ದಿರೆ ಶಿಥಿಲತ್ವಮಂ ನಸುಬೆಮರ್ಕುಚಮಧ್ಯದೊಳುಣ್ಮೆ ಸುಯ್ಯೆಲ |
ರ್ತಿರಹರವಾಂತು ಸೂಸೆ ಸತಿಯುಪ್ಪವಡಂಬಡೆದೊಪ್ಪಿತೋರಿದಳ್ || ೨೫

ವ|| ಆಗಳ್

ಕಂ|| ಜಳಪಕ್ಷಿಗಳುಲಿಯಿಂದಂ |
ಕಳಹಂಸಂ ಕಮಳತಳ್ಪದಿಂದೇಳ್ವವೋಲೊ ||
ಲ್ದಿಳೆಯರಸನೆಳ್ದನಾಮಂ |
ಗಳಪಾಠಕರುಲಿಯಿನಮಳತಳ್ಪಸ್ಥಳದಿಂ || ೨೬

ವ|| ಅಂತಿರ್ವರುಮೇಳ್ದು ಶಿವಸ್ಮರಣಪರಿಣತಾಂತಃಕರಣರುಮಪೂರ್ವ ಸುರಭಿಜಲಪರಿರಚಿತಸ್ನಾನರುಂ ಪರಿವೃತಧೌತವಸನಸಮಂಚಿಕೋಮಳಕಳೇವರರುಂ ವಿರಚಿತಶಿವಲಿಂಗಪೂಜಾನೂನವಿಧಾನರುಂ ತತ್ಪದಾಂಬುಪ್ರಸಾದಾಸ್ವಾದನಾನಂದಕಂದಳಿತಹೃದಯರುಂ ಯಥೋಚಿತಪ್ರಧಾನನಾನಾದಾನವಿಧಾನಸನ್ಮಾನಮಾನಿತಾಸಮಾನಮಹೇಶ್ವರ ಪ್ರತಾನರುಮಭಿನವಾಭರಣಗಣಪರಿಕಲಿತದಿವ್ಯಾಂಗರುಮತಿಸು ಗಂಧತಾಂಬೂಲಮಧುರತರಮುಖಾಂತರ್ವಳಯರುಮಮೃತಮತಿಸತ್ಯೇಂದ್ರ ನವೇಂದ್ರರತ್ಯಂತಪ್ರಮೋದದಿಂ ರತಿಮದನರಂ ಪಳಿವವಿಳಾಸದಿಂ ಕತಿಪಯಾಪ್ತಸಖೀಜನಂಬೆರಸು ಕೇಳೀನಿಳಯದ ಕನಕರತ್ನಕಪರ್ಯಂಕಪೀಠಮನಳಂಕರಿಸಿ ಕುಳ್ಳಿರ್ದಾಗಳ್

ಕಂ|| ಮೊಗಸಸಿ ತಿಳಿಜೊನ್ನಮನೊ |
ಲ್ದುಗುವಂತಿರೆ ತುಳ್ಕೆ ರದನರುಚಿ ರಮಣಂಗಾ ||
ಮೃಗಲೋಚನೆ ಪೇಳ್ದಳ್ಮದ |
ಮೊಗೆತರೆ ತಾಂ ಕಂಡಕನಸನೆಲ್ಲಮನಾಗಳ್ || ೨೭

ಕೇಳ್ದದನೊಂದಿನಿಸುಳಿಯದೆ |
ತಾಳ್ದತಿಮುದಮಂ ತನೂರುಹಂ ಗುಡಿಗಟ್ಟ ||
ತ್ತೇಳ್ದಿರೆ ತನುವೊಳ್ತರುಣಿಗೆ |
ಪೇಳ್ದಂ ತತ್ಫಳಮನರಸನಿಂತೆಂದಾಗಳ್ || ೨೮

ವೃ|| ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ |
ಹರಭಕ್ತಂ ಕಮಳಾಪ್ತನಿಂ ಪ್ರಬಳತೇಜೋಯುಕ್ತನಾದರ್ಶದಿಂ ||
ಪರಸಂಪ್ರೀತಿದನಬ್ಧಿಯಿಂದತಿಗಭೀರಂ ಮೇರುವಿಂ ಭೂಮಿಭೃ |
ದ್ವರನಬ್ಜಾಹಿತನಿಂಕಳಾನಿಧಿ ಕುಮಾರಂ ಪುಟ್ಟುವಂ ನಿಶ್ಚಯಂ || ೨೯

ವ|| ಎಂದುಮನೋರಮಣನ ಮಾತಂ ಮನದೆಗೊಂಡು ಮನೋರಥಂ ಕೈಸಾರ್ದಂತೆ ನಂಜ ನಲವೇರಿ ಮೀರಿ ಪರಮಹರ್ಷಮನೊಳಕೊಂಡಿರುತ್ತುಮಿರೆಯಿರೆ

ಕಂ|| ಹೃದಯದೊಳೊದವಿದಶಿವಮಂ |
ತ್ರದ ಕಳೆ ಸುಮುಹೂರ್ತದೊಳ್ಳೈವಪ್ರೇರಣೆಯಿಂ ||
ಸುದತಿಯ ಪುಣ್ಯೋದರದೊ |
ಳ್ಪದಪಿಂದಿಳಿತಂದು ನೆಲಸೆ ಬಳೆದುದು ಗರ್ಭಂ || ೩೦

ವೃ|| ವಳಿಗಳ್ಪಿಂಗಿದುವಾಸ್ಯವಿಂದುರುಚಿಯಂ ಕೈಕೊಂಡುದಾನಾಭಿ ಗು |
ಣ್ಪಾಳಿದೊಪ್ಪಿತ್ತು ವಿಲಾಸಯಾನಮದು ಮಾಂದ್ಯಂಬೆತ್ತುದಂಭೋಜಕು ||
ಟ್ಮಳವಕ್ಷೋರುಹದಗ್ರಮಾಳ್ದುದೆಳಗಪ್ಪಂ ನುಣ್ಣಿದಿರ್ದೀಹದೊ |
ಳ್ಕಳೆಗೊಂಡತ್ತು ತನೂದರಂ ಬಳೆದುದಾತನ್ವಂಗಿಗಾಗರ್ಭದೊಳ್ || ೩೧

ಕಂ|| ಎಳಮುತ್ತಿನಂತೆ ಬೆಮರು |
ಜ್ಜ್ವಳಬಿಂದುಗಳಿರೆ ಬೆಳತ್ತುತರುಣೀವದನಂ ||
ಸೆಳೆದುದು ಕಾವನ ಕಯ್ಯೊ |
ಳ್ತೊಳಗುವಶಶಿಮಣಿಯ ಮಣಿಯ ಮುಕುರದ ಚೆಲ್ವಂ|| ೩೨

ತೊಲಗೆ ರಜಂ ತಮಮದು ಪೊರ |
ತೊಲಂಗುವಂತೆಸೆಯೆ ಮೇಚಕಂ ಚೂಚಕಮಾ ||
ಲಲನೆಗೆ ತನುವೊಳ್ಸತ್ವಂ |
ಬಲಿದಂತೆ ಬೆಳತ್ತುದುದರದಮಳಾರ್ಭಕನಿಂ || ೩೩

ಶೃಂಗಾರವಸ್ತು ತೀವಿದ |
ಗಾಂಗೇಯಕರಂಡಮೆನಿಸೆ ಮೊಲೆ ಚೂಚಕಮೇಂ ||
ಕಂಗೊಳಿಸಿದುದೊ ತದಗ್ರದೆ |
ಸಂಗಳಿಸಿದನೀಲಮಣಿಯ ಕಿರುಮುಚ್ಚುಳವೊಲ್ || ೩೪

ಜನದೃಷ್ಟಿ ತಾಗೆ ನಡು ಬಡ |
ವೆನಿಸುತ್ತಿರೆ ಕಾವಪಿಟ್ಟಕಾಪಿನಗೆರೆಯೆಂ ||
ದೆನೆ ಮಿಸುಗೆ ಬಾಸೆಯುದರಿಂ |
ಘನಮೆನಿಸಿತಿದೆನಿಸಿ ತೀವಿ ಬಳೆದುದು ಗರ್ಭಂ || ೩೫

ಎಸಿತೆನಿತು ವದನವಿಧು ಬೆ |
ಳ್ಪನೆ ತಳೆದುಜ್ಜ್ವಳಿಸಿದುದು ಪಯೋಧರಜಕ್ರಾ ||
ನನಮನಿತನಿತು ಕರಂಗಿದು |
ದೆನೆ ಪಗೆಗಾದಧಿಕತೇಜಮಂ ಸೈರಿಪರಾರ್ || ೩೬

ವೃ|| ತರುಣಮರಾಳಮಂ ತಳೆದು ಕೊರ್ಬಿದಕೋಶಮನಾಂತಪದ್ಮಿನೀ |
ತರುಣಿ ತರಂಗದಿಂ ನೆಗೆವಸೀರ್ಪ್ವನಿ ತಳ್ತಿರೆ ಭೃಂಗಮಾಲೆ ಮೇ ||
ಲಿರೆ ಮೆರೆವಂತೆ ಪುತ್ರನೆಡೆಗೊಂಡುರುಗರ್ಭಮನಾಂತು ಜಾಡ್ಯಮಂ |
ದಿರೆ ಬೆಮರುಣ್ಮೆ ಬಾಸೆ ಕಡುಗರ್ಪ್ಪಿಡಿದೊಪ್ಪಿರೆ ನೀರೆ ತೋರಿದಳ್ || ೩೭

ಕಂ|| ಬಳೆದುದು ಪೊಡೆಯುಂ ಜಘನಾ |
ಚಳಮುಂ ಕರ್ಪ್ಪಿಡಿದುದಳಕಮುಂ ಚೂಚಕಮುಂ ||
ತಳೆದುದು ಮಾಂದ್ಯಮನತಿಮಂ |
ಜುಳಗತಿಯುಂ ನುಡಿಯುಮಾಮೃದುಸ್ಮಿತಮುಖಿಯಾ || ೩೮

ಮುಂಬಯಕೆಯಾಂತುದವಳಮ |
ನಂ ಬಾಲಕನೊಲ್ದುಬಯಕೆಯೆನೆ ಮೃಡಲೀಲಾ ||
ಡಂಬರಕಥಾಸುಧಾರಸ |
ಮಂ ಬಿಡದೀಂಟಲ್ಕೆಶೈವನಿಧಿ ಶಶಿಮುಖಿಯಾ || ೩೯

ಪುರಹರಪುರಾಣಮಂ ಶಂ |
ಕರಚರಿತಮನಭವಕಾವ್ಯಮಂ ಭವಹರಭಾ ||
ಸುರಕೃತಿಯಂ ಗಿರಿಜಾವರ |
ವರಚರಿತಮನಬಲೆ ಕೇಳ್ದು ಮುದಮಂ ತಳೆವಳ್ || ೪೦

ವೃ|| ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವಂಗರಾ |
ಗರಚನೆಗೈವ ಮಾಲ್ಯಮನೆ ಸೂಡುವ ಸಿಂಗರಗೈವ ವೇಣಿಯಂ ||
ವಿರಚಿಪ ದರ್ಪಣಂಬಿಡಿವ ಬೆಳ್ಳಿಲೆಯಂ ಮಡಿದೀವ ದಿವ್ಯಚಾ |
ಮರಮನೆ ಬೀಸುವಗ್ಗದವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ || ೪೧

ಸಚಿವನಪತ್ನಿ ತುಂಬಿದರುದಿಂಗಳ ಗರ್ಭದೊಳೊಲ್ದು ಬಂದು ತಂ |
ದುಚಿತಸುವಸ್ತುವಿತ್ತು ಕಲಸೋಗರಮಂ ನಲಿದಿಕ್ಕಿ ಭೂಷಣ ||
ಪ್ರಚಯಮನಿಟ್ಟು ಪೇರೊಸಗೆಗೈದು ಸಖೀಜನದೊಂದುಗೂಡಿ ಸ |
ದ್ರುಚಿ ಮಿಗೆ ಮಾಡಿ ಸತ್ಕ್ರಿಯೆಯನಂಗನೆಗಾವಧು ಪೋದಳಳ್ಕರಿಂ || ೪೨

ಮಲಯಜದಣ್ಪು ಮಲ್ಲಿಗೆಯ ಚೊಲ್ಲೆಯ ಮಬ್ಜಗುಣಾಂಬರಂ ಸಮು |
ಜ್ಜ್ವಲತರಚಂಪಕಪ್ರಸವಕಾಂಚಿ ಸರೋರುಹಕರ್ಣಪೂರಮು ||
ತ್ಪಲಕಟಕಂ ಮೃಣಾಳವಲಯಂ ಸುರಹೊನ್ನೆಯ ಹಾರಮಿಂದುಮಂ |
ಡಲಮಧುರಾಸ್ಯೆಗೊಪ್ಪಿದುದು ನಿರ್ಭರಗರ್ಭವಿಳಾಸದೇಳ್ಗೆಯೊಳ್ || ೪೩

ವ|| ಇಂತೊಪ್ಪುತ್ತುಮಿರೆಯಿರೆ

ಕಂ|| ಒಂದುದಿನಮವನಿಪಂ ಪದ |
ಪಿಂದಿನಿಯಳ ಗರ್ಭದಂದಮಂ ನೋಡಲ್ಬ ||
ತ್ತಂ ದಳವೇರುತ್ತಿರೆ ಬಂ |
ದಂದೊಳಪೊಕ್ಕಂ ತದೀಯಮಣಿಮಯಗೃಹಮಂ || ೪೪

ವೃ|| ಕರಗತಕಂಕಣಕ್ವಣಿತಮುಣ್ಮಿರೆ ಪೊಂದೆರೆಯಂ ಸವೇಗಮೋ |
ಸರಿಸೆ ಸಖೀಜನಂ ಶಶಿಕಳಾಕೃತಿಯಂ ಸತಿಯಂ ನರೇಂದ್ರನಾ ||
ದರಿಸಿ ನಿರೀಕ್ಷೆಗೆಯ್ದುನಿತರಲ್ಲಿದಿರೇಳ್ವಳನೇಳಲೀಯದಂ |
ತಿರಿಸಿ ಸಮೀಪದೊಳ್ನೆಲಸಿದಂ ಮಣಿಕಾಂಚನಮಂಚತಳ್ಪದೊಳ್ || ೪೫

ಕುವಲಯಮಿತ್ರಗರ್ಭೆ ಪುರುಹೂತದಿಶಾವಧು ಬೆಳ್ಪನಾಂತಿರ |
ಲ್ತವಕದೆ ನೋಡಿನೋಡಿ ನಲಿವಂತೆ ಚಕೋರಯುಗಂ ಮೃಗಾಕ್ಷಿ ಸ ||
ತ್ಕುವಲಯಮಿತ್ರಗರ್ಭೆಯೆನಿಸುತ್ತೆ ಬೆಳತ್ತಿರೆ ನೋಡಿನೋಡಿ ಭೂ |
ಧವನವಿಲೋಚನದ್ವಯಮದೇಂ ಮುದವಾಂತುದೊ ರಾಗರಂಜಿತಂ || ೪೬

ಕಂ|| ಇನಿಯಳ ಮೃದುಕರತಳಮಂ |
ವಿನಯದೆ ಪಿಡಿದಾಸ್ಯಮಂ ನಿರೀಕ್ಷಿಸಿ ಕುರುಳಂ ||
ಕೊನೆಯುಗುರಿಂ ತಿದ್ದುತೆ ಮೆ |
ಲ್ಲನೆ ಪಲ್ಗದಿರುರ್ವೆ ನಗುತೆ ನೃಪನಿಂತೆಂದಂ || ೪೭

ಬರಿದೆ ಪಯೋಧರನಾಮಂ |
ನೆರೆಯದೆನುತ್ತಾಂತುದೊಳಗೆ ಪಯಮನುರೋಜಂ ||
ಸೆರೆವಿಡಿದುದದರಬಣ್ಣಮ |
ಸುರೆ ಚೂಚಕದೊಳ್ಸರೋರುಹಾಯತನಯನೇ || ೪೮

ಮದನಗುಣರುಚಿಯನಾಂತುದು |
ಮದನಾರಿಶರಾಸನಾಗ್ರಮಮರಾಧ್ವಂ ತೋ ||
ರ್ಪುದು ನಳಿನಂ ಶಶಿರುಚಿದಾ |
ಳ್ದುದು ನಿನ್ನೊಳ್ಕಾಂತೆ ಪೇಳಿದೇಂ ಕೌತುಕಮೋ || ೪೯

ವ|| ಎಂದು ನುಡಿವರಸನ ಸರಸೋಕ್ತಿಗೆ ಮನದೊಳ್ಮುದಮಂ ಮಾತಿನೊಳ್ಮಾಧುರ್ಯಮಂ ಮೊಗದೊಳಲ್ಲಜ್ಜೆಯುಂ ಕಟಾಕ್ಷದೊಳ್ಕಟ್ಟಳ್ಕರಂ ತಳೆದು ವಿಳಾಸಂಬಡೆದೊಪ್ಪುತ್ತುಮಿರೆಯಿರೆ

ಕಂ|| ನವಮಾಸಂ ನೆರೆದುದು ಮಾ |
ನವಪತಿಪತ್ನಿಯ ಪೊದಳ್ದಗರ್ಭಕೆ ಸಖಿಯರ್ ||
ನವಹರ್ಷಂದಳೆದಿರ್ದರ್ |
ನವಗ್ರಹಂ ಸುಕರವೃತ್ತಿದಾಳ್ದತ್ತಾಗಳ್ || ೫೦

ನಳಿನಿ ಮರಾಳಮನೆಸೆವು |
ತ್ತಳಿನಿ ಸುಗಂಧಮನುದಾರಕೃತಿ ಸಿತಯಶಮಂ ||
ತಿಳಿಜೊನ್ನಮನಿಂದೂಜ್ಜ್ವಳೆ |
ಕಳೆ ಪಡೆವವೊಲಬಳೆ ಪಡೆದಳಮಳಾರ್ಭಕನಂ || ೫೧

ನಳಿನಂಗಳಂತೆ ಸಖಿಯರ |
ವಿಳಸಿತವದನಂಗಳಲರೆ ಗರ್ಭಾಜಲದಿಂ ||
ದೆಳನೇಸರಂತೆ ರಾಗೋ |
ಜ್ಜ್ವಳರುಚಿ ತಾನುದಿಸಿ ತೊಳಗಿದಂ ನೃಪತನಯಂ || ೫೨

ವೃ॥ ಬಲಗಣ್ಕೆತ್ತಿದುದೀಶ್ವರಾರ್ಚ್ಚಕರ ಕೈಲಾಸಾದ್ರಿಯೊಳ್ಶಂಕರಂ |
ನಲಿದಂ ಭೂರಮೆಯುತ್ಸವಂಬಡೆದಳಿಂದ್ರಾದ್ಯರ್ಮ್ಮುದಂಬಟ್ಟರೀ |
ನೆಲದೊಳ್ಬಾಳ್ವಜನಾಳಿ ಕೇಳ್ದು ಗುಡಿಗಟ್ಟಿತ್ತಲ್ಲಿ ಬಂಧುಕ್ಷಿತೀ |
ಶಲಸನ್ಮಾನಸವಾರ್ಧಿ ಪೆರ್ಚ್ಚಿದುದು ತತ್ಪುತ್ರೋದಯೋತ್ಸಾಹದೊಳ್ ॥ ೫೩

ವ॥ ಅಂತುಮಲ್ಲದೆಯುಂ

ಕಂ॥ ಕಳೆಯೇರಿ ನಳಿನಸಖನು |
ಜ್ಜ್ವಳಿಸಿದನಿಳೆ ಪುಳಕವಾಂತುದಖಿಳರ್ಮ್ಮುದಮಂ ॥
ತಳೆದರ್ಕ್ಕೆಳದಿಯರೊಸಗೆಯ |
ನಿಳಾಧಿಪರ್ಗ್ಗರುಪಿ ಸೆಳೆದರುಚಿತಮನಾಗಳ್ ॥ ೫೪

ವ॥ ಆಗಳ್ಸಂಭ್ರಮಂಬೆರಸು

ವೃ॥ ವಿಳಸತ್ಕಾಶ್ಮೀರರಾಗಂಬಡೆದತನು ಬೆಡಂಗಾಗೆ ಮಂದಸ್ಮಿತಂ ಮಂ |
ಜುಳವಕ್ತ್ರಾಂಭೋಜದೊಳ್ಕಂಗೊಳಿಸೆ ಕುಣಿಯೆ ವಕ್ಷೋಜಕೋಕದ್ವಯಂ ॥
ಮೇಲಳಿವಿಂಡಂಗಾಂಗರಾಗಕ್ಕೆಳಸಿ ಬಳಸೆ ಬಂದಳ್ಪ್ರತೀಹಾರಿ ಸಂಘೋ |
ಜ್ಜ್ವಳೆ ಪುತ್ರಾದಿತ್ಯಬಿಂಬೋದಯಮನರಿಪುವೊಂದುಜ್ಜುಗಂಬೆತ್ತುಬೇಗಂ ॥ ೫೫

ವ॥ ಅಂತುಸತ್ವರಂ ಪರಿತಂದು ನಿಂದು ವಿಮಳಹಾರಾಂಶುಚಂದ್ರಿಕೆಯಿಂ
ಕರಾರುಣಸರಸಿಜಂ ಮುಗಿದುದೆಂಬಂತಂಜಲಿಪುಟಂ ರಂಜಿಸೆ ಬಿಂಬಾಧರದ ಕೆಂಪೆ
ಳಗನೊತ್ತರಿಸಿ ವಿಶದದಶನರುಚಿನಿಚಯಂ ಪಸರಿಸುತ್ತಿರೆ ಕಣ್ಗಿದಿರ್ತ್ತಣ್ಗಿದಿರಂತೆ
ಸಭಾಸದರ ನಯನಕುಮುದಮನಲರ್ಚ್ಚಿ ನಲವಿಸಿಂದೊಡ್ಡೋಲಗಂಗೊಟ್ಟು ಪಟ್ಟ
ವಣೆಯೊಳ್ಕುಳ್ಳಿರ್ದ್ದನರೇಶ್ವರಂಗೆ ದೇವಾ ಪಿರಿಯೊಸಗೆಯಿಂತಿಂತೆಂದಳ್

ವೃ॥ ಅವನಿಪಸಾರ್ವಭೌಮ ಭವದೀಯಮನೋರಮೆ ಸನ್ಮುಹೂರ್ತದೊ |
ಳ್ಕುವರನನೀಗಳೀಗಳೆ ಪಡೆದಳ್ಗುಡಿಗಟ್ಟಿಸುವೆಂದು ಪೇಳ್ವುತ ॥
ದ್ಯುವತಿಗನರ್ಘ್ಯಮಂಡನಮನೊಲ್ದುಚಿತಂಗುಡುತೀಕ್ಷಿಸಲ್ಮಹೋ |
ತ್ಸವಮನಸೇಳ್ವನೇಳೆ ಪುಳಕಾಂಕುರಮಂಗದೊಳಾನರಾಧಿಪಂ ॥ ೫೬

ವ|| ಅಂತೇಳ್ದು ನಡೆಗೊಳ್ವಾಗಳ್ಜಯರವಮುಖರಮುಖರಿತಪೆಱವಂದಿವೃಂ ದಪರಿಪಠಿತಸರಸಕವಿರಚಿತರುಚಿರತರನಿಜಬಿರುದಗದ್ಯಪದ್ಯಸಮುದಯಸಮುದ್ಘೋ ಷಸಹಚರಿತಮೃದುಮೃದಂಗಪಟುಪಟಹಶಂಖತಾಳಕಹಳಾವೇಣುವೀಣಾದ್ಯನೇಕ ಲೋಕಕರ್ಣಕೌತುಕಕರವಿತತಾನವದ್ಯವಾದ್ಯರವಂ ದಶದಿಶೆಯೊಳ್ಪರ್ಬಿ ಪಸರಿಸೆ ಯುಂ, ಪರಿಷ್ಕೃತಮುಕುಟವರ್ಧನನಿಕರಮುಕುಟತಟಘಟಿತ ಮಂಜುಮಾಣಿಕ್ಯಮಂ ಜರೀಸಂಜನಿತತೇಜಃಪುಂಜಂ ಕಂಜಸಖಕರನಿಕರದಂತೆ ತಳತಳಿಸಿ ಪೊಳೆಯೆಯುಂ, ಶುಂಭನ್ನಿತಂಬಬಿಂಬಕುಂಭಿಕುಂಭಸ್ಥಳೋಪಲಂಬಿತಕೌಸುಂಭಾಂಬರಚುಂಬಿತಜೃಂ ಭನ್ಮಣಿಮಯಮೇಖಲಾವಲಯಕಲಿತಕಲಕಿಂಕಿಣೀಗಣ ಝಣಝಣರಣಿತಸುಕರ ಕಂಕಣರವಸುರುಚಿರಕರಸರಸಿಜಬಾಲಾಜಯಲೀಲಾಚಾಲಿತಚಾರುಚಾಮರಂಪಾ ರ್ಶ್ವಯುಗದೊಳ್ಪರಿರಂಜಿಸೆಯುಂ; ನಡೆತಂದು ಪರಿವರ್ಜಿತಾಶೇಷಪರಿಜನಂ ನಿಜಕರ ಗೃಹೀತಾಮಾತ್ಯಕರಪಲ್ಲವನುಲ್ಲಸಿತಹೃದಯಂ ಪ್ರಸನ್ನಮುಖಂ ಪ್ರಸೂತಿಸದನಾಭಿ ಮುಖನಾಗಿ ಬರ್ಪಲ್ಲಿ ನಿಜಾಂತಃಪುರದೊಳ್ನಗರವಿಳಾಸಿನಿಯರಿಂ ಗುಡಿಗಟ್ಟು ವಪೌರಜನದಿಂದೆಡೆಯಾಡುವಬಂಧುವರ್ಗದಿಂ ಪೊಱೆವಮಂಗಳವರೆಗಳಿಂ ಮಿಳಿ ರ್ಪಕೇತನಂಗಳಿಂ ತಳಿವಲಾಜೆಗಳಿಂ ಪೊಳೆಪೆತ್ತಾರತಿಗಳಿಂ ಕೆಳೆಗೊಳಿಪರಂಗವಲ್ಲಿ ಗಳಿಂ ಬೆಳಗುವಮಣಿದೀಪಗಳಿಂದಿಳಿಪಿದಫಲಾವಳಿಗಳಿಂ ಗೃಹರಕ್ಷೆಗೈವಸಹಚರಿ ಯರಿಂ ವಿಹರಣಂಗೊಂಬವಿದಗ್ಧೆಯರಿಂ ನೆಱಪುವರಕ್ಷಾಸಾಧನಂಗಳಿಂ ಪರಪುವ ಧೂಪಧೂಮಂಗಳಿಂ ಹರಗೃಹಕ್ಕೊಯ್ವಬಾಯಿನಂಗಳಿಂ ಪರಸುವಮಾಹೇಶ್ವರರಿಂ ದತಿಸಂಭ್ರಮವಪ್ಪುಕೈದು ಕಣ್ಗೆ ಕೌತುಕಮಂ ಮನಕ್ಕೆ ಸಂತಸಮನೀವುತ್ತಿರೆ ನಿರೀಕ್ಷಣೆಗೆಯ್ಯಲೆಳಸಿ ಗಳಿಲನೈತಂದು ಕುಲವೃದ್ಧೆಯರ್ತೋಱಿರೆ ಕುಮಾರನಂ ನೋಡಿ ಸುಧಾಕರನಂ ಕಂಡ ಸುಧಾಬ್ಧಿ ಪೆರ್ಚುವಂತೆ ಮೈಪೆರ್ಚಿ ಶಿವಪ್ರಸಾದಮ ಹಿಮೆಯುಂ ಒಗೆದು ಬಗೆಯೊಳ್ಮುದಂದಳೆದಿರ್ಪನ್ನೆಗಂ

ವೃ|| ಗುರುಗಳ್ಬಂದು ಶಿವಾಂಘ್ರಿವಾರಿಪರಿಷೇಕಂಗೈಸಿ ಕಾರುಣ್ಯದಿಂ |
ಪರಸುತ್ತಿಟ್ಟು ವಿಭೂತಿಯಂ ಪಣೆಯೊಳಾಗಳ್ಕೈವಮಂತ್ರಂಗಳಿಂ ||
ಪರಿಶುದ್ಧಪ್ರಭಲಿಂಗಮಂ ಧರಿಸಿ ಬಾಲಂಗೊಲ್ದು ಮಾಹೇಶ್ವರಾ |
ವರಣಮ್ಮಾಡಿಸಿದರ್ಮಹೋತ್ಸವದಿನೊಪ್ಪಲ್ಜಾತಕರ್ಮಂಗಳಂ || ೧೧

ಪರಮಂತ್ರೋದ್ಭವ ನೀತಸಿಸ್ಸುವುದನೇ ಸಂಲಕ್ಷಿಪಂ ತಪ್ಪದೆಂ |
ದಿರದಾಳೋಚಿಸಿ ಮಂತ್ರಲಕ್ಷ್ಮವೆಸರಂ ಭೂಕಾಂತಸಂತಾನದೊಳ್ ||
ಪೊರೆವೆತ್ತಗ್ಗದಕೀರ್ತಿವೆತ್ತೆಸೆಸೆಂದಸ್ಪರ್ಧೆಮಂ ರಾಜಶೇ |
ಖರನೆಂದಿತ್ತಭಿಧಾನಮಂ ತಳರ್ದರಾಚಾರ್ಯರ್ಮಹೋತ್ಸಾಹದಿಂ || ೫೮

ವ|| ಅನಂತರಮುರಸತಿಪ್ರಮೋದದಿನಪರಮಿತಧನಕನಕವಸನಮಾಲ್ಯಮ ಣಿಭೂಷಣಂಗಳಿಂ ಮಾಹೇಶ್ವರಾರಾಧನಂಗೈದು ಸಾನುರಾಗಂ ನಾನಾದಾನಂ ಗಳನನೂನಮೆಸೆ ನೆಗಳ್ದು ಪೆರ್ಮೆವೆತ್ತ ಕೂರ್ಮೆಯಿಂ ಶಿವಕಥಾಕಮನೀಯಮಾ ಣಿಕ್ಯಮಂಜರೀಕರ್ಣಪೂರಂ ಶಿವಚರಣಸಮರ್ಚನಸಾಮ್ರಾಜ್ಯಧುರಂಧರಂ ಶಿವ ಲಿಂಗಪತಂಗಸಂಗತಮಂಗಳಹೃದಯನಳಿನಂ ಶಿವಧರ್ಮಕಮಳಾಕರವಿಮಳಮ ರಾಳಂ ಶಿವಶರಣಜನಮನೋವನವಸಂತಂ ಸಕ್ಕೀಂದ್ರಚೋಳಧರಣೀಶ್ವರಂ ಸಚಿವ ಸಮೇತಂ ಸಕಲಧರಣೀಪಾಲರೋಲೈಸುತ್ತಿರೆ ಸಾಮ್ರಾಜ್ಯಸಂಜನಿತ ಸುಖಮನ ನುಭವಿಸುತ್ತುಮಿರೆಯಿರೆ

ಕಂ|| ಪನ್ನೆರಡುದಿನದೊಳಿಟ್ಟ |
ರ್ಸನ್ನುತಸುಕುಮಾರಕಂಗೆ ಮಣಿದೊಟ್ಟಿಲನೆ ||
ತ್ತಂ ನೆಗಳ್ದನೆ ವಾದ್ಯರವಂ |
ಕನ್ನೆಯರಿರದೈದೆ ಪಾಡಿದರ್ಮಂಗಳಮಂ || ೫೯

ವ|| ತನ್ಮಹೋತ್ಸವಾನಂತರಂ

ವೃ|| ತೊಳಗುವರನ್ನದೊಟ್ಟಿಲೊಳೆ ಪಟ್ಟಿಸುತ್ತೆ ಕುಮಾರನಂ ಮುದಂ |
ದಳೆದೆಳವೆಣ್ಗಳೊಲ್ದು ರಸನಾಂಚಲದೊಳ್ಪಿಡಿದೋವಿ ಕಂದ ಜೋ ||
ವಿಳಸಿತರೂಪ ಜೋ ವಿನಯಭೂಷಣ ಜೋ ಸುಕುಮಾರ ಜೋ ಸುಧಾ |
ನಿಳಯಸುವಾಣಿ ಜೋ ಸುಭಗ ಜೋ ವಿಭು ಜೋಯೆನುತೊಪ್ಪೆ ತೂಗಿದರ್ || ೬೦

ಮಂಗಳಾಕರ ಜೋ ಮನೋಹರ ಜೋ ಮಹೀಶ್ವರ ಜೋ ಮಹಾ |
ಲಿಂಗಸಂಗತ ಜೋ ಮುದಸ್ಮಿತ ಜೋ ಮೃದುಸ್ಮಿತ ಜೋ ಜನೋ ||
ತ್ತುಂಗವಂದಿತ ಜೋ ಜಗನ್ನುತ ಜೋ ಜಯೋನ್ನತ ಜೋ ಯೆನು |
ತ್ತಂಗನಾಜನಮೊಪ್ಪೆ ಪಾಡುತೆ ಜೋಗುಳಂ ಮಗೆ ತೂಗಿದರ್ || ೬೧

ಂ|| ಅರಿನೃಪರ ಸಿರಿಯು ಸೆರೆಯುಂ |
ತರಳಂ ತಾನಿಂತು ಪಿಡಿವೆನೆಂದರಿಪುವವೋಲ್ ||
ಸರಳಕರಾಂಗುಲಿಯಿಂದಂ |
ತರುಣೀಜನದಳಿಕದಳಕಮಂ ಒರಸೆಳೆವಂ || ೬೨

ನಿರುಪಾಧಿಕಪ್ರಕಾಶಾಂ |
ತರಚಿಜ್ಜ್ಯೋತಿಗೆ ಸಮಾನಮುಲ್ತೆಂದು ಕರಂ ||
ಪರಿಹಾಸಂಗೆಯ್ವಂತಿರೆ |
ತರುಣಂ ಮಣಿದೀಪಮಂ ನಿರೀಕ್ಷಿಸಿ ನಗುವಂ || ೬೩

ಶಿವನ ಜಡೆಮುಡಿಯ ಶಶಿಕಳೆ |
ಭುವನದೊಳೀಕುವರವರಿಜುವಡೆದುದಯಿಸಿತೆಂ ||
ಬವೊಲೆಸೆದು ಕಳೆಗಳೊಡವೆರೆ |
ಯೆ ವಿಳಾಸಂಬೆತ್ತು ಬಳೆದನವನಿಪತನಯಂ || ೬೪

ದರಹಸನಾಮೃತವರವ |
ಲ್ಲರಿಯುಂಕುರದಂತೆ ತೋರೆ ಮೊಳೆವಲ್ಲದಕಂ ||
ಬುರುಹಮುಖಿ ಸುರಿವವೋಲ್ಪಾ |
ಲ್ಸರಿಯುಪಯೋಧರದಿನಮೃತಮಂ ಪದೆದಿತ್ತಳ್ || ೬೫

ವ|| ಮತ್ತಮತಿಸ್ನೇಹಂಬೆರಸು

|| ಬನೆ ತೆಗೆದಪ್ಪಿ ಚೀನವಸನಾಂಚಲಮಂ ನಸು ನೂಂಕಿ ಹಾರಮಂ |
ಕರತಳದಿಂ ಕೆಲಕ್ಕೆತೆಗೆದೊಯ್ಯನೆ ಸೋಗಿಲೊಳಿಟ್ಟು ನೇಹದಿಂ ||
ತೊರೆವಿರಪೆಜ್ಜು ಪಾಯ್ವವೊಲೆವಾಲ್ಗಳನಳ್ಕರೊಳೂಡಿ ನೋಡಿ ಭಾ |
ಸುರಸುಕುಮಾರನಂ ನಲಿದಳಂಗನೆ ಪೂರ್ಣವಿಳಾಸದೀಳ್ಗೆಯಿಂ || ೬೬

|| ಈತೊಳೊಳಂತುತೋರ್ಪ್ಪನಿ|
ಭಾತಳಮಂ ಶತ್ರುಭೂಪರಂ ಜಯಿಸುವೆನೆ ||
ನ್ನೀತೊಳೊಳೆಂದುತೋರ್ಪ್ಪವೊ |
ಲಾತೋಳಾಡಿಸುವನವನಿಪಾಲಕತನಯಂ || ೬೭

ಸವಿನಗೆಯೆಂಬಮುರ್ದಿನಸೊನೆ |
ಕವಿತರ್ಪ್ಪವೊಲಾಗೆ ಸುರಿವಲಾಲಾಜಳಮುಂ ||
ಣ್ಮವಮೊಳೆವಲ್ಮಿನುಗುತ್ತಿರೆ |
ಕುವರಂ ಕುಳ್ಳಿರ್ದ್ದ ಜನನಿಯೊಳ್ಬಿಸದಿಸುವಂ ||

ವ|| ಅಂತುಮಲ್ಲದೆ

ಕಂ|| ನಲವೆಚ್ಚುರ್ವವಪೆಣ್ಗಳ ಕರ |
ತಳದಿಂ ಕರತಳಕೆ ಬರ್ಪ್ಪಬಾಲಕನಾಗಳ್ ||
ಗೆಲೆವಂದಂ ಕೆಂದಾವರೆ |
ಯಲರಿಂದಲರ್ಗೆಯ್ದೆ ತಳರ್ವಹಂಸಾರ್ಭಕನಂ ||

ವೃ|| ನಗಿಸುತ್ತಿಕ್ಕೆಲ್ದಗಳಿಂ ಮಸ್ತಕಮನೆಳವಿ ಮುದ್ದೀವುದೆಂದಪ್ಪಿ ಶಿಸ್ತೋ
ಕ್ತಿಗಳಂ ತಾಂ ಪೇಳ್ದು ಪೇಳ್ಪಂತಿರೆ ಕಲಿಸಿ ತೊದಳ್ಮಾತು ಜಲ್ಪಾಗೆ ವಾಮ
ಕ್ಷಿಗೆ ಪುಚ್ಚಿಂ ಬಚ್ಚ ನೀಂ ನೋಡೆನುತರಿಪಿ ನೃಪಂ ಯತ್ನದಿಂ ಪಂಜರ
ಪ್ರಗತಾಂಬಾಪಾಣಿಕೀರಪ್ರಭೃತನಯಃಸಿನಾನಂದಮಂ ತಾಳ್ದನಾಗಳ್ ||

ತರಳಂಗೊಪ್ಪಿದ್ದುದೊಳ್ಮಾಣಿಕದರಳೆಲೆ ನೀಲಂಗಳಿಂ ತಳ್ತಕರ್ಣಾ |
ಭರಣಂ ನುಣ್ಮುತ್ತಿನೇಕಾವಳಿ ಮಿಸುಪಹುರಿದ್ರತ್ನವೊಂದಿರ್ದ್ದಮುಂಗೈ ||
ಸರಮುದ್ಯತ್ಸ್ವರ್ಣದಿಂ ಕೀಲಿಸಿದಪುಲಿಯುಗುರ್ಪ್ಪದ್ಮರಾಗಾಂಗದಂ ಬ |
ಜ್ಜರದಿಂದಿಂಬಾದಪೊಂಗೆಜ್ಜೆಗಳೊಡನೆ ಬೆಡಂಗಾದಮಂಜೀರಯುಗ್ಮಂ ||

ಎಳನಗೆಯುಣ್ಮೆ ಮುದ್ದುಮೊಗದೊಳ್ಮರಿಯುಂಜೆಯನಟ್ಟಲೆಂದು ಮಂ |
ಜುಳತರಮಾಗೆದಟ್ಟಡಿಯನಿಕ್ಕುವ ಬಾಲಕನಂಗದೊಂದುಮಾ ||
ರ್ಪ್ಪೊಳಪಿರೆ ನೀಲಕುಟ್ಟಿಮದೊಳುರ್ವೆ ತಜ್ಜನಸೇಸಪತ್ತಿ ತಾಂ |
ತಳೆದಳೊ ತತ್ಸವಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ ||

ಪೊಳೆವಿಂದೂಪಳಕುಟ್ಟಿಮಸ್ಥಳದೊಳೆತ್ತಂ ಸೂಸೆ ತೀವಿರ್ದ್ದಸಿ |
ಮರ್ಳಕರ್ಪೂರರಜಂಗಳಿಂ ತಳಿದು ಧೂಳೀಕೇಳಿಯಂ ಗಂಡನೊಲ್ ||
ಮಿಳಿದಾಡುತ್ತಿರೆ ಕುಂಡಲಂ ಝಣಝಣೆನಲ್ಪೊಂಗೆಜ್ಜೆ ಝೊಂಝೊಂಮೆನ |
ಲ್ಮೊಳೆಜಲ್ಪಾಗಿರೆ ಮುದ್ದುಪೀರಿ ನಗುತೀಕ್ಷ್ಣಂದಪ್ಪನಂ ಮಾಳ್ಕೆಯುಂ ||

ಂ|| ಅರಳೆಲೆ ನೊಸಲೊಳ್ಪಲಿಸು |
ತ್ತಿರೆ ಪುಣಿಪಾಗಾಯ್ಗಳೊಲೆಯೆ ಕಿರುಗೆಜ್ಜೆಗಳಿಂ ||
ವರಿಸಿ ದನಿಗುಡೆ ಮೃದುಸ್ಮಿತ |
ಮಿರೆ ನೊಗದೊಳ್ಮುದ್ದುಪೀರಿ ಕುಣಿವಂ ಕುವರಂ || ೭೪

ವ|| ಇಂತನಂತವಿಳಾಸಮಂ ಮೆರೆದು

|| ವಿಳಸತ್ಪೂರ್ವಾದ್ರಿಯೊಳ್ಭಾಸುರತರುಣದಿನಾಧೀಶಬಿಂಬಂ ಸುಧಾಬ್ಧಿ |
ಸ್ಥಳದೊಳ್ಬಾಲಂ ಮರಾಳಂ ಮಳಯುಜವನದೊಳ್ಕುಂಜರೇಂದ್ರಾರ್ಭಕಂ ಮೇ||
ಲ್ಬಳೆವಂತತ್ಯಂತತೇಜಂ ವಿಮಳತೆ ವಿಸರದ್ಭದ್ರವೊಂದಾಗಿ ತನ್ನೊ |
ಳ್ಬಳೆಯಲ್ಸತ್ಯೇಂದ್ರನಂತಃಪುರದೊಳೆ ಬಳೆದಂ ಸತ್ವಸಾರಂ ಕುಮಾರಂ || ೭೫

ವ|| ಇಂತು ಬಳೆಯುತ್ತುಮಿರೆಯಿರೆ

|| ಜನಪತಿಪುತ್ರನಂ ಶುಭಮುಹೂರ್ತದೊಳೋರಗೆಗೊಂಡಮಂತ್ರಿಪು |
ತ್ರನೊಳೊಡಗೂಡಿ ಮಂಗಳವಿಳಾಸವೊಡಂಬಡೆಸರ್ವವಿದ್ಯೆ ಸಂ ||
ಜನಿಸಪೊಲೋದಲಿಟ್ಟು ಮುದವೊಂದಿರೆ ಕಲ್ತರನೂನವಿದ್ಯೆಯುಂ |
ಘನತರ ಶಸ್ತ್ರಶಾಸ್ತ್ರಹಯಹಸ್ತಿವಿಶೇಷಕವಾಹಕತ್ವಮುಂ || ೭೬

ವ|| ಇಂತು ಪರಿಣತಾಖಿಳರಾಜವಿದ್ಯಾವಿಶಾರದರೆನಿಸಿ

ಂ|| ಕಲಿಪಂಗೆ ನೆರೆಯುದಧಿಕೋ |
ಜ್ಜ್ವಲಕಲೆ ಕೈಸಾರ್ದುದಮಳಮತಿಮತಿಗೆ ಸುಧಾ ||
ಜಲನಿಧಿಗಿಲ್ಲದಕಳೆಗ |
ಳ್ಕಲೆಗೊಳ್ವೊಲಮಳಕಮಲರಿಪುಕಳೆಗಾಗಳ್ || ೭೭

ವ|| ಇಂದಧಿಕಬುಧಕದಂಬಂ ಪೊಗಳುತ್ತುಮಿರೆ

ಂ|| ಸಮಚರಿತರ್ಸಮವಿನಯ |
ರ್ಸಮಾನವಯಸರ್ಸಮಪ್ರಭರ್ಸಮವಿದ್ಯರ್ ||
ಸಮರೂಪರ್ಸಮಗುಣರು |
ತ್ತಮನೃಪಸುತಮಂತ್ರಿಪುತ್ರರಿರ್ವರ್ಬಳೆದರ್ || ೭೮

ಅವರಿರ್ವ್ವರಿರವನುರ್ವ್ವರೆ |
ಯುವರೀಕ್ಷಿಸುತುಂ ಸಹೋದರನ್ನಿರ್ಜನಮೆಂಬರ್ ||
ವಿವಿಧವಿಳಾಸದಿನಾನೃಪ |
ಯುವತಿಯುಮಾನೃಪನುಮಕ್ಕರಿಂ ಸರಿಗಾಣ್ಬರ್ || ೭೯

ನಡೆ ನಗೆ ಪುಗೆ ಮಾಂದ್ಯದೊಳೊ |
ಳ್ದೊಡೆ ನುಡಿ ಕಡುನುಣ್ಪನಾನೆ ರಾಗದೊಳೆ ಮನಂ ||
ಕಡೆಗಣ್ಗೊಡರ್ದಿರೆ ಜೌವನ |
ಮಡಿಯಿಟ್ಟುದು ಮಂತ್ರಿಪುತ್ರನಂಗದೊಳಾಗಳ್ || ೮೦

ವೃ|| ಜಾಣ್ಮೆಗೆ ಜೌವನಂ ನೆರೆದುದುಣ್ಮಿದಜೌವನಕೆಯ್ದೆಜಾಣ್ಮೆಕೈ |
ಗಣ್ಮಿದುದೇಳ್ಗೆವೆತ್ತಸೊಬಗಿಂಗಳವಟ್ಟುದು ಚೆಲ್ವು ಚೆಲ್ವುಮುಂ ||
ಕಣ್ಮನಕೊಪ್ಪುವಂತೆ ಸೊಬಗೊಂದಿದುದಗ್ಗದಲೀಲೆಗುತ್ಸವಂ|
ಪೊಣ್ಮಿದುದುತ್ಸವಕ್ಕೆಸೆದುದಗ್ಗದಲೀಲೆ ತದಂಗಸಂಗದಿಂ || ೮೧

ಅಗಳಾಮಿತವಜನನತಿವಿತತಕೌತುಕಾವಹಮೆನಿಸಿ

ವೃ|| ಶತಪತ್ರಾಯತಲೋಚನಂ ನಗೆಮೊಗಂ ಬಿಂಬಾಧರಂ ವಜ್ರರಂ||
ಜಿತದಂತಾವಳಿ ದೀರ್ಘಬಾಹುಯುಗಳಂ ದೀವ್ಯತ್ಕಪೋಲದ್ವಯಂ |
ವಿತತೋರಸ್ಥಳಮುನ್ನತಾಂಸಮರುಣಾಂಭೋಜಸ್ಫುರತ್ಪಾಣಿ ರಂ ||
ಜಿತರಂಭೋರು ಚೆಡಂಗುವೀರೆ ತಳೆದಂ ಸೌಂದರ್ಯಸೌಭಾಗ್ಯಮಂ || ೮೨

ವ|| ಇಂತು ಸಮಾರೂಢಪ್ರೌಢಯೌವನಾಲಂಕೃತರತಿರಾಜಸೌಂದರ್ಯ ಮಾಧುರ್ಯಧುರಂಧರತೆಯುಮಪ್ರಾಕೃತೌದಾರ್ಯಜನವಿನುತಗುಣಗಣಾಭರಣಭೂಷಿ ತನುಂ ವಿತತಸಿತಯಶಸ್ಸ್ವಧರ್ಮಸಮುದಿತದಯಾನ್ವಿತ ನಿರ್ಮಲಾಂತಃಕರಣನು ಮಮಿತಶೌರ್ಯಧೈರ್ಯಚಾತುರ್ಯಗಾಂಭೀರ್ಯಪ್ರಕಟಿತನಿಜಪ್ರಭಾವನುಂಪರ ಮಶಿವಚರಣಾರವಿಂದಾನಂದಮಕರಂದಪಾನಸಮುತ್ತಮಧುಕರಾಯಮಾಣಮಾನ ಸನುಮಖಿಳಕಳಾನೈಪುಣ್ಯಜನವರೇಣ್ಯನುಮೆನಿಸಿ ಪೊಗಳ್ತೆವಡೆದು ರಂಜಿಸಾಮಿತವ ಜನನೊಡನೆ ಕೆಳೆಗೊಂಡು ಶೈಶವದಶೆಯಂ ವಿಸರ್ಜಿಸಲುಪಕ್ರಮಿಸಿ ರಾಜಕುಮಾರ ಕುಮಾರನೋಜೆಯಿಂ ರಾಜಿಸುತ್ತುಮಿರ್ಪ್ಪಗಳ್

ವೃ॥ ಅನುಪಮಮಚಿದ್ಘನಾರ್ಯಗುರುಗಳ್ಬಿರಿದುತ್ಸವದಿಂದೆ ಬಂದು ತ |
ಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆನೋಡಿ ಚಿತ್ತದೊ |
ಳ್ನನೆಕೊನೆವೋಗಿ ರಾಗಿಸಿ ಮಹಾಶಿವದೀಕ್ಷೆಯನೊಲ್ದು ಮಾಡಿ ಪಾ|
ವನಶಿವತತ್ವಮಂ ತಿಳಿಪಿ ಲಿಂಗಸಮರ್ಚಕರಂ ನಿಮಿರ್ಚಿದರ್ ॥ ೮೩

ವ॥ ಅಂತು ಶಿವದೀಕ್ಷೆಯುಂ ರಚಿಸಿ ಶಿವಮಂತ್ರೋಪದೇಶಂಗೈದು ಕೃಪಾರಸಭರಕಟಾಕ್ಷದಿನಭೀಕ್ಷಿಸಿ ಮತ್ತಮಿಂತೆಂದರ್

ವೃ॥ ಇದು ಶಿವಮಂತ್ರಕೋಟಿಗೆ ತವರ್ಮನೆ ನೋಡಿದು ಶೈವಶಾಸ್ತ್ರ ಭೂ |
ಜದ ಘನಮೂಲಮಿಂತಿದು ಚಿದಂಗನೆಯುಜ್ಜ್ವಳದರ್ಪಣಂ ಪೊದ ||
ಳ್ದಿದು ಪರಮುಕ್ತಿಕಾಂತೆಯ ಶಿರೋಮಣಿ ತಾನಿದು ಮುಸ್ಸಿನಾರ್ಯರ |
ಗ್ಗದನಿಧಿ ನೋಳ್ಪೊಡಿಂತಿದು ಮಹಾಮುನಿಚಿತ್ತಸರೋಜಷಟ್ಪದಂ ॥ ೮೪

ನಿರಯಾಂಭೋರಾಶಿಯೊಳ್ಮೇಣ್ಮುಳುಗಿ ಬಹುತರಕ್ಲೇಶದಿಂ ಬೇವಪಾಪಾ |
ತ್ಮರನಂದೈತಂದು ನೋಡುತ್ತಮಿತಮಹಿಮಸಾನಂದಯೋಗೀಂದ್ರನೊಲ್ದು ||
ಚ್ಚರಿಪನ್ನಂ ಕರ್ಣಮಂ ಸೋಂಕಿದನಿತರೊಳವಗ್ಗಿರ್ತ್ತು ರುದ್ರತ್ವಮಂ ತಾಂ|
ಪೊರೆದತ್ತೀಮಂತ್ರಕೋಟಿಸ್ಫುಟಮಕುಟಮಹಾರತ್ನಷಡ್ವರ್ಣಮಂತ್ರಂ॥ ೮೫

ತನುಕೃತತಾಪನಾಗದತಿದೂರಕೆ ಪೋಗದೆ ಯತ್ನದಿಂ ಮರು |
ನ್ಮನಮನೊರಲ್ದು ಕಟ್ಟದೆ ಮಹಾದ್ರಿಯ ಮೆಟ್ಟದೆ ಕಂದಮೂಲಮಂ ||
ಮನದೊಲವಿಂದೆ ಮೆಲ್ಲದೆ ವನಾಂತದೆ ನಿಲ್ಲದೆ ಸುಮ್ಮನೊರ್ಮೆ ಮೆ |
ಲ್ಲನೆ ನುಡಿದಂಗೆ ಮುಕ್ತಿಗುಡುತಿರ್ಪುದಿದೆಂದೊಡದಾರೊ ಬಣ್ಣಿಪರ್ ॥ ೮೬

ಕಂ॥ ಹರವದನಚಂದ್ರಬಿಂಬದಿ |
ಸಿರದೊಗೆದುದನೂನವೇದವಟತರು ಪಂಚಾ ||
ಕ್ಷರಬೀಜದಿನುರುಶಾಖಾ ವಿ |
ರಾಜಿತಂ ಪಲ್ಲವಾಂಚಿತಂ ಫಳಪುಳಿತಂ ॥ ೮೭

ಸ್ಮೃತಿವಿತತಪುರಾಣೌಘದೊ |
ಳತಿಶಯಮಾಶ್ರುತಿಸಮೂಹಮುದರೊಳ್ನಿಸದಂ ||
ಶತರುದ್ರೀಯಮದತಿಶಯ |
ಮತಿಶಯ ಮದರಲ್ಲಿ ಪಂಚಮುಖಪರಮಂತ್ರಂ ॥ ೮೮

ಅಮೃತಪ್ರದಮಾನೆಂಬುದ |
ಸಮರ್ತ್ಯರ್ಮತ್ರ್ಯರ್ಗಳಿಗರಿಪುವಂತಿತ್ತುದು ತಾ ||
ನಮಮ ಶತಮನ್ಯುಗುಪಮ |
ಸ್ಯಮುಸಿಗಮೃತಮಂ ಷಡಕ್ಷರಂ ಶಿವಮಂತ್ರಂ || ೮೯

ವೃ|| ಕಾಮಿತವಸ್ತುವಂ ನೆಗಳಲಾರ್ಪುದು ಕಾಮದುಘಂ ಸುರಗ್ಗೆ ಚಿಂ|
ತಾಮಣಿ ಚಿಂತಿತೇಷ್ಟಮನಮರ್ತ್ಯಗುಮಾರಯೆ ಕಲ್ಪಿತಾರ್ಥಮಂ ||
ನೇಮಿಪುದಲ್ತೆ ಕಲ್ಪತರು ಕಾಮಿತಚಿಂತಿತಕಲ್ಪಿತೇತರೋ |
ದ್ದಾಮಮನುಹಾಪದಪ್ರದಮಿದೆಂದೊಡಿದರ್ಕ್ಕೆಣೆಬಪ್ಪುದಾವುದೋ || ೯೦

ಕಂ|| ಘನಮುಕ್ತಿಕಾಂತೆಗಿದು ತಾಂ |
ಜನನಿ ಲಸದ್ಭಕ್ತಿಯುವತಿಗಿದು ಕೇಳದಿ ಪುರಾ ||
ತನರ ಮತದಂದೆ ಶರಣಾಂ |
ಗನೆಗಭವನನೆಳೆದು ತರ್ಪ್ಪದೂದವಿ ಪೆರತೇಂ || ೯೧

ವೃ|| ದುರಿತೌಘಧ್ವಾಂತವಿಧ್ವಂಸನ ಖರಕರಮತ್ಯುಗ್ರಮೃತ್ಯುಗ್ರಹಾದ್ರಿ |
ಸ್ಫುರದುದ್ಯದ್ವಜ್ರಮುಜ್ಜೃಂಭಿತಭವನಿವಹಾಂಭೋಧಿಕುಂಭೋದ್ಭವಂ ದು |
ರ್ಧರದುರ್ಮಂತ್ರಾಭ್ರವಿಭ್ರಂಶನಪಟುಪವನಂ ದಂಡಭೃಜ್ಜಂಡಕಾಕೋ ||
ದರನೋಘಜ್ಯೋತಿಪಂಚಾಕ್ಷರಮಿದು ಶಿವತಂತ್ರೋದಿತಂ ದಿವ್ಯಮಂತ್ರಂ||೯೨

ಕಂ|| ಈಮಂತ್ರದಮಿತಮಹಿಮೆಯ |
ಸೀಮೆಯಿತಮಹೀತಳಾಗ್ರದೊಳ್ಬಣ್ಣಿಸಲಾರ್ ||
ಸಾಮರ್ಥ್ಯಸಮೇತಶ್ರೀ |
ಸಾಮರಗುರುತಾನುರನ ಭವನ್ನಿರೆದಪರೇ || ೯೩

ತನುವಿಲ್ಲದತನುವಿಧ್ವಂ |
ಸನಂಗೆ ತನು ಪೇಳಲೆಂದುಮೆಸರಿಲ್ಲದ ಚಿ ||
ದ್ಘನಲಿಂಗಕ್ಕಿದು ಪೆಸರೆಂದೆಸೆ |
ವಿನ್ನೈವರಾರೊ ಪಂಚವರ್ಣದಘನಮಂ || ೯೪

ಅದರಿಂದೆ ನಂಬಿ ಜಪಿಸಿದೊ |
ಡಿದರಿಂ ದೊರೆಕೊಳ್ಗುಮಮಳಶಿವಪದಮಿಂತ ||
ಲ್ಲದೆಪೆರತುಮಾರ್ಗದಿಂದ |
ಪ್ಪುದು ತಾನೆಂಬುದು ಸಭಃಪಯೋಜಪ್ರಾಯಂ || ೯೫

ವೃ|| ಚರಜರಣಾಂಬುಪಂ ತಳೆದು ತದ್ಘನಶೇಷಮನೆಯ್ದೆ ಕೊಂಡು ಶಂ |
ಕರಶರಣರ್ಕ್ಕಳಂ ಸವಿನಯಂ ಮಿಗೆ ಮನ್ನಿಸಿ ಪೆಂಪುಪೆತ್ತು ಭಾ ||
ಸುರಭಸಿತಾಕ್ಷಮಾಲಿಕೆಯುಸಂಗದೊಳಾಂತು ನಿಜಾರ್ಯಪೂಜೆಯುಂ |
ವಿರಚಿಸಿ ಲಿಂಗಮಂ ಭಜಿಸಿದಂಗಿದು ಸಿದ್ಧಿಪುದೀಶ್ವರಾಜ್ಞೆಯಿಂ || ೯೬

ವ|| ಎಂದು ಸಾಂಗಮೆನೆ ತಿಳಿಪಿದಾಗಳ್

ಕಂ ಹೃದಯಪಯೋಜದಪರಿಮಳ |
ಮಿದು ಚೇತಸ್ಸ್ತಂಭದಗ್ರಮಣಿದೀಪಿಕೆ ಮೇ||
ಣಿದುಮಾನಸಮುಕುರದ ಪೊಳ |
ಪಿದು ತಾನೆನಿಸಿದುದು ಗುರುನಿರೂಪಿತಮಂತ್ರಂ || ೯೭

ಬಗೆಗೊಗೆದುದಧಿಕಮುದಮುರೆ|
ನೆಗೆದುದು ರೋಮಾಂಚಮಂಗದೊಳ್ಸುಖಜಳಮು ||
ಕ್ಷಿಗಳಿಂ ಕಳಿದಿಳಿದುದು ಮೆ |
ಲ್ಲಗೆ ಬೆಮರುಣ್ಮಿದುದು ಸಚಿವಸುತನೃಪಸುತರಾ || ೯೮

ವ|| ಇಂತೊಗೆದಸಾತ್ವಿಕಂಬೆರಸು ನಿತ್ಯಸತ್ಯಸಮುಗ್ರೋದಗ್ರಪ್ರಭಾವರಾ ಶ್ರೀಗುರುಚರಣನಖಚಂದ್ರನಂ ನೊಸಲ್ವೆರೆಯಿನಾಲಿಂಗಿಪಂತೆ ಪದೆದೆರಗಿ ನಿಂದು ಕರಾಬ್ಜಮಂ ಮುಗಿದು

ಕಂ|| ಜಯಜಯರವಮುಣ್ಮಿರೆ ಸಂ |
ಶಯರಹಿತಾಶಯಸಮೇತರಾನಂದಯುತರ್ ||
ಭಯಭಕ್ತಿವೆರಸು ನುತಿಸಿದ |
ರಯ ಕರಣಕರರ್ಕ್ಕುಮಾರರಾಗುವರನಂ || ೯೯

ದುರಿತಾಬ್ಜಸುಧಾಕರ ಭೀ ।
ಕರಭವಬಂಧನತಮೋದಿವಾಕರ ಮುಷಿಮಾ ॥
ಕರ ವಿತತಕೃಪಾಕರಕೇ ।
ಕರ ಜಯ ಜಗತೀಜನೋತ್ತಮಸ್ತುತಿಪಾತ್ರಾ ॥ ೧೦೦

ತನುವಂ ಮನವಂ ಘನಜೇ ।
ವನಮಂ ಪರಿಶುದ್ಧಿಗೊಳಿಸಿ ಶಿವಚಿತ್ಕಳೆ ಪಾ ॥
ವನಪಂಚಾಕ್ಷರಮಂತ್ರಮ ।
ನನುಗೊಳಿಸಿದಿರಾರ್ಯಕುಲಕುಶೇಶಯಮಿಹಿರಾ ॥ ೧೦೧

ನಿಗಮಾಂತಭೂಮಿಕಾಂತಃ ।
ಪ್ರಗತಶಿವಾದ್ವೈತಚಿನ್ಮಹಾನಿಧಿಯನಿದಂ ॥
ವಿಗತಾಂಜನನರಿದೆಮಗುರೆ ।
ತೆಗೆದಿತ್ತುದು ಚಿತ್ರಮತ್ತೆ ನೀಂ ಗುರುವರ್ಯಾ ॥ ೧೦೨

ವ॥ ಎಂದು ವಿಪುಳತರಭಕ್ತಿಯಿಂ ವಿವಿಧಸ್ತುತಿಗಳಿಂ ಪೊಗಳ್ದು ಸಾಷ್ಟಾಂಗ ಪ್ರಣಾಮಂಗೈದು ನಿರತಿಶಯವಸುವಸನಮಣಿಭರಣಂಗಳಿಂ ಪೂಜಿಸಿ ಪೂರ್ಣಮನೋರಥಂಬಡೆದು ಮಗುಳ್ದು ಪೊಡಮಡಲೊಡನೆ

ಶ್ಲೋ॥ ಯಾಭ್ಯಾಮುಮಾಸ್ಯನೇತ್ರಾಬ್ಜನೀಲಾಬ್ಜೇ ಸುವಿಕಾಸಿತೇ ।
ಸದಾ ಶಂಭೋಃ ಖರತ್ನಾಬ್ಜನೇತ್ರೇ ತೇ ಸ್ತೋಮತಾಟ್ಟರಂ ॥ ೧೦೩

ವೃ॥ ಪ್ರಾಂಚತ್ಪಂಚಮರುದ್ವಿಹಾರನಗರೀ ಪಂಚಾಸ್ತ್ರಸೃಷ್ಟಿಃಕರೀ ।
ಪಂಚಾಚಾರಪರಾಕ್ಷಸಂಚಯಚರೀ ಪಂಚಾನನಾಂತಃಸ್ಫುರೀ ॥
ಪಂಚೀಭೂತಜಗತ್ಪ್ರಪಂಚಲಹರೀ ಪಂಚಪ್ರಮಾಮಂಜರೀ ।
ಪಂಚಬ್ರಹ್ಮಧರೀ ಮಹಾಸುಖಕರೀ ಪಂಚಾಕ್ಷರೀ ಪಾತು ನಃ ॥ ೧೦೪

ವ॥ ಎಂದಶೇಷಪ್ರಭಾವರಾಶಿಯಪ್ಪ ವಂದನಂಗೈದು ತತ್ಪಿತೃಗಳಿಂ ಪೂಜೆಗೊಂಡಖಂಡವಿಭವಂ ಮಿಗೆ ನಿಜಗೇಹಕ್ಕೆ ತೆರಳ್ದನ್ನೆಗಮಿತ್ತಲ್॥..............

ವೃ॥ ವಿತತಮಹೋತ್ಸವಂ ಬೆರಸು ಸತ್ಕುಲಸದ್ಗುಣಸದ್ವಯಸ್ಸಮು ।
ನ್ನತಮತಿಯುಕ್ತೆಯಂ ಕಮಳಲೋಚನೆಯೆಂಬ ಮನೋಜ್ಞಕನ್ನೆಯಂ ॥
ಮಿತವಚನಂಗೆ ಚೋಳಧರಣೀಪತಿ ಮಾಡಿ ವಿವಾಹಮಂ ಸಮು ।
ಸ್ಥಿತಿ ಪೃಥುಸಂಪದಂಗೊಳಿಸಿ ರಂಜಿಸಿದಂ ಬುಧಕಲ್ಪಭೂರುಹಂ ॥ ೧೦೫

ವ॥ ಅಂತೆಸಗಲೊಡನೆ

ವೃ॥ ಸುದತೀಸಸ್ಮೇರವಕ್ತ್ರಾಂಬುಜಪರಿಮಳಮಂ ಘ್ರಾಣದಿಂ ತದ್ವಚಸ್ಸಂ ।
ಪದಮಂ ಶ್ರೋತ್ರಂಗಳಿಂ ತನ್ಮೃದುಳತರತನುಸ್ಪರ್ಶಮಂ ದೇಹದಿಂ ತ ॥
ದ್ವಿದಿತೋದ್ಯದ್ರೂಪಮಂ ನೇತ್ರದಿನಧರಸುಧಾಸಾರಮಂ ಜಿಹ್ವೆಯಿಂ ಸ ।
ಮ್ಮದದಿಂದಂ ಸೇವಿಸುತ್ತುಂ ಮಿತವಚನಕುಮಾರಂ ಕರಂ ರಂಜಿಸಿರ್ದಂ॥ ೧೦೬

ವ॥ ಇಂತತಿಪ್ರಮೋದದಿನವನಭಿನವಸಂಸಾರಸುಖಮನನವರತಮನುಭವಿ
ಸುತ್ತುಮಿರ್ದನಿಪ್ಪನ್ನೆಗಂ

ವೃ॥ ಕರತಳಪಲ್ಲವಕ್ಕೆ ನವರಾಗತೆ ನೇತ್ರಸರೋರುಹಕ್ಕೆ ಭಾ ।
ಸುರತೆ ಮುಖೇಂದುಬಿಂಬಕಮಳಾಂಶುವಿಳಾಸತೆ ಕೋಮಳಾಂಗಬಂ ॥
ಧುರಹರಿಚಂದನಕ್ಕೆ ಕಮನೀಯತೆ ಸಾರ್ದಿರೆ ಯೌವನೋದಯ ।
ಸ್ಫುರಿತವಸಂತಮೆಯ್ದಿದುದು ತನ್ನೃಪನಂದನ ರಂಜನಾಸ್ಪದಂ ॥ ೧೦೭

ವ॥ ಅಂತೆಯ್ದಿದನರುಜೌವನದ ಸಿರಿಯಂ ಮೈಸಿರಿಯೊಡನೆ ಕೇಳಿಯಿಂ
ಕೆಳೆಗೊಳಿಸಿ

ವೃ॥ ನಿಡುಗಣ್ಪಂಕಜಪತ್ರಮಂ ಪಳಿಯೆ ವಕ್ತ್ರಂ ವಾರಿಜಾರಾತಿಯಂ ।
ಜಡಿಯಲ್ಬಸ್ಸುಸುತಾತರಂಗತತಿಯಂ ತಳ್ಪೊಯ್ಯೆ ಬಾಹುದ್ವಯಂ ॥
ಕುಡುವುರ್ವಿಕ್ಷುಧನುರ್ಲತಾಲಲಿತಮಂ ಕೀಳ್ಮಾಡೆ ಪೊಂಬಾಳೆಯಂ ।
ತೊಡೆ ರೋಡಾಡೆ ನರೇಂದ್ರಸೂನು ತಳೆದಂ ತಾರುಣ್ಯಲಾವಣ್ಯಮಂ॥ ೧೦೮

ಅಸರನಾಥಚಂದ್ರನ ಮುಖೇಂದುವನೀಕ್ಷಿಸಿ ಗಾಡಿಕಾರ್ತಿಯ ।
ರ್ಮಾನಸಮಧ್ಯದೊಳ್ತಳಿಯೆ ತನ್ನವಮೂರ್ತಿಯನಂದು ಕಾಣುತುಂ ॥
ಮೀನಪತಾಕನೈದುಶರದಿಂ ಪುರುಡಿಂದಿಸೆ ನೊಂದು ಬೆಂದು ಕಾ ।
ಮಾನಳನಿಂ ಲತಾಭವನದೊಳ್ಪೊರಳ್ವನ್ನರ್ಪನಂದಸಂಗಳೊಳ್ ॥ ೧೦೯

ವ|| ಅಂತುಮಲ್ಲದೆಯುಂ

ಕಂ|| ಅಮೃತಾಂಬುಧಿಯಗುಣಂಗಳ |
ನಮೃತಕರಂ ತಾಳ್ದು ತೋರ್ಪವೋಲ್ಕ್ರಮದಿಂ ತಾ ||
ನಮಮ ತಳೆದೊಪ್ಪಿದಂ ಸಕ |
ಳಮನೋಜ್ಞಂ ಜನಕನಮಳತರಗುಣಗಣಮಂ || ೧೧೦

ಪಿರಿದುಸಿರಿ ಯಿರೆಯುಮವನೀ |
ಶ್ವರತನಯಂ ವಿಮಳಗುಣಮನೊಳಕೊಂಡೆಸೆದಂ ||
ಸರಸಿಜಮೆನೆ ಮಿತ್ರರುಚಿ |
ಸ್ಫುರಿತಾವೋದಾವಹಂ ಸದಾಳಿನಿಷೇವ್ಯಂ || ೧೧೧

ವೃ|| ಪಿತರಿಂದಿಂದೆ ದಿವ್ಯನಗಮಂ ನಗಮಂ ಘನಧೈರ್ಯದಿಂದೆ ವಿ |
ಶ್ರುತಯಶದಿಂದೆ ಪದ್ಮರಿಪುವಂ ರಿಪುವಂ ನಿಜತೇಜದಿಂದೆ ಮಂ ||
ಡಿತನುತಿಯಿಂದೆ ಪದ್ಮಜನಿಯಂ ಜನಿಯಂ ಶಿವಮಂತ್ರದಿಂದೆ ರಂ |
ಜಿತಗುಣರಾಜಿರಾಜಿತನವಂ ಜಯಿಸಿರ್ದನುದಾತ್ತವೈಭವಂ || ೧೧೨

ವ|| ಇಂತುವಾಮಹೀಕಾಂತಸುತಂ ಪೊಗಳ್ತೆವಡೆವೊಪ್ಪುತ್ತು ಮಿರ್ದೊಂ
ದುಶುಭದಿನದಲ್ಲಿ

ವೃ|| ಒರೆ ಧರಣೀಶಪುತ್ರರೊಡನುಗ್ಗಡಿಸುತ್ತಿರೆ ವಂದಿವೃಂದಮೇ |
ಳ್ತರೆಬಳಿಯೊಳ್ಮಹಾಸಚಿವಸಂತತಿ ರತ್ನವಿಭೂಷಣಾಂಶು ನೇ ||
ತ್ರರುಚಿ ಮುಖಪ್ರಕಾಶವೊಡನೊಪ್ಪಿರೆ ಮುಪ್ಪುರಿಗೊಂಡು ರಾಜಶೇ |
ಖರನತುಳೋತ್ಸವಂ ಜನಕನೋಲಗಮಂ ಪುಗುತಂದನಕ್ಕರಿಂ || ೧೧೩

ವ|| ಅಂತು ತತ್ಪಾದಸೇವೆಗೆಯ್ಯಲೆಂದೊಯ್ಯನೆ ಬಪ್ಪಾಗಳ್

ವೃ|| ಇದಿರೊಳ್ಕಂಡಿರದೇಳ್ವಮಂಡಲಿಕರಂ ಕೈಸನ್ನೆಯಿಂದೇಳಲೀ |
ಯದೆ ಪೋ ಸಂಮುಖಮೆಂಬವಂದಿಜನಮಂ ಕಣ್ಸನ್ನೆಯಿಂದೊತ್ತಿಸ ||
ಮ್ಮದಮಂ ತಾಳ್ದುಮದಕ್ಕೆ ಪಕ್ಕುಗುಡದಾ ಸತ್ಕೀರ್ತಿರಾಜೋಳೇಂದ್ರಸ |
ತ್ಪದಪದ್ಮಕ್ಕೆ ಪುರಂದರಮಂ ಪಡೆದು ಮೌಲಿನ್ಯೋತಿಯಿಂ ಮಾಳ್ಪದಂ || ೧೧೪

ಅಂತುಪೊಡಮೊಡಲೊಡನೆ

ಕಂ॥ ತೆಗೆದು ಬಿಗಿಯಪ್ಪಿ ಪರಸು।
ತ್ತಗಣಿತಸಂಭ್ರಮದೆ ನೃಪತಿಯರ್ಧಾಸನದ ॥
ಲ್ಲಿಗೆ ಸೆಳೆಯೆ ವಿನಯದಿಂ ಮೆ।
ಲ್ಲಗೆ ಜಗುಳ್ದು ತದಂಘ್ರಿಯೊತ್ತಿನೊಳ್ಕುಳ್ಳಿರ್ದಂ ॥ ೧೧೫

ವ॥ ಆಗಳ್

ಕಂ॥ ಪರಿಮಳಮನುಂಡು ಏಕಚಾಂ।
ಬುರಹದೊಳೆರಡೊಂದುಗೂಡಿ ಸುಳಿವಳಿಗಳಿವೆಂ ॥
ಬಿರವನನುಕರಿಸಿ ಯುವಮುಖ।
ಸರಸಿಜದೊಳ್ನೃಪನ ಕಣ್ಗಳೇಂತೊಳಗಿದುವೋ ॥ ೧೧೬

ವ॥ ಅಂತುನಿಡುನೇಹದಿಂ ನಿರೀಕ್ಷಿಸಿ ಮಹೀಪತಿ ಪತಿನೋಹಿಮಂತ್ರಿಪತಿ
ಯೊಡನಿಂತೆಂದಂ

ಕಂ॥ ಧರಣೀತಳಭಾರಮನೀ।
ತರುಣಂ ತಳೆಯಲ್ಕೆ ನೆರೆದನೀತನ ಭುಜಭೂ ॥
ಧರದೊಳಿದನಿಳಿಪಿ ಪುರಹರ।
ಚರಣೈಕಧ್ಯಾನಮಾಂತು ಸುಖದಿಂದಿರ್ಪೆಂ ॥ ೧೧೭

ಎಂದೊಡಮಾತ್ಯನೊಡಂಬ।
ಟ್ಟಿಂದನಿಳಾರಮಣ ಕಜ್ಜಮಿದು ಲೇಸು ಸದಾ ॥
ನಂದನಿಧಿನಂದನಂಗೊಲ।
ವಿಂದಂ ಬಗೆದಂತೆ ಮಾಳ್ಪುದತುಳೋತ್ಸವಮಂ ॥ ೧೧೮

ವ॥ ಎಂಬ ಹಿತೋಕ್ತಿಯನವಧರಿಸಿ ಮೌಹೂರ್ತಿಕರ್ಸ್ಗಮಕಟ್ಟಿದಸುಮು
ಹೂರ್ತದೊಳತುಳತರಸಂಭ್ರಮಂಬೆರಸು

ವೃ॥ ಧರಣೀಕಾಂತೆಗೆ ಸಂತಸಂ ರಿಪುಮಹೀಕಾಂತರ್ಗೆ ಸಂತಾಪಮಿಂ।
ದಿರೆಗಾನಂದರಸಂ ಬುಧಪ್ರಕರದಾರಿದ್ರ್ಯಕ್ಕೆ ವಿಚ್ಛೇದಮೀ ॥
ಶ್ವರಭಕ್ತರ್ಗ್ಗತಿ ಸಂಪದಂ ನೆಗಳೆ ಸತ್ಯೇಂದ್ರಕ್ಷಿತೀನಾಥನಾ।
ದರದಿಂದಾತ್ಮಭವಂಗೆ ಪಟ್ಟಮನಮಂದೋತ್ಸಾಹದಿಂ ಕಟ್ಟಿದಂ ॥ ೧೧೯

ಸಕಳೋರ್ವೀಪಾಲರೆಲ್ಲರ್ನೆರೆದುಪಿರಿದು ಸತ್ಪ್ರೇಮದಿಂ ಬಂದು ಸಂದು |
ತ್ಸುಕಮಂ ಮುಂದಿಟ್ಟು ಕಪ್ಪಂಬಿಡಿದು ಕರತುರಂಗಂಗಳಂ ಪೊಂಗಳಂ ಮಾ||
ಣಿಕಳಾಪದ್ಯೋತಮೆತ್ತಂ ಪಸರಿಸೆ ಮಣಿದಂಘ್ರಿದ್ವಯೋಪಾಂತದೊಳ್ನಿಂ |
ದಕಳಂಕರ್ಸ್ವೀವಿಸುತ್ತೊಪ್ಪಿರೆ ಮೆರೆದ ನಿಳಾಭೃತ್ಸುತಂ ಪಟ್ಟಬದ್ಧಂ ||೨೨೦||

ವ|| ಅಲ್ಲಿಂಬಳಿಯಿಂ

ಸ್ರ|| ಶಿವಲಿಂಗಾಂಘ್ರಿಸಮರ್ಚನೈಕಸುಖದಿಂ ದೋರೊರ್ಮೆ ವಿಖ್ಯಾತಶಾಂ |
ಭವಲೀಲಾಕಥನಪ್ರಸಂಗರಸದಿಂದೋರೊರ್ಮೆ ಮಾಹೇಶ್ವರ ||
ಪ್ರವಿರಾಜತ್ಪದಪದ್ಮಸೇವನದಿನಂದೋರೊರ್ಮೆ ಸತ್ಯೇಂದ್ರಭೂ |
ಧವಬೃಂದಾರಕ ನಿಂತು ಪೊಳ್ತುಗಳೆದಂ ಸನ್ಮಾರ್ಗಸಾರೋದಯಂ ||೧೨೧

ವ|| ಅಂತುಮಲ್ಲದೆಯುಂ

ಸ್ರ|| ಮದಮದವದ್ಗಜವ್ರಜಮಸಿಕ್ಕಿ ದುರೀಷಣಭೀಷಣಾಹಿಯುಂ |
ಸದೆದತನುಗ್ರಹಾಗ್ರಹಮಸರ್ದಿಸಿ ಮರ್ದಿಸಿ ರಾಗರೋಗಮಂ ||
ಕೆದರ್ದು ವಿಮೋಹಸಾಹಸಮನುನ್ನತಸನ್ಮತವೃತ್ತಿವೆತ್ತು ತಾ |
ಳ್ದಿದನವನೀಶನೀಶಪದಮಂ ಪದಪಿಂ ಹೃದಯಾಂತರಾಳದೊಳ್ || ೧೨೨

ವ|| ಅಂತುಮಾಸತ್ಯೇಂದ್ರನರೇಂದ್ರನುಪೇಂದ್ರ ವಂದ್ಯನನಾರಾಧಿಸುತ್ತು
ಮಿರೆಯಿರೆ

ಕಂ|| ಅನುರಕ್ತತೆಯುಂ ಪ್ರಕೃತಿಯೊ |
ಳನುವರ್ತನೆಯುಂ ಸ್ವಕೀಯಜನಬೃಂದದೊಳಂ ||
ದನುಕೂಲತೆಯುಂ ಶರಣರೊ |
ಳನುಗೊಳಿಸಿದನಜಿತತಿಮಿರಮಿಹಿರಂ ಕುವರಂ || ೧೨೩

ವ|| ಅಂತುಮಲ್ಲದೆಯುಂ

ಸ್ರ|| ಜಿತಶತ್ರುಪ್ರಕರಂ ಸಮಾಜಿತಹಿತೋದ್ಯೋಗಂ ಕ್ಷಮಾಧಾರನೋ |
ಚಿತಕೃತ್ಯಂ ಸದುಪಾಯತಂತ್ರನಿಪುಣಂ ಮಂತ್ರಪ್ರವೀಣಂ ವಶೀ ||
ಕೃತಸತ್ವಂ ಸದಯಸ್ವಭಾವನನಿಶಂ ಶಕ್ತಿಪ್ರಯುಕ್ತಂ ಶಿವಾ |
ರ್ಚಿತನಿರ್ದ್ವಂ ಪಿತನಂತೆ ಪೂರ್ಣವಿಭವಂ ವಿಶ್ವಂಭರಾ ವಲ್ಲಭಂ || ೧೨೪

ಸಿರಿಯೊಳ್ಶ್ರೀಕಾಂತನೆಂತಂತತುಳಕಳೆಗಳೊಳ್ಕಂಜಸಂಜಾತನೆಂತಂ |
ತರಿವರ್ಗಧ್ವಂಸದೊಳೂರ್ಧ್ವಜಟಿಯುತನುಜನೆಂತಂತೆ ಗಾಂಭೀರ್ಯದೊಳ್ವಾ ||
ಸುರಪಾರಾಪಾರನೆಂತಂತಧಿಕವಿಭವದೊಳ್ಶಕ್ರನೆಂತಂತೆ ದಾನೋ |
ತ್ಕರದೊಳ್ಮಂದಾರನೆಂತಂತೆಸೆದನಭಿನವಂ ಭಾರತೀಭಾಗಧೇಯಂ || ೧೨೫

ಶ್ರೀಮತ್ಕಳಾಧರಕಳಾಧರೆ ದಿವ್ಯದೇವ |
ರಾಮಾರಮಾರಮುಸಮರ್ಚಿತ ಪಾದಪದ್ಮೇ ||
ಕಾಮಪ್ರಿಯಾಪ್ರಣತೆ ಪಾರ್ವತಿಪಾಲಿಸೆನ್ನಂ |
ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ || ೧೨೬

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣಮಹಾಪ್ರಭಾಪಟಲ
ಪರಿವೃತಪರಿಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾ
ಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾ
ವಿಶಾರದ ಶ್ರೀಷಡಕ್ಷರದೇವವಿರಚಿತ ಮಪ್ಪ ರಾಜಶೇ
ಖರವಿಳಾಸವಿಪುಳಪ್ರಬಂಧದೊಳ್ರಾಜಶೇಖ
ರಾಭ್ಯುದಯವರ್ಣನಂ
ಚತುರ್ಥಾಶ್ವಾಸಂ
ಸಂಪೂರ್ಣಂ.



# ಪಂಚಮಾಶ್ವಾಸಂ.



ಕಂ|| ಶ್ರೀಗೌರೀ ಕುಚಘುಸೃಣಪ |
ರಾಗಾರುಣವಕ್ಷನುಕ್ಷಲಕ್ಷ್ಮಂ ವಿಳಸದ್ಭೋ ||
ಗೀಂದ್ರಕಂಕಣಂ ಗುಣ |
ಸಾಗರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಮತ್ತಮಾನವೇಂದ್ರಕುಮಾರನಗಣಿತಗುಣಮಣಿಗಣರೋಹಣಧರ
ಣೀಧರನುಂ, ಶಿವಶರಣಚರಣಚಾಮೀಕರಾರವಿಂದಸಂದೋಹಪರಾಗಸಾರಕಾ
ಶ್ಮೀರಜಲಾಮಲಲಾಟತಟನುಮಭಿನವವಿಭವಾತಿಶಯತಿರಸ್ಕೃತ ಭರತಭಗೀರಥ
ದಶರಥಪ್ರಮುಖನಿಖಿಳಪಾರ್ಥಿವಪ್ರತಾನನುಂ, ಸಮಧಿಗತಸಂಪೂಜ್ಯರಾಜ್ಯಲ
ಕ್ಷ್ಮೀರಕ್ಷಣವಿಚಕ್ಷಣದಕ್ಷಿಣದೋಸ್ತಂಭಸಂರಂಭೋತ್ತಂಭಿತಾಸಿದಂಭೋಳಿದಳಿ
ತಾರಿಕುಂಭಿಕುಂಭಿಸೀಧರಶುಂಭತ್ಕುಂಭತಟಗಳಿತವಿಪುಳವಿಮಳ ಮುಕ್ತಾಫಳಾವ
ಳೀಪರಿಷ್ಕೃತಮಹಿತಮಹಾವಹೀಮಾನಿನೀಕನುಂ, ಸಮದಸಮಸ್ತಸಾಮಂತ
ಸೀಮಂತಿನೀಸೀಮಂತಸಿಂದೂರಪೂರಪಲ್ಲವಪ್ರಸರರಸರಣಚರಣ ವಿತತಪ್ರತಾಪ
ತಪನಕರನಿಕರಪರಿವೃತಪದ್ಮಸದ್ಮಾಂಡಭಾಂಡಬಹಿಸ್ಸಮಸ್ತೋಮನುಮಮುಂ
ಕುಂದಮಂದಾರಚಂದ್ರಕಾಡಿಂಡೀರಪಿಂಡಪುಂಡರೀಕಪಾಂಡುರಾಖಂಡಯಶಶ್ರೀ
ಖಂಡಮಂಡಿತನಿಖಿಳದಿಕ್ಕಾಮಿನೀಸ್ತನಕಳಶಕನತ್ಕಪ್ರೋಳ್ಳಮಂಡಳನುಂ, ಸುಕವಿನಿ
ಕರದಾರಿದ್ರ್ಯವಿದ್ರಾವಣದ್ರವಿಣ ಧಾರಾಧರ ಕರಾಗ್ರವಿರಾಜಿತಸುರಧರಾರುಹಪ್ರ
ಭಾವನುಂ, ಬುಧಕದಂಬ ಹೃದ್ಯಾನವದ್ಯವಿದ್ಯಾನವದ್ಯಾಶ್ರಯಕ್ಷೀರಪಾರಾವಾ
ರನುಂ, ಅಮಂದಸೌಂದರ್ಯಸಂದೋಹಮಂದೀಕೃತಕಂದರ್ಪದರ್ಪನುಂ, ಅನವರತ
ವಿನಮದವನಿಧವನಿವಹ ಮಕುಟತಟಘಟಿತ ಮಣಿಕಿರಣಪಟಲಪಾಟಲಿತಪದನ
ಸುಧಾಕರನುಂ, ಅಖರ್ವ ಶೌರ್ಯಧೈರ್ಯ ಚಾತುರ್ಯಮಾಧುರ್ಯ ಸಾಹಸೌದಾರ್ಯಸ್ಥೈರ್ಯ

ಗಾಂಭೀರ್ಯಪರಿಷ್ಕರಣಗಣ ಭೂಷಿತನುಂ, ಅಭಿನವಶಿವಭಕ್ತಿಸಂಪದಾಮೋದಸಮು
ದಯ ಮಧುರತರ ಹೃದಯ ಪಯೋಜನುಮೆನಿಸಿ ಪೊಗಳ್ತೆವಡೆದು

ಕಂ|| ಬಲವತ್ಪ್ರತಾಪನಿಧಿ ಜಿತ |
ಬಲಪ್ರಭಂ ವಿತತರಣದೆ ವಿತರಣದೆ ಮಹಾ ||
ಬಲಯುತರನರ್ಥಿಜನಮಂ |
ತಲೆವಾಗಿಸುವಂ ಸಮಂತು ತಲೆದೂಗಿಸುವಂ || ೨

ವೃ|| ಶಶಿ ಶಂಖಂ ತಾರಕಾವಮೌಕ್ತಿಕಮಮರನದೀಸಂಗತಂ ಪೂರ್ವದಿಕ್ಸ |
ವೃಶಿಖಾವದ್ಬಾಡಬಂ ದಿಗ್ಗಜಜಲಗಜಮುರ್ವೀಧರವ್ರಾತಭೀತಾ ||
ದ್ರಿಶತಂ ನಾಗಾಂಬುನಾಗಂ ಮನುಜಜಳಮನುಷ್ಯಂ ಮಹಾಕೂರ್ಮಕೂರ್ಮಂ|
ವಿಶದಂ ತತ್ಕೀರ್ತಿದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದು ಶೋಕ್ಕ್ರಂ||

ವ|| ಅಂತುಮಲ್ಲದೆ

ಕಂ|| ಎಸಳೆ ದೆಸೆ ಮಿಸುನಿವೆಟ್ಟಂ |
ಪೊಸಕರ್ಣಿಕೆ ಶರಧಿ ಮಧು ಮಧುವ್ರತಮೆ ಮುಗಿಲ್ ||
ನಿಸದಮೆನೆ ಭುವನಭುವನಜ |
ಮೆಸೆದುದು ಭೂಧವನಕೀರ್ತಿ ಕಮಳಾಕರದೊಳ್ || ೪

ವೃ|| ತುರಗಖುರಾಗ್ರಘಾತಕೃತಭೂತಳರಂಧ್ರ ವಿನಿರ್ಗತಾಹಿರಾ |
ಜರುಚಿರಶೀರ್ಷರತ್ನದೃಢಬೀಜಕರಾಂಕುರತತ್ಪ್ರತಾಪವ ||
ಲ್ಲರಿ ರವಿರೋಚಿಯೆಂಬಮಿಷದಿಂ ದಶದಿಕ್ಕನೆ ಪರ್ಬಿ ಪೆತ್ತುದಾ |
ಖರಕರಪುಷ್ಪಮಂ ಕನಕಭೂಧ್ರಬೃಹತ್ಫಳಮಂ ಮಹೀಶನಾ || ೫

ವ|| ಮತ್ತಂ

ಕಂ|| ಅಮಮ ಮಹೀರಮಣನ ತೇ |
ಜಮನೇನೆಂಬೆಂ ಪೊದಳ್ದರವಿಶತರುಚಿಯಿಂ ||
ದಮದರ್ಪ ಪೊರವಳಯಮಂ ಹೇ |
ಮಮಯಮಿಗೆಸಿಸಿತ್ತ್ರಜಾಂಡಮಂಡಳಮನಿತಂ || ೬

ವೃ॥ ಪಟುತದ್ದೋರ್ದಂಡಚಂಡೋದ್ಭಟ ವಿಕಟಮಹಾರಾಹು ಶತ್ರುಕ್ಷಿತೀಶ।
ಸ್ಫುಟಕೀರ್ತ್ಯರ್ದ್ಯತ್ರತಾಪಪ್ರಬಳಕಮಳರಿಪ್ವಾಪ್ತಬಿಂಬಂಗಳಂ ಸಂ ॥
ಘಟಿಸುತ್ತೀರೊಮ್ಮೆನುಂಗಿತ್ತಚಳಜಳಧರ ಜ್ಯೋತಿಬಡ್ಗೋಗ್ರಜಹ್ವೋ ।
ತ್ಕಟನೋಜಃಕ್ಷ್ವೇಡವೈಶ್ವಾನರನಜಿತಮಹಾಭೀಕರಂ ಕಂಚುಕಾಖ್ಯಂ ॥ ೭

ಕಂ॥ ರಿಪುಬಳಕಮಳಾಕರಮಂ ।
ನೃಪದ್ವಿಪಂ ಮಿಕ್ಕುಪೊಕ್ಕು ಕೀಳ್ತಿತ್ತು ॥
ಗ್ರಪರಶಿರಃಪದ್ಮಂಗಳ ।
ನಪರಿಮಿತಮುದಂ ಕರಾಗ್ರದಿಂ ಭದ್ರಗುಣಂ ॥ ೮

ವೃ॥ ಕುಚಕಾಶ್ಮೀರವಿಲೇಪನಂ ಬಿರಿಯೆ ಹೃತ್ಕಾಮಾಗ್ನಿಯಿಂ ಮೌಕ್ತಿಕ ।
ಪ್ರಜಯಂ ಪಾರೆ ಸಿಡಿಲ್ದು ತಾಳ್ದುದು ಘನಗ್ರೀಷ್ಮಾತಪಂ ಪೊಯ್ಯೆ ಸೀ ॥
ಳ್ದಚಲದ್ಗಂಧ ಗಜೇಂದ್ರಕುಂಭದ ಗಳಸ್ಮುಕ್ತಾಫಳ ಶ್ರೀಯನಾ ।
ಖಚರಸ್ತುತ್ಯನರಾಧಿನಾಯಕನ ವೈರಿವ್ರಾತಕಾಂತಾಳಿಯಾ ॥ ೯

ನುಡಿಯೆ ಶುಕವ್ರಜಂ ಜಡಿದು ಮುತ್ತುಗುಮಿಾಗಳೆನುತ್ತೆ ಮೌನದಿಂ ।
ಸಿಡುಜಡೆಗಾಣೆ ಕೇಳಿ ಕವಿದೆಯ್ದುಗುಮೆಂದು ಮುಸುಂಕಿ ಮೇಲುದಂ ॥
ನಡೆಯೆ ಮೃಗೇಂದ್ರನಿಂದು ನಡೆತಂದಪುದೆಂದು ಬಿಗುರ್ತು ಸಿಂದು ಪಾ ।
ವಡರ್ದಳಿವಂಡೆಯುಂತಿರಗಿವಸ್ಸುಗಿವರ್ತ್ತದರಾತಿಕಾಂತೆಯರ್ ॥ ೧೦

ಕಂ॥ ಸರಸಿಜಸಖನಾನರಪತಿ ।
ಯರಿಗಳಸೌಧಾಗ್ರದಲ್ಲಿ ಮೊಳೆತೆಳವುಲ್ಗಾ ॥
ತುರಿಪತುರಂಗಮುನರುಣಂ ।
ಬರಸೆಳೆದು ಮರಳ್ಚಿ ನಡೆವನೆಡದೊಳ್ಬಲದೊಳ್ ॥ ೧೧

ವೃ॥ ಸೌಂದರಿ ಚಾರ ಸಾರಸದಳಾಯತಲೋಚನೆ ನೋಡದಿರ್ಪುದೇ ।
ನಿಂದೆಲೆರಾಜಪತ್ನಿ ಪೊಸಪಣ್ಗಳ ನಲ್ಗುಟುಕಿಕ್ಕು ಪಂಜಬಾ ॥
ಣಂದಯೆಗೆಯ್ಗೆ ಕೇಳ್ನಿನಗೆ ಬಿಂಬಫಳಾಧರೆಯೆಂದು ಶಾರಿಕಾ ।
ಬೃಂದಮರಾತಿಮಂದಿರದೊಳೆಂಬುದು ಬಂದಪುಳಿಂದಿಯರ್ಕ್ಕಳಂ ॥ ೧೨

ಕನಸಿನೊಳ್ಕೈದಿಕಂಡು ನೃಪಭೀಷಣಮೂರ್ತಿಯನಲ್ಲಿ ಭೀತಿಗೊಂ |
ಡನುವಿಸುತೇಳ್ವವೇಳೆಯೊಳೆ ತದ್ವನದೊಳ್ಮೃಗರಾಜನೆಯ್ದೆ ಗ ||
ರ್ಜನೆಗುಡೆ ತದ್ರಣಾದ್ಭುತವಿಜೃಂಭಿತಗರ್ಜನೆಗೆತ್ತ ತೀವ್ರಕಂ |
ಪನಮೆರ್ದೆಗಾಗೆ ತಲ್ಲಳಿಸಿ ಮಲ್ಲಳಿಗೊಳ್ವರರಾತಿಭೂವರರ್ || ೧೩

ಕೃತಪದ್ಮಾನಂದನಾಲಂಬಿತರುಚಿವಿಭವಂ ಮಂಡಲಂಗೊಂಡು ಧಾತ್ರೀ |
ಪತಿಮಾರ್ತಾಂಡಂ ಸುಗೋತ್ರಸ್ಥಿತನೆಸೆಯೆ ರಿಪುಸ್ತ್ರೀಜನಾಕ್ಷ್ಯುತ್ಪಲಂ ದು ||
ಸ್ಥಿತಿಯಿಂ ಸಂಕೋಚಮಂ ತಾಳ್ದಿರೆ ಕಳೆದಿಳಿವಿಂದಿಂದಿರಂಬೋಲ್ಪದಾಬ್ಜ |
ಚ್ಯುತನೊಪ್ಪಿತ್ತನ್ಯರಾಜಾಸ್ತಮಯಸಮಯದೊಳ್ಕಂಕಣಂ ಕಜ್ಜಳಾಂಕಂ ||

ಕಂ|| ಸುರಧೇನುಪಯೋಧರಮಂ |
ಸುರಕುಜದೆಳದಳಿರನಮರಮಣಿಯಂ ಬೆರಲುಂ ||
ಕರಮುಂ ನಖಮುಂ ಪರಿಜಿಂ |
ವರವಿತರಣದಿಂದೆ ಪಳಿಗುಮಾನೃಪಸುತನಾ || ೧೫

ವ|| ಎಂಬತಿಶಯಂಬಡೆದು

ವೃ|| ಪ್ರಣತಪ್ರತ್ಯರ್ಥಿಪೃಥ್ವೀಧವನಿವಹಕಿರೀಟಾಗ್ರಮಾಣಿಕ್ಯಮಾಲಾ |
ಘೃಣಿಚಂಚಚ್ಚಂಚಲಾಂಚತ್ಸುರಪಮಣಿಮಹಾಪೀಠಮೇಘಸ್ಥಪಾದಂ ||
ಗುಣಭಾಸ್ವದ್ರತ್ನರತ್ನಾಕರನಭವಲಸದ್ಭಕ್ತನಾರಾಜಚೂಡಾ |
ಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದನಮುಮಕಳಾಕಾಮಿನೀಜೀವಿತೇಶಂ|| ೧೬

ವ|| ಇಂತೊಪ್ಪುತ್ತುಮಿರ್ದೊಂದುಸುವಾಸರದ ಸುಪ್ರಭಾತಸಮಯದೊ
ಳೀಶ್ವರಾರ್ಚನಂಗೈದನಂತರಂ

ವೃ|| ಮಣಿಕೋಟೀರಾಂಶುವೆತ್ತಂತುರುಗೆಮಿರುಗೆಹಾರಾಂಶುಗಂಡಂಗಳೊಳ್ಮೇ|
ಳ್ಪಣಿಯುತ್ತುಂತೋರೆಕರ್ಣಾಭರಣಕಮನಮುಕ್ತಾಂಶುದಂತಾಂಶುಕೋದ್ಯ|
ನ್ಮಣಿಯಂ ದಂತಾಂಶು ತೀವುತ್ತೆಸೆಯೆ ಮಿಸುಗೆ ವಕ್ತ್ರಾಂಶು ವಜ್ರಾವಳೀಕಂ|
ಕಣವಿಸ್ಫಾರಾಂಶು ವಿಭ್ರಾಜಿಸೆ ಕನಕಲಸತ್ಪೀಠ ದೊಳ್ಭೂಪನಿರ್ದ್ದಂ || ೧೭

ಪಾಡುವಗಾಯಕಕರ್ಣಿವಸಜ್ಜೆಣಿಯರ್ಕರವೆತ್ತಿ ಕೀರ್ತನಂ |
ಮಾಡುವಮಾಗಧರ್ನ್ನುತಿಪಸತ್ಕವಿಗಳ್ಮಣಿದೇಳ್ದು ಕಪ್ಪಮಂ ||
ನೀಡುವಮನ್ನೆಯರ್ಜ್ಜಯ ಸುಖೀಭವ ವಾದಕಶೈವಕೋವಿದ |
ರ್ಕೂಡಿರೆ ಚೆಲ್ವುವೆತ್ತುದು ಸಭಾಸದನಂ ವಸುಧಾಧಿನಾಥನಾ || ೧೬

ಕಂ|| ಚರಣರಣನ್ಮಂಜೀರ |
ಸ್ವರಮುಣ್ಮಿರೆ ಬಂದು ನಿಂದು ಸುಂದರಿಯರ್ಕೆಲ್ಲಿ ||
ಕರಕರರುಹರುಚಿ ಬೆರಸು |
ತ್ತಿರೆ ಬೀಸಿದರೆಸೆವಧವಳತರಚಾಮರಮಂ || ೧೯

ವ|| ಮತ್ತಮಾಮಣಿಗಣಖಚಿತರುಚಿರತರಕನಕಮಯದಿವ್ಯಸಿಂಹಾಸನದಿಕ್ಕೆಲದೊಳ್ಬಿಂಕದಿಂಕೊಂಕಿ ನಿಂದು ಕಂಕಣಝಣತ್ಕೃತಿ ಪೊಣ್ಮೆ ಜಾಣ್ಮೆಯಿಂದೆಳಗಾಳಿಯುಲೆಪದಿಂ ಲಲಿತರಸಾಲಲತೆ ನೆಗೆದು ನುಂಜುಮಂಜರಿಯಂ ಪಸರಿಪಂತೆ ಸೂಳರಿದು ತೋಳಂ ನೆಗಪಿ ಚಾಮರಮಂ ಬೀಸುವಚಾಮರಗ್ರಾಹಿಣಿಯರಿಂ, ಪರಿವಿಡಿಯಿಂ ತರಂಬಿಡಿದು ಕಂದರ್ಪನಂ ಪಿಂದುಗಳೆವಂದಮಂ ತಳೆದುನಿಂದ ರಾಜಪುತ್ರರಿಂದೆಡೆಯಾಡುವಪಡಿಯರತಿಯರ ಕಡೆಗಣ್ಣ ಕುಡಿವೆಳಗೆಂಬಬಳ್ಳಿಮಿಂಚಿಂಗೆ ಭಯಂಬಡೆದು ಪೆಡಂಮೆಟ್ಟುವ ರಾಜಹಂಸಸಮಾಜಮನೋಜೆಯಿಂ ಕರೆದುಚಿತಸ್ಥಾನದೊಳ್ನಿಲಿಪವೇತ್ರಧರರಿಂ, ಮತ್ತಂ ಮುಡಿಯೊಳಿಟ್ಟಮುಗುಳ ಮಾಲೆಯ ಪಣೆಗಮರ್ಚ್ಚಿದಮೃಗಮದತಿಲಕದ ಪರಿಮಳಕ್ಕೆ ಬೆರಸಿ ಪರಿಮರಿಯಾಡುವ ಮರಿದುಂಬಿಗಳ ಬಂಬಲಂ ಪೊಡೆವ ಕರತಳಂ ಕಳ್ತಲೆಯಂ ಜೆಂಕೊಳ್ವಕಮಳದಂತೆ ಕಮನೀಯಮಾಗೆ ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಜೀವಿವರಿಯೆ ಕುಡಿನಿಮಿರ್ದಕಡೆಗಣ್ಗಳ್ಕರ್ಣಪೂರವಾದ ಕಂನೈದಿಲೊಳ್ಪೊಳಂಜುವಂತೆ ಥಳಥಳಿಸಿ ಪೊಳೆಯೆ ತೊಳಪನಾಸಿಕೆಯೆಂಬಸಂಪಗೆಯ ಜಿರಿಮುಗುಳ ಪರಿಸರದೊಳಿರಿಯದೆರಗಿ ಭಯಂಬಡೆದು ಬೆಮರ್ತ್ತರ್ಮೃಗಮದತಿಲಕವೆಂಬ ಮರಿದುಂಬಿಯ ನುಣ್ಬೆಮರ್ವ್ವನಿಯದರಬೆಂಬಳಿಯೊಳಿರ್ದಾಲಂಬಪಂತೆ ನಾಸಾಮಣಿ ಮನೋಜ್ಞಮಾ

ಗೆ ಮಿಾಂಬಳಮಿಗೆಯುಂ ಜೇಂಬೊನ್ನ ಕುಂಭಮುಂ ಸಂಭ್ರಮದಿನರ್ಚಿಸಿದವಿಚಕಿಲ
ಮುಕುಳಮಾಲೆಯಂತೆ ಕುಚತಟದೊಳ್ಕಂಠಮಾಲೆ ಲೀಲೆವಡೆಯೆ ಅಳಿವೆದೆಯುಂ ಸಡಿ
ಲ್ಚಿ ನಿಲಿಸಿದತನುಚಾಪಲತೆಯಂತೆ ತನುಲತೆ ನಿಡುಜಡೆಯಿಂ ಕಡುಬೆಡಂಗುವಡೆಯೆ
ಬಿಸಿನಿಬಿಸಿಮಿಸಿಲನುಟ್ಟಳೆಂಬಂತೆ ಬಿಗಿದುಟ್ಟ ಮಿಸುಸಿವಟ್ಟೆ ಮಿಸುಗುತ್ತಿರೆ ಮಿಸಟಂಬ
ಳಿದು ಕುಸುಮಶರವಿಸರಮುಂ ಪಸರಿಪಕಟಾಕ್ಷರೋಚಿಯಿಂ ರಾಜಪುತ್ರರಂ ಮರು
ಳ್ಗೊಳಿಸಿ ಸಾಲ್ಗೊಂಡು ನಿಂದವಾರಾಂಗನೆಯರಿಂ, ಮತ್ತಂ ಮೊಳಗುವ ಮದ್ದಳೆ
ಯ ಮೋಹಿಪಾವುಜದಿಂಚರಂಗರೆವ ಬಂಚರದಪಾಂಗರಿದು ಪಾಡುವಸಂಗೀತದ
ಸೂಳರಿದೊತ್ತುವ ತಾಳದ ಮಧುರತರನಿನದಂಬೆರದು ಮೇಳಂಗೊಂಡವೇಳೆಯೊ
ಳ್ಸಮಯಸಮುಚಿತನೈಪಥ್ಯಂಗೈದು ಝುಗಝುಗಿಪ ಜವನಿಕೆಯ ಮರೆಯೊಳ್ಕಂದ
ರ್ಪವಿವಾಹದೊಳಂದಂಬಡೆದ ಪೊಂದೆರೆಯುಂ ಮರೆಗೊಂಡು ನಿಂದರತಿಯುಂ ಪೋ
ಲ್ತು ನಿಂದಿರ್ಪ್ಪುದುಂ ನಾಂದಿಯನೋದಿ ಸೂತ್ರಧಾರಂ ಭೋಂಕನೆ ತೆರೆದೆಗೆಯೆ
ಶೃಂಗಾರರಸವಂಗಂ ಬಡೆದಂತೆ ಕಂಗೊಳಿಸಿ ನಿಂದಂಗಪ್ರಭೆ ಮುಗುಳ್ದು ತೆರೆವಿಡಿ
ದಂತಾಗೆ ನಿಜಕಟಾಕ್ಷಶರಮಿರ್ದ್ದಂತೆ ಮುಗುಳ್ಗಣೆಗಳೇವಾಳ್ತೆಯೆಂದು ಕಾವನ
ಕರತಳದಿನವಂ ಕವರ್ತ್ತೆಗೊಂಡು ಚೆಲ್ಲುವಂತೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿ
ಯುಂ ಕೆದರ್ದ್ದು ಮೊದಲೊಳ್ಮೋಹಿಸಿ ಸಭಾಸದರಂಗರಂಗದೊಳಪಾಂಗಪ್ರಭೆ
ನರ್ತಿಸುತ್ತಿರೆ ಮಂದಾನಿಲನಿನಾಂದೋಳಿಪ ಕನಕಲತೆಯಂತಾಂದೋಳನಶೋಭೆ
ದೋರಿ ಮಡುಗಟ್ಟಿದ ಮುಖರಸದೊಳ್ತೇಂಕಿ ತೇಲ್ವಚಪಲಶಫರಂಗಳೆಂಬಂತೆ ಚಂ
ಚಲಾಕ್ಷಿಗಳೆಸೆಯೆ ಮಿಂಚು ನಚ್ಚಣಿವರಿಜುವಡಿದು ನರ್ತಿಪುದೆಂಬಂತೆ ಚಮತ್ಕೃತಿ
ವೀರಿ ಮಂಜುಸಿಂಜಿತಂ ನೆಗಳೆ ಬಾಯೊಳ್ಗಾನಮುಂ ಕೈಯೊಳಭಿನಯಮುಂ ದೃಷ್ಟಿ
ಯೊಳ್ರಸಮುಂ ಪದತಳದೊಳ್ತಾಳಮುಂ ಬೀಸರಂಬೋಗಲೀಯದೆ ಸೆರೆವಿಡಿದು ರೂಪು
ನೇರುಲಾಗುಲವಣಿ ಯಡಪು ತಿರುಪುಕೈಮರೆ ಕಳಾಸಕೂಟಮಾನಂಗಳಂ ಸಂಗ
ಳಿಸಿ ರಸಭಾವಂ ತಪ್ಪದೆ ಗಾಡಿಗಮುಕಂಗುಂದದೆ ಬೆಡಂಗು ಬಿನ್ನಣಂ ಬೇರ್ಪಡದೆ
ಓಜೆಪೊಯ್ಯಾರಮೋಸರಿಸದೆ ಶುದ್ಧದೇಶೀಯಕ್ರಮದಿಂ ಚತುರ್ವಿಧನರ್ತನಮುಂ
ಚತುರಜನಂ ಮೆಚ್ಚುವಂತೆ ತೋರ್ಪ್ಪನರ್ತಕಿಯರಿಂ, ಮತ್ತಂ ರಸವಿಸರಂ ಪಸರಿಸೆ

ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ ಜಾತಿ ಜಾಣ್ಬಡೆಯೆ ಭಾವಂ ಭಾವಜನ ಹೂವಿನಂಬಿನಂತೆ ಮನಮಂ ನಾಂಟೆಯಲಂಕೃತಿ ಚಮತ್ಕೃತಿವೀರೆ ಗುಣಗಣಮಣಿಯರಮೆನಿಸೆ ವೃತ್ತಿ ಬಿತ್ತರಂಬಡೆಯೆ ಪಾಕಂ ಲೋಕೋತ್ತರಮೆನಿಸೆ ಶಯ್ಯೆ ರಯ್ಯಮಾಗೆ ಬಂಧಮುಗುಂದಲೆವಡೆಯೆ ದೋಷಮಂ ದೂರೀಕರಿಸಿ ಭಾಷಾಭೇದದಿಂ ನವೀನಮೆನಿಸಿ ಸವಿನುಡಿಗಳಿಂ ಸರಸತರಮೆನಿಸಿ ಗದ್ಯಪದ್ಯಚಂಪೂಪ್ರಮುಖಪ್ರಬಂಧಂಗಳಂ ಪೇಳ್ದು ಕೇಳ್ವರಚಿತ್ತಮಂ ಕವರ್ತೆಗೊಳ್ವ ಕವೀಂದ್ರವೃಂದದಿಂ, ಮತ್ತಂ ಮಧುರಮಂದ್ರತಾರಸ್ವರಗಳಿಂ ಶ್ರುತಿವೆರಸಿ ಕೇಳ್ವರ ಕಿವಿಗೆ ಸವಿಯುಂ ಸೈಗರೆದು ರಂಗು ರಕ್ತಿದೋರಿ ಶುದ್ಧಮಿಶ್ರಸಂಕೀರ್ಣರಾಗಂಗಳಿಂ ರಂಜಿಸಿ ಪಾಡಿ ಮೋಹಿಪಸಂಗೀತವಿಶಾರದರಿಂ, ಅನೀಶ್ವರಾನ್ಯೇಶ್ವರಾನೇಕೇಶ್ವರಾಭಿಮತವಾದಿವಿವಾದಮಂ ಶ್ರುತ್ಯುಕ್ತಿಯುಕ್ತಿಗಳಿಂ ನಿರಾಕರಿಸಿ ನಿಜಶಿವಾಧಿಕ್ಯಸ್ಥಾಪನಂಗೈವ ವೇದವೇದಾಂತಾದಿಕೋವಿದರಾದವಾದಿಗಳಿಂ ಮತ್ತಂ ಪದಪದಾರ್ಥವಿಭಾಗಂಗೈದು ಮೃದುಮಧುರೋಚ್ಚಾರಣಂಗಳಿಂ ವ್ಯಕ್ತಿಗೈದು ಸೂಕ್ತಿಸುಧಾಬ್ಧಿಯೊಳ್ಮನಮನವಗಾಹಂಗೈಸುವವಾವದೂಕವರೇಣ್ಯರಿಂ, ಮತ್ತಂಮಣಿಮಕುಟಂಗಳೊಂದೊಂದನೊರಸೆ ಸಂದಣಿಗೊಂಡು ಮಿಸುಪ ನೊಸಲ್ವೆರೆಯುಂ ಪದಕಮಳದೊಳ್ಸಂತಂಗೈಸುವಂತೆ ಮಣಿಮಣಿದನರ್ಘಕರಿತುರಗರಥರತ್ನಾದಿಗಳಂ ಕಪ್ಪಂ ಪಿಡಿದು ಕರುಣಂಬಡೆಯಲೆಂದುನಿಂದಂಗವಂಗ ಕಳಿಂಗ ತ್ರಿಲಿಂಗ ಮಗಧ ಮಾಳವ ಗೌಳ ಪಾಂಚಾಳ ನೇಪಾಳ ಹಿಂದೂಳ ಕೇರಳ ಕಾಶ್ಮೀರ ಸೌವೀರ ವಿದರ್ಭ ಬರ್ಬರ ಘೂರ್ಜರಾದಿ ದೇಶಾಧೀಶ್ವರರಿಂ, ಶಕ್ತಿತ್ರಯಚತುರೋಪಾಯ ಪಂಚತಂತ್ರಷಡ್ಗುಣಸಪ್ತಾಂಗಕ್ರಮವಿಚಕ್ಷಣರೆನಿಸಿ ಮಂತಣಂಗೊಂಡ ಮಂತ್ರಿಗಳ ಸಂತತಿಯಿಂ, ಕೈಯೆತ್ತಿ ರಯ್ಯಮೆನೆ ಪೊಗಳ್ವವಂದಿವೃಂದದಿಂ, ಪೊಗಳ್ವಪಾಠಕಪ್ರತಾನದಿಂ, ಸೇಬಿಸಿಂದವೀರಭಟವಾರದಿಂ, ತರಂಗೊಂಡತುರಂಗಿಸಂಘದಿಂ, ಓರಣಿಸಿ ನಿಂದವಾರಣಾರೋಹಕವ್ಯೂಹದಿಂ, ಕಿಷ್ಕಿಂಧತೆಯನಪ್ಪುಗೈದ ಮಂದಸೌಂದರ್ಯಮನೊಳಕೊಂಡು ಸುರೇಂದ್ರಸಭೆಯಂತೆ ವಿಬುಧಾಲಂಕೃತಮುಂ ವಿರಿಂಚಿಸಭೆಯಂತೆ ರಾಜಹಂಸರಾಜಿತಮುಂರಾಮಸಭೆಯಂತೆ ಸುಪ್ರವೀರವಿಳಸಿತಮುಂಹರಸಭೆಯಂತೆ

ವೋಲ್ಕ್ರೀಧರಾರಾಜಿತಮುಂಶಿವಸಭೆಯುಂತ್ಕೆಸದಾನಂದಿಬಂಧುರಮೆನಿಸಿ ನರೇಂದ್ರ
ನೊಡ್ಡೋಲಗವಾಲೋಕಕ್ಕೆ ಕೌತುಕಮನಿತ್ತೀಲೋಕಕ್ಕಿದೇಪಿರಿದೆನಿಸಿಪರಿರಂಜಿಸು
ತಿರ್ದುದಂತುಮಲ್ಲದೆ

ವೃ|| ಮರುದಾಕೀರ್ಣಲಸದ್ಘನಪ್ರಸವತಾರಾರಾಜಿತಂ ಹಂಸಬಂ |
ಧುರಸಾಪಾಳಿರುಚಿಪ್ರಧಾನಕವಿರಾಜಾಲಂಕೃತಂ ದಿವ್ಯಸಿಂ ||
ಧುರಸತ್ವಾವಹರಮ್ಯಮಾತ್ತಕಮಲಾಪಾಂಗ ಪ್ರಭಾಭಾಸುರಂ |
ಸರದಂತಂಬರದಂತೆ ರಂಜಿಸಿದುದಾರಾಜೇಂದ್ರನೊಡ್ಡೋಲಗಂ || ೨೦

ಪೆರಸಾಘೂರ್ಜರ ಕುಳ್ಳಿರಿಲ್ಲಿ ಮಗಧಕ್ಷ್ಮಾಪಾಲ ನೀಂ ಕಾಣ್ಕೆಯಂ |
ನೆರೆ ನೀಡಂಗ ಕಳಿಂಗ ಪಿಂಗು ಕಡೆನಿಲ್ಕರ್ಣಾಟಕಾಧೀಶ ಬಂ ||
ದೆರಗೈ ಕೇರಳ ಪಾಂಡ್ಯ ನೀಂ ಗಳಪದಿರ್ಪಾಂಚಾಳ ಲಾಳಂಗೆ ನೀಂ |
ತೆರಪಂ ಮಾಡೆನುತಲ್ಲಿ ಕಂಚುಕಿಗಳಾಗಳ್ಗರ್ಜಿಸುತ್ತೊಪ್ಪಿದರ್ || ೨೧

ಇದು ಕಾಶ್ಮೀರಮಹೀಶನಿತ್ತಮದವನ್ಮಾತಂಗಸಂಘಾತಮಿಂ |
ತಿದು ಕಾಂಭೋಜ ನರೇಂದ್ರನಟ್ಟಿದಹಯವ್ರಾತಂ ಧರಾಧೀಶ ನೋ ||
ಡಿದು ಪಾಂಚಾಲ ನಲಂಪಿನಿಂ ಕಳುಪಿದುದ್ಯದ್ರತ್ನಸಂತಾನಮಿಂ |
ತಿದು ನೇಪಾಳನೃಪಾಳದತ್ತವಿಳಸನ್ಮುಕ್ತಾವಳೀಭೂಷಣಂ || ೨೨

ವ|| ಎಂದು ದೂತರ್ಬೇರೆಬೇರೆ ಚಪ್ಪನ್ನದೇಶದರಸರ್ಕಳುಪಿದಕಪ್ಪಂ
ಗಳನೊಪ್ಪಿಸುತ್ತುಮಿರ್ಪನ್ನೆಗಂ

ವೃ|| ಪ್ರಾಂಚತ್ಕಾಂಚನವೇತ್ರಮಂಜುಳಕರಂ ಕೂರ್ಪಾಸ ವಿಭ್ರಾಜಿತಂ |
ಚಂಚತ್ಕುಂಡಲಮಂಡಿತಂಗತಿಚಲತ್ಪೀನೋದರಂ ದೀರ್ಘದೇ ||
ಹಂ ಚಿತ್ರಾಂಬರಸಂವೃತೋರುಪೃಥುಮಧ್ಯಂ ಮಸ್ತಕಾವೇಷ್ಟಿತೋ|
ದಂಚತ್ಪೀತಪಟಂ ಪ್ರಸನ್ನವದನಂ ಬಂದಂ ಪ್ರತೀಹಾರಕಂ || ೨೩

ವ|| ಅಂತು ಬಂದು ನಿಂದು ನಿಜನಿಟಿಲತಟಘಟಿತಕರಪುಟನಾಗಿ ದೇವಾಬಿ
ನ್ನಪಮೀಗಳೊರ್ವನಪೂರ್ವಾಗತಕಿರಾತದೂತನ ಭಿನವಕಾರ್ಯವಿಜ್ಞಾಪನೋತ್ಸು
ಕಂ ದ್ವಾರದೇಶದೊಳ್ಬಂದಿರ್ದಪನೆಂಬುದುಮವನಿಪನಪಾಂಗಪ್ರೇರಣೆಯಿಂ ಬರವೇ
ಳೆಂಬುದುಮವಂ ಪೋಗಿ ತಳ್ಪದಾಕ್ರವ್ಯಾದನಾಮವ್ಯಾಧನಂ ಪುಗಿಸಿದಾಗಳ್

ಕಂ|| ತಳಿರ ತಲೆಗಟ್ಟು ದಂತದ |
ಬಳೆ ಕತ್ತುರಿಬೊಟ್ಟು ಮುತ್ತಿನೇಕಾವಳಿಬಿಲ್ ||
ಪೊಳೆವಂಬು ಬೆನ್ನ ನಿಡುಬ |
ತ್ತಳಿಕೆ ಏರಾಜಿಸೆ ಪುಳಿಂದನಂದೊಳಪೊಕ್ಕಂ || ೨೪

ವ|| ಅಂತೊಳಪೊಕ್ಕು ಮಹಾಸ್ಥಾನಮಂ ಕಂಡು ಕೌತುಕಂಬಟ್ಟವನತಶಿರಸ್ಕಂ ಮೆಲ್ಲನೈತಂದನತಿದೂರದೊಳ್ಕೈಯಿಕ್ಕಿ ಮಣಿದು

ಕಂ|| ಕತ್ತುರಿವೀಣೆಯುನಿಭದಲೆ |
ಮುತ್ತಂ ಫಣಿಮಣಿಯುನಮರ್ದಜೇಂಗೊಡಮುಂ ಕಂ ||
ಪೊತ್ತರಿಸುವಬಾವನ್ನಮು |
ನಿತ್ತಂ ಕಾಣ್ಕೆಯನಿಳಾಧಿಪಂಗೆ ಪುಳಿಂದಂ || ೨೫

ವ|| ಅಂತಿತ್ತು ತನ್ನಕಕ್ಷತಳದೊಳಿರುಂಕಿದಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟನಿಗ್ಗವದ ಕರಂಡಕದೊಳಗೆ ಮುದ್ರಿಸಿದ್ದನರ್ಘಮಣಿಯುಂ ಬಾಲದಿನಮಣಿಯಂ ತುಡುಂಕುವ ರಾಹುವೆನಿಸಿ ನಿಜಕರಮೆಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್

ಕಂ|| ಆಮಣಿ ಮೆರೆದುದು ತರುಣನ |
ಭೋಮಣಿ ನಿಜಸುಪ್ರತಾಪವಿಜಿತಂ ಪರಿತಂ ||
ದಾಮುಹಿತರಾಜಶೇಖರ |
ಭೂಮೀಶ್ವರನಂಘ್ರಿಕಮಳಮಂ ಸೇವಿಪವೋಲ್ || ೨೬

ವ|| ಮತ್ತಂ

ಕಂ|| ಹರಿಯುರದೊಳೆಸೆವಕೌಸ್ತುಭ |
ದಿರವಂ ಪಂಭವಿಸಿ ಮೆರೆದುದದು ಹರಿನೀಲ ||
ಸ್ಫುರಿತಪದಾಂಬುಜಪೀಠೋ |
ಪರಿಮುಸ್ಥಿತಮುರುಣರುಚಿರರುಚಿಪರಿಮಿಳಿತಂ || ೨೭

ವ|| ಇಂತೆಸೆವನರ್ಘಮಣಿಯಂ ನೃಪಶಿರೋಮಣಿ ನಿರೀಕ್ಷಿಸಿ ಕೌತುಕ ಮನಾಳ್ದತಿಪ್ರಸನ್ನಮಧುರದೃಷ್ಟಿಯಿಂ ನೋಳ್ಪಾಗಳಾಕಟಾಕ್ಷಮಭಯಂಗುಡೆ ಕೈಂಕರ್ಯಮನಪ್ಪುಗೈದವಂ ನಿಜಾಗಮನವಿಜ್ಞಾಪನೋತ್ಕಂಠತೆಯಿಂದಿಂತೆಂದಂ

ವೃ|| ಸೊಗಯಿಪದಕ್ಷಿಣಾಂಬುಧಿಯ ತೀರದೊಳಿರ್ಪುದು ಬೇಡರೊಗ್ಗಿನಿಂ |
ನಗರಮದೊಂದು ಸಂದಪೆಸರಿಂದೆ ಪುಳಿಂದಪುರಂ ಪೊಡರ್ಪಿನಿಂ ||
ದಗಣಿತಭಾಗ್ಯದಿಂ ಮೆರೆವನಾಪುರದೊಳ್ಕಲಿಕಾಲಮೇಘನಾ |
ಮಗತಕಿರಾತನಾಥನವನೀಶ್ವರ ನಿನ್ನಪದಾಬ್ಜಕಿಂಕರಂ || ೨೮

ಕಂ|| ಶೂರನನವರತಘನಕಾಂ |
ತಾರಾಂತರಚಾರಿ ಕರ್ಕಶಾಂಗಂ ಮೃಗಯಾ ||
ಧೀರಂ ಧೀವರವರನವ |
ನೋರಂತೊಪ್ಪಿರ್ದನಿರ್ಪನಮನಂತರದೊಳ್ || ೨೯

ವೃ|| ಘನಸಮಯಾತ್ಮನಾಥವಿರಹಾತುರೆ ಭೂವಧು ಭೂಮಿಭೃದ್ಘನ |
ಸ್ತನೆ ಶಿಶಿರೋಪಸೇವನೆಯನೊಂದಿರೆ ಬಂದಿರೆ ಚೈತ್ರನಾಗಳಾ ||
ತನಬರವಿಂದೆ ಕಾಮಶಿಖಿ ಪೆರ್ಚಿರೆ ತಾಪಮನಾಂತಳೆಂಬಭಾ |
ವನೆಯನೊಡರ್ಚಿ ಕಾಯ್ಪುಸಗಿ ಬೇಸಗೆ ಪರ್ಬಿತು ಲೋಕಮೆಲ್ಲಮಂ || ೩೦

ಹರಿ ರಂಭಾಪರಿರಂಭಿಯಾದನನಿಲಾಪ್ತಂ ಪುಂಡರೀಕಾಶ್ರಯ |
ಸ್ಥಿರನಾಚ್ಛಾಯೆಯೊಳೊಂದಿದಂ ಯಮನಮರ್ತ್ಯಾರಾತಿನಾಥಂ ನಿಶಾ ||
ಚರನಂಭೋಧಿಗತಂ ಜಲಾಧಿಪತಿಯುದ್ಯಾನಾನ್ವಿತಂ ವಾಯು ಶಂ |
ಕರಮಿತ್ರಂ ಹಿಮವದ್ದಿಶಾನಿಲಯನೀಶಾನಂ ಧೃತೇಂದ್ವಾಪಗಂ || ೩೧

ವ|| ಅಂತುಮಲ್ಲದೆಯುಂ

ಕಂ|| ದೆಸೆವೆಣ್ಗಳ್ಬಿಸುಸಿಲಿಂ |
ಬಸವಳಿದುಃಪೆಂದು ಸುಯ್ದ ಬಿಸುಸುಯ್ಯೆಲರೆಂ ||
ಬೆಸಕಮನೊಡರ್ಚಿ ಬೀಸಿದು |
ದಸದೃಶಸೋಷ್ಣಪ್ರಭಂಜನಂ ಬೇಸಗೆಯೊಳ್ || ೩೨

ಪೊಡವಿಯುರೆತಬಿಳಜಳವುಂ |
ಕುಡಿದುಂ ತೃಷೆಯುಡಗದಾಮರೀಚೀಜಳಮುಂ ||
ತಡೆಯುದೆ ಕುಡಿಯಲ್ಮಿಗೆ ಬಾ |
ಯ್ವಿಡುವಂತಿರೆ ಬಿರಿದಬೀಟೆಗಳ್ಬಿಡದೆಸೆಗುಂ || ೩೩

ಪುಡಿ ತನಗೆಂಡದ ಬೂದಿಯ |
ಪಡಿ ನೆಲಮುಟ್ಟೊಲೆಯ ತೊಲೆಯೆಲಬ್ಬರ್ಿದಯಿಯ ಜಾ|
ಯೆಡೆಯೆಲ*ರ್ಗಿಣಿಯುರಿಗಿದು ಸರಿ ||
ಕಡುವಿಸಿಲೆನಿಸಿರೆ ನಿದಾಘಮೇಂ ಪಸರಿಸಿತೋ || ೩೪

ದಿನಮಣಿಮಣಿಶಾಣೋಪಲ |
ವಿನಿಹಿತಘೃಷ್ಟಾರ್ಕಕಿರಣಖರ್ಬಡ್ಗಲತಾ ||
ಜನಿತಸ್ಫುಲಿಂಗಸಂಘಮಿ |
ದೆನೆ ತದ್ವಿಸ್ಫುರಿತವನ್ಹಿಕಣತತಿಯೆಸೆಗುಂ || ೩೫

ವೃ|| ಇಳೆ ಕಾಯ್ಪೇರಿದುದಬ್ಧಿನೀರ್ದ್ದಿಗೆದುದಾಶಾದಂತಿ ಬಾಯ್ಬಿಟ್ಟುದು |
ರ್ಕ್ಕಳಿದರ್ದ್ದಿಗ್ವರರಂಜಿದರ್ದ್ದಿವಿಜರುರ್ವೀಧ್ರುವ್ರಜಂ ಸೀಳ್ದುದು ||
ಜ್ಜ್ವಳಮಾದತ್ತಿನಬಿಂಬಮಂಬುಜರಮೆಲ್ಲಂ ಬೇಗೆಗೊಂಡತ್ತು ಜಾಂ |
ಬೊಳೆ ಬತ್ತಿತ್ತು ಮರೀಚಿ ಪೊಣ್ಮಿದುದರಣ್ಯಂ ಬೆಂದುದಾಗ್ರೀಷ್ಮದೊಳ್||೩೬

ವ|| ಅಂತುಮಲ್ಲದೆ

ಕಂ|| ಅಗಶಿಖರಂ ಛಿಳಛಿಟಿಲೆನೆ |
ಮಿಗೆ ಸಿಡಿದುದು ಧಗಧಗಸ್ವನಂ ನಿಮಿರೆ ವನಂ ||
ಭುಗಿಲಸುರಿದುದು ಖಗವ್ರಜ |
ಮೃಗತತಿ ಗರಿಘರಿಲನೆಯ್ದೆ ಬೆಂದುದು ಬಿಸಿಲೊಳ್ || ೩೭

ಕೊಳದಂಬು ಬತ್ತೆ ಜುಯ್ಯೆಂ |
ದೊಳಗಣ ನಳಿನಾಳಿ ಕರಿಕುವರಿಗುಮೆನುತ್ತುಂ ||
ಜಳಜಸಖಂ ಜಳಕಿರಣಾ |
ವಳಿಯಂ ಪಿಳಿದಂತೆವೋಲ್ಮರೀಚಿಕೆ ಮೆರೆಗುಂ || ೩೮

ವ॥ ಮತ್ತಮಲ್ಲಿ

ವೃ॥ ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತೆ ಬಂದು ಕೈ ।
ನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್ ॥
ಬಾಡಿ ಬಳಲ್ದು ಬಲ್ಪಳಿದು ಘೀಳಿಡುತಂಗದೊಳೆತ್ತಲುಂ ಪುಗು ।
ಳ್ಮೊಡಿರೆ ಬೀಳ್ದುದರ್ಕಕರಕಲ್ಪಿತಸಂಜ್ವರನೊಂದುಕುಂಜರಂ ॥ ೩೯

ಕಂ॥ ಬಾಯ್ವಿಡುತೈದಿದಮರಿಯಂ ।
ತಾಯ್ವಿಡಿ ನಡೆನೋಡಿ ಬಾಡಿ ತಾಪಂ ಮೊದಲಿಂ ॥
ದಯ್ವಡಿ ನೆಗಳ್ದಿರೆ ತೆಗೆದೇಂ ।
ಕಯ್ವಿಡಿದೂದಿದುದೊ ಸೋಷ್ಣಜಳಮಂ ಬಸಿರಿಂ ॥ ೪೦

ನಡುನೆತ್ತಿಸಿಡಿದು ಮುತ್ತುಗ ।
ಳೊಡೆದುಚ್ಚಳಿಸುತ್ತೆ ಪಾರೆ ಪನಿಗೆತ್ತು ನವಿಲ್ ॥
ತುಡುಕಿ ನಿಜಚಂಚುವಂ ಸುಡೆ ।
ಮಿಡುಕಿದುದು ನಿದಾಘತಪ್ತಕರಿಸಂಕುಳದಾ ॥ ೪೧

ತಳಮಂ ಸುಡೆ ನೆಲನಡಿಯಿಡ ।
ಲಳವಲ್ಲದೆನಿಂದಸಿಂಧುರಂಗಳ ನೆಳಲೊಳ್ ॥
ಬಳಿಗೊಂಡು ನಿಂದು ಬಿಸಿಲುಪ ।
ಟಳಮಂ ಕಳಿಗುಂ ಕ್ಷಣಂ ಮೃಗೇಂದ್ರಕದಂಬಂ ॥ ೪೨

ಕಡುಗಾದಪೆಡೆವಣಿಗೆ ತಲೆ ।
ಗೊಡಪುತ್ತುಂ ಭಯಮನುಳಿದು ಪುಗೆ ಸೋಗೆಯ ಸೊಂ ॥
ಪಡರ್ದಪೊಸಪೀಲಿಯೊಳ್ಫಣಿ ।
ಬಿಡದುರಿದುದದೆಂದೊಡದನದಾರ್ಬಣ್ಣಿಸುವರ್ ॥ ೪೩

ಪೆಡೆಯುಂ ಕೊಡೆಯಂತಿರೆ ಪಿಡಿ ।
ದಡಿಯೊಳ್ನೆರೆ ನಿಂದಮರಿಯನಾನನದೆಲರಿಂ ॥
ಬಿಡದಾಶ್ವಾಸಿಸಿ ಮರುಕಂ ।
ಜಡೆದೋವುತ್ತಿರ್ದುದುರಗಿ ಪರ್ಬಿದಬಿಸಿಲೊಳ್ ॥ ೪೪

ಅಳುರ್ವ*ಬಿಸಿವಿಸಿಲ ಬೇಗೆಯು |
ನಿಳೆ ಸೈರಿಸಲಾರದಭ್ರಗಂಗಾಜಳದೊಳ್ ||
ಮುಳುಗಲಿರದೇಳ್ದವೋಲ್ಕಂ |
ಗೊಳಿಸಿತು ಸುಟ್ಟುರೆ ಸರೇಣು ಪಸರಿಸಿ ನಭದೊಳ್ || ೪೨

ವೃ|| ಸಿಡಿದುದು ದಂತಿದಂತಮದು ಸುಗಡಮಾಗಿರೆ ಕುಂಭಮೌಕ್ತಿಕಂ |
ಪೆಡೆವಣಿ ಪಾರೆ ನೆತ್ತಿ ಬಿರಿದತ್ತಹಿವೃಂದದ ಸಿಂಹಕೇಸರಂ ||
ಪಿಡದುರಿದತ್ತು ಪಕ್ಕಿಗಳ ನುಣ್ಗರಿ ಸೀದುದರಣ್ಯದಲ್ಲಿ ಸಂ |
ಗಡಿಸಿದಋಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ || ೪೬

ಹಿಮತಾಂಬೂಲರಸಾರುಣಾಧರಮುದಂಚದ್ಘರ್ಮವಾರ್ಬಿಂದುಮಿ |
ಶ್ರಮುಖಂ ಕೌಸುಮತಾಲವೃಂತಪವನವ್ಯಸ್ತಾಳಕಂ ಚಂದನಾಂ |
ಕಮುಹೋತ್ತುಂಗಕುಚಂ ನಿತಂಬಶಿಥಿಲಕ್ಷೌಮಾಂಬರಂ ನವ್ಯಪು |
ಷ್ಪಮನೋಜ್ಞಾಭರಣಂ ನಿದಾಘದೊಳೆ ಕಣ್ಗಿಂಬಾಯ್ತು ಕಾಂತಾಜನಂ ||
ಕೊಳದಬ್ಜವ್ರಜಮಂ ಕರಂ ಕೊರಗಿಪಂ ಸೂರಂ ಸಖಂ ತಾಪಮಿ |
ತ್ತಿಳೆಯೊಳ್ತಾನಿದು ಕಾಲದೊಂದುಗುಣಮಕ್ಕುಂ ನೋಡಿಮೆಂದಾಯುವಾ ||
ಸ್ಥಳಸತ್ಪಂಕಜಮಳ್ಕಿ ಬಂದು ನವಯೋಷಿದ್ವಕ್ತ್ರಪೂರ್ಣೇಂದುವಂ |
ಕೆಳೆಗೊಂಡತ್ತೆನೆ ಮಿತ್ರನಾದೊಡಮದೇಂ ಕಾಯ್ವಾತನಂ ಕೂರ್ಪರಾರ್ ||
ಹಿಮಕರಕಾಂತಿಕಾಂತಹಿಮಮಿಶ್ರಿತಚಂದನಲೇಪಲಿಪ್ತಕುಂ |
ಕುಮಸವಕರ್ದಮಾರ್ದ್ರರಮಣೀ ಕಮನೀಯಘನ ಸ್ತನಂಗಳಂ ||
ಸಮುದಿತಮಾನಮಾನಸರೊರಲ್ದು*ಮದರ್ಪ್ಪಿ ತದಂಗಯಷ್ಟಿಸಂ |
ಕ್ರಮಿತನಿಜಾಂಗರಲ್ಲಿ ಕಳಿವರ್ಪ್ಪೊಸ ಬೇಸಗೆಯೊಂದುಬೇಗೆಯಂ || ೪೯

ಗಿರಿಶೃಂಗೋತ್ತುಂಗಚಂಚಚ್ಚಟುಲಖರರುಚಿಗ್ರಾವದಗ್ರಂಗಳೊಳ್ನಿಂ |
ದುರುಕಾಂತಾರಾಂತರಾಳಪ್ರಭವದವಭಯಭ್ರಾಂತಸಾನಾಮೃಗೌಘಂ ||
ನೆರೆಪೆತ್ತಂ ನಿಂದು ತಾಪಂಗಳೆದಿರೆ ಬಳಿಯೊಳ್ತತ್ತಪಸ್ತೇಜಮೆಂಬಂ |
ತಿರೆ ಪರ್ಬ್ಬಿರ್ದರ್ಕತೇಜಂ ಮೆರೆದರಘಹರಧ್ಯಾನಸಾಂದ್ರಮ್ಮುನೀಂದ್ರರ್ ||

ವ|| ಇಂತೞವಿಗೞಿದೞುರ್ದ್ದ ಘನಸಿದಾಘಕಾಲದೊಳ್ಕಾಲಸಿಭಕಾಲಮೇಘಂ ಕಾಲಮೇಘಂಗಳೆ ಮನುಜರೂಪುವಡೆದಂತೆಸೆವತಿಬಳರೆನಿಪಕಿರಾತಪ್ರವೀರರು ಬೇಂಟೆವೋಗಲೆಂದು ಸಮುದಸಮುತ್ಸುಕಚಿತ್ತನಾಗಿ

ವೃ|| ಸುಲಿಪಲ್ಮೊಂಕಿರ್ದ್ದಪುರ್ಬ್ಬಂಬುದಸಿಭತನು ಕೆಂಗಣ್ಗಳೊಳ್ಮೀಸೆ ಜೆಲ್ವಾ |
ಗೆ ಲಸನ್ಮತ್ತೇಭಮುಕ್ತಾಭರಣಮೆಸೆಯೆ ಕೂರ್ಪಾಸಮಂ ತೊಟ್ಟು ಕಟ್ಟು||
ತ್ತೆ ಲತಾಸಂದೋಹದಿಂ ಕೇಶಮನಮರೆ ಧನುರ್ಬ್ಬಾಣಮಂ ತಾಳ್ದು ಕೆರ್ಪ್ಪಂ|
ನಲವಿಂ ಮೆಟ್ಟುತ್ತೆ ಕೂನ್ರ್ನಾಯ್ವೆರಸಿ ಶಬರರೊಂದಾಗಿ ಬಂದಂ ಪುಳಿಂದಂ||

ವ|| ಮತ್ತಮಾಗಳ್

ವೃ|| ಬಿಡುವಲೆ ಸೊರ್ಕ್ಕಮುರ್ದ್ದಪದವಿಲ್ಮಿಡಿವಿಲ್ಲೆಲೆಯಂಬು ಮಿಟ್ಟಿ ಪೇ |
ರಡಿ ಬಡಿಕೋಲ್ತುಪಾಕಮಿಡುಗಲ್ಲೆರೆ ಪೆರ್ಬ್ಬಲೆ ಕೂೞೆ ಗಾಳಮಂ ||
ಟೆಡುವಲೆ ದೀಹದೇಣನುಡಿಗಳಲ್ಲಿ ಯುಡಾಯುಧಮಡ್ಡಣಂ ಸೊಡ |
ಗ್ಗಿಡಿಗಮೆನಿಪ್ಪಿವಂ ಪಿಡಿದು ಬೇಂಟೆಗೆ ಸಂದಪುಳಿಂದರೈದಿದರ್ || ೫೨

ವ|| ಇಂತೈತರೆ ಪುಳಿಂದಪತಿ ಪುಳಿಂದಪುರದುತ್ತರ ದಿಶಾಭಾಗದ ಜೀಮೂತವಸನವೆಂಬ ಗಿರಿಯಸಾರ್ಕ್ಕೆಗೈತರ್ಪ್ಪನಮಾಗಿರಿಯ ತಪ್ಪಲಲ್ಲಿ

ವೃ|| ಹರಹಸ್ತಾಗ್ರದವೋಲಹೀನಕಟಕೋಪೇತಂ ಮರುನ್ಮಾರ್ಗದಂ |
ತಿರೆ ಜಂಜತ್ತ್ವಗರಾಜಋಕ್ಷಯುತಮಂಭೋರಾಶಿಯಂತಾತ್ತಸಿಂ ||
ಧುರಸಾಟೋಪಹರಿಪ್ರಯುಕ್ತಮದು ಯಜ್ಞಾಗಾರದಂತುತ್ಕಟ |
ಸ್ವರಸಂದೀಪ್ತಶಿಖಿದ್ವಿಜಂ ಗಹನಮೊಂದೊಪ್ಪಿತ್ತದೇಂ ಬಂಣಿಪೆಂ || ೫೩

ವ|| ಅಂತುಮಲ್ಲದೆಯುಂ

ವೃ|| ಪಟುಪಂಚಾಸ್ಯಾಗ್ರಪಾದೋಸ್ಮುಖನಖಮುಖನಿರ್ಭಿನ್ನಗಂಧೇಭಕುಂಭ |
ಸ್ಫುಟಕುಂಭೋಸ್ಮುಕ್ತಮುಕ್ತಾಕಣಗಣಕಟದಾನಾಂಬುಸಂಮಿಶ್ರರಕ್ತೋ ||
ತ್ಕಟಧಾರಾಪಾತಪಂಕಪ್ರಗತಮೃಗಪದಪ್ರೇಕ್ಷಣೊಲ್ಲಾಸಭಿಲ್ಲೋ |
ದ್ಭಟಭಾಷಾಘೋಷಮಿಶ್ರಶ್ರುತಿಕಟುವಿಹಗಧ್ವಾನಕಾಂತಂವನಾಂತಂ || ೫೪

ಕಟಕಂಡೂತಿಸಿವಾರಣೈಕಮತಿ ಮತ್ತೇಭೌಘಸಂಘೃಷ್ಟತ |
ತ್ಕಟದಾನದ್ರವಚಿಹ್ನಚಂದ್ರಮಣಿಚಂದ್ರದ್ಯೋತಸದ್ಯಸ್ಸ್ಫುರ ||
ತ್ಕಟಕೋಪಾಂತಚರತ್ಕಿರಾತವನಿತಾಕರ್ಣೋತ್ಪಲಾಕರ್ಷಿಮ |
ರ್ಕಟಶಾಖಾಶ್ರಿತಶಾಖಿಪಾದಪಯುತಂ ಕಣ್ಗೊಪ್ಪಿತಾಕಾನನಂ || ೫೫

ವ|| ಅದಲ್ಲದೆಯುಮಡಸಿ ಸಿಡಿದೆನಿಸಿ ಕಡುವೆಳೆದುದ್ದಂಡತಾಳತರುಗಳ ಜೂಳಿಕೆಯಿಂ ಗಾಳಿಯಲೆಪದಿಂ ಗಳಿಲನೆ ಪಾಸರೆಯೊಳೊಡನೆ ಜೀಳ್ದೊಡೆದ ಮಧುಘಟಪಟಲಪಕ್ವಫಳಪ್ರತಾನದ ರಸಂಗಳ್ಸಂಗಳಿಸಿ ಪರಿದಾಗಳದಂ ಕುಡಿಕುಡಿದು ನಕ್ಕಿ ಮಿಕ್ಕು ಸೊಕ್ಕೇರಿ ಪಡಿನೆಳಲಂ ಪಳಿಕಿನೊಡ್ಡುಂಗಲ್ಗೊಳ್ಕಂಡು ಪೆಣ್ಗೋಡಗಮೆಂದು ಪತ್ತೆಸಾರ್ದ್ದುರುಗಿಸಿ ನೋಡಿ ಬರಿಯುಂ ಬೆರಂಟಿ ಪುರ್ಬ್ಬಿಕ್ಕಿ ಪಲ್ಲಂ ಕಿರಿದು ಹರ್ರೆಂದು ಝುಂಕಿಸಿ ಸಮಾನವಿಕೃತಿಗಂಡು ಸರಸರನೆ ಸಾನೆವಂದು ಕೆಲದೊಳೊಕ್ಕಿರ್ದ್ದಾನೆದಲೆಯ ನೆತ್ತಪ್ಪುರ್ದಿದಮುತ್ತಂ ದಾಳಿಂಬಬೀಜಂಗೆತ್ತೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ಮುಕ್ಕುವೋಗೆ ನೋಡಿಮೆಂಬಂತೆ ಬೋಡುವಾಯುಂ ತೆರೆದೇಡಿಪಕೋಡಗಂಗಳಂ ನೀಡುಂನೋಡಿ ನಗೆಗಡಲೊಳೋಲಾಡುವಬೇಡವೆಣ್ಗಳಿಂ, ಕರಿಕರಾಗ್ರದಿಂ ಮುರಿದತಳಿರ ತದುಕಿನಮರದ ಸಿಡುಗೋಡೊಳಱಿಯದೆರಗಿ ಮರಿವೆರಸಿ ಕುಳ್ಳಿರ್ದ್ದ ಪಸಿಯಪಗಿನದೊಳ್ಕಾಲ್ಜಿಗಿಲ್ತು ತಳ್ಕಂಕಗೊಳ್ವ ಸಮಯದೊಳ್ತುತ್ತತುದಿವರೆಗಂ ಸುಬ್ಬುರ್ಗೊಂಡು ಪಬ್ಬಿರ್ದಕಬ್ಬುರ್ಳ್ಳಿಯಪೆಬ್ಬುರ್ಳ್ಳಿಯಬಳಿಯನಡರ್ದ್ದು ಪಿಡಿಯಲೆಳಸಿ ಗಳಿಲನೆ ಸಾರೆವರ್ಪ್ಪಘೋರಲುಬ್ಧಕನಂ ಕಂಡಗಿದು ನೆಗೆಯಲುಜ್ಜುಗಿಸಿ ಪಕ್ಕವಂ ಬಿದಿರ್ದ್ದು ಪಾರಲಳವಲ್ಲದೆ ನಡನಡನೆ ನಡುಗಿ ಸಿಡಮಿಡಿಗೊಂಡೆರಂಕೆಗಳೆಳಲೆ ಕೊರಲ್ಕುಸಿಯೆ ಜೋಲ್ದುನೇಲ್ವಪೆಬ್ಬುರ್ಕ್ಕಿಗಳಿಂ, ಮತ್ತೊಂದೆಡೆಯೊಳ್ಮರೆಯನೆರೆಗೊಳ್ವ ಪಿಱಿಯಪಾವಂ ಪಿಡಿದಕರಿಯುಂ ಸೀಳ್ವಸಿಂಹಮುಂ ಪೋಳ್ವಶರಭಮುಂ ಮಾಲಾಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಲಕ್ಕೆ ಚಿಗಿದೊಗೆದು ನೆಗೆವಭೇರುಂಡಂಗಳಿಂ, ಪೊಲಂಬುದಪ್ಪಿದಮರಿಯುಂ ನೆನೆದು ನೇಹಂ ಮಿಗೆ ಕೆಜ್ಜಲುರ್ವ್ವ ಮೊಲೆತೊರೆದೆಜ್ಜು ಪಾಯ್ದುಗುತರ್ಪ್ಪವನಮಹಿಷಿಗಳ ಪಾಲಧಾರೆಯುಂ ಮಿಕ್ಕು ಸಕ್ಕುತೊಡವರ್ಪ್ಪಕಾನನಿಜದಾಲಂಗಳಿಂ, ವನತರುಗ

ಳೊಂದೊಂದನೊರಸೆ ಪುಟ್ಟಿದನಲನಳವಿಗಳಿದೊಗೆದಪೆರ್ಮೊಗೆಗೆ ಪುಳುಗಳಿರ್ಪೋಗೆ ನಟ್ಟಗೊಂಬಿನೊಳ್ಕಿಸುಪಜೇನವುಟ್ಟಿಗಳ ಮಧುರಸಮುಂ ಬಳಿಯುನಡದುರ್ದ ಪೀರ್ವರ್ ಮರವಾವುಗಳಿಂ, ಪುಲ್ಲಂ ಮೇಯುಲೆಳಸಿ ಬಂದು ಮೆಯ್ಯ ತೀಂಟೆಗೆ ಪುಲಿ ಪೊರಳ್ದು ಪೋದತಣದೊಳ್ನಿಂದು ಗರ್ಬಿಂಗಗಿದುಬ್ಬುರ್ಗುಂದಿ ಹಂಮದಂಬೋದಹರಿಣಗಳಿಂ, ಪೂಗೊಯ್ವಪುಳಿಂದಿ ಪಾಡುವಸಂಗೀತದಿಂಚರಕ್ಕೆ ಸುತಿಗುಡುವಂತೆಸೆವ ಪವನಪೂರಿತಕೀಚಕರಂಧ್ರಸ್ವನದಕ್ಕೆಪೆಡೆಯೆತ್ತಿ ನಿಲುಂಬಿನಲಿವಫಣಿಗಳಿಂ, ಕೋಳ್ಕುಟ್ಟಿ ದಾಡೆಯುಂ ಮಸೆದು ಮಸಕಂ ಮಿಗೆ ಮೊಗಮುಂ ನೆಗಪಿ ತೃಣಮುಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಮರವಾಯ್ದು ಪರಿದಿದಿರ್ಚಿ ಕಡುಗಮುಂ ಪಿಡಿದು ಜಡಿದು ಘುಂಕಿಸಿ ದಂಡೆಗೊಂಡಶಬರನಂ ಮಿಡಿಯಿಂ ಬರಿವರೆಗಮೆತ್ತುವಸಮುತ್ತುಂಗವರಾಹಂಗಳಿಂ, ಆಳವಿಗರಿಯುದ್ಧೈತರೆ ನೆಗೆದೆರಗಿ ಗಜರಿ ಗರ್ಜಿಸಿ ಕುಂಭಿಕುಂಭಸ್ಥಳಮುಂ ಕೂರುಗಗುರ್ಗಳಿಂ ಸೀಳ್ದು ಸಿರುಂಬುಳಾಡಿ ಸಿಡಿಲ್ಸಿಡಿವಂತೆ ನಗಾಧಿತ್ಯಕಕ್ಕೆ ನೆಗೆವ ಮೃಗೇಂದ್ರಂಗಳಿಂ ವಿಜೃಂಭಿಸಿ ಕಣ್ಗೆ ಕಾತುಕಾವಹಮಾಗಿರ್ದುದಲ್ಲಿ—

ವೃ|| ಎಲವಂ ಸಂಪಗೆ ಹೊನ್ನೆ ಜೆನ್ನೆ ಕವಳಂ ಕಾರಾಚಮಾಚಂ ಪುಲಿಂ |
ಗಿಲೆರಂ ಗುಗ್ಗುರ್ಗಳಮತ್ತಿ ಮತ್ತಿ ಮಧುಕಂ ಮಗಾ್ಗರೆ ಪಚಾ್ಚರಿ ದಿಂ ||
ಡಲಮಾಲಂ ಬೆಳವಿಂಗಳಂ ಪುಣಿಸೆ ಜಾಲಂ ಬೇಲಮುಂಕೋಲೆ ಬೊ |
ಬ್ಬುಲಿ ಮಾವಂಬಟೆ ಕಕ್ಕೆ ಬಿಕ್ಕೆ ಬಕುಳಂ ಜೇವೆತ್ತಕಂ ಕಿಂಶುಕಂ || ೫೬

ವ|| ಮತ್ತಂ

ವೃ|| ವರುಣನ ಕುಂತದುತ್ಕರದ ಕೇತುವ ಕೇಕಿವಿಳಾಸದರ್ಭಕೋ |
ದರೆಯ ವಿಲೂನನಾಸೆಯ ಸುರೂಪೆಯ ಪಾಣ್ಬೆಯ ಮೇಘನಾದದಿಂ ||
ದಿರೆಯ ಪಟೀರದೇಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಬಿನೀ |
ವರನಭಿಧಾನಮುಂ ತಳೆದಭೂರುಹಮೊಪ್ಪುಗುಮಾವನಾಂತದೊಳ್ || ೫೭

ಕಂ|| ಅರಳಿ ಕಡವೊಡವು ತಂಡಸಿ |
ಯರಸೆಲ್ಲಿ ಬಿದಿರ್ಪ್ಪತಂಗಮುರುಟಾಳಂ ಪಾ ||
ದರಿ ಬಾಗೆ ತೇಗು ಪನೆ ಕಂ |
ಮರಮೆಸಳೆಯೆನಿಪ್ಪುವಿರ್ಪ್ಪವಾಪೇಗಾರ್ಗಡೊಳ್ || ೫೮

ವೃ|| ಗರುಡಂ ಗೀಜಗನಂಚೆ ಕೊಂಚೆಗಿಡುಗಂ ಕರ್ಬ್ಬಕ್ಕಿ ಪಾರಾವತಂ |
ಪರಪುಟ್ಟಂ ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿ||
ತ್ತಿರಿ ಕೋಕಂ ಪಿಕಳಂಬಕಂ ಶಿಖಿ ಶುಕಂ ಬಾನಾಡಿ ಪೆರ್ಬ್ಬಕ್ಕಿ ಪಿಂ |
ಗುರು ಕಾಕಂ ಚಿಲುಕೂಲಿ ರತ್ನಖಗಮಿರ್ಕ್ಕುಂತದ್ವನಾಗೌಘದೊಳ್ || ೫೯

ಕಂ|| ಸುರಪತಿಯು ಬೆಳ್ಳಡಿಯ ರಥ |
ಚರಣದ ಪಾವಕನ ಮುನಿಯ ಧರ್ಮಜನ ಲಸ |
ತ್ತುರಗದ ಗಜಗಂಡದ ಭಾ |
ಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ || ೬೦

ಹರಿಕರಿಶಶಜಂಬುಕವೃಕ |
ರುರುಮಾರ್ಜಾಲೋಷ್ಟ್ರಶರಭಸೈರಿಭ ಶಾಖಾ |
ಚರಗವಯವರಾಹೋರಗ |
ತರಕ್ಷುಖುಕ್ಕಾದಿಸತ್ವಗಣ್ಯಮರಣ್ಯಂ || ೬೧

ಜರದಜಗರಘೂತ್ಕೃತಿ ಕೇ |
ಸರಿಭಾತ್ಕೃತಿ ಕರಿಕರಾಗ್ರಸೀತ್ಕೃತಿ ಶಾಖಾ ||
ಚರಕೀತ್ಕೃತಿ ವಿಹಗ ಸಮು |
ತ್ಕರಚೀತ್ಕೃತಿ ತೀವಿ ವಿಪಿನದೊಳ್ಬಿಡದೆಸೆಗುಂ || ೬೨

ವ|| ಮತ್ತಂ

ವೃ|| ಕೋಡಿಡುವಾನೆಗಳ್ಪರಿವಪುಲ್ಲೆಗಳೊಲ್ದೊಡಗೂಡಿ ಮೋದು ಮೆ |
ಲ್ಲಾಡುವಸೈರಿಭಂಗಳುರೆ ಲಂಘಿಪಕೇಸರಿಗಳ್ಧರಿತ್ರಿಯಂ ||
ತೋಡುವ ಸೂಕರಂಗಳಡಿಯಿಟ್ಟಿಸೆವೆಂಟಡಿಗಳ್ಕನಲ್ಕೆಯಿಂ |
ನೋಡಿ ಕಡಂಗಿ ಗರ್ಜಿಪತರಕ್ಷುಗಳೊಪ್ಪುಗುವಾವನಾಂತದೊಳ್ || ೬೩

ವ|| ಮತ್ತಮಾಪೇರಡವಿಯಲ್ಲಿ

ಕಂ|| ನೆಲನ್ಪೊರೆಯುಂ ತಾಂ ತಳಿದೆ |
ಮ್ಮಲಸತೆಯುಂ ಕಳೆದು ಪೊರೆದುದೀಗಿದಿಯುಂದಾ ||
ನೆಲದಳೆದ ಕರಿಗಳೇಳ್ತಂ |
ದಲಸದೆ ಸೇವಿಪಪ್ಪೊಲದರೊಳಾನೆಗಳೆಸೆಗುಂ || ೬೪

ವೃ|| ಮರಿ ಪಸಿದ್ದೈದೆ ತಾಂ ಮೊಲೆಗುಡಲ್ಕೆರೆದಿರ್ಪುದುಮಂಗಸಂಗಮು |
ಕ್ಕೆರಗಲೊಡರ್ಚೆ ಹಸ್ತಿ ಜವದಿಂ ಪಿಡಿ ಮುಂದೆಸೆಗಾಂತು ನಿಂದು ಬಾ ||
ಯ್ದೆರೆದದರಗ್ರಪಲ್ಲವಮನಾಂತಣಲೊಳ್ದಳಿರೂಡಿ ನೇಹಮಂ |
ಮೆರೆದದಕಿತ್ತುದಂತೆಮೊಲೆಯುಂ ಪತಿಯಿಂ ಸುತನಲ್ತೆವೆಗ್ಗಳಂ || ೬೫

ಕೊಳನೊಳೆ ಮಿಂದು ಪಂಕಜರಜಂಗಳನಂಗದೊಳೊಟ್ಟಿಕೊಂಡು ಮಂ |
ಡಳಿಸಿ ಮದಕ್ಕೆ ಸಾರ್ವ್ವುರಿದುಂಬಿಯ ನೀಲದಮೊಲೆಯಾಂತು ಮಂ ||
ಜುಗಳತಿ ಮತ್ತಹಸ್ತಿ ಪಿಡಿಯಿರ್ಪೆಡೆಗೈದಿ ಭುಜಂಗಲೀಲೆಯುಂ |
ತಳೆದೆಳಮುತ್ತಿನೊತ್ತೆಗುಡುವಂತಿರೆ ಸೂಸಿತು ವಾಷ್ಪಕಣೌಘಮಂ || ೬೬

ವ|| ಆದಲ್ಲದೆಯುಂ

ಕಂ|| ಒಳಗಿದು ತಳೆದುದು ಮುಕ್ತಾ |
ಫಳಮಂ ಪೊರಗಿಂದ್ರನೀಲಮಣಿಗಣಮನೆನು ||
ತ್ತಿಳೆ ಪೊಗಳೆ ಕಟತಟದ ಮದ |
ಕಳಿಮಿಂಡೆರಗಿರೆ ಕರೀಂದ್ರಮೇಂ ರಂಜಿಸಿತೋ || ೬೭

ವೃ|| ಕರಿ ಪೆರ್ಬ್ಬಾವನಮರ್ಚ್ಚೆ ಪುಷ್ಕರದೆಬೀಸುತ್ತಿಟ್ಟೊಡಾಕಾಶದೊ |
ಳ್ಗರಳಾಗ್ನಿಸ್ಫುಟವಿಸ್ಫುಲಿಂಗತತಿ ಸೂಸುತ್ತಿರ್ಪ್ಪವೋಲ್ತೋರೆ ಮು ||
ನ್ನೆರೆಗೊಂಡಾಮಿಷಖಂಡಸಂಹತಿ ತಮೋವಿಭ್ರಾಂತಿಯಿಂ ತಳ್ತ ಭಾ |
ಸ್ಕರನೇಳ್ತರ್ಪ್ಪುದನೊತ್ತಿ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ || ೬೮

ಸುರಚಿರಪುಷ್ಕರಾಕರಜಲಾಂತರಮಗ್ನಕರೀಂದ್ರರುಂದ್ರಪು |
ಷ್ಕರಮುದು ಪುಷ್ಕರಂಬೊಲಿರೆ ತದ್ಭ್ರಮೆಯಿಂದಳಿ ಪಾಯೆ ಪೊಣ್ಮೆ ಫೂ ||
ತ್ಕರಿಸೆ ಸಿಡಿಲ್ಪನೀರ್ಪ್ಪನಿಗಳೊಪ್ಪಿರೆ ಧೂಮದವೋಲ್ವಿರಾಜಿಸಿ |
ತ್ತುರರೆ ತುಪಾಕದಿಂ ಸೆಗೆವಗುಂಡಿನವೋಲ್ಝಷಕೇತುವೀರನಾ || ೬೯

ಕಂ|| ಕರಿ ಮುರಿಯೆ ನಳಿನಮಂ ಪಂ |
ಕರುಹಾಕರದೊಳ್ಮದಾಳಿ ರವಿಗವಿದಿಡುವಂ ||
ತಿರೆ ಮೊರೆದು ನೆಗೆಯೆ ತತ್ಸರ |
ಮಿರದೞ್ಪಂತೂರ್ಮಿರವದಿನೇಂ ರಂಜಿಸಿತೋ || ೭೦

ಬವರಂಗೈದ ಗಜಂಗಳ |
ನಿವಹದ ನಿಗ್ಗವಮುದುಡಿದು ಸೂಸಿರೆ ನೆಲದೊಳ್ ||
ತವೆ ಪಸಿದಪಲ್ಲಮುರಿಗ |
ಳ್ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ || ೭೧

ಒಡವಪ್ಪುರ್ದು ಕಡೆವೋಪುದು |
ನಡೆಸೋಳ್ವುದು ಪಿಂದೆ ನಿಲ್ವುದತ್ತಿತ್ತಂ ಕೈ ||
ದುಡುಕುವುದಂತಿಂತೊಲೆವುದು |
ಪಿಡಿಗೆ ಮುದಂಬಡೆದುದೊಂದು ಕಳಭಂ ಬನದೊಳ್ || ೭೨

ವ|| ಮತ್ತೊಂದು ಮಳಯಜಮಹೀಜದಲ್ಲಿ

ವೃ|| ಮರಗೊಂಬಂ ಮುರಿವಲ್ಲಿ ತಳ್ತು ಮರವಾನ್ಪೊಂಪಾತ್ಮಶುಂಡಾಗ್ರದೊ |
ಳ್ಚರದಿಂ ಪೊಕ್ಕೊಡೆ ಬೀಸಿಫೂತ್ಕರಿಸಿ ಕೊಂಬಂ ಪುಷ್ಕರಾಗ್ರಕ್ಕೆ ಸಂ||
ಸರಿಪಂತಿಟ್ಟು ಕುಸುಂಗಿ ಬಲ್ಪಳಿದು ಘೀಳಿಟ್ಟಳ್ಕಿ ಬಾಯ್ಬಿಟ್ಟು ಶೋ |
ಕರಸಂದಾಳ್ದುದಿಭಂ ವೃಥಾನ್ಯಪರಿಭಂಗಂ ಭಂಗಮಂ ಸಾರ್ಚದೇ || ೭೩

ಕರಮೆಸೆದತ್ತು ತಳ್ತ ಸರಿಯಿಂ ದರಿಯಿಂ ಜರಿಯಿಂ ಮೃಗಂಗಳಿಂ |
ತರತರಮಾಗಿ ತೋರ್ಪ್ಪಮುರದಿಂ ಸರದಿಂನೆರೆದಿಂಬುಗೊಂಡಭೀ ||
ಕರತರಲುಬ್ಧಕಪ್ರಕರದಿಂ ಝರದಿಂ ಪರಿದಿಂಪನಾಳ್ದಭಾ |
ಸುರನದಿಯಿಂ ಪೊದಳ್ದಮರೆಯಿಂ ಹರಿಯಿಂ ಕರಿಯಿಂದೆ ಕಾನನಂ || ೭೪

ವ|| ಮತ್ತಮಾವನಂ ಘನಾಗಮದಂತೆ ಘನಕದಂಬಮುಕ್ತಕವಿಲಸಿತಮುಂ, ವಸುದೇವಭವನದಂತನಿರುದ್ಧಬಲಕೃಷ್ಣಸಾರಸಮಂಚಿತಮುಂ, ದಾನಧಾರೆಯಂತೆ ಪುಂಡರೀಕಗಂಡಕಮಂಡಿತಮುಂ, ಯುಧಿಷ್ಠಿರಸದ್ಮದಂತೆ ವೃಕೋದರವಿಲಸದರ್ಜುನನಕುಲಾಧಿಷ್ಠಿತಮುಂ, ಸುಜನಹೃದಯದಂತನೇಕಪಲಪೂರ್ಣಗುಣಸಮನ್ವಿತಮುಂ, ಕುಜಾತಿಸಮೃದ್ಧಮಾಗಿಯುಂ, ದ್ವಿಜಾತಿಮನೋಜ್ಞಮುಂ, ಪಗತಶಬರೋಪಯುಕ್ತಮಾಗಿಯುಮುವಿಗ್ರಹಸಮಗ್ರಸ್ಥಳಮುಂ, ದ್ವಿಪವಿಲಸಿತಮಾಗಿಯುಮಗಣಿತವಜ್ರೋಪರಂಜಿತಮುಂ, ವಿತತಕರಾರ್ಕೋಪಲಸಿತಮಾಗಿಯುಂ

ಬಹುಲತಾರಾರಾಜಿತಮುಂ, ತತತಾಪಸಮುಚ್ಚಯಮನಾಗಿಯುಮಶೋಕಸಂಗತ
ಮುಮೆನಿಸಿದುದಂತುಮಲ್ಲದೆ

ವೃ॥ ಹರಿಣೀಮತ್ತೇಭವಿಕ್ರೀಡಿತ ಲಲಿತಮಯೂರಾನ್ವಿತಂ ಛಂದಮುಂ ಶಂ ।
ಬರಭಾಸ್ವತ್ಪುಂಡರೀಕಸ್ಫುರಿತ ಹರಿಮರುದ್ರಾಭಜಿತಂ ವಾರ್ಧಿಯುಂ ಬಂ॥
ಧುರಭಾರದ್ವಾಜಶಾಂಡಿಲ್ಯಕ ಶುಕವಿಮುದಾಗಸ್ತ್ಯಕಂ ತಾಪಸಪ್ರೋ ।
ತ್ಕರಮುಂಸೋಮಾರ್ಕಖುಕ್ಷಾಂಚಿತಮದುನಭವಂಪೋಲ್ತುಜೆಲ್ವಾಯ್ತರಣ್ಯಂ॥

ವರತರುವಲ್ಲರೀಪ್ರಕರದಿಂ ಕರದಿಂ ಕರೆದಿಂಬುವೆತ್ತು ಸಂ ।
ಚರಿಸುವಕಿನ್ನರಪ್ರಸರದಿಂ ಸರದಿಂ ಸರದಿಂದುಕಾಂತಿನಿ ॥
ರ್ಝರಸಲಿಲಂಗಳಿಂ ಬದರಿಯಿಂ ದರಿಯಿಂ ದರಿಯಿಂದಗಲ್ದನಿಂ ।
ದುರುಮುನಿವೃಂದದಿಂದೆ ಹರಿಯಿಂ ಹರಿಯಿಂ ಹರಿಯಿಂದದೊಪ್ಪುಗುಂ ॥೭೬

ವ॥ ಸಂತತಮಿಂತೊಪ್ಪುವಾಕಾಂತಾರಾಂತರಾಳದಲ್ಲಿ

ವೃ॥ ಪಡಿನೆಳಲಂ ಮೃಗೇಂದ್ರಸುರೆ ಚಂದ್ರಶಿಲಾತಳದಲ್ಲಿ ಕಂಡು ಕಾ ।
ಯ್ಪಡರಲಿದಿರ್ಚೆ ಮತ್ತದುಮಿದಿರ್ಚಿರೆ ಗರ್ಜಿಸೆ ಮೇಘನಾದದಿಂ ॥
ದೊಡಸದು ಗರ್ಜಿಸುತ್ತಿರೆ ಪಳಂಚಿ ವಿಲಂಘಿಸಿ ಸಾಯ್ದು ಪೊಯ್ದು ತಾಂ ।
ಮಡಿದುದು ಶುದ್ಧರಲ್ಲಿ ನಿಜದೋಷಮನೊಂದಿಸೆ ಕೆಟ್ಟುಪೋಗರೇ ॥ ೭೭

ಮೊಳೆವುಲ್ಲಂ ಮೇದು ಮಧ್ಯಂದಿನದ ಬಿರುವಿಸಿಲ್ಗಾಗೆ ಬೆನ್ನಂ ಭರಂಗೊಂ।
ಡೆಳಸುತ್ತುಂ ಪಲ್ವಲಾಂಭಃಪ್ಲವದೆ ಮುಳುಗಿ ತತ್ಕರ್ದಮಂ ಪತ್ತೆ ನಿಂದ ॥
ವ್ವಳಿಸುತ್ತೊಂದೊಂದರೊಳ್ಕ್ರೀಡಿಡುತೆಮಗಳ್ದಮೆಲ್ಕಾಡುತುಂ ಕಾಡೊಳೊಪ್ಪಂ।
ದಳೆದಿರ್ದತ್ತಭ್ರಕಾಯಂ ಪೃಥುಮಹಿಷನಿಕಾಯಂಕರಂಪ್ರೋತ್ಸುಕಾಯಂ ॥

ಕಡುಪಸಿವೆತ್ತು ಪುತ್ತಿಸಡೆಯೊಳ್ಮೊಗಮಿಕ್ಕುತಿರುಂಪೆಗೆಂದು ಮ ।
ತ್ತೆಡೆವಿಡದೂದುತಿರ್ಪಿನಮದೊಂದುಮಹೋರಗಮಾಸನಾಗ್ರಮಂ ॥
ಪಿಡಿದಡದರ್ಲ್ಲಿ ಸೇಲುತಿರೆ ಸುಂಡಿಲವೋಲ್ಕೊರೆ ಪಾಯೆ ಪಲ್ಗಳಂ ।
ತೊಡಸೆಸೆದತ್ತು ಒಲ್ಗರಡಿ ಕಾನನದೊಳ್ಕರಿಪೋತದಂತೆವೋಲ್ ॥ ೭೮

ಕಂ|| ಮಿಡಿವಿಳ್ದಿಡಿದು ಪುಳಿಂದಿಯ |
ರಿಡೆ ಗಜಮೌಕ್ತಿಕದ ಮಿಂಟೆಯಂಬರದೆಡೆಯೊಳ್ ||
ಳ್ಕುಡೆದು ಪಗಲುಮೀಳ್ದವೊ |
ಲೊಡನೆಸೆದುದು ಮೃಗದಕೇಡನರಿಪಲ್ಲನದೊಳ್ || ೮೦

ವ|| ಇಂತಸದಳಮೆಸೆವಾಪೇರಡವಿಯಂ ಬೇಂಟೆಯಾಡಲೆಂದು ಬಿಯದ ಸ್ರ್ಂದಣಿಸಿ ಪೊಕ್ಕು ಮೀರಿ ಸಂಭ್ರಮಿಸಿ ಸರುವಿಡಿದು ಹಣೆಯಿರ್ಪೆಡೆಗೈತಂದು

ವೃ|| ಇದು ಕರಿಪೋದತಾಣವಿದು ಸೈರಿಭನೈದಿದದಾರಿ ನೋಳ್ಪೊಡಿಂ |
ತಿದು ಪುಲಿಯಿರ್ದ್ದಬಲ್ಮೆಳೆಯಿದೆಕ್ಕಲನೇಳ್ದಡಿಯಿಟ್ಟಬಟ್ಟೆ ನೋ ||
ಡಿದು ಹರಿ ನಿಂದಪಜ್ಜೆಯಿದೆವೊಕ್ಕಮದಾಂಬುವಿದಾಸ್ಯಪೇನಮಿಂ |
ತಿದೆ ತಸಿಗಬ್ಬ್ರ ತಳ್ತಿದೆ ಕೆಸಪ್ಪರಿಗೊಂಡಿದೆ ಹಸ್ತಿಮೌಕ್ತಿಕಂ || ೮೧

ವ|| ಎಂದು ಕುರುಪುಗೊಂಡಸುವಿಸುತ್ತೆ ಮತ್ತಮಾಣದೆ

ವೃ|| ಮರಗೊಂಬಂ ಪರಿದೇರಿ ನೋಳ್ಪ ಮೆಳೆಯಿಂದಂ ಸೋವುತಲ್ಲಲ್ಲಿ ಬೇ |
ಹರಿಸುತ್ತುಂ ಪೊದರಿಂ ತೆರಳ್ಚುವಡಿಗಂಡಾರೈವ ಸೀದ್ಪಾಣದೋ ||
ವರಿಯೊಳ್ಕಾವ ಕಡಂಗಿಕಂಡು ಮಿಗಮಂ ಜೆಂಕೊಂಬ ಜೇಡರ್ನರೇ |
ಶ್ವರ ಕೇಳ್ವಪ್ಪದರಣ್ಯದೊಳ್ಪರಿದರೇನೆಂಬೆಂ ತದಾಟೋಪಮಂ || ೮೨

ಸರಳಿಪಪುಲ್ಲೆಯೋಡುವನೊಲಂ ಬಿಡದಾಲಿಪಹಸ್ತಿ ನಿಲ್ವಸೂ |
ಕರನಡಿಗೊಳ್ವ[illegible]ರೆಯುಡಂಗುವಪೆಬ್ಬುಲಿ ಪಾರ್ವಪಕ್ಷಿಗಳ್ |
ಕೊರಗುವಬಿಡ್ಗಿ ಲಂಘಿಪವೃಕಂ ಮುರಿದೇಳ್ವಮೃಗೇಂದ್ರಸೆತ್ತಲುಂ |
ನೆರೆದಿರೆ ಕಾಡೊಳುಣ್ಮಿದುದು ಜೇಡರ ಬೇಂಟೆಯ ಪಾದ್ಯದಬ್ಬರಂ || ೮೩

ನಡೆ ಬಿಡು ಸಾಯ್ಗಳಂ ತುಡು ಸರಲ್ಗಳನಾರ್ದಿಸುಸುತ್ತುಪತ್ತುಬೊ |
ಬ್ಬಿಡು ಬಡಿಕೋಲ್ಗಳಿಂದಿಡು ಮೊಲಂಗಳ ನೇಸ್ಟಲೆವೇಸಿ ಪುಲ್ಲೆಯಂ ||
ಕೆಡಪು ಕಡಂಗಿ ಪೊಯ್ಪುಲಿಯುಮಸಿಟ್ಟಿಯೊಳಾಂತಿಡು ಪಂದಿಯಂ ಪಡ |
ಲ್ವಿಡಿಸು ಗಜಂಗಳಂ ಕುಳಿಯೊಳೆಂಬರವಂ ಕಿರಿದಾಯ್ತುರಣ್ಯದೊಳ್ || ೮೪

ವ|| ಅಗಳಲ್ಲಿ ಪೆರತೊಂದು ತಾಣದಲ್ಲಿ

ಚವರಿಮಿಗಕ್ಕೆ ಸುಣ್ಗುರುಳನಗ್ಗದಹಸ್ತಿಗೆ ನೀಳ್ದಹಸ್ತಮುಂ |
ಕವಲಿರಿದಿರ್ದ್ದಕೊಂಬಿನ ಮೃಗವ್ರಜಕಿರ್ಬ್ಬೆರಲಂ ದ್ವಿಪಾರಿಗು ||
ಣ್ಮುವರಸನಾಗ್ರಮುಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂದಿಗೊ |
ಪ್ಪುವವೊಳಕೈಯ ತೋರ್ಪ್ಪರರೆಬಬ್ಬರಿಯದರ್ಸ್ಸಲೆಸನ್ನೆವೇಂಟೆಯೊಳ್ ||೮೫

ವ|| ಆಗಳವರೊಳೊರ್ವ್ವಪುಳಿಂದಂ ತನ್ನ ಪೆಸರ ಪೇರಡಿಯ ಹಾಸಮಂ ಕಳೆದು ಮ್ಮೈದಡವಿ ಕೈಚಿಟುಂಕುಗ್ಗೈದು ಪುಲ್ಲೆಯಂ ತೋರಿ ಬಿಡಲೊಡನೆ

ಕಂ|| ಬೆ*ದರ್ವಮನಂ ಬೆಚ್ಚ್ಬವಕ |
ಣ್ಣದಿರ್ವ*ಂಗಂ ನಟ್ಟಕಿವಿಗಳೊಡನೊಡಸಿಳಿವ ||
ಗ್ಗದಸುಯ್ಯೊಪ್ಪುಳ್ಳಿಪೊದ |
ಳ್ದೊದವೆ ಜವಂಗುಂದದೆರಳೆ ಸರಳಿಸಿತಾಗಳ್ || ೮೬

ನೆಗೆದಕುಡಿವಾಲಮುಣ್ಮುವ |
ಬಗೆ ಬಳ್ಕುವನಡುವಗುರ್ವ್ವಿಪಾನನಮಿರೆ ತ ||
ನ್ಮೃಗಮುಂ ಬಳಿವಿಡಿದಟ್ಟು |
ತ್ತಗಲದೆ ಪಿಡಿದತ್ತು ಜಾಯಿಲಂ ತದ್ವನದೊಳ್ || ೮೭

ವ|| ಅಲ್ಲಿ ಕೆಲಂಬಕ್ಕಿರಾತೆಯನ್ನೆರೆದು

ಕಂ|| ವದನಾಬ್ಜವಿರೋಧಿಯನಾ |
ಬಿದುವಂಕಳೆಗೊಂಡುದಲ್ಲದೆಮ್ಮೀಕ್ಷಣದಂ ||
ದದ ಕಣ್ಣುಂಟೆಮಗೆಂದಿ |
ರ್ಪ್ಪದಿದೆಂದಿಸುವಂತೆಪುಲ್ಲೆಯಂ ಪಡೆದೆಚ್ಚರ್ || ೮೮

ವ|| ಅದಲ್ಲದೆಯುಂ

ವೃ|| ಕಿಡಿಪುಟ್ಟುತ್ತಿರೆ ದಾಡೆಯಂಮಸೆದುಕಿಗ್ಗಣ್ಣಿಕ್ಕಿ ನೋಡುತ್ತೆ ಮ್ಮೈ |
ಗೊಡವುತ್ತಬ್ಬರಮಾಲಿಸುತ್ತೆ ಮೊಗಮುಂ ತೂಗುತ್ತೆ ಪಾಲಾಗ್ರಮುಂ ||
ಮಿಡುಕುತ್ತುಬ್ಬರಿಸುತ್ತೆ ರೋಮಚಯಮುಂ ಮೀಟುತ್ತೆಕಂದಂಗಳಂ |
ಕೆಡುಪುತ್ತಂಗದೊಳುರ್ದ್ದಿ ಬಲ್ಮರಗಳಂ ಬಂದತ್ತದೊಂದೆಕ್ಕಲಂ || ೮೯

ವ|| ಆಗಳ್

ವೃ|| ಪೋಗದಿರೆಂದು ಗರ್ಜಿಪ ಕಿರಾತನ ಮಾತದು ತನ್ನ ಕರ್ಣಮಂ |
ತಾಗದಮುನ್ನಮುಣ್ಮೆ ಕಿಡಿ ಕಣ್ಗಡೆಯೊಳ್ಕಿಡಿ ದಾಡೆಗುಟ್ಟಿ ತಾಂ ||
ತಾಗಲಿದಿರ್ಚೆ ಕೋಡುಡಿದಕಾಲನ ಸೈರಿಭದಂತೆ ಬಪ್ಪಿನಂ |
ತೂಗಿ ಕರಾಗ್ರದಿಂದೆ ಪೊಳೆವಿಟ್ಟಿಯೊಳಿಟ್ಟನದಂ ವನೇಚರಂ || ೯೦

ಕಂ ಇಡೆ ಪಣೆಯುನಡಸಿ ಕಂದಮ |
ನೊಡೆದುಜ್ಜ್ವಳಸಿರೆ ಸರೋಷಮತಿ ಮಗುಳ್ದಿದಿರಂ ||
ನಡೆದದರಣಸಿನ ಮೊನೆಯಿಂ |
ದೊಡನಿಕ್ಕಿತು ಪಾಯ್ದು ಪಂದಿಯವನಂ ವನದೊಳ್ || ೯೧

ವೃ|| ಕುಸಿದಪರಾಂಗಮುಜ್ಜ್ವಳಿತಪಿಂಗಳಲೋಚನಮುಗ್ರದಂಷ್ಟ್ರಮಾ |
ರ್ಪೆಸೆವಮನಂ ಧರಿತ್ರಿಯೊಳೆ ಚಾಲಿಪಬಾಲಮಗುರ್ವ್ವಿಪಾನನಂ ||
ನಸುನೆಗೆದಿರ್ದ್ದಕೋರಕಲೆ ಮುಂಗಡೆ ಸಾರ್ಚಿದಕಾಲರಲ್ದಮೂ |
ಗೆಸೆಯೆ ತರಕ್ಷು ದಂಶಶತಸಂವೃತಮಿರ್ದ್ದುದದೊಂದುತಾಣದೊಳ್ || ೯೨

ವ|| ಇಂತತಿಭಯಾವಹಮಾಗಿಕೋರ್ಪ್ಪ

ವೃ|| ಪುಲಿ ಪೊರಮಟ್ಟು ಕಟ್ಟಿದಿರೊಳಬ್ಬರಿಸುತ್ತಿರೆ ಬೊಬ್ಬೆಗೊಟ್ಟು ಗಂ |
ಡುಲಿವೆರಸುತ್ತೆ ಪತ್ತಿ ಜಡಿದಾಯುಧದಿಂ ಪೊಡೆದಿಕ್ಕಿ ಮಿಕ್ಕ ನಿ ||
ಶ್ಚಲನೆನಿಸುತ್ತೆ ನಿಂದಿರೆ ಪುಳಿಂದನಸಪ್ಪಿದಳಾಗಳಾತನಾ |
ಲಲನೆ ತದೀಯದಕ್ಷಿಣಭುಜಾಗ್ರಮನಾಜಯಲಕ್ಷ್ಮಿಯೆಂಬಿನಂ || ೯೩

ವ|| ಮತ್ತಮೊಂದೆಡೆಯಲ್ಲಿ

ವೃ|| ಮೆಳೆಯೊಳಗಿರ್ದ್ದ ಮೇವಮಿಗಮಂ ಮಿಗೆ ಪೆಬ್ಬುಲಿ ಕಂಡು ಕಾಣದಂ|
ತಳಪಿಗೆ ತಗ್ಗಿ ಕುಗ್ಗಿತುಸಿರಿಕ್ಕದೆ ಬಂದು ಹಣುಂಗಿ ಪಾರ್ವತ |
ನ್ನಳವನಭೀಕ್ಷಿಸುತ್ತೆ ಸಲೆ ಗರ್ಜಿಸಿ ಕಾಯ್ದು ಕಡಂಗಿ ಪಾಯ್ದು ಪೊ ||
ಯ್ದಳೆಗಿರದಿಕ್ಕಿ ಘುರ್ಘುರಿತಕಂಠಮುದೀಂಟಿತು ರಕ್ತವಾರಿಯಂ || ೯೪

ವ|| ಅದಲ್ಲದೆಯುಂ

ವೃ|| ಕಟ್ಟಿದಿರಲ್ಲಿ ಗರ್ಜಿಸೆ ತರಕ್ಷುತರಂ ತರಳಾಯತಾಕ್ಷಿ ಕಂ |
ಗೆಟ್ಟುಮದರ್ಪ್ಪಲಂಜದಿರೆನುತ್ತವಳಂ ಬಿಗಿದಪ್ಪುತಿರ್ಪ್ಪಿನಂ ||
ತೊಟ್ಟನೆ ಪಾಯೆ ಪಜ್ಜೆಯಿಡದಲ್ಲಿಯೆ ನಿಂದು ಕಡಂಗಿ ಖಡ್ಗದಿಂ |
ದಟ್ಟೆ ನೆಲಕ್ಕೆ ಬೀಳ್ವಿನಮುದಂ ಸದೆದಂ ಶಬರಾಧಿನಾಯಕಂ || ೯೫

ವ|| ಅಲ್ಲಿ ಮತ್ತೊರ್ವ್ವನೆಳೆಜವ್ವನದಪುಳಿಂದಂ

ಕಂ|| ಮುನಿದಿರ್ದ್ದನಿಯುಳ್ಪುಲಿ ಗ |
ರ್ಜನೆಗುಡೆ ಭಯಮುತ್ತು ಕೊರಲನಮರ್ದಪ್ಪಿರೆ ತೊ ||
ಟ್ಟನೆ ಬಿಟ್ಟಂಬದನುಚ್ಚಿರೆ |
ಮನದೊಳ್ಮದಮಂ ವಿಷಾದಮಂ ಕೈಕೊಂಡಂ || ೯೬

ವ|| ಮತ್ತಮೊರ್ವ್ವಂ

ಕಂ|| ಎಳವೇಡಿತಿಯ ಕುಚಂಗ |
ಳ್ಬಳೆಯೆ ಬಳಂಗುಂದಿ ಮಾಣ್ದನೆಂಬೀನೆವಮಂ ||
ತಳೆದವನೆ ಪೋಲ್ತಕುಂಭಂ |
ಗಳನಾಂತಾನೆಗಳನೈದಿ ಕೊಲ್ಲಂ ಭಿಲ್ಲಂ || ೯೭

ವೃ|| ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು ದೋರ್ಮ್ಮೂಲಮಂ|
ಮೊಲೆಯುಗ್ರಂ ತಲೆದೋರೆ ತೆಳ್ನಡುಬಳುಂಕಲ್ಕಣ್ಗೊರಲ್ಕೊಂಕೆ ಕೋ ||
ಮಲೆ ನಿಂದಂಬಕದಗ್ರಮಂಬುದುದಿ ಲಕ್ಷ್ಯಂಮುಟ್ಟಿಯೊಂದಾಗೆ ತೋ ||
ಳ್ವಲಮಂ ತೋರಲೊಡಚ್ಚಿತೆಚ್ಚಳಿಸಿಯಂಭಾಪೆಂಬಿನಂ ದ್ವೀಪಿಯಂ || ೯೮

ಪೊದರಿಂದಂ ಪೊರಮಟ್ಟು ಕಟ್ಟಿದಿರೊಳಾರ್ಪ್ಪಿಂ ಗರ್ಜಿಸುತ್ತಿರ್ಪ್ಪಬ |
ಗ್ಗದ ಬಲ್ಗಂಡಿಕೆಗಂಡು ಗಂಡುಗಲಿ ಬೇಡಂ ದಂಡೆಯಂ ಕೊಂಡು ನಿಂ ||
ದಿದಿರೊಳ್ಪಾಯ್ದದಕಿತ್ತು ಕೈಮುರಿಗೆಯಂ ಕೈಗಣ್ಮೆ ಪೊಕ್ಕೆತ್ತಿ ಖ |
ಡ್ಗದೆ ಬೆನ್ನೊಳ್ಮೊನೆದೋರೆ ಏರಿ ತಿವಿದಂ ತತ್ಕಾಳಮೇಘಾಹ್ವಯಂ || ೯೯

ತೆಗೆನೆಗೆದರ್ಧಚಂದ್ರಶರದಿಂ ಶಬರಂ ಕರಿಕಂಠಮೂಲಮಂ |
ಬಗಿದಿಸೆ ರಕ್ತಸಿಕ್ತಮದು ಮೌಕ್ತಿಕಮೊಂದಮರ್ದೊಪ್ಪೆ ನೆತ್ತಿಯೊಳ್ ||
ನೆಗೆದೆಸೆದತ್ತು ಪಶ್ಚಿಮನಗಾಗ್ರದೊಳೊಂದಿರೆ ಸಂಜೆಗೆಂಪು ತ|
ಳ್ತೊಗೆದಕುಜಪ್ರಯುಕ್ತಮೃಗಲಾಂಛನಲೇಖೆಯಿದೆಂಬಮೊಳ್ಕೆಯಿಂ || ೧೦೦

ವ|| ಅದಲ್ಲದೆಪೆರತೊಂದುಪಥಪ್ರದೇಶದಲ್ಲಿ

ವೃ|| ಸುಸಿಲೆಸಗುತ್ತೆ ಸೇದೆಡಳೆದಾಗಳೆ ಘಿಲ್ಲಿಯುಮಲ್ಲಿ ಘಿಲ್ಲಸುಂ |
ಪೊಸಪಿಡಿಗೂಡಲೆಂದು ನಡೆತಂದಮದೇಭದಕುಂಭಮೌಕ್ತಿಕ ||
ಪ್ರಸರದ ಲೋಭದಿಂದಿಸಲೆರಳ್ಗರಿಯೊಳ್ಗರಿಯುಂಬು ತುಂಬೆ ಕ |
ಣ್ಗೆಸೆದುದದುಣ್ಮೆದೊಳ್ಗರಿಗಳಂ ತಳೆದಂಜನಶೈಲಮೆಂಬಿನಂ || ೧೦೧

ವ|| ಅಲ್ಲಿ ಪೆರತೊಂದೆಡೆಯೊಳ್

ವೃ|| ಕರಿನೀಲಾಚಲದಗ್ರದೊಳ್ಕರೆಯೆ ಬಲ್ಪಿಂ ಕಾಲಮೇಘಂ ಶರೋ |
ತ್ಕರಮಂ ಗರ್ಜಿಸಿ ಜಿಷ್ಣುಚಾಪಮನವಂ ಕೈಕೊಂಡು ತದ್ಧಾತುಸಿ ||
ರ್ಝರಮಾಗಳ್ಪರಿವಂತೆ ರಕ್ತರಸಪೂರಂ ಸೂಸೆ ಮತ್ತಲ್ಲಿ ಸೀ |
ಕರಮೆತ್ತಂ ಸಿಡಿವಂತೆ ತಳ್ತು ಸಿಡಿದತ್ತಾರಕ್ತಮುಕ್ತಾಫಳಂ || ೧೦೨

ಪಸಲೆಗೆ ಬಂದಪುಲ್ಲೆಯನೆರೆಳ್ದಿಸೆಯೊಳ್ಕಿರುವೇಡರಿರ್ವರಾ |
ರ್ದ್ದಿಸೆ ಸರಿಸಕ್ಕೆ ನಿಂದು ನೆಗೆದತ್ತದು ಸತ್ವರಮಾಗಸಕ್ಕೆ ಬೆ ||
ಕ್ಕಸಮೆನೆ ತಳ್ತು ಪಾಯ್ವುಕಣೆಗಳ್ಕೊರೆದಿಕ್ಕಿದುವಿರ್ವರಂ ಸಿರೀ |
ಕ್ಷಿಸೆ ಪರನಿರ್ನಿಮಿತ್ತಹನನೋದ್ಯಮುಮಾತ್ಮವಿನಾಶಕಾರಣಂ || ೧೦೩

ಎಲೆವರೆಯಲ್ಲಿ ಪೂದಿರಿಯಲೆಂದಿರೆ ನಿಂದು ಪುಳಿಂದಿ ಕಂಡು ಬ |
ಲ್ಮೊಲೆಯನದೂರ್ವ್ವ ಬಾಲಶಬರಂ ಕರಿಕುಂಭಮಿದೆಂದು ಬಾಣಮಂ ||
ನಲಿದಿಸೆ ಮಧ್ಯದೊಳ್ಪೊಡೆಯಲಂತದನಾಕ್ಷಣಮೆಳ್ದಸಿಂಹಮಂ |
ತವೆಗಡಿದಲ್ಲಿ ಬಿಳ್ದುದೆನೆ ಸದ್ವಿಧಿಯುಕ್ತರನಾರೊ ಕೊಂದಪರ್ || ೧೦೪

ನಸೆ ಮಸಪೊಂದೆ ನುಣ್ಬಸಲೆಯೊಳ್ಸಿಲಾಂತೆಸೆವೇಣನಂ ಪಿಲಂ |
ಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂ ||
ದಿಸೆ ಕುಸುಮಾಸ್ತ್ರನಾರ್ಪ್ಪಳಿದು ಕೂರ್ಪ್ಪಳ ಕೈವಿಡಿದಪ್ಪಿ ಪಲ್ಲವ |
ಪ್ರಸರಸಮೇತಮಾದಮೆಳೆಯೊಳ್ಪೊಸಪೂಪಸೆಯಲ್ಲಿ ಕೂಡಿದಂ || ೧೦೫

ಕಂ|| ಬಿಂಕದ ಶಂಖದ ಮೇಲಣ |
ಪಂಕಜರಿಪುಬಿಂಬದಮೃತಫಳದಿನಿರಸಮಂ ||
ತಾಂ ಕುಡಿದು ಮಿಕ್ಕಮಧುರಸ |
ಮಂ ಕನಸಿನೊಳಾಡೊಡಂಟೆ ನೋಡಂ ಬೇಡಂ || ೧೦೬

ವ|| ಮತ್ತಮೊರ್ವ್ವಂ

ವೃ|| ಕಾಡಲಗೊರ್ಂಜಲಂ ಮುರಿದುಸೋಮ್ಮುರ್ಡಿಗಿಟ್ಟು ಮರಂದದೊಳ್ಪದಂ|
ಗೂಡಿ ಕುರಂಗನಾಭಿಯನುರೋಜಕೆ ಲೇಪಿಸಿ ಪಲ್ಲವಂಗಳಂ ||
ಜೋಡಿಸಿಕಟ್ಟಿ ಪೆರ್ಚ್ಚಿದನಿತಂಬಕೆಸಾರ್ಚ್ಚಿ ಕರೀಂದ್ರಕುಂಭದೊ |
ಳ್ಮೂಡಿದಮುತ್ತನೆತ್ತಿ ಸರದಿಂ ಸರಗಟ್ಟಿ ಕೊರಲ್ಗೆ ಕೂರ್ಮ್ಮೆಯಿಂ || ೧೦೭

ತುಡಿಸುತ್ತಂ ನಡೆನೋಡಿ ಗಾಡಿ ಮಿಗೆ ಬೇಡಂ ಬೇಡಿದೊಳ್ವೆಣ್ಣನಿ |
ತ್ತಡಿಯೊಳ್ಮೆಳ್ಮೆನೆ ನಾಂಟದಂತೆ ನಡೆಸುತ್ತಲ್ಲಲ್ಲಿ ಸಲ್ಲೀಲೆಯಿಂ ||
ದೊಡಗೂಡುತ್ತೆ ಮಡಲ್ವಪೆರ್ಮ್ಮೆಳೆಗಳೊಳ್ಚ್ಚಿಲ್ವಾದರಲ್ವಾಸಿನೊ |
ಳ್ಪಡೆದಂ ಸಂಮುದಮಂ ನಿಜಾಂಗಜಿತಜಂಜದ್ವಲ್ಲಿಯೊಳ್ಬಿಲ್ಲಿಯೊಳ್ || ೧೦೮

ವ|| ಅಲ್ಲಿ ಮತ್ತೊಂದೆಡೆಯೊಳ್ತಳಿರ್ತ್ತಶೋಕೆಯ ತಳದ ತಣ್ಣೆಳಲ ಪಳಿಕಿನ ಪಾಸರೆಯಲ್ಲಿ

ವೃ|| ತೊಳಗುವದಂತದೋಲೆ ಸುಲಿಪಲ್ತಳಿರೊಳ್ಪಡೆ ಹಸ್ತಿಮಸ್ತಕ |
ಸ್ಥಳದೆಳಮುತ್ತಿನೆಕ್ಕಸರಮುಜ್ವಪರಾಗದ ಬೊಟ್ಟು ಸೂಡಿದು ||
ತ್ಪಳದಳಮಾಲೆ ಗುಂಜಿದೊಡವೊಪ್ಪುವ ಪುಲ್ಗಳ ಕಂಕಣಂ ಕರಂ |
ಪೊಳೆವಲರ್ಗಣ್ಮುಗುಳ್ಮೊಲೆಗಳೊಪ್ಪೆ ಪುಳಿಂದಿಯುರೊಪ್ಪಿತೋರಿದರ್ || ೧೦೯

ವ|| ಮತ್ತಂ

ವೃ|| ನೆಲೆವೊಲೆಗಳ್ಕದಕ್ಕದಿಸೆ ತಾಳ್ದತಳಿಮ್ಮುರ್ಡಿಯಿಂದೆ ಸೂಸೆ ಕ |
ಣ್ಮಲರ್ಗಳಕಾಂತಿ ಸಂದಣಿಸೆ ನರ್ತಿಸುತಂತಿರೆ ದಂತದೋಲೆಗಳ್||
ಗಲಕೆಸೆ ಕೈಯನುಣ್ಬಳೆ ಪುಳಿಂದಿಯರಂದದೆನಿಂದು ಸುವ್ವಿಯು |
ಜ್ಜ್ವಲರವವೊಪ್ಪಿರಲ್ಬಳಿಸಿದಬ್ಬಿದಿರಕ್ಕಿಯನಲ್ಲಿ ರಾಗದಿಂ || ೧೧೦

ವ|| ಅವರೊಳೊರ್ವ್ವಕಿರುವೇಡಿತಿ

ಕಂ|| ತಳಿರಂ ಸುತ್ತಿ ವನೇಜರಿ |
ವಿಳಾಸದಿಂ ಗಿರಿನಿತಂಬದೊಳ್ಮುತ್ತುಗಳಂ ||
ತಳೆದೆಸೆದಳಪರದಿಗ್ವಧು |
ತಳೆವಂತಿರೆ ಸಂಜೆವೆರಸಿ ತಾರಾಗಣಮಂ || ೧೧೧

ವ|| ಪೆರತೊಂದೆಡೆಯೊಳ್

ವೃ|| ಮುಡಿಯೊಳ್ಮೊಲ್ಲೆಯ ಸೂಡಿ ಗುಂಜಿದೊಡವಂಕೈಗೆಯ್ದುಕಸ್ತೂರಿಯಂ|
ತೊಡೆದುದ್ಯತ್ಕುಚಕುಂಭದೊಳ್ತಳಿರ್ಗಳಂ ತಾನುಟ್ಟು ಪಚ್ಚೋಲೆದಾ ||
ಳ್ದೊಡನಾಂತೊಳ್ಗರಿಯಂಬುಮಂ ಬಿದಿರಬಿಲ್ಲಂ ಬೇಡವೆಣ್ಬಂದುನಿಂ |
ದೆಡೆಯೊಳ್ನಿಂದನನಂಗನಾಂತು ಮುಗುಳಂಬಂ ಪುಷ್ಪಕೋದಂಡಮಂ ||೧೧೨

ವ|| ಇಂತನಂತವಿಳಾಸದಿಂ ಪುಳಿಂದಸುಂದರಿಯರ್ವಿಹರಿಸುತ್ತುಮಿರೆ

ವೃ|| ತಿವಿದು ಮೃಗಾರಿಯಂ ಸದೆದು ಬಲ್ಮರೆಯಂ ಪೊಡೆದಿಕ್ಕಿಸಿಂಹಮಂ|
ಕವಿದಿಸುತಾಸೆಯಂ ತರಿದು ಸೈರಿಭಮಂ ಪರಿದಿಟ್ಟು ಪಂದಿಯಂ ||
ತವಿಸಿ ವೃಕೌಘಮಂ ಬಡಿದು ಬಲ್ಮೊಲನಂ ಬಲೆಗಿಟ್ಟು ಪುಲ್ಲೆಯಂ |
ಬವರಿಗೊಳುತ್ತೆ ಬೇಡವಡೆಯಾಡಿದುದಗ್ಗದಬೇಂಟೆಯಂ ನೃಪಾ || ೧೧೩

ವ|| ಇಂತು ಬೇಂಟೆಯಾಡಿದನಂತರಂ

ವೃ|| ಪೊಂಬುಲಿ ಸಮ್ಮಮಾಸೆದಲೆಮುತ್ತು ಮೊಲಂಗಳಬಿಕ್ಕು ಪೂತಿಮೆ |
ಕ್ಕಂಬರಗಾಳಿ ಜೇನ್ಪುಣಿಸೆವಣ್ಮೊಸನಾರ್ಕ್ಕಿಡಿದಾಡೆ ನಿಗ್ಗವಂ ||
ಶಂಬರಮಿಂಬುವೆತ್ತಚಮರಂ ಜತು ಪೇರುಡು ಪೀಲಿಯೆಂಬಿವಂ |
ತುಂಬಿದಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ || ೧೧೪

ವ|| ಇಂತು ಪನ್ನತಿಕೆಯಿಂ ಪಲವೇಂಟೆಯಾಡಿಕಾಡೊಡೆಯಂತೋಡಿಲ್ಲದ ತೊರೆವೇಂಟೆಯಾಡಲೆಳಸುತಿರಿಗೂಳಿಹಂಜರಗೂಳಿಡುಗಾಣಂ ಸೊಕ್ಕುಸಿಲ್ಕುರಿಲ್ಕಿ ರುಗೂಳಿಪೆಗ್ಗೂಳಿಕೊಡಂಬೆಯಿಡಿಗ್ಗಿರುಗಟ್ಟಿಗೆಯುರೆಮುಡ್ತಿ ಸೂಸುಗೂಳ್ಗಳೆಂಬಿ ವಂ ಕೊಂಡು ಪೊಳ್ತಂ ಸಂನೆಯಂ ಜಾತಿಯಂ ಜವಂಗೆಡದರಿವ ಬಿನ್ನಣಂಬಡೆದಬೇ ಡರೊಡವರೆ ನೀಡುಂಪರಿವಪೆರ್ದೊರೆಗೈದಿಸಾರ್ದು ಪೆರ್ದಿಪ್ಪಮನೇರಿ ನಿಂದು ನಿರೀಕ್ಷಿಸಿ ತಾಣಮರಿದು ಪರೀಕ್ಷಿಸಿ ಸೂಸುಗೂಳಂ ತಳಿದು ತಳ್ವದೆ ಬರ್ಪಬರಮು ನರಿದು ಮೂಸಿದೊಡೆ ನಾಸಾಗ್ರಮನುಚ್ಚುವ, ನಕ್ಕಿದೊಡೆನಾಲಿಗೆಯೊಳ್ನಡುವ, ಪೊಳೆದೊಡೆ ಬೆನ್ನೊಳ್ಮೂಡುವೊರಸಿದೊಡೆ ಬರಿಯಂ ಕೊರೆವುಗುಳ್ದೊಡೆ ಕೀಳ್ವಾಳಿಗೆ ಯೊಳ್ನಾಂಟುವ ಪಲವುಂಬಗೆಯ ಗಾಣಂಗಳಂ ಬಿಚ್ಚುವಲೆಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬೊಗದೆ ಬಿಚ್ಚಿಬೀಸಿದಾಗಳ್

ವೃ|| ಗರಿಮೀನ್ನೀಗುಡಿ ಗೆಂಡೆಮೀನ್ಪವಳವಾಯಂ ಬಾಳೆಮೀನ್ಪಾವುಮೀ ।
ನ್ಕಿರುಮೀನ್ಕೆಂಗರಿಯುಜ್ಜೆ ಕುಜ್ಜಲತಿಗಂ ಕಾಗೆಂಡೆ ಕೆಂಕಲ್ಸರಿ ||
ಲ್ಕೊರವಂಜೇಳ್ಪಸಿಗಂ ಸಸಿಲ್ಗೊದಳೆ ಮೀನ್ಸೊಂಬೊಪ್ಪುಮೀನ್ಪಂದಿ ಮೀ |
ನ್ಪೆರೆಮೀನ್ಬಗ್ಗಡೆಬಣ್ಣಮೀನೆನಿಸಿವೆಲ್ಲಂ ಬಿಳ್ದುವಾತಾಣದೊಳ್ || ೧೧೫

ವ|| ಅಂತವೆಲ್ಲಮಂ ಗುದಿಗೈದು ಕಾಳಮೇಘಂ ತಡಿಗೈದಿ ನಿಂದಿರ್ಪಿನ ಮಾಗಳೊಂದುದ್ದಂಡ ಪ್ರಚಂಡ ಕಂಠೀರವಂ ಗೆಂಟಿನೊಳ್ವಿಲಯಾಗ್ನಿ ಯ್ಪೈವೆತ್ತು ದೆಂಬಗುರ್ವ್ವಸೊಳಕೊಂಡು ಗರ್ವಿಸಿ ನಿಂದು

ವೃ|| ಘನನಿದನಕ್ಕಿವಗ್ಗಳಮೆನಿಪ್ಪವೊಲಿಂದ್ರಗಜೇಂದ್ರಮುಳ್ಕೆ ಗ |
ರ್ಜನೆಗುಡುತೆಳ್ದು ಲಂಘಿಸಿ ವಿಜೃಂಭಿಸಿ ಕುಂಭಿಶಿರಃ ಪ್ರದೇಶಮಂ ||
ಕೊನೆಯುಗುರಿಂದೆ ಸೀಳ್ದು ರುಧಿರೋನ್ಮದ ಕೃನ್ಮಧುವೀಂಟಿಗೆಂಟಿನೊ |
ಳ್ತೊನೆದು ಕುನುಂಗಿ ಕುಪ್ಪಳಿಸಿ ಕಣ್ಗಿಡಿ ಸಾಲಿಡೆ ನೋಡಿ ಬೇಡರಂ || ೧೧೬

ನೆಗೆದುದು ಪಾಯ್ದುಪೊಯ್ದುದೊಡಲಿರ್ಕ್ಕಡಿಯಾಗಿರೆ ಖಂಡದಿಂಡೆಯಂ|
ತೆಗೆತೆಗೆದಿಟ್ಟುದೊಟ್ಟಜೆಯಿನೊಟ್ಟಿದುದಟ್ಟೆಯನಟ್ಟಿ ಗಂಡುಗೊಂ ||
ಡುಗಿಬಗಿಮಾಡಿ ಮಾರ್ಮ್ಮಲೆತವೀರಕಿರಾತರನೊಕ್ಕಲಿಕ್ಕಿ ಧಾ |
ತ್ರಿಗೆ ಪೊಸರಕ್ತಪೂರಮೆಸಗಿತ್ತದು ಕೇಸರಿ ಕೇಳ್ಧರಾಧಿಪಾ || ೧೧೭

ವ|| ಆಗಳ್

ನಡುಗುವಕಾಲ್ಗಳುಬ್ಬರಿಸಿ ಸೂಸುವಸುಯ್ಬೆಮರೇರಿದಾನನಂ |
ಪೊಡರ್ವೆ*ರ್ದ್ದೆ ಪೊಯ್ವುಕಿಬ್ಬರಿ ಸಿಡುಂಬಿನ ಮುಳ್ಗಳ ಗಾಯಮಂಗದೊಳ್||
ಜಡೆ ಬೆದರ್ವಕ್ಷಿ ಜೆಚ್ಚುವಮನಸ್ಸ್ಥಿತಿ ತೋರೆ ಪುಳಿಂದನೈದುತೆ |
ಮ್ಮೊಡೆಯನ ಮುಂದೆ ಕೈಮುಗಿದು ನಿಂದವನೆಂದನಿದಂಧರಾಧಿಪಾ ||೧೧೮

ಎಲೆಶಬರೇಶ ನೋಡಿದೆ ಯಿದೇಳ್ತರುತಿರ್ದ್ದಪುದಿತ್ತ ಸಿನ್ನಪೆ |
ರ್ಬ್ಬಲಮುಡಿದಸ್ಥಿಯಿಂ ಸುರಿವ ರೋಹಿತದಿಂಕಡಿವೋದಕಾಲ್ಗಳಿಂ ||
ತೊಲಗಿದತೋಳ್ಗಳಿಂ ಪರಿದಪೆಗ್ಗರುಳಿಂ ಪೊರಮಟ್ಟಖಂಡದಿಂ |
ವಿಲಯದಮೃತ್ಯುವಂತೆ ತವೆಕೊಂದುದುತಿಂದುದದೊಂದಿಭಾಂತಕಂ|| ೧೧೯

ವ|| ಎಂದಕಿರಾತದೂತೋಕ್ತಿಯಂ ಕೇಳ್ದು

ವೃ|| ಘನಕೋಪಾಟೋಪಮಂ ತಾಳ್ದರುಣತರತರತಾಮ್ರನೇತ್ರಂ ತತಸ್ವಂ |
ದನಯುಕ್ತೋಷ್ಠಂ ಪ್ರಬದ್ಧಭ್ರುಕುಟಿನಿಟಿಲನುತ್ಕೀರ್ಣಘರ್ಮಾಂಬುಭೀಷ್ಮ||
ನನನುದ್ವೃತ್ತಖಡ್ಗವೊಂದಂ ಪಿಡಿದು ಜಡಿದಡೇಂ ಧೀರನೋಧೀವರಂ ಘೋ೦ |
ಕನೆ ಬಂದಂ ದೇವ ಕೇಳ್ಭೀಕರಕರರಿರಿಪುವಿಸ್ಫುರ್ಲ್ಲಿಗಾಕಾಳಮೇಘಂ || ೧೨೦

ವ|| ಅಂತು ಪರಿತ್ರಾಸನಿರ್ಯಾತಕಿರಾತಸಂಜಾತವೊಡವರೆ ಪಂನತಿಕೆಯಿಂ ಬಪ್ಪಾರ್ಗಳ್ಮುಂದೆ ಮಂಡೈಸಿ ಮಡುಗಟ್ಟಿದನೆತ್ತರ ಪೆರ್ವ್ವೊನಲಿಂ ಕುಪ್ಪಳಿಸಿ ಗುಪ್ಪೆಗೊಂಡದೊಂಡೆಗರುಳ್ಗಳಿಂ ಪಿಂಡುಗೊಂಡು ಜೊಂಪೇಳ್ದುಕಳ್ಕಿದುಳ ಕೋಳ್ಗ ಸರಿಂದರೆದೆರೆದಕಣ್ಗಳಿಂ ಕೆದರ್ದತಲೆನವಿರಿಂದೆ ಜಿಗಿಜಿಗಿಯಾದಪೊಟ್ಟೆಬಿಂದರೆ ಗಚ್ಚಿರ್ದನಾಲಗೆಯಿಂ ಕೆಲದೊಳೊಕ್ಕ ಬಿಲ್ಸರಲ್ಗಳಿಂ ಕಡಿವಡೆದತೋಳ್ಗಳಿಂದುಡಿ ದನಡುಗಳಿಂ ಜರಿದಮುಡುಪಿಂ ಪಾಸಿಪರಪಿದಂತೆ ಬಿಳ್ದಪೆರ್ವ್ವೆಣಂಗಳಿಂದತಿಭ ಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ ತೊಟ್ಟನೆ ಕಟ್ಟಿದಿರೊಳತಿಭೀಕರಾಕೃತಿ ವೆತ್ತು ಮುರಿದೇಳ್ದುರಿಗೆದರ್ವ್ವಕಣ್ಗಳಿಂ ನುಂಗುವಂತೆ ನಿರೀಕ್ಷಿಸಿ, ಸಂಘಾರುಣಿತ ಪಕ್ಷಿಮಾಜಲಗುಹಾವಿವರದಂತಿಪ್ಪಬಾಯಂ ತೆರೆದು ಕಲ್ಪಾಂತಕಠೋರಘನಘನ ಧ್ವನಿಯುನೇಳಿಪಂತೆ ಗಜರಿ ಗರ್ಜಿಸಿ ನಿಂದವ್ವಳಿಸಲುಜ್ಜುಗಿಪಾಗಳ್

ಕಂ|| ನಡೆನಡೆ ಯಿದಿಚ್ಚಿರ್ದಿಜ್ಜೊರ್ |
ಗ್ಗೊರ್ಡೆಯುದಿರೊಗ್ಗೊರ್ಡೆಯುದಿಕ್ಕರ್ರಂ ಕರವಾಳಿಂ ||
ಪೊಡೆಪೊಡೆಯೆನುತ್ತೆ ನಾಲ್ಕುಂ |
ಕಡೆಯೊಳ್ಕವಿದಕ್ಕಿರಾತರವನೀನಾಥಾ || ೧೨೧

ವ|| ಆಗಳ್ವಿಲಯಾಗ್ನಿಮೈವೆತ್ತಂತೆ ಮಾಮುಸಕಂಮುಸಗಿ

ವೃ|| ಜಲಮಂ ಪೊಕ್ಕಲುಲಾಯಮುಂ ಪರಿದು ಪುತ್ತೇರಿರ್ದ್ದಭಲ್ಲೂಕಮುಂ |
ಸಲೆಪುಲ್ಗಚ್ಚಿರ್ದಪುಲ್ಲೆಯುಂ ಕುಜದ ಕೊಂಬಂ ಸಾರ್ದ್ದಸತ್ವಕ್ಷಿಸಂ ||
ಕುಲಮಂ ಕುಂದದೆ ಕೊಂದಘಕ್ಕಿದೆ ಫಲಂ ನೋಡೆಂಬಪ್ರೋಕ್ತೀಷರಂ |
ಬಲಿಗೊಂಡತ್ತು ಜಲಾಹಕಧ್ವನಿಯುಳತ್ಕಂಠೋಗ್ರಕಂಠೀರವಂ || ೧೨೨

ವ|| ಅಂತದಂ ಕಂಡು ಕಾಲಮೇಘಂ ಪ್ರಳಯಕಾಲಮೇಘದಂತೆ ಗಜರಿ ಗರ್ಜಿಸಿ ಕೆರಳ್ದು ಕಿಡಿಕಿಡಿವೋಗಿ ನೋಡಿ

ವೃ|| ಜಡಿದಸಿಯುಂ ಝಳುಂಪಿಸಿ ಕರಾಗ್ರದೊಳೆತ್ತಿಕಡಂಗಿ ಸಾರ್ದು ಬೊ |
ಬ್ಬಿಡುತೆ ಪಳಂಚಿ ದಂಡೆಗುಡುತಾರೆಪುಳಿಂದರಮುಂದಸತ್ವದಿಂ ||
ಕೆಡೆಕೆಡೆಯೆಂದು ಪೊಯ್ದನದನಿಕ್ಕಡಿಯಾಗಿರೆ ನಿನ್ನಭೃತ್ಯನಾ |
ಕಡುಗಲಿ ಕಾಳಮೇಘನವನೀಶ್ವರಶೇಖರ ರಾಜಶೇಖರಾ || ೧೨೩

ವ|| ಅಂತುಪೊಯ್ದನಂತರಂ

ವೃ|| ಸೀಳ್ದು ತದೀಯಮಸ್ತಕದ ಮಾಣಿಕಮಂ ನಡೆ ನೋಡಿ ಕೌತುಕಂ |
ದಾಳ್ದಿದನರ್ಘ್ಯಮೆಂದು ಬಗೆಯುತ್ತಿರೆ ಬಂದುದಿದೆಮ್ಮದೇಶದಿಂ ||
ಕೇಳ್ದಿಟಮೆಮ್ಮದೀಮಣಿಯೆನುತ್ತಿರದೈದಿ ತೊಡಂಕಿ ಸಿಂಹಳ |
ಕ್ಕಾಳ್ದನ ಭಂಟರುರ್ವಿ ಮಿಗೆ ಕಾಳೆಗಮಂ ತೆಗೆದರ್ಧರಾಧಿಪಾ || ೧೨೪

ವ|| ಆಗಳ್

ವೃ|| ಕರೆದೆನ್ನಂ ಕಲಿಕಾಲಮೇಘನೆಲೆ ನೀಂ ಪೋಗಲ್ಲಿಗಾರಾಜಶೇ |
ಖರನೆಮ್ಮಾಳ್ದನವಂಗೆ ಕಾಣ್ಕೆಗುಡು ಕೊಳ್ಳೆಂದಿತ್ತು ತದ್ರತ್ನಮಂ ||
ಭರದಿಂದಂ ಕಳಿಪುತ್ತೆ ಮತ್ತವರೊಳಿನ್ನುಂ ಕಾದುತಿರ್ದಪ್ಪನೀ |
ಪರಿಯಂ ನಿಮ್ಮಡಿಗಿಂದು ಬಿನ್ನವಿಸಲಾಂ ಬಂದೆಂನೃಪಾಲೋತ್ತಮಾ ||೧೨೫

ವ|| ಮತ್ತಮಾಸಿಂಹಳಂ

ಕಂ|| ಈಮಣಿಗೋರಗೆಯೆನಿಪಮ |
ಹಾಮಣಿಯೊಳವೆಂಬ ಬಿಂಕದಿಂದಂಬುಧಿಯೊಳ್ ||
ಶ್ರೀಮಹಿಮೆಯೊಂತೆನಾನೆಂ |
ಬೀಮದದಿಂದೆನಗೆಬೊರೆಯದಾದ್ರೋರೆಯೆಂಬಂ || ೧೨೬

ವ|| ಎಂದುಸಿರ್ದುಮತ್ತಮಿರದೆ

ಕಂ|| ದೇವರಡಿಗಂಡು ಕಪ್ಪಮ |
ನೀವರ್ಜ್ಞಪ್ಪನ್ನದೇಶದರಸರ್ಸುರ ||
ತ್ನಾವಳಿಯುನತುಳಸಿಂಹಳ |
ನೀವೇಳ್ಪಿಂ ಗಣಿಸದಾಗಳುಂ ಜಿರೆತಿರ್ಪಂ || ೧೨೭

ವ|| ಎನೆ ನಿರೀಕ್ಷಿಪರಸಂಗೆ ದೇವಾ ಸಿಂಹಳೇಂದ್ರನೆಂದುಂ ಕಪ್ಪಮಿತ್ತ್ರನ
ಲ್ಲೆಂದು ಗಣಕಗಣಮಣಿಯುರಂ ನಿಂದು ಕೈಮುಗಿದು ಪೇಳೆ ಕೇಳ್ದು ಕೆರಳ್ದು

ಕಂ ಸೊರ್ಕ್ಕೆಗೆದಬ್ಧಿಯಮಧ್ಯದೊ |
ಳುರ್ಕ್ಕಿದಸಿಂಹಳನ ಮದಕಿದೌಷಧಮೆನಿಕುಂ ||
ತೋರ್ಕ್ಕೆವಡೆದೆಸೆವ ಬಾಳುವೊ |
ಣರ್ಕ್ಕೆಗೆವೊಡಯಿಪುದು ಭೇರಿಯುಂ ಭರದಿಂದಂ || ೧೨೮

ವ|| ಎಂದು ನಿಜಮಂತ್ರಿವದನಮಂನೋಡಿ ಮತ್ತಮಿಂತೆಂದಂ

ಕಂ|| ಜಳನಿಧಿಯೊಳಿರ್ಪನೆಂಬ |
ಗ್ಗಳಿಕೆಯದಂತಿರ್ಕ್ಕೆ ಮಿಕ್ಕಲೋಕಾಂತರದೊಳ್ ||
ಬಳವೆರಸಿ ನಿಂದೊಡಂ ತ |
ನ್ನಳವಂ ಬರಿಕೈದು ತೋರ್ಪನೆನ್ನಯ ಬಲವಂ || ೧೨೯

ವೃ|| ಇಂತೆನೆ ದೇವದೇವಪತಿಮುಖ್ಯದಿಶಾಧಿಪರಳ್ಕುತಿರ್ಪರೋ |
ರಂತೆ ಭವತ್ಪ್ರತಾಪವಿಭವಕ್ಕೆನೆಗಣ್ಯನೆ ಸಿಂಹಳಂ ಮಹಾ ||
ದಂತಿಗಳಂ ಬೆಗಳ್ಗೊಳಿಪಸಿಂಹಕೆಲಕ್ಷ್ಯಮೆ ಪುಲ್ಮಿಗಂಮಹೀ |
ಕಾಂತವರೇಣ್ಯ ಮಾಳ್ಪುದೆನಗೀಜೆಸಸಂ ಸೆರೆಗಟ್ಟಿ ತಂದಪೆಂ || ೧೩೦

ವ|| ಎಂದುನುಡಿದ ಮಿತವಜನಕುಮಾರನ ವದನಾರವಿಂದಮಂ ನೋಡಿ

ಕಂ|| ವಿತತಚತುರಂಗಬಳಸಂ |
ಯುತನತಿಸಾಹಸಿ ಸರೋಧಿಮಧ್ಯಸ್ಥಿತನು ||
ದ್ಧತನಾಸಿಂಹಳನಲ್ಲದೊ |
ಡಿತರರವೋಲ್ಕಪ್ಪಮಿತ್ತುದೇಂಸೇವಿಸನೇ || ೧೩೧

ವ|| ಇಂತೌದ್ಧತ್ಯಸಾಹಸಸಮಗ್ರನಾಗಿರ್ಪನಾಗೊಡಂ

ಕಂ|| ನಿನ್ನಿಂತೀರದಕಜ್ಜಮ |
ದಿನ್ನೆನಗೊಂದುಂಟೆ ನಿಜದಿಸಂತಾದೊಡಮೇ ||
ನೆನ್ನಯ ಭುಜಕಂಡೂಹೃತಿ |
ಯಂ ನೆಗಳ್ದಿಂತೋರ್ಪೆನೆನ್ನ ಸಾಹಸಪಿರಮಂ || ೧೩೨

ವೃ|| ಎಂದಲ್ಲಿಂದೇಳ್ದಮಾತ್ಯಂಬೆರಸು ಭರದಿನೈತಂದು ತದ್ರತ್ನಮಂ ತಾಂ |
ಮುಂದಿಟ್ಟಾದ್ಯಂತಕಾರ್ಯಸ್ಥಿತಿಯನೊಸೆದು ವಿಜ್ಞಾಪಸಂಗೈದಮಂದಾ ||
ನಂದಂಬೆತ್ತಂಘ್ರಿಕಂಜಕ್ಕೆರಗಿ ಪರಕೆಯಂ ಕೊಂಡು ಜೋಳೇಂದ್ರನಿಂ ತಾ |
ಳ್ದಂದೊಲ್ದಾದೇಶಮಂ ತದ್ರಣಕೆ ತೆರಳಲುದ್ಯುಕ್ತನಾದಂ ಕುಮಾರಂ ||೧೩೩

ಮಾತೆಮಹೀಧ್ರಜಾತೆ ಮಹಿನೀಯಸುರಾಸುರಸೇವ್ಯಪಾದಕಂ |
ಜಾತೆ ಕಳಾಪ್ರಣೀತೆ ಕಮನೀಯಕಟಾಕ್ಷಸುರಕ್ಷಿತಾಮರ ||
ವ್ರಾತೆ ರಸಾಧಿಭೂತೆ ರಮಣೀಯರಮಾರತಿಮುಖ್ಯಶಕ್ತಿವಿ |
ಖ್ಯಾತೆ ವಿನೀತೆ ಭೂತಪತಿವಲ್ಲಭೆ ಪಾಲಿಪುದೆನ್ನನಂಬಿಕೇ || ೧೩೪

ಗದ್ಯ || ಇದುವಿನಮದಮರವರಮುಕುಟ ತಟಘಟಿತ ಮಣಿಗಣಮಹಾಪ್ರ
ಭಾಪಟಲಪರಿವೃತಪರಶಿವಶ್ರೀಪಾದನಖಚಂದ್ರ ಸಾಂದ್ರರುಚಿರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನಸರಸಜಸಮಾನಿತೋಭಯ
ಕವಿತಾ ವಿಶಾರದ ಶ್ರೀ ಷಡಕ್ಷರ ದೇವವಿರಚಿತಮಪ್ಪ ರಾಜ
ಶೇಖರ ವಿಳಾಸ ವಿಪುಳಪ್ರಬಂಧ ದೊಳ್ಕಿರಾತ
ದೂತಾಗಮನ ಮೃಗ
ಯಾವರ್ಣನಂ ಪಂಚಮಾಶ್ವಾಸಂ
ಸಂಪೂರ್ಣಂ.



# ಷಷ್ಠಾಶ್ವಾಸಂ

ಕಂ॥ ಶ್ರೀನಗರಾಜಸುತಾಮಧು |
ರಾನನವಿಧುಬಿಂಬಚುಂಬನಸ್ವೀಕೃತಪಂ ॥
ಚಾನನನಘಮದಗಜಪಂ |
ಚಾನನಸೇವೆಗೀಗೆಸೌಖ್ಯಮಂ ಶಿವಲಿಂಗಂ ॥ ೧

ವ॥ ಆಗಳಾರಾಜಶೇಖರ ನರೇಂದ್ರನ ವಿಜಯಯಾತ್ರೆಗೆ ಸಹಾಯಂಬಪ್ಪರ್ಂತೆ ಶರದಂ ಬರಲೊಡನೆ

ವೃ॥ ಮೊಳೆವ್ರೋದತ್ತಬ್ಜಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಮಂ|
ಡಳಿಗೊಂಡಾಗಳ್ಮರಾಳಾವಳಿ ನಗದಬಿಲದ್ವಾರದಿಂದೆಳ್ದುದಾಶಾ ॥
ವಳಯುಂ ತೆಳ್ಪೇರ್ಪಟ್ಟುದಬ್ಜಂ ಪಳಜನಲದರ್ದುದಬ್ಜಾರಿಬಿಂಬಂ ಕಳಂಕಂ |
ಕಳಿದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ತಾಪಗಾವಾರಿಪೂರಂ ॥ ೨

ವ॥ ಅಂತುಮಲ್ಲದೆಯುಂ

ಕಂ॥ ಅತಿನಿರ್ಮಲತೆಯುನೀಮಲಿ |
ನತೆಯಾಂತಪಯೋದಮಾಲೆಗಾಗಿಪ ಶರದಂ ॥
ವಿತತಸಿತದ್ಯುತಿತತಿರಂ |
ಜಿತಚಂದ್ರಂಗೀವಸೆಂಬುದೊಂದಚ್ಚರಿಯೋ ॥ ೩

ವೃ॥ ಘನಸಾಮಂ ಲೋಕದೊಳ್ವರ್ನಗಗೆಡೆಯೆನಿಸಿತ್ತೃಕಟಾ ಕೆಮ್ಮನೀವಿ |
ತ್ರನ ಶೇಜಕ್ಕೆತ್ತಲಾದೆಂ ದ್ವಿಜಗತಿಗೆಡಿಸಿರ್ದೆಂ ಜಗತ್ವಂಕವೆನ್ನಿಂ ॥
ಜನಿಸಿತ್ತಾರಾಜಹಂಸಾಹಿತಸೆಸಿಸಿದೆನೆಂದುಂ ಜಡಗ್ರಾಹಿಯಾನಾ |
ದೆನೆಸುತ್ತುಂ ಚಿಂತೆಯಿಂ ಬೆಳ್ಪಡೆದುರ್ದಿದೆನೆ ತಡಬ್ಬಂಶರನ್ಮೇಘವಿಕ್ಕುರ್ಗಂ ॥ ೪

ವ॥ ಮತ್ತಂ

ಕಂ|| ಅಡ್ಡವಿರೆ ಕಾರಕಾವ್ಮುಗಿ |
ಲೊಡ್ಡಣವಿಳೆಗಿಳಿಯದೊತ್ತರಿಸಿ ಮುಂದ್ಬೈಸು ||
ತ್ತೆಡ್ಡಮೆನೆ ನಿಂದಚಂದ್ರಿಕೆ |
ಯೊಡ್ಡೆನೆ ಬೆಳ್ಮುಗಿಲದೇಂ ಮನಂಗೊಳಿಸಿದುದೋ || ೫

ಚಾಂಬೊಳೆಯೊಳಗಿದು ಮುಳುಗಿ |
ರ್ದ್ದಂಬುದಮದು ತೊಲಗೆ ನೆಗೆದು ನಿಂದಂಚೆಯು ಪಿಂ ||
ಡೆಂಬಂತಿರೆ ಬೆಳ್ಮುಗಿಲದ |
ರಿಂ ಬೀಳ್ವತುಷಾರಮುದರ ಗರುವನಿಯೆನಿಕುಂ || ೬

ವೃ|| ನಾಕಪುಂಡರೀಕಮುಂಬರಾಪಗಾಪಯಸ್ಸ್ಥಿತಾ |
ಸ್ತೋಕಪುಂಡರೀಕರಾಜಿಯುಂ ಕರಾಗ್ರದಿಂದೆ ಕೀ ||
ಳ್ತೇಕಕಾಲದಲ್ಲಿ ಜೆಲ್ಲಿದಂತೆವೋಲ್ಮೃಣಾಳನಾ |
ಳೀಕದಂಬಶುಭ್ರಮಭ್ರವಃಭ್ರದೊಳ್ವಿರಾಜಿಕುಂ || ೭

ಹರಿದಶ್ವಾಶ್ವಾಸ್ಯದಿಂದಂ ಸುರಿದು ಪರೆದು ಪೆಂಪಾಳ್ದಫೇನೌಘಮೋ ನಿ |
ರ್ಜರಗಂಗಾತೀರ ರಾಜದ್ಧವಳವಿಪುಳಕಂಜಾತಸಂಜಾತಮೋ ವಿ ||
ಸ್ಫುರಿತಾನಂತಪ್ರಮುಕ್ತ ಪ್ರವಿತತಸಿತನಿರ್ಮೋಕಮೋ ವ್ಯೋಮಲಕ್ಷ್ಮೀ |
ಪರಿವೀತಶ್ವೇತಚೇಲಾಂಚಲಮೊ ಎನೆ ದಲಿಂಬಾಯ್ತು ಶುಭ್ರಾಭ್ರಜಾಲಂ|| ೮

ತಡಿವಿಡಿದೇಕಪಾದದೊಳೆ ನಿಂದರೆಗಣ್ಮುಗಿದಾತ್ಮಚಂಚುವಂ |
ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚ್ಚಿ ಮೌನಮುಂ ||
ಪಿಡಿದೆಡೆಗೈದಿದಂಬುಚರಮಂ ಜವದಿಂ ತವೆ ನುಂಗಿ ಸಾರ್ದ್ದು ಸಾ |
ಲ್ವಿಡಿದೆಡೆಗೊಂಡನೇಕಬಕಪಙ್ಕ್ತಿಗಳಿಂ ಕೆರೆ ತಳ್ತು ರಂಜಿಕುಂ || ೯

ಪರಿದೈತಂದರಸಂಚೆಯುಂ ಕರೆದು ಭೃಂಗೀನಾದದಿಂದಿತ್ತು ಗಂ |
ಧರಜಃಪೂರ್ಣಮರಂದದರ್ಘ್ಯಮನಮರ್ಚ್ಚಿತ್ತಂಬುರುಟ್ಪೀಠಮಂ ||
ಮರುದಾನೀತದಳಾಂಬರಂಬೊದಿಸುಣಲ್ಕಿತ್ತಬ್ಜಬೀಜಂಗಳಂ |
ಶರದಂಭೋಜಿನಿ ಮಾಡಿದಳ್ದ್ವಿಜವರಂಗಾತಿಥ್ಯಸತ್ಕಾರಮಂ || ೧೦

ವ|| ಇಂತೊಗೆತಂದಶರದೃತುವಿನೊಳಾಕುಮಾರಂ ವಿಜಯಯಾತ್ರೆಗೆ ಪೋ
ಗಲುಜ್ಜುಗಿಸಿ ಪೊರಮಟ್ಟು ಪೊರಗಿಕ್ಕಿದ ಪಟ್ಟವಣೆಯನಲಂಕರಿಸಿ ಕುಳ್ಳಿರ್ದ್ದಮಾತ್ಯ
ವದನಾರವಿಂದಮಂ ನಡೆನೋಡಿ ಸಮರಪ್ರಸ್ಥಾನಭೇರಿಯಂ ಪೊಡೆಯಿಸೆಂಬು
ದುಮಂ ತಂತ್ರಾಧ್ಯಕ್ಷನಪ್ಪಮೇಘನಾದನಂ ಬರಿಸಿ ಬೆಸಸುವುದುಮಂ
ಬಂದು ಕನತ್ಕನಕಕೋಣಮಂ ಪಿಡಿದಡಸಿ ಪೊಡೆದಾಗಳ್

ವೃ|| ಕಡಲೇಳುಂ ಕದಡೇಳ್ದು ತುಳ್ಕೆ ಫಣಿರಾಜಂ ಬಳ್ಕೆ ದಿಕ್ಪಾಲಕ |
ಸ್ವರ್ಜೆಯುಲ್ದಿಕ್ಕರಿವೃಂದಮುಳ್ಕೆ ಭಗಣಂ ಪಾಯ್ದುಳ್ಕೆ ಭೂಭೃತ್ಕುಳಂ ||
ಕಡುಪಿಂ ಕಂಪಿಸೆ ಪದ್ಮಜಾಂಡಘಟಮಂ ತುಂಬಿತ್ತು ಕಲ್ಪಾಂತದು |
ಗ್ಗಡದಂಭೋದನವಂಜೊಲಿಂಬುವಡೆದಾಗಂಭೀರಭೇರೀರವಂ || ೧೧

ವ|| ಆದಂ ಕೇಳ್ದು ಕಡುಸಡಗರಂಮಿಕ್ಕು ಮಾರಂಕಮಾವೃತಂಗಿಕ್ಕಿದಬಿ
ರುದಿನತೊಡರ್ಘುಣಘುಣಿಸಲೇಳ್ದು ಸಪ್ತಮದಾವಸ್ಥೆಯಿಂ ಮುಂದುಗಾಣದೆ
ಬಲ್ಗಂಬಮಂ ಮುರಿದು ನಿಗಳಮಂ ಪರಿದು ನಿಟ್ಟೋಟದಿಂ ಜೀವಿವರಿದಾರೆಕಾರರ
ನರೆಯುಟ್ಟಿ ಕೆಂಗಣ್ಮಸಗಿ ಕೇರ್ಗ್ಗಳಂ ನುಗ್ಗಿ ಪಿಲ್ಕಿದರಂ ಸೀಳ್ದು ಕಂಪರಂ ಕಾಲ್ಗೆ
ಡಿಸಿ ಪೊಡೆದು ಕಡಂಗಿ ಕಾಯ್ಪೇರಿ ದಿಕ್ಕುಂಭಿಗಳಳ್ಕೆ ಬೃಂಹಿತಂಗೈದಂಗಡಿಗಳನ
ಣೆದು ಪೊಯ್ದು ಪುರಮುಸಕಂ ಮಸಗಿ ಕೋಲಾಹಲಮನೆಸಗಿ ಬಾಳೆಮೀನಂತೆ
ಘರಿಕಯ್ಯನೆಳಲೊಳ್ಪರಿವ, ಕುಸಿದಿಟ್ಟಚಕ್ರದಂತೆ ಕುಸುಂಗಿ ಪರಿವ, ಸುಟ್ಟರೆಗಾಳಿ
ಯಂತೆ ಸುಳಿಸುಳಿದು ಪರಿವ, ತೋರಣದೊಳ್ನುಸುಳ್ದಂತೆ ತಲೆದಗ್ಗಿಪರಿವ, ಕಳಕ
ಳಮನಾಲಿಸುತತ್ತಪರಿಯೊಳಾಂತುಸಿಂಪಿದಿಜ್ಜಿಪರಿಪ್ರೊಟ್ಟೆಯಿಂ ಪಿಲ್ಕಿದರಂ ಪಿಡಿವ
ಜಡಿವ ಜಾಡಿಸುವ ತುಡುಂಕಿ ತೆಗೆವ ತೊಡಂಕಿಪಾಯ್ವ ಕಡಂಗಿಪೊಯ್ವೆತ್ತಿ
ಯಿಳಿಪುವ ಪೊತ್ತುಪರಿವ ಸುತ್ತಿತೆಗೆವ ಮೆಟ್ಟಿಸೀಳ್ವ ಕಟ್ಟುಬ್ಬಟೆಯ ದುಷ್ಟಗಜಂ
ಗಳಂ ಸರಿಸದೊಳ್ನಿಂದು ಸರಂದೋರಿ ಸಂಮುಖಂಗೈದು ಗಜಾರಿಗರ್ಜನೆಯಿಂ
ಗಜರಿ ಗರ್ಜಿಸಿ ನೆರೆದುನೋಳ್ಪ ಪುರಜನಮುರಿದುರಿಪೆಸೆನರಸನೆ ಪುದು ಘರಕಯ್ಯಂ
ಪಿಡಿದಡರ್ದ್ದು ಬಿದುಮನಪ್ಪಳಿಸಿ ಜಪ್ಪರಿಸಿ ಕೂರಂಕುಶಮನಿಕ್ಕಿ ನೆಳೆನೆಳೆದಂಗುಟದ
ತುದಿಯಿಂ ಕರ್ಣಮೂಲಮನರೆದಲೆದು ನೂಂಕಿ ಶಂಕೆಯಿಲ್ಲದೆ ಪಿಂದಾನೆಗಳೊಂ

ಮಗೊಂಡಿ ಶಿಕ್ಷೋಪಕರಣಂಬೆರಸು ಸುಳಿಸೇರುವ ಸುತ್ತಂ ಮೆಟ್ಟಿಸುವ ವಿಸಟಂ
ಬರಿಯಿಪಸ್ತ್ತರಪೊಳಿಕ್ಕುವ ಥಟ್ಟುವರಿಯಿಪ ತೇರೈಪ ಜೋಳೈಪ ಜೋಪರದೊ
ಕ್ಕುನಿಸ್ಸೈಪ ಚೌಪಟಪೇರಾಟಪೊಳ್ದುರಂ ತೋರ್ಪ್ಪೈಗೊಳೆ ಬಾಯ್ಗೊಳೆ ಮೈ
ಗೊಳೆ ಕಾಲ್ಗೊಳೆ ಕೋಳ್ಗೊಳೆಯುಂ ಕಲಿಪ ಕಡುಜಿನ್ನಣಂಬಡೆದು ಕಟ್ಟಾಳ್ತನಂ
ಬೆತ್ತಿಂತು ಗಜಾರೋಹಣಧುರೀಣರಾದಾಧೋರಣರ್ನ್ನೆರೆನೆರೆದು ಪರಿಪರಿದು ಬೇರೆ
ಬೇರೆ ನಿಜಗಜಂಗಳಂ ಪಣ್ಣಿ ಕೈಗೈದು ಪೂರ್ವಾಸನಮನವಷ್ಟಂಭಿಸಿ ಸಂಭ್ರ
ಮಂಬಿಗ ನೆರಪಿದಾಗಳ್ಕೋಡಮೊನೆಯೊಳ್ತಗುಳ್ಚಿದ ಸೂನಗಿಗತ್ತಿಯು, ಕೊನೆ
ಗೊಂಡಂಕೆಯೊಳ್ತೊಸೆವಬೆಳಿಯಚಾಮರದ, ಬಿದುವೋಳ್ಬರೆದು ಬಚ್ಚಿಸಿದ ಸಿಂ
ದೂರದ ಬಚ್ಚಣೆಯು, ಪಣೆವಾಸರೆನೆಲೆಯೊಳಮುಚ್ಚಿರಚಿಸಿದ ತಮಾಲರೇಖೆಯು,
ತಲೆವಳಿ ಸೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯು, ಪರಿಸರದೊಳೆಳಲಿವಿಟ್ಟ
ಕನಕದಂಳೆಲೆಮಾಲೆಯು, ಕಟತಟದೊಳಿಳಿಪಿದಾಣಿಮುತ್ತಿನಜ್ಜುಕುಚ್ಚುಗಳ, ಕನಕ
ಘಂಟೆಗಳ್ಮೊಳೆರ್ವ್ವ ಕೊರಲ ಮಿಸಿನಿಯ ತೊಂಗಲ್ವರಜೆಯು, ಚಿನ್ನಮಣಿಪುದಿದ
ಪಕ್ಕಘಂಟೆಯು, ಬೆಸ್ಗೊಳೆತ್ತಿದ ಕದಳೀಸ್ತಂಭದ, ಬುಕ್ಷಚರ್ಮದಪಕ್ಷರಕ್ಷೆಯು,
ಮೇಲೆ ಪೊಡೆವಬೀರಡಾಡೆಯು, ಪಿಂಗಾಲೊಳೆಳಲ್ವಭಾರಿಸಂಕಲೆಯು, ಝಣ
ಝಣಿಪಪೊನ್ನಂದುಗೆಯು, ಪಿಳಾಸಮುಳವಡೆ ಬಳವೈರಿಯೊಳ್ಪಳಂಚಲೆಂದು ನೀಲಾ
ಚಲಂಗಳ್ತಾಳಿಟ್ಟುವೆಂಬಬಿಂಕಮನಂಕಿಸಿ ಕಣ್ಗೆವಂದ ಗಂಧಸಿಂಧುರಸಂದೋ
ಹದಿಂ, ಪುತ್ತಂ ಕಿಳಿರ್ವ್ವಗೋಳಿಗೆಯುದನಿ ಕಿವಿವುಗದಮುನ್ನಂ ಮಂದುರ
ದೊಳಂದಂಬಡೆದು ನಿಂದಬಲ್ಗೆಚ್ಚಿಸ ಮುಂದಿಗೆಯುಂ ಮುರಿದು ಪಿಂಗಾಲ್ಗೆ ತೊಡ
ರ್ಚ್ಚಿದಗ್ಗದಗ್ಗರಣೆಯುಂ ಛಟಛಟನೆ ಕೀಳ್ತು ಕಿಳಿರ್ದ್ದ ಪಿಡಿಯತೊಡರ್ಚ್ಚ
ಕಡೆದು ತೊಡಂಕಿ ತುಡುಂಕಿದ ಗೋವಳನಂ ಕೊಡಪಿ ಕಿಡಪಿ ಕಡೆವಾಯು
ಸಡಿಲ್ವೀಥಿಗೆ ಕಡುವೇಗದಿಂ ಪರತಂದು ನಿಂದು ನೆರೆದ ಜನಂ ಕಲ್ಲೊಳಿಟ್ಟ ಕವಡಿ
ಕೆಯ ರಾಶಿಯಂತೆ ಝಲ್ಲನೆ ಕೆದರೆ ಖರಖುರಾಗ್ರಘಾತಜಾತವಿತತಧರಾತ
ಳರಜಃಪಟಲಂ ರವಿಮಂಡಳಮನಂಡಲೆದು ಮುಸುಂಕೆ ವಿಸಟಂಬರಿವ ಸೂಕ
ಳಾಶ್ವಂಗಳಸಂಕಣೆಯುಂ ಬಗೆಯದೆ ಮುಂಕೊಂಡು ಶಂಕಿಸದೇರಿ ವಿೂರಿ ಬೀದಿ

ಗೊಂಡು ಪಱಿಯಿಪಾಗಳ್ಮುಂಗಾಲ್ಗಳಂ ಸೆಗಪಿ ನಿಲ್ವಿಂಗಾಲ್ಗಳಂ ಕೀಳ್ತು ದಾಂ
ಟುವ ಪೊರಕಾಲ್ಗಳ್ವೆ ಮಱಳಿಮೆಟ್ಟುವ ಒಱವರಿವ ಸರಳಿಸಿಪಾಯ್ವ ಜಪ್ಪಱಿಸುತು
ಪ್ಪರಿಪ ಮಿಡಿವಕಡೆಗಣಿಸಿ ಪಾರ್ವ್ವ ದುಂಡಿಪ ದಿಂಡುಪಾಯ್ವ ಒಪರಿಪರ ಜಪ್ಪು
ಟಿಗೆಗೆ ಚಳಿಯದ ಕಡಿಯಾಣಮಂ ಕೈಕೊಳದ ಬಗೆಯಂ ಒಗೆದಂತೆ ಕಂಡುಮು
ಮಱಿದು ಮೈಯುರಿದು ಪೊಲಂಬಱಿದು ಪೊಳ್ತರಿದು ದಸಿಯುಱಿದು ಪಶಿಯುಱಿದು
ಬೋಳೈಸಿ ಹಜ್ಜೆಗೊಳಿಸಿ ತೊಡೆಮುಡದಿಜಂಮುಟಿಗೆಗಳಿನೊಯ್ಯನೊಯ್ಯನೆಪ್ಪ
ವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯಿಪಪೊಳಯಿಪದುವ್ವಾಳಿಪ ಪ್ರೋರವುಪಿ
ಪಿವಿರೇರಿಪಡ್ಡಂಬರಿಯಿಪ ರಾಘೆಪಾಘೆಯೊಳ್ನೆರಿಸಂಗೊಂಡೊಂದಿಪೊಂದೊಂದ್ಯೊಳ್ದ
ಳಱಿದೇರುವಸುತ್ತೇರುವ ಬಿತ್ತರಂಬಡೆದಪಾಜಳಿತನದೊಳ್ಕನಸಿಳಿಕೈವರಾಲಿಪೋ
ತ್ರನನಾಳಿಗೊಳ್ವ ಗೋಳಾಯ್ಲನೆರೆದು ಕನತ್ಕನಕವಜಮುಂತೊಟ್ಟು ಕಾಲ್ಗ
ಪ್ಪಸಮನಿಟ್ಟು ಸೀಸಕಮಂ ಸಿಂಗರಿಸಿ ಬಾಹುರಕ್ಕೆಯಸಾಂತು ಸಾಂಜಾ
ಣೆಯುಂ ಬಿಗಿದುಡಿಯೆಡೆಳ್ಪೊಂಬುರಿಗೆಯುಂ ಕಟ್ಟಿ ಗರಿಗಣೆಗಳ್ತುಡುಗಿದ ಪೊನ್ನಬ
ತ್ತಳಿಕೆಯುಂ ಬೆನ್ನೊಳ್ತಳೆದು ತರಕಸಮುಸೆಡವೆಗಲೊಳ್ತೊಡರ್ಚಿ ಪಂಚವಣ್ಣದ
ಬಟ್ಟೆಯ ಬಿರುದಿನಬೀರಗಜ್ಜೆಗಟ್ಟಿ ದರ್ಪಿರಿಯುಸೇಜೆಯುಮನೋಜೆಯುಂ ಪೆತ್ತಿ ಪಿಡಿದು
ಸಮರಸಮಯಸಮುಚಿತನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱಿ ಸರಭಸಂಪಾ
ಯಿಪಾಗಳ್ಪೊನ್ನಕಡಿವಾಣದ ರನ್ನದಪೊಗರಂಬಡ ಕಿವಿಯುಚಾಮರದ ಸುತ್ತು
ಜಲ್ಲರಿಯ ನೆತ್ತಿಯಬೆಳ್ಗರಿಯ ನೊಸಲಕನ್ನಡಿಯ ರೇವಂತಮಾಲೆಯ ಗಗ್ಗರದತರ
ಜೆಗತ್ತರಿಯ ಪೊಕ್ಕರ್ಳಘಂಟೆಯ ಪೊಂಜೆಸೆದಗುಬ್ಬಿಯ ಪಾರಿವದ ಸಂಘ್ಯಾರಾ
ಗದ ದೇವಾಂಗದ ನವರಂಗದ ಸುವರ್ಣಪಳಿಯ ಪಳದಿಯ ಜೋನೆಗಪಳಿಯ ಪಟ
ಬಗೆಯ ಪಲ್ಲಣದಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ ಶರಧಿ
ಮಥನಸಮಯದೊಳ್ಘುಳುಘುಳಿಸಿ ಘೆಳಿಲನೆ ಪರಿವ ಪೆರ್ದೆರೆಯ ಮೊರೆಗೆವಂದು
ರಯದಿಂ ಪರಿದು ನೆರೆದು ತರಂಗೊಂಡತುರಂಗಸಂಘಾತದಿಂ, ಮತ್ತಂ ಹೂಡಿದಹ
ಯಂಗಳ ಜೋಡಿಸಿದಚಕ್ರಂಗಳ ಮುಗಿಲೊಳ್ಪಳಂಚುವಪಳವಿಗೆಯ ಸುವರ್ಣ
ದೊಡ್ಡವಲಗೆಯ ನೆಗಪಿಸೆಟ್ಟಘನಚಿತ್ರಕೂಲದ ಕೆಲದೊಳಿಳಿಪಿದಂಬನಪೊಸೆಯ

ಸಾರ್ಚಿಸಿಲಿಸಿದ ಶರಾಸನದ ಕೀಲ್ಮೊಳೆಯೊಳಿಳಿಪಿದಪಾರುಂಬಳೆಯ ಸಂಗಳಿಸಿದ ಮುಕುರತೋರಣದ ಮುಂಗಡೆಯೊಳಿಕ್ಕುವ ಧವಳಚಾಮರದ ಮೇಲೆಮೆರೆವ ಮೇಘಡಂಬರದ ರಣಕಬಳರಕ್ಕೆಸುದುರ್ದ್ದಗಳ್ಪಿದ ಭರಣಿಗಳ ಪೊಸಸವಗಸೀಸ ಕಂಗಳ ಪಟ್ಟಿಗಳ ಚಕ್ರಚೀತ್ಕೃತಿಗೆ ಜತಿಗುಡುವ ಮಾಲೆಘಂಟೆಯ ಸಾರಿ ನಿಂದ ಧೀರಸಾರಥಿಯ ಸಂಮುಖದೊಳ್ಬಿರುದಿನುಗ್ಗಡಿಪವಂದಿವೃಂದದ ಸಂಭ್ರಮಂ ಬೆರಸು ನಿಂದನಿಜರಥಗಳಂ ಬೀರಸಿರಿಯ ಮಣಿಮಂಚಮನೇರುವಂತೇರಿ ಮಣಿ ಮಕುಟಕಿರಣಮಿನರುಚಿಯನೊತ್ತರಿಸೆ ಕಲಿತಕರ್ಣಾಭರಣಕಾಂತಿ ಕಪೋಲ ದೊಳ್ನರ್ತಿಸೆ ತೊಡೆದಯಕ್ಷಕರ್ದಮದ ಕಡುಗಂಪಿಂಗೆ ಮದಾಳಿ ಮೊರೆದೆರಗೆ ಕನಕಕವಚರುಚಿರರುಚಿಯೊಳ್ ಹಾರರುಚಿ ಮಲ್ಲಗಾಳಗಮನೊಡರ್ಚೆ ಭುಜವಲ್ಲ ರಿಯ ಮಂಜರಿಯ ಸಿರಿಯಂ ಭುಜಕೀರ್ತಿ ತಳೆದು ತೆರಂಬೊಳೆಯೆ ಪೊಂದೊಡರಸು ಇಗ್ಗದಿರ್ಚ್ಚರಣಾಂಬುಜಕ್ಕೆ ಪೊಸವಿಸಿಲಂ ಪಸರಿಸೆ ಪಸದನಸಿರಿ ಮಿಸುಗೆ ರಥಾರೋ ಹಣನಿಪುಣತೆಯೊಳ್ಪಾರ್ಥನಂಪಳಿವ ಪಾರ್ಥಿವಸಮುದಯಂಮುದಂದಳದೇರಿಪನ್ನತಿ ಕೆಯಿಂ ಪರಿಯಿಪಾಗಳಂಬುಧಿಯ ತರಂಗದ ಬೆಂಬಳಿಯೊಳ್ಪರಿವವಹಿತ್ರಂಗಳಂತೆ ತುರಂಗದಬೆಂಬಳಿಯೊಳ್ಪರಿದು ಪಾಳಿವೆತ್ತರಥಂಗಳಿಂ, ಮತ್ತಂ ರಣರಂಗದೊಳಿ ದಿರ್ಚಿದ ವೀರನಂ ಸದೆದು ಬಿಸುಡುವ ತೊಡಂಕಿದವೀರನನಡಂಗಿ ಪೊಯ್ಪವಂಚಿಸಿ ಪಾಯ್ಪ ವೀರನಂ ಸಂಚರಿದೆರಗುವ ತೊಲಗದೆ ನಿಂದವೀರನಂ ತಲೆಗಡಿದುರುಳ್ಚುವ ಮೂದಲಿಪವೀರನಂತೌಡಲೆಗಾಣಿಪ ಮಾಯದವೀರನಂ ನೋಯಲಿರಿದು ಕೆಡ ಪ್ರಪ ಪರಾಕ್ರಮಕ್ಕೆ ಪಕ್ಕಾದ ಡವಣೆವರೆಯ ಕಾಲಸರಪಳಿಯ ಬಾವುಲಿಯ ಜೋಂಜೆಯ ಭುಜಕೀರ್ತಿಮುಖದ ಜೀರಜೇಗಟೆಯ ಚೆನ್ನಚಮರದ ಪಳದಿಯ ಸೀಗುರಿಯ ಪಗಲಕ್ಕೈದೀವಿಗೆಯ ವಜ್ರದಂಕುಶದ ವಿಜಯಪತಾಕೆಯ ಪುಲಿಯ ಚರ್ಮದ ಪಲುಜಯ ಗರಿಯ ತೋಳಕಜ್ಜಳಿಯ ತೊಂಗಲ್ಘಂಟೆಯ ಜೋಡುಶಂ ಖದ ಜಗಜಂಪೆಸತ್ತಿಗೆಯ ಪಲಬಿರುದುಗಳ್ನಿಗಳ್ತಿವಡೆಯೆ ಘುಡುಘುಡಿಸಿ ಜಡಿದು ಪಿಡಿದ ಕರವಾಳ ಕಕ್ಕಡೆಯ ಸಬಳದುಲ್ಬಣದಕುಂತದ ಕೌಕ್ಷೇಯಕದ ಕ್ಷ್ಣದಡಾಯುಧದ ಮುಸಲದ ಮುದ್ಗರದ ಪರಶುವಿನಪಟ್ಟಿಯದ ಪಾಶದಂಕು

ಶರ ಪಂಕ್ತಿಯ ಲಾಳಿಯ ಜವದಾಟಿಯ ಚಾಪದ ಚಕ್ರದ ಶರದ ಶೂಲದ ಶಲ್ಲ
ಹದ ಬಲ್ಲೆಹದ ಪೊಡವಪ್ಪುರ್ ಪಡಿತಳಿಸೆ ಸಿಡಿಲಪಡೆ ಕಾಲನ ಕೋಯ್ಬುಗೊಂಡ
ಕಟ್ಟಾಳ್ತನಂಬೆತ್ತಂತೆ ಮೆರೆದು ನೆರೆದಪದಾತಿವ್ಯೂಹದಿಂ, ಮತ್ತಂ ಮೆಱೆದಪಚಂಚಳ
ವರೆಯ ಮೊಳಗುವಪಳಹದ ಸೂಳ್ಪಸಿಸ್ವಾಳದ ಪೂರ್ಪಶಂಖದ ಡಮಡಮಮೆಂ
ಬಡಿಂಡಿಮದ ಭೋರೆಂಬಕಹಳೆಯ ಬೊಬ್ಬಿಡುವಬೀರಮದ್ದಳೆಯ ಚಿತ್ರಿಗುಡುವತಂ
ಬಟದ ಬೆಂಬಳಿವಿಡಿದ ಬೊಂಬುಳಿಯ ಗಿಣ್ರೆಂಬಗಿರುಗಟಿಯ ನಿಜಡತರಪಟುರಟ
ದೊಡನೆ ಘುಡುಘುಡಿಪ ಸುಭಟಪಟಲಕಳಕಳಂ ರಥಚಕ್ರಚಟುಲಚೀತ್ಕಾರಂ
ಮತ್ತಮಾತಂಗಸಂಘಾತಸಮುದಿತಬೃಹದ್ಬೃಂಹಿತಂ ತರಂಗತರಳತುರಂಗ ಸಂ
ಘಹೇಷಾಸಮುದ್ಘೋಷಣಂಬೆರಸಿ ನಭೋಮಂಡಳಮನಳ್ಳಿರಿದಳುರ್ಕೆಗೊಳೆ ಸೇನಾ
ರಜಂ ಬಾಸಂ ಬಾಸಣಿಸೆ ಕರತಳದೊಳೊರೆಗಳೆದು ಜಳುಂಪಿಸುವಕೈದುಗಳ
ಬಳ್ಳಿವೆಳಗು ಬಳಸಿ ಬಳೆದು ಕವಲಿರಿದು ಕವಿಯೆ ನೀಳ್ದಪತಾಕೆಗಳ ಪಸರಿಸಿದ ಪಟ
ಪಟಲಂ ಪದ್ಮಸಖರುಚಿಯಂ ಪರಿಭವಿಸೆ ಪೆರ್ಮೆವೆತ್ತು ಕಲ್ಪಾಂತಸಂಕ್ಷುಭಿತಪ್ಪ
ಕಡಲಂತೆ ಘುಳುಘುಳಿಸಿ ನೆನೆವಮನಕಂ ನೋಳ್ಪಕಣ್ಗಂ ನುತಿಪನಾಲಗೆಗಮಸದಳಮೆ
ನಿಸಿ ಜಗದಗಲಕ್ಕೆ ತೆಕ್ಕನೆ ತೀವಿದ ಚತುರಂಗಬಲಮಂ ಚತುರಜಮಹಿಪತಿ ತೋರಿ
ದಾಗಳದಂ ಕಂಡು ಕೌತುಕಂಗೊಂಡಾಪ್ಪು ಮಿಗೆ ರಾಜಶೇಖರರಾಜೇಂದ್ರ
ನೋಜೆಯಿಂದಾಜಿಸನ್ನದ್ಧನಾಗಿ ಯಥೋಚಿತನೈಪಥ್ಯಂದಳೆದಮಾತ್ಯಸಮೇತಂ
ಪಣ್ಣಿಬಂದಿಭೇಂದ್ರಮನೇರಿ ಸಮರಸಮುಚಿತಸಂಭ್ರಮಂ ಮಿಗೆ ಶುಭಮು
ಹೂರ್ತದೊಳ್ಪೊರಕ್ಕೆ ನಡೆತಪ್ಪಗಳ್

ವೃ॥ ಬಳವದ್ದೋರ್ದಂಡದಂಡಾಧಿಪಮಿತವಚನಾಮಾತ್ಯರೊಂದೊಂದಿಭೇಂದ್ರಂ
ಗಳನಾರ್ಪಿಂದೇರಿ ಪಿಂದೈತರೆ ರಸಿಕರಿಸಂಕ್ಷೋಭವರ್ಗದ್ವರೂಥಂ ॥
ಗಳೊಳೊಪ್ಪಂಬೆತ್ತು ಸುತ್ತುತ್ತೊಡವರೆ ಚತುರಂ ಚಾತುರಂಗಾನ್ವಿತಂ ಮಂ
ಜುಳಖಡ್ಗನ್ಯಸ್ತಹಸ್ತಂ ತಳರ್ದನಖಿಲಸೇನಾಬ್ಧಿಸೀಕುಂಜರೇಂದ್ರಂ॥

ವ॥ ಮತ್ತಂ

ವೃ|| ಖರಖಡ್ಗಪ್ರಾಂಶು ವಿದ್ಯುದ್ದ್ಯುತಿ ಪರಿಗೆಗಳಂಭೋಧರಂಗಳ್ಗಜಪ್ರೋ |
ತ್ಕರಶುಂಭದ್ವೃಂಹಿತಂ ಪೆರ್ಮೊಳಗು ಮಣಿರಥಶ್ರೇಣಿ ಶಕ್ರಾಯುಧಂ ಬಂ ||
ಧುರಮಾಗುತ್ತಿರ್ಪಿನಂ ತದ್ರಿಪುಮದದವಮಂ ನಂದಿಸಲ್ಬರ್ಪಕಾರಂ |
ತಿರೆ ಬಂದಂ ಸತ್ಕದಂಬಪ್ರಚಿತಕರಕವಿಖ್ಯಾತನಾಭೂಮಿಪಾಲಂ || ೧೩

ವ|| ಅಂತು ಬರ್ಪಾಗಳ್

ವೃ|| ಕಮಠೇಂದ್ರಂ ತೆಕ್ಕೆಗೊಂಡೊಂದಿದವಿನಮಿತಕಂಠಾಹಿಪಂ ಸಿಂಬಿಯೆಂಬಂ |
ತಮದೊರ್ಪ್ಪಂಬೆತ್ತುಬೆನ್ನಲ್ಲಿರೆ ಬಲಭರಮಂ ತಾಳ್ದು ಬಾಳ್ದಂ ಪತಾಕಾ ||
ಕ್ರಮಿತಾಕಾಶಾಧ್ವದೊಳ್ತತ್ಪಟಪಟಲದೊಳಟ್ಟಾಸ್ಯಮಂ ತದ್ರಜಸ್ಸಂ |
ಕ್ರಮಜಾತಕ್ಲೇಶಮಂ ಮೆಯ್ಗಳೆದರನಿಮಿಷರ್ನಿರ್ನಿಮೇಷಾಕ್ಷಿಗಳಾಗಳ್ ||೧೪

ಕಂ|| ಬಳವಿಪುಳಕೇತು ತುಡುಕಿದೊ |
ಡಳರ್*ದಳಿತಂದಿಂದು ತನ್ನೃಪಾಲನ ಮರೆಯಂ ||
ಗಳಿಲನೆ ಪುಗಲ್ಕೆ ಬಂದಂ |
ತೆಳಮುತ್ತಿನ ಮೇಘಡಂಬರಂ ಬಗೆಗೊಳಿಕುಂ || ೧೫

ವೃ|| ಮದಜಳದಿಂದೆ ಮಗ್ಗಿಪುದು ಭೂರಜಮಂ ಗಜರಾಜಿ ವಾಜಿ ಮ |
ತ್ತದನೆ ಖುರಾಗ್ರದಿಂ ನೆಗಪುಗುಂ ಧ್ವಜಪಙ್ಕ್ತಿ ಮುಸುಂಕಿ ಸೂರ್ಯನಂ ||
ಪದೆದೆಳಮುರ್ಬ್ಬನುರ್ಬ್ಬಿಪುದು ಮತ್ತದನಾಗಳೆ ಖಡ್ಗಕಾಂತಿ ಪೊ |
ಯ್ವುದು ಬಳಿಕೆಂದೊಡೇನೊಗಳ್ವೆನಾಜಗತೀಶಜಯಪ್ರಯಾಣಮಂ || ೧೬

ರಿಪುದುರ್ಗಧ್ವಾಂತವಿಧ್ವಂಸನಖರಕರನೀ ಬಂದನೀಬಂದನನ್ಯೋ |
ರ್ವಿಪಗರ್ವೋರ್ವೀಧ್ರಸಂಭೇದನಪವಿಧರನೀಬಂದನೀಬಂದನುದ್ರಿ ||
ಕ್ತಪರಕ್ಷ್ಮಾಪಪ್ರತಾಪೋತ್ಕದಳಕಳಭಸೀಬಂದಸೀಬಂದನೆಂದು |
ನ್ನಿರ್ಪ ಪಟುಪ್ರಧ್ವಾನಮಂ ಬೀರಿದುವು ಕಹಳೆಗಳ್ಮುಂದೆ ವಿಸ್ತಾರದಿಂದಂ ||೧೭

ವ|| ಮತ್ತಮಾಸೈನ್ಯಮುದ್ಯಾನದಂತೆಮಹಾಗಜಾತಿಶೋಭಿತಮುಂ, ರಣಾಜಿರದಂತೆ ಮನೋಗಮನವಾಜಿರಂಜಿತಮುಂ, ಅಯೋಧ್ಯಾನಗರದಂತೆ ಸಮಾಶ್ರಿತಮಹಾದಶರಥಸಂಜಿತಮುಂ, ತ್ರಿವಿಕ್ರಮಮೂರ್ತಿಯಂತೆ ವಿಮಳಪದಾತಿ



ಮಂಡಿತಮುಂ, ಘನಾಗಮದಂತೆ ಜಿಷ್ಣುಚಾಪಶರಕರಕೋದಂಚಿತಮುಂ, ನಭಸ್ಥಳದಂತೆ ಸಮುಚ್ಚಾಮರಸಮಂಚಿತಮುಂ, ಪೃಥುಳಪುರದಂತೆ ಮಿಳಿತಘಂಟಾಧ್ವನಿಕೇತನಾಲಂಚಿತಮುಂ, ಸುರಲೋಕದಂತೆ ಮುಕ್ತಾಮಯಾತಪತ್ರಸ್ಥಿಮಿತವಿಭವಮುಂ. ಸಾಮ್ರಾಜ್ಯದಂತೆ ಸಮುತ್ಕೀರ್ಣಧರಾಪರಾಗಮುಂ, ಶರಧಿತಟದಂತೆ ಮಹಾಪ್ರಭಾವಸೀಮಾಲಂಕೃತಮುಮೆನಿಸಿ ಸಡಗರಿಸಿ ನಡೆತಪ್ಪಾಗಳ್

ವೃ॥ ಇದಿರೊಳ್ಕಣ್ಗೊಪ್ಪಿತಜ್ಜೋದ್ಭವನ ಭವನಮಂ ಮುಟ್ಟಿ ತತ್ಸೃಷ್ಟಿಶಿಲ್ಪ।
ಕ್ಕಿದೆ ಸಾಳಿಸ್ತಂಭಮೆಂಬಂತಮರೆ ಸುರನದೀಸುಪ್ರವಾಹಂ ಪಟಂಬೋಲ್ ॥
ತುದಿಯೊಳ್ಭಾಸ್ವದ್ವಿಭಾಸ್ವಸ್ಮ್ರ ಕುರಮಿರೆ ಸರಿಸ್ನಿರ್ಝರಂ ಚಾಮರಂಬೋ।
ಲ್ವಿದೆದೊಪ್ಪಂಚೆತ್ತು ತೋರುತ್ತಿರೆ ಮಣಿಕಟಕಖ್ಯಾತ ಧಾತ್ರೀಧರೇಂದ್ರಂ॥
ಕೆಲದೊಳೆ ತಳ್ತುಸೇವಮುಗಿಲೊಪ್ಪುವಕರ್ಣತಳಂ ರದದ್ವಯಂ।
ವಿಳಸಿತವಜ್ರಶೃಂಗಯುಗಮಂತದರಂತರದಲ್ಲಿ ಬಿಳ್ದ ಸೆ॥
ಲ್ಲೊಲೆವಮಹೋರಗಂ ಕರಮೊಸದ್ದುಗುಮಂಬುಮದಾಂಬುಗುಂಡುಗ।
ಲ್ತಲೆ ತನಗಾಗೆ ತದ್ಗಿರಿಕರೀಂದ್ರಮದೊಪ್ಪಿತು ಕಣ್ಗೆ ಭೂಪನಾ ॥೧೯॥
ವ॥ ಅಸಗದಗ್ರಪ್ರದೇಶದಲ್ಲಿ

ವೃ॥ ವಿಳಸತ್ಸಂಧ್ಯಾರುಣಪ್ರದ್ಯುತಿಗೆ ರುಧಿರವಿಭ್ರಾಂತಿಯಿಂ ಬಗ್ಗವಿಂಡ।
ವ್ವಳಿಕುಂ ಬಾಯ್ವಿಟ್ಟು ತತ್ಕಾಲದೊಳೊಗೆದಸರಕ್ಕೋಡುವಂ ಜೇಡವೆಕ್ಕೆ॥
ದಳಮಂಕೊಂಡೊಯ್ದುಕೊಯ್ಯಲ್ಕೆಳಸುವಳೆರವಣ್ಣೊಂದುಶೋಣಾಂಶುಮನ್ಮಂ।
ಡಳಮಂ ತಾಳೀಫಲಂಗೆತ್ತೆಳಸಿ ತುಡುಕುಗುಂ ಜಾಲಶಾಖಾಚರಂಗಳ್ ॥೨೦

ಕಂ॥ ಕಟಕಚರಕರಟಿ ನಿಜಕಟ।
ತಟಕಂಡೂಹರಣಸಮದಪುಷ್ಕರದೆ ನಭ॥
ಸ್ಸ್ಫುಟಶಶಿಯನಬ್ಜಮೆಂದು।
ತ್ಕಟಿಸಿ ತುಡುಂಕಿದೊಡೆ ತನ್ಮದಂ ಕರೆಯೆನಿಕುಂ॥ ೨೧
ಹರಮಣಿಯುರೆಪೊಳ್ಮರುಗು।
ತ್ತಿರೆ ವೃತ್ತತೆಸೆತ್ತ ದಿನಕರೋಪಲಮಿದು ಭಾ॥
ಸ್ಕರಬಿಂಬಮೆಂದು ಬಂದಾ।
ಗರಿಣಾದ ಸಮಯಿಸಿ ವಿಘುಂತುದಂ ಪಿಡಿವುದದಂ ॥ ೨೨

ಸ್ರ॥ ತಡಿಯೊಳ್ಕೀಗ್ಗೊರ್ಗಂಜಕಾಡಾಸೆಗಳಿನಳಿಗಳಿಂ ತಳ್ತಕಂಜಾತದಿಂ ಜಾ |
ಣ್ಬಡೆದಿತ್ತಂ ಕೂಡಿ ಕೋಲಾಹಲಮನೆಸೆವಚಕ್ರಾಳಿಯಿಂ ಪಾಳಿಯಿಂ ಮೆ ||
ಲ್ನಡೆಯೊಪ್ಪುರ್ದ್ಯಸ್ಮರಾಳಾವಳಿಯಿನೊಳಗೆ ಮೇಲ್ವಾಯ್ವಮತ್ಸ್ಯಂಗಳಿಂ ಪೆಂ |
ಪಿಡಿಪೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವಪೊಜ್ಜಂ ಪೊದಳ್ದೊಪ್ಪದಿಂದಂ || ೨೩

ಕಂ॥ ನೆಲವೆಣ್ಣ ಗಿರಿನಿತಂಬ |
ಸ್ಥಳಮದು ತನಿವೆರ್ಚೆ ಕೀಳ್ತು ಕೆಲಸೂಸಿದವೋ ||
ಖಲೆಯೆನಿಸಿ ಮೆರೆದುದಂಬೂ |
ಜ್ವಲಕಣಮುಕ್ತಾಮನೋಜ್ಞಮಾಸದಿ ಪಡಪಿಂ || ೨೪

ವ॥ ಮತ್ತಮಿತ್ತರಂಬಿಡಿದೊತ್ತರಿಸಿ ಬಳೆದಮರದುರುಗಲ್ಗಿರದೆರಗಿಮುಱಿವ ಕರಿಕರಕಂಜಿ ನೀರ್ವೊರ್ಕ್ಕ ನಡುಗುವಂತೆ ತೆರೆವೊಯ್ಲಿಂ ಕಂಪಿಪದರ ಪಡಿನೆಳಲ್ವ ಱರಂಜಿಸೆಯುಂ ನಡುಪಗಲೊಳ್ಕಡುನೀರನೊಳೊಡವೆರೆದಬಳಲ್ಕೆಗಳೆಯಲೆಳಸಿ ಗಳಿಲ ನೊಳಪೊಕ್ಕುಪ್ಪೈದೊಳೆದು ನಡುನೀರೊಳೊಗೆದನಳಿನಮಂ ಮುಱಿಯಲೆಳಸಿ ಮಗು ಳ್ದು ತೆರೆವಿಡಿದೀಸುವೆಳೆವೇಡಿತಿಯ ಗುರುತರನಿತಂಬಬಿಂಬಮಂ ಮುಳುಂಗಿತೋ ರ್ಪ್ಪಕರಿಣಿಯುಶಿರಂಗೆತ್ತು ತುಡುಂಕಲೊಡರ್ಚೆ ತಡಿಯೊಳ್ನಿಂದು ನಿಕ್ಕಿ ನೀಡಿದ ಮದಗಜದ ಕರದ ಮಾರ್ಪೊಳಪು ನಿಜಸ್ವಚ್ಛತೆಯಿಂ ರಸಾತಳದಹಿ ಕಣ್ಗೆ ಕಾಣೆ ಪಂತೆ ಕಮನೀಯಮಾಗೆಯುಂ, ಪುಳಿನತಳದೊಳೆಣೆವಕ್ಕಿಗಳುಡಿದುಡಿದು ಸೂಸಿ ದಮೃದುಮೃಣಾಳನಾಳತಂತುಜಾಲಕದೊಳೊಯ್ಯನೊಯ್ಯನೆ ರಯ್ಯಮೆನೆ ನಡೆವೆ ಡೆಯೊಳಡಿ ತೊಡಂಕಿ ತಡೆಗೆಡೆವತರುಣಮರಾಳಂಗಳಂ ಕಂಡು ಗಹಗಹಿಸಿ ನಗು ವಂತೆ ಘುಳುಘುಳಿಸಿ ಸೊರೆವಿಂಡು ಪಸರಿಸೆಯುಂ ಮಾಪೆರ್ವೊಳೆ ಪಱಿಯುಡುಗದ ಸಿರಿಯುಮನೊಳಕೊಂಡು ಭೂಮಂಡಲಕ್ಕೆ ಮಂಡನಮೆನಿಸಿ ರಂಜಿಸಿರ್ಪುದದರ ತೀರದಾ ಮನೆಕಟಕನಗೇಂದ್ರ ಕಟಕದೊಳ್ನರೇಂದ್ರಕಟಕಂ ಪಾಳಿಯಿಂ ಪಾಳೆಯಂಗೈದು

ಕಂ॥ ಚತುರಂಭೋನಿಧಿವರೆಗಂ |
ಚತುರಂಗಬಲಂ ಪೊದಲ್ದು ಬಿಡೆ ಪದ್ಮಜನೇಂ ||
ಚತುರನೊ ತದ್ಭಾರಮನಹಿ |
ಪತಿಪೊರಲೆಂದಂಪೊಡರ್ಚಿದಂ ಬಹುಶಿರಮಂ || ೨೫

ವ|| ತನ್ಮಧ್ಯದೇಶದಲ್ಲಿ

ಕಂ|| ಪಳದಿಯ ಪಜ್ಜೆಯ ಪಟ್ಟಿಯ |
ತಳಿರ್ವಟ್ಟೆಯ ಗುಡಿಗಳೊಡನೆ ಬಳಸಿರೆ ಕಣ್ಗೆಂ ||
ತೊಳಗಿದುದೊ ನಡುವೆ ತನ್ನೃಪ |
ತಿಳಕನ ನಲ್ಮೆಸುನಿವೆಸದಪೊಸಗೂಡಾರಂ || ೨೭

ವ|| ಅಂತವರೊಳಾಕುಮಾರಂ ವಸಿಯಿಸಿರ್ದಿರೆ

ಕಂ|| ಆಸೇನಾರಜದಿಂ ಪರಿ |
ಧೂಸರಮಾದುದುನಿಜಾಂಗಮಂ ತೊಳೆಯಲ್ಕೆಂ ||
ದೋಸರಿಸದೆ ಪೊಕ್ಕಂತಿರೆ |
ವಾಸರಕರಸಪರವಾರಿನಿಧಿಯೊಳ್ಪೊಕ್ಕಂ || ೨೭

ವ|| ಆಗಳ್

ವೃ|| ಒಗೆದಿಂದ್ರಾಶಾದ್ರಿಯೆಂಬೆಂಬತುಳಪವಿಮಯಸ್ತಂಭದೊಳ್ಸಂಜೆಯೊಳ್ಕೆ |
ಟ್ಟಗಿದಿರ್ಚಿರ್ದ್ದಂಧಕಾರಾಸುರನನಡಸಿ ಸೀಳ್ದೊತ್ತಿ ಪಾಯ್ದೊಳ್ಗದಿರ್ಕೂ ||
ರುಗುರಿಂ ರಕ್ತಾಂಬುವಿಂ ತಾಂ ನನೆದನೆನಿಸಿ ಕೆಂಪೇರಿ ನೈಜಾಂಶುರಕ್ತಂ |
ಭಗಣಂ ತತ್ಸೀಕರಂಬೋಲ್ಮೆರೆಯೆ ಶಶಿನೃಸಿಂಹಂ ಕರಂ ಕಣ್ಗೆವಂದಂ || ೨೮

ವ|| ಇಂತೊಗೆದಯಾಮಿನೀಪ್ರಥಮಯಾಮದಲ್ಲಿ

ವೃ|| ಶಿವಪಾದಾಂಭೋಜಮಂ ಪೂಜಿಸಿ ಸಚಿವಸಮೇತಂ ಮಹಾಭಕ್ತಿಯಿಂ ಭ|
ದ್ರವಿಳಾಸಂಬೆತ್ತು ನಾನಾರಣಕರಣಜಯೋದ್ಯೋಗಪೂಗಪ್ರಸಂಗೋ ||
ತ್ಸವದಿಂ ಮಾತಂಗವಾಜಿಪ್ರತತಿವಿತತಸಲ್ಲಕ್ಷಣಾಲಾಪದಿಂ ಶ |
ಸ್ತ್ರವಿಶೇಷಾಸ್ತ್ರಪಂಚಪ್ರಪಚದೆ ನಿಶಿಯಂ ನೂಂಕಿದಂ ಮಂತ್ರಲಕ್ಷ್ಮಂ || ೨೯

ಕಂ|| ಮನಸಿಜನಿಭಂಗೆ ಸತ್ಯೇಂ |
ದ್ರನರೇಂದ್ರತನೂಭವಂಗೆ ಪೂರ್ವಾಂಗನೆ ಪೆಂ ||
ಪಿನೊಳೆತ್ತಿದವಿಜಯಾರತಿ |
ಯೆನೆ ಕೆಂಪಿಡಿವರ್ಕಬಿಂಬಮುದಯಿಸಿತಾಗಳ್ || ೩೦

ವ|| ಆಸಮಯದೊಳಾರಾಜಶೇಖರಂ ರಾಜಶೇಖರಪೂಜೆಗೈದು ಯಥೋಚಿತಪಾತ್ರತರಾಚಾರಮಂ ನಿರ್ವರ್ತಿಸಿ ವಿತವಚನನೊಡನೇಳ್ದು ನಡೆಗೊಂಡು ದಂಡನಾಥಮುಖಮಂಡಳಮುಂ ನಡೆನೋಳ್ಪುದುಂ ತದ್ಭ್ರೂವಿಕ್ಷೇಪಣಪ್ರೇರಿತಂಮೇಘನಾದನಾದರದಿಂ ಬಂದು ನಮುರ ಸನ್ನಾಹಭೇರಿಯುಂ ಪೊಂಗುಡುಪಂ ಪಿಡಿದಪಳಿ ಪೊಡೆಯುಲೊಡನೆ

ವೃ|| ದಿಗಿಭಂಗಳ್ಕಡುಬೆರ್ಚೆ ಕರ್ಚೆ ರಿಪುವರ್ಗಂ ಪುಲ್ಗಳಂ ತಾಯ್ಮೊಣ |
ಲ್ಕೆಗೆವಂತಬ್ಧಿ ತುಳುಂಕೆ ಶಂಕೆ ಮಿಗೆ ದಿಕ್ಪಾಲರ್ಕ್ಕರಂ ಬಿಳ್ಕೆ ಪ ||
ನ್ನಗರಾಜಂ ಪೆಡೆತಗ್ಗೆ ಕುಗ್ಗೆ ಕುಳಭೂಭೃನ್ಮಸ್ತಕಂ ಸೀಳೆ ಧಾ |
ತ್ರಿಗೆ ತಾಂ ಪರ್ಬಿದುದುಬ್ಬಿ ದಾಂಧಳಧಳಸ್ಫಾರೋರುಭೇರೀರವಂ || ೩೧

ಕಂ|| ಆರವಮಂ ಜಳಧರದ ಮ |
ಹಾರವಮಂ ಕೇಳ್ದ ಸಿಂಹದಂತಿರೆ ಕೇಳ್ದಾ ||
ಧೀರೋತ್ತಮಸಿಂಹಳಧರ |
ಣೀರಮಣಂ ಕೆರಳ್ದು* ನೋಡಿದಂ ನಾಲ್ದೆಸೆಯುಂ || ೩೨

ವ|| ಅಂತು ನೋಳ್ಪಾಗಳ್ನಿಜಸಭಾಸದರೆಲ್ಲರದ್ಭುತಕ್ರಾಂತಸ್ವಾಂತರಾಗಿರ್ಪಿನಮೊರ್ವ್ವಚರಂ ತ್ವರಿತಗತಿಯಿಂ ಬಂದು

ಕಂ|| ದಡದಡಿಪಡಿ ಪಡಿಮಾತಂ |
ಪಡೆಯುಲೊಡಚ್ಛ್ವಮನಂ ತಡಂಬಡಿಪತಳ ||
ನ್ನುಡಿಯುಡಿಗಡಿಗೊಡನೊಡನಿ |
ಟ್ಟಿಡೆಗೊಂಡಿರೆ ನುಡಿದನಾಗಳಾಚರಮುಖ್ಯಂ || ೩೩

ವೃ|| ಎಲೆಎಲೆದೇವದೇವ ಪಿರಿದದ್ಭುತಮದ್ಭುತಮೇನನೆಂದಪೆಂ |
ನೆಲನಿರದೀದುದೋ ದೆಸೆಯೆ ತಾಂ ಬೆಸಲಾದುದೊ ಪೆತ್ತುದೋ ನಭಂ ||
ಬಲಮಿದೆ ಬಂದುದದ್ರಿ ಪುಡಿಯುಪ್ಪಿನಮುಗ್ಗದರಣ್ಯಮೆಲ್ಲಮುಂ |
ನೆಲಸರಿಯುಪ್ಪಿನಂ ಘನತರಂಗಿಣಿ ಪಂಕಿಳಮಾಗುತಿರ್ಪಿನಂ || ೩೪

ವ|| ಅದೆತ್ತಣದೆಂಬುದುಮಾತನಿಂತೆಂದಂ

ವೃ|| ಚತುರಂಘೋಧಿಪರೀತಭೂತಳದ ಭೂಪರ್ಕಪ್ಪಮಂ ತರ್ಪ್ಪರು |
ದ್ಧತವೃತ್ತಪ್ರಥಮಿಷ್ಣುಸಿಂಹಳನದೆಂದುಂ ತೆತ್ತನಲ್ತೆಂದು ಪೇ ||
ಳೆ ತದುದ್ಯದ್ಗಣಕಾಳಿ ಕೇಳ್ದು ಕೆರಳ್ದಾ*ಸತ್ಯೇಂದ್ರಚೋಳೇಂದ್ರಜಂ |
ದ್ರತನುಪ್ರೋದ್ಭವರಾಜಶೇಖರನರೇಂದ್ರಂ ಬಂದಪಂ ಭೂಮಿಪಾ || ೩೫

ವ|| ಎಂಬಮಾತಂ ಕೇಳ್ದತ್ಯಂತಕೋಪಾರೂಢನಾಗಿ

ಕಂ|| ಕುಡಿನಿಮಿರ್ದ*ಪುರ್ಬ್ಬು ಕುಣಿವು |
ತ್ತೊಡನಿರೆ ಸೆರೆ ಮುರಿದು ಮಿಸೆಯುಂ ಕಣ್ಗಳ ಕೆಂ ||
ಗಿಡಿ ಸಾಲಿಡೆ ಕರವಾಳಂ |
ಜಡಿಸೆಂತೆಂತೆಲವೊ ಪುಗುಳ್ದ* ಪೇಳೆನುತೆಳ್ದಂ || ೩೬

ವ|| ಅಂತೆಳ್ದು ನೆಲದಿರೆ ಗಜರಿ ಗರ್ಜಿಸಿ

ಕಂ|| ತಾಂಗಡ ಶೂರಂಗಡ ಕ |
ಪ್ಪಂಗೊಡೆನಾಂಗಡ ಕನಲ್ದು ಬರ್ಪ್ಪಂಗಡ ಯು ||
ದ್ಧಂಗಡ ಗೆಲ್ವಂಗಡ ಬಳಿ |
ಕಂ ಗೆಲದೇಕಿರ್ಪ್ಪನಿರ್ಪ್ಪನಮು ಸಮರ್ಥಂ || ೩೭

ವೃ|| ಲಾಳನನಿಕ್ಕಿ ಮಾಳವನನಳ್ಕಿಸಿ ಗೂರ್ಜರನಂ ಪೊರಳ್ಚಿ ಪಾಂ |
ಚಾಳನನೊತ್ತಿ ಮಾಗಧನನರ್ದಿಸಿ ಕೊಂಕಣನಂ ತೆರಳ್ಚಿ ನೇ ||
ಪಾಳನನಟ್ಟಿ ಕೇರಳನನೋಡಿಸಿ ಬರ್ಬರನಂ ಕಲಂಕಿದೀ |
ಚೋಳನ ಚೆನ್ನಪನ್ನತಿಕೆಯುನ್ನತಿ ಕೊಳ್ವುದೆ ಸಿಂಹಳೇಂದ್ರನೊಳ್ || ೩೮

ವ|| ಎಂದು ಮತ್ತಮಿಂತೆಂದಂ

ವೃ|| ನಿಜಭುಜದರ್ಪಮಂ ಮುರಿವೆನೆನ್ನದಟಂ ತವೆ ತೋರ್ಪ್ಪೆನಾಂತತ |
ದ್ಧ್ವಜನಿಯನಿಕ್ಕಿ ಭೂತಗಣಕೌತಣಮಂ ಮಿಗೆ ಮಾಳ್ಪೆನಪ್ಪರೋಂ ||
ಬುಜಮುಖಿಯಕ್ಕಳಿಪ್ಪುಮನೊಡರ್ಚ್ಚುವೆನಾಗಸದೊಳ್ನಿರೀಕ್ಷಿಪ |
ಬ್ಜಜಭವನಕ್ಷಿಗಳ್ಗೆ ನವಕೌತುಕಮಂ ರಣದೊಳ್ನಿಮಿರ್ಚ್ಚುವೆಂ || ೩೯

ವೃ|| ಇಂತೆಂದತ್ಯಂತರೋಷಾವೃತಮತಿಯುದಟೆಂದೆಳ್ದು ಭೇರೀರವಂ ದಿ |
ಕ್ಕ್ರಾಂತಾಸ್ವಾಂತಾತಿಭೀತಿಪ್ರದಮೆನಿಸೆ ತದಂಭೋಧಿಯಿಂವಬ್ಧಿಯೊಂದೆ ||
ಳ್ದಂತುದ್ಯತ್ಸೇನೆ ಕೋಲಾಹಲಮನೆಸಗಿ ಕೂಡಿರ್ಪಿನಂ ಕೂರ್ಪಿನಿಂ ಭೂ |
ಕಾಂತವ್ರಾತಾವೃತಂ ಪೆರ್ವಡಗನೆಪರ್ದು* ತತ್ಸಂಯುತಂ ಬಂದನಾಗಳ್ ||೫೨

ವ|| ಅಂತೇಳ್ತಂದಪರಿಮಿತಬಲಜಲಧಿ ಜಲಧಿಯುಂ ಕಳಿದು ನೆಲನೆಲ್ಲಮ ನಳುಕ್ಕೆಗೊಂಡು ಘುಳುಘುಳಿಸಿ ರಯದಿಂ ಪರಿತರ್ಪಾಗಳ್

ವೃ|| ದಿಗಿಭಂಗಳ್ಬೆಗಡೊಂದೆ ಭಾಸುರಘದಶ್ವಂ ಬೆರ್ಚೆ ಪಾತಾಳಪ |
ನ್ನಗರಳ್ಕುತ್ತಿರೆ ಖೇಚರರ್ಬೆದರೆ ಮತ್ತೇಭಪ್ರತಾನಂ ತುರಂ ||
ಗಗಣಂ ತೇರ್ಗಳ ಪಜ್ಕ್ತಿ ಪಾದಚರಬೃಂದಂ ಬೃಂಹಿತಂ ಹೇಷಿತಂ |
ಪ್ರಗತಂ ಚೀತ್ಕೃತಿ ಬೊಬ್ಬೆಯುಬ್ಬರೆ ಕರಂ ಸಾಲ್ಗೊಂಡದೇಂ ಬಂದುದೋ||
ಖರರುಚಿಬಿಂಬಮಂಬರಧುನೀತರುಣಾಂಬುಜದಂತೆ ತೋರೆ ವಿ |
ಸ್ಫುರಿತಪತಾಕೆ ಮೇಲಲೆಯೆ ಸೂಸುತೆ ಪರ್ಬಿದತದ್ರಜಕ್ಕೆ ತಾಂ ||
ದೊರೆಯೆನಿಸುತ್ತೆ ಸುತ್ತಿಡಿದು ಸಾಸಿರಕಣ್ಬುಗೆ ಸೈನ್ಯರೇಣುವಿಂ |
ದಿರನಿರದಂತೆರಿಂ ಬಲವಿರೋಧಿಸಮಾಹ್ವಯಮಾಂತನಾಗನೇ ||  ೫೩

ಕಂ|| ಗಗನಗಹನದೊಳೆ ಗಮಿಯಿಪ |
ಖಗಕ್ಕೆ ಪತ್ತೇಂದ್ರಧೀವರಂ ಬೀಸಿದರೇ ||
ಣುಗಣನವಜಾಲಕೊಳಗಾ |
ಯ್ತೊಗುಮಿಗೆಯಿಂದನಿಮಿಷಪ್ರತಾನಂ ಚಿತ್ರಂ ||  ೫೪

ವ|| ಅಂತೇಳ್ತಂದದ್ಭುತಂ ಮಿಗೆ ತತ್ಸೈನ್ಯಮನತಿದೂರದೊಳಿರ್ಚೆ ಬಿಟ್ಟಿ ರ್ಪುದುಮುಭಯಬಲಚಮೂಪತಿನಿಯಾಮಿತಸ್ಸರ್ವಸನ್ನಾಹಭೇರಿಯುಂ ತಂ ತ್ರಾಧ್ಯಕ್ಷರ್ಕಡಂಗಿ ಪೊಡೆದಾಗಳ್

ಕಂ|| ಒಳೆದು ನೆಗೆತಂದು ದಾಂಧಳ |
ಧಳಂಧಳಧ್ವನಿಯುಳುಕ್ಕೆಗೊಳೆ ಶಬ್ದಗುಣಂ ||
ತಿಳಿವೊಡದಕಾಯ್ತು ಗಗನ |
ಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಕುಮೇ ||  ೫೫

ವ|| ಅನಂತರಮಿಂತೞಿಗೞಿದ ಕಳಕಳಮನೊಳಕೊಂಡೊಪ್ಪಿ ನಿಂದುಭಯಬಲದೊಳುಭಯಬಲಾಧ್ಯಕ್ಷರ್ಕ್ಕಱಂಗಿ ಕೈವೀಸಿದಾಗಳ್ ಪ್ರಚಂಡಪ್ರತಾಪಮಂಡಿತರುದ್ದಂಡಕೋದಂಡದಂಡಮನಡಸಿ ಪಿಡಿದು ಜೇವೊಡೆದು ಪಿಂಗದೆ ಮುಂಗಡೆಗಾಂತು ತರಿಸಂದು ನಿಂದು

ಕಂ|| ಜೊಸೆಯಿಂ ಕಣೆಯುಂ ತೆಗೆತೆಗೆ |
ದಣಿಪುರನಿಸೆ ಪೂಡಿ ನೋಡಿ ಗುಱಿಯುಂ ಮಣಿಕಾ ||
ಲ್ಮಣಿಯೆ ಭುಜವೊಗೆಯೆ ಕುಂಡಲ |
ಮಣಿ ಕುಣಿಯೆ ಧನುರ್ಧರರ್ಕ್ಕಳದಟಿಂದೆಚ್ಚರ್ || ೪೫

ಝುಂಕೃತಿ ಬಿಲ್ಗಾರರ ಗುಣ |
ಟಂಕೃತಿ ಚಾಪಪ್ರಮುಕ್ತಶರನಿಕರಮುಹಾ ||
ಭೀಂಕೃತಿ ನೋೞ್ಪಮರರ್ಗ್ಗೆ ಭ |
ಯಂಕೃತಿಗೈದುದು ತದೀಯರಣಭೂತಳದೊಳ್ || ೪೬

ನೆರೆ ನುರ್ಚ್ಚೆ ಪಾಯ್ದು ನೆತ್ತ |
ತ್ತುರ್ದುಗೆ ಪರಿಕ್ಷುಬ್ಧಬಲಜಲಧಿಯೊಳ್ಕೆಂಬಾ ||
ವ್ವರೆಮೊರೆದು ಪರಿವತೆರದಿಂ |
ಗಱಿಗಣೆ ನೆರೆ ಮೊರೆದು ಪಱದುವೆರಡುಂಬಲದೊಳ್ || ೪೭

ಅಂಬಿರ್ದೆಯನುರ್ಚ್ಚೆ ಕೀೞ್ತುದ |
ಱಿಂ ಬಳಿಕೆಚ್ಚಪನನೊರ್ವ್ವನಿಸೆ ಕೊಂದುದು ತಾ ||
ನೆಂಬಾಗಳಾತನಂ ಗುಣ |
ಮಂ ಬಿಟ್ಟತಿಜಪಳರಲ್ಲಿ ಗುಣಮಱಸುವರೇ || ೪೮

ಅಱಿಗಳಸುಪವನನಂ ತಾ |
ನಿರದೊಳಕೈದಾಶುಗತ್ವಮಂ ಪ್ರಕಟಿಸಿದ ||
ತ್ತರರೆ ಶರಮನ್ಯರೊಡನೊಂ |
ದಿರೆ ತದ್ಧರ್ಮಂ ಪವಿತ್ರಮೊಳ್ದೊರಕೊಳದೇ || ೪೯

ವೃ|| ಎಡೆಯೊಳೆ ಬರ್ಪ ಬಾಣಮನೆ ಖಂಡಿಪ, ಚಾಪಮನೆಚ್ಚು ತೊಟ್ಟಿಸಿ |
ರ್ಕಿಡಿಯುಸೆ ಮಾಳ್ಪ, ತೊಟ್ಟಬೆರಲಂ ತಪೆ ತುಂಡಿಪ, ಬಿಲ್ಲಬಿನ್ನಣಂ ||
ಬಿಡಪೆಡೆಗೊಂಡಧನ್ವಿಜಯಮೆಚ್ಚೊಡೆ ಪಾಯ್ವುದು ಪಾಱಿದತ್ತು ತ |
ಳ್ತಡಸಿದುಮುರ್ಚಿ ಸಟ್ಟುದೊಡಸಿಕ್ಕಿದುದುರ್ಕಿದಶೂರರಂ ಶರಂ || ೫೦

ಕಂ|| ತಳಿರೊಡೆದಸುಗೆಗಳೊ ದವಾ |
ನಳನಡಸಿದ ಪಾದಪಂಗಳೋ ಪೇಳೆನೆ ಕಂ ||
ಗೊಳಿಸಿದರುರುಶರಹತಿಪರಿ |
ಗಳಿತಕ್ಷತಜಾತಕಲಿತಕಾಯರಜೇಯರ್ || ೫೧

ವ|| ಇಂತು ಕಡುಗಲಿತನಂ ಕೈಮಿಕ್ಕು ಕಾದುವ ಧನುರ್ಧರರ ಕಡುಪಂ ಕಂಡು ಕಡುವಪಿಲದಿಂ ಕಾಯ್ಪೇರಿ ಖಡ್ಗಮುಂ ಪಿಡಿದೊಡ್ಡುಗೊಂಡಡ್ಡಣಕಾರರಾದುರ್ದ ಸಾದುರ್ದ ಸಂರಂಭಸಂಭ್ರಮಮಿಂಬುವಡೆಯೆ ತಡೆಯದೆ ಪಡಿತಳಿಸಿಗೊಂದಣಿಸಿ ನಿಂದು

ಕಂ|| ಪೊಡೆಯೆ ಕಡಿವಡೆದರುಂಡಮ |
ನೆಡಗೈಯಿಂದಡಸಿ ಪಿಡಿದು ಬಿಡದುದ್ಧರಿಸು ||
ತ್ತೊಡನೆ ನಡೆದಿಕ್ಕಿದನನಿ |
ರ್ಕಿಡಿಗೈವಡಟಕ್ಕಳಮರರಂ ಮುರ್ಚಿಸಿದರ್ || ೫೨

ವ|| ಅದಲ್ಲದೆಯುಂ

ವೃ|| ಕರತಳಖಡ್ಗಮುಂ ಜಡಿದು ಪಾಂಗರಿದಡ್ಡಣಮೊಡ್ಡಿ ನಿಂದು ಖೇ |
ಚರರಪಿಪೆಂಪಿನಂ ಪೊಸೆವಪೊಯ್ವುತರುಂಬುಮಥಟ್ಟುಮಾಳ್ಪಮುಂ ||
ಬರಿಮುರಳ್ಚುವಪ್ಪುರಿಪಗರ್ಪಿಪ ಜೊಬ್ಬಿರಿವಾರ್ವಪೂರ್ವಮೊ |
ಗ್ಗರಿಪತೊಡಂಕುಮಗ್ಗಲಿಪಬಿನ್ನಣಮೊಪ್ಪೆ ಕಡಂಗಿ ಕಾದಿದರ್ || ೫೩

ವ|| ಮತ್ತಮಲ್ಲಿ

ಕಂ|| ಅಡ್ಡಣಮೊಡ್ಡಿದಕಾರ್ಮುಗಿ |
ಲೊಡ್ಡಣಮಿರದಿರಿದು ವಂಚಿಪಸಿಮಿಂಚುವಮಿಂ ||
ಚೆಡ್ಡಮೆನಿಸಿರೆ ಸಿಡಿಲ್ವಡೆ |
ಯೊಡ್ಡಸೆ ಘುಸುಘುಟಿಸಿ ಕಾದಿದರ್ಕಲಿಸುಭಟರ್ || ೫೪

ಕರವಾಳ್ಮರುವೊನೆಗೊಂಡು |
ಜ್ಞರೆ ಬೆಸ್ನೊಳ್ಮೂಡೆ ನಡಿದು ತೊಡರ್ದಿರೆ ಬಡಪೊ ||
ವ್ವರೊಳೊರ್ವ್ವನುಮ್ಮಷ್ಟೀಮು |
ಷ್ಟಿರಣಂ ನೆಗಳ್ದುದು ನಬಾನಬಿಸ್ಫುಟಯುದ್ಧಂ || ೨೪

ಕರತಳದ ಹರಿಗೆ ಕವಿದೊ |
ಪ್ಪಿರೆ ಕಪ್ಪರದಂತೆ ಮೇಲೆ ಒಲರೇಣುಧರಾ ||
ಭರಮಂ ಪೊರಲುಜ್ಜುಗಿಪು |
ದ್ಧುರಕೂರ್ಮನನೊರ್ವ್ವನಡಿಯೊಳನುಕರಿಸಿದ್ದಂ || ೨೫

ಕರುಳದು ಪೊಡೆಯಿಂ ಪೊರಸೂ |
ಸಿರೆ ಸೂಸದೆ ಶೌರ್ಯಮುರ್ವ್ವ ಕರವಾಳಿಂ ಪೊ ||
ಯ್ದುರಿಯುನಿರಿದಿಕ್ಕಿ ಮಿಕ್ಕ |
ಕ್ಕರುಳಿಲ್ಲದ ಕಲಿತನಕ್ಕೆ ಪಕ್ಕಾಗಿದ್ದರ್ || ೨೬

ವ|| ಆಗಳಂತದಂ ಕಂಡು ಸಮರಸಮುತ್ಸುಕಾಂತರಂಗಿಗಳ್ತುರಂಗಿಗಳ್ತುರಂಗತುರಂಗಸಂಘಮುಂ ಪಿಂಗದೆ ಮುಂಗಡೆಗೆ ಸಂಗಡಿಸುತ್ತೊಡನೆ ಘುಡುಘುಡಿಸಿ ತೊಡಮಡಸನ್ನೆಯಿಂದಾಂಕೆ ನೂಂಕಿದಾಗಳ್

ಕಂ|| ಕುಳಿಗೊಳಿಸಿ ಕೊಳಗಿಸಿಂ ಕೊಳು |
ಗುಳವಿಳೆಯುಂ ನೆಗಪಿ ಮಿಗೆ ತದುದ್ವ್ರಜಮುಂ ಜಾಂ ||
ಜೊಳೆಯುಂ ಕದಡೇಳಿಸಿ ಮೇ |
ಣ್ಕೆಳರ್ದತಿರಯದಿಂದೆ ಪರಿದುವಲ್ಲಿ ಹಯಂಗಳ್ || ೨೭

ವ|| ಅಂತುಮಲ್ಲದೆಯುಂ

ಕಂ|| ಶರಧಿಮಥನದೊಳೆ ನೊರೆಗಳ |
ನೆರಿವಿಯುನಿರಪಾಂತು ಪರಿವತೆರೆಗಳ ಸಿರಿಯುಂ ||
ಧರಿಸಿ ಪರಿದುದು ತುರಂಗೋ |
ತ್ಕರಮಾನನಫೇನಖಂಡಮಂಡವಿನಾಗಳ್ || ೨೮

ಒಟ್ಟಜೆಯಿಂ ಪೆಗಲೊಳ್ತಿಗೆ |
ವಿಟ್ಟಗ್ಗದಪಟ್ಟೆಯುಂಗಳಂ ಝಳುಪಿಸಿ ಜೊ ||
ಬ್ಬಿಟ್ಟಡಸಿ ಪೊಕ್ಕು ವಿಕಾ್ಕ |
ದ್ದಿರ್ಟ್ಟಣಿಸಿ ಪಳಂಚಿದತ್ತುರ್ರಂಗಿಗಳದರೊಳ್ ೬೦

ಕಿಡಿಗೆದರ್ವ* ಕಣ್ಗಳೆತ್ತಿದ |
ಕಡುಗಂ ಜಡುಗಚ್ಚಿರ್ದೌಡು ಗಂಟಿಕ್ಕಿದಪು ||
ಬ್ಬರ್ಡಿಗಡಿಗೆ ಕುಣಿವಮೀಸೆಗ |
ಳೊಡನೊಡನೆ ಭಯಾವಹಂ ಹಯಾರೋಹಕರಾ || ೬೧

ವೃ|| ಒಡೆದುಡಿವಂತೆ ಪೊಯ್ದು ಕರಖೇಟಕಮಂ ಪೊಡೆದಿಕ್ಕಿ ಸೀಸಕಂ |
ಪುಡಿಪುಡಿಯಪ್ಪಿನಂ ಕಡಿದು ಕಂದಮನಿಕ್ಕಿರ್ಡಿಗೈದು ವಾಜಿಯಂ ||
ಸಿಡಿಯೆ ಶರಂ ಕರುತ್ತು ತಂದಬ್ಬರಿಸುತ್ತತುಳಪ್ರತಾಪಮೊ |
ಗ್ಗರ್ಡಿಸಿದವ್ರೋಲ್ತುರಂಗಿಗಳೆರಳ್ಬಲದೊಳ್ಕಡುಪಾಂತು ಕಾದಿದರ್ || ೬೨

ಕಂ|| ಎರಡುಂಬರಿಗಳ ಪೊಂಬ |
ಕ್ಕರಿಕೆಗಳೊಳ್ತುರುಗಿ ಸಟ್ಟಗರಿಗಣೆ ಗರಿಯುಂ ||
ತಿರೆ ಪುರುಷೋತ್ತಮರೇರಿದ |
ತುರುಂಗತತಿ ಗರುಡಬಳಮನೇನಿಳಿಸಿದುದೋ || ೬೩

ನಿಡುಸೇಜೆಯುದಿನದೊವ್ರ್ವಂ |
ಜಡಿದಿರಿದೆತ್ತಿದೊಡೆ ಮತ್ತವಂ ಕರವಾಳಿಂ ||
ಪೊಡೆದಂ ಮೇಗಣಿನಾವೊನೆ |
ಇಡಿದಿಳಿತಂದವನನಾತುರಂಗಸಮೇತಂ || ೬೪

ವ|| ಅಲ್ಲಿ ಸಪೆಸೂಲಂಗಳಂ ಪಿಡಿದುನಡೆವಂತೆ

ಕಂ|| ಸೇಜೆಯುದಿಂದಿರಿದೆತ್ತಿ ನಿ |
ಜಾಜಿಯನೆ ಜಪಾಜಸರ್ಗ್ಗ ತೋರ್ಪ್ಪಂತಸುಹೃ ||
ದ್ರಾಜಿಯನೆ ವಾಜಿವಾಹಕ |
ರಾಜಿ ಮಹಾಜಿಯೊಳೆ ತಳರ್ದುದದ್ಭುತಸೊಗೆಯಲ್ || ೬೫

ವ|| ಇಂತು ತಕ್ಕುಗೆಡದೆ ಮಿಕ್ಕು ಪೊಕ್ಕು ಪೊಣರ್ವಸಗರ್ವಗಂಧರ್ವವಾಹಕಸಮೂಹದ ಸಾಹಸದಾಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ ನೀಡುಂ ತೋಡಿಲ್ಲದ ಪಾಡುಪಂತಂಗೊಂಡು ಸಮ್ಮದಂ ಮಿಗೆ ಸಮ್ಮುಖದ ಧೀರಸಾರಥಿಯುಂ ಪುರ್ಬ್ಬಿಂ ಜರ್ಬ್ಬಿ ಜವಂಗೆಡದುಭಯಬಲವರೂಥಿಗಳ್ವಿಜಯವರೂಥಯೂಥಂಗಳಂ ಪಿಂಗದೆ ಮುಂಗಡೆಗಾಂತಿದಿರ್ಚ್ಚಿ ಸಾರ್ಚ್ಚಿ ಪರಿಯಿಪಾಗಳ್

ವೃ|| ಕಾಲನ ಕಲ್ಲಗಾಣದ ಸಮುದ್ಗತಚೀತ್ಕೃತಿಯಂತೆ ಪೊಣ್ಮೆ ಪೆ |
ಗ್ಗಾರ್ಗಲಿಯ ಚೀತ್ಕೃತಿಧ್ವನಿ ತದುದ್ಭಟಹೂಂಕೃತಿಯಂತೆ ತಾಡಿತ ||
ಜ್ವಾಲತೆಯೊಂದು ಠಂಕೃತಿ ವಿಜೃಂಭಿಸೆ ಮೃತ್ಯುಬಹುತ್ವಮಾಂತವೋ |
ಲ್ತಾಲಿರಿದೊತ್ತಿದರ್ಸ್ಸಮರಪೂರ್ಣಮನೋರಥರಾಮಹಾರಥರ್ || ೬೬

ವ|| ಅಂತು ನಿಜರಥಂಗಳನೊತ್ತುತ್ತಿದಿರ್ಚ್ಚಿನಿಂದು

ವೃ|| ಜೋಡಿಸಿದಶ್ವಕಂಧರಮನೊಂದೆಶರಾಗ್ರದೆ ಖಂಡಿಪಂತೆ ರ |
ಳ್ಮಾಡುವ ನೀಳ್ದಕೇತುಮಣಿದಂಡಮನೊಡ್ಡಿದಸೂತವಕ್ಷಮಂ ||
ತೋಡುವ ಮೇಘಡಂಬರಮನಿರ್ಕ್ಕಡಿಮಾಳ್ಪಪೊದಳ್ದ ಲೋಹನೊ |
ಳ್ಗೂಡನಡುತ್ತುರ್ತುಂಡಿಪಪರೂಥಿಗಳೊಟ್ಟಜೆಯಿಂ ಪಳಂಚಿದರ್ || ೬೭

ಕಂ|| ಗರಿಗಣೆಗಳ್ನಿರೆ ಯುರ್ಚ್ಚಿದ |
ತೆರಪೊಳ್ಪೊರಪಾಯ್ದು ರಕ್ತರಸಖಂಡಂಗಳ್ ||
ತುರುಗಿರೆ ವರೂಥಿಗಳ್ನಿರೆ |
ಮೆರೆದರ್ಕ್ಕಸುಮಿತಜಪಾಕ್ಷಿತೀಜಂಗಳವೋಲ್ || ೬೮

ಕಣೆ ಪಣೆಯೊಳ್ನಡೆ ಕೀಳ್ತಾ |
ಕಣೆಯಿಂದೆಚ್ಚವನ ಪಣೆಯನೊಡನಿಸೆ ಕೀಳ್ತಾ ||
ಕಣೆಯಂ ಮೊದಲಂತೆವೊಲಾ |
ಪಣೆಯೊಳ್ನಾಂಟಿಸಿದನವನನೇಂ ಜಿನ್ನಣಿಯೋ || ೬೯

ವ|| ಇಂತದಿರದಿದಿರ್ಚ್ಚಿ ಪೊಣರ್ಚ್ಚುವವರೂಥಿಗಳ ತಂಡದ ಗಂಡುಗೊಂಡ ಬಂಡಣಮಂ ಕಂಡು ಪಿಂಡುಗೊಂಡು ಮುಂಡಳಿಸಿ ದಂಡಿಗಾಂತಹಂಡಗಜಾರೋಹ

ಕರುದ್ದಂಡ ವೇತಂಡಂಗಳನಳಂಕೆವೆತ್ತಂಕುಶಮನಿಕ್ಕಿ ಜಂಕಿಸಿ ಭೋಂಕನಣೆವಾ
ದ್ದರ್ ಸಾದ್ಯೊರ್ದಂಕಿ ಕೊಂಕಿ ನೂಂಕಿದಾಗಳ್

ವೃ|| ನಭದೊಳ್ಮೆಳ್ಳಿರಿದಾಡೆ ಸಿಂಗರದ ಸಿಂದಂ ಡಿಂಡಿಮಧ್ವಾನಮು |
ಣ್ಮೆ ಭಟಾನೀಕದ ಬೊಬ್ಬೆ ಪರ್ಬಿರೆ ಲುಠದ್ಘಂಟಾರವಂ ಪೊಣ್ಮೆ ಮೇ ||
ಣಿಭಯೂಥಂ ಪರಿದತ್ತು ನಿಶ್ಚಳಿತಕರ್ಣಂ ಕ್ಷಿಪ್ತಹಸ್ತಂ ರದ |
ಪ್ರಭೆ ಜೆಲ್ವಾಗೆ ಮದಾಂಬು ಸೂಸೆ ಸಮರಕ್ರೀಡಾಮಹೋತ್ಸಾಹದಿಂ || ೭೦

ಕಂ|| ನೆಗಪಿ ಭರಿಕಯ್ಯನಬ್ಧಾಂ |
ಬುಗಳಂ ಬರೆಸೇದ್ದರ್ ಕರ್ಣಚಾಲನದಿನವಂ ||
ಮಿಗೆ ಪರಿಯಿಪ ಮದಕರಿಗ |
ಳ್ಬಗೆಗೊಂಡೊಡನೊಡ್ಡಿ ನಿಂದು ವೆರಡುಂಬಲದೊಳ್ || ೭೧

ವ|| ಅಂತೊಡ್ಡಿ ನಿಂದು

ವೃ|| ಭರಿಕಯ್ಯಿಂಭರಿಕಯ್ಯನಾಂತು ಮುರಿದೊತ್ತುತ್ತಿತ್ತಿಪತ್ತುತ್ತೆ ದೀ |
ರ್ಘರದಾಗ್ರಂಗಳಿನೊಂದನೊಂದಿರಿದು ಜೋದರ್ಬೊರ್ಬ್ಬಿಡಲ್ಮೇಲೆ ರ ||
ಕ್ತರಸಂ ವಕ್ತ್ರದಿನೆಚ್ಚು ಪಾಯೆ ಮೊಳಕಾಲೊಳ್ದಂಡೆಗೊಂಡೊಡ್ಡಿಸಿಂ ||
ದೆರಡುಂ ಪೆರ್ಬಲದಗ್ಗದಾನೆಗಳ ವೊತ್ತಂ ತಾಗಿತಂತಾಜಿಯೊಳ್ || ೭೨

ವ|| ಮತ್ತಮಲ್ಲಿ

ಕಂ ಪ್ರತಿರದನಿರದನಹತಿವಿಗ |
ಳಿತವಿತತಕ್ಷತಜಜಳಮನುಗುತರ್ಪ್ಪಮದೋ ||
ದ್ಧತಹಸ್ತಿರುಧಿರವೃಷ್ಟಿಯ |
ನತಿಶಯಮೆನೆ ಕರೆವಜಳದಮೆನೆ ಕಣ್ಗೊಳಿಕುಂ || ೭೩

ವೃ|| ಮುಂಬಿಡದೊಕ್ಕು ಕಾಳ್ಪುರಮದಾದಮಡೋದಕದೊಂದುಗೂಡಿ ರ |
ಕ್ತಾಂಬುರದಪ್ರಘಾತಲಪನೋದ್ಗಳಿತಂ ಪರಿಗೊಂಡು ಪಾಯ್ದು ತ ||
ಳ್ತಂಬುಜಮಿತ್ರಜಾಂಬುಪರಿಮಿಶ್ರಿತಶೋಣನದೀಪ್ರವಾಹಮೆಂ |
ದೆಂಬಬೆಡಂಗನಂಬರಚರಾಕ್ಷಿಗೆ ಬೀರಿದುದಾರಣೋರ್ವಿಯೊಳ್ || ೭೪

ವ|| ಮತ್ತಮಲ್ಲಿ ರಣದೇವತೆಯನುದ್ದೇಶಿಸಿ

ವೃ|| ಸೂಸಗಿಗತ್ತಿ ಬೆನ್ನನಡುಬಾರೊಳೆ ಕೋದಿರೆ ಬೀರಸಿಂಗರಂ |
ತಾನಮರ್ದೊಪ್ಪೆ ನೇಲ್ದು ಜಡಿದಾತ್ಮಕರಾಸಿಯನುರ್ಬ್ಬಿ ಬೊಬ್ಬೆಗೊ ||
ಟ್ಟಾಸೆಯಕೊಂಬದಾಗೆ ಸಿಡಿವಂಜರಮುದ್ಧೃತಹಸ್ತದಂಡವಾ |
ಬಾಸೊಳೆ ತಳ್ತು ತೋರೆ ಸಿಡಿಯಾಡುವವಾಳ್ಕೆಯೊಳೊರ್ವ್ವನೊಪ್ಪಿದಂ || ೭೫

ವ|| ಅದಲ್ಲದೆಯುಂ

ವೃ|| ಇದಿರೊಳಿದಿರ್ಚ್ಚಿನಿಂದಕಲಿಯಂ ಕರಿ ತನ್ನಕರಾಗ್ರದಿಂ ತುಡುಂ |
ಕಿದುದಿರದಿಟ್ಟುದಾಗಸಕೆ ಮೇಣ್ಬರೆ ಕೊಂಬಸಮುರ್ಚ್ಚಿ ಸಾರ್ಚ್ಚಿದ ||
ತ್ತದಿರದವಂ ಕರಾಸಿಯೊಳೆ ತತ್ಕರಮಂ ಕಡಿದಲ್ಲಿಬಿಳ್ದನಾ |
ಪದದೊಳೆ ತತ್ಕರೀಂದ್ರಶಿರದೊಳ್ಸುರನಾರಿಯರೊಯ್ದರಾತನಂ || ೭೬

ಭೂರಿರಥಾಂಗಚೀತ್ಕೃತಿ ಧನುರ್ಗ್ಗುಣಠಂಕೃತಿ ಮತ್ತವಾರಣ |
ಸ್ಫಾರಕರಾಗ್ರಫೂತ್ಕೃತಿ ಭಟಸ್ಫುಟಹೂಂಕೃತಿ ವಾಜಿವಾಹಕೋ ||
ದಾರಕರಾಸಿಘಟ್ಟಸಠಣತ್ಕೃತಿ ತಾಡಿತಖೇಟಕೌಘವಿ |
ಸ್ತಾರಜಳಜ್ಝಟತ್ಕೃತಿ ಜಮತ್ಕೃತಿಯಾದುದು ಯುದ್ಧರಂಗದೊಳ್ || ೭೭

ಕರತಳಖಡ್ಗಘಟ್ಟನಸಮುದ್ಭವವಿಸ್ಫುರಿತಸ್ಫುಲಿಂಗಮಂ |
ಬರತಳ ಮುಟ್ಟಲುದ್ರುಧಿರಶಂಬರಸಂಭೃತಮುರ್ವ್ವಿ ರಂಗದ ||
ತ್ತುರಥಭಟೇಭ ಭೂರಿರವಸಂಗತಮೊಗ್ಗಿನೆಯಾಗೆ ಲೋಕಭೀ |
ಕರಮೆನಿಸಿತ್ತು ಭೂತಗಣಚಿತ್ತಮಹೋತ್ಸವಕಾರಣಂ ರಣಂ || ೭೮

ಇಡಿಕಿರಿದುರ್ದ್ದಪೆಲ್ಲಿ ಪೆಯೊಳಟ್ಟೆಗಳೊಟ್ಟಜೆ ಮೂಳೆಯೋಳಿ ಪೇ |
ರಡುಗುಗಳೀರಿ ಕಾಳಿಜದಪಾಳಿ ತೊಪಲ್ಗಳಪಾಲ್ಗಳಂಗದಂ ||
ಗಡಿ ಪೊಸಕಂಡದಿಂಪೆ ನೆಣದುಲ್ಬಣಮಾಂತ್ರದ ಮಂತಣಂ ಸಿಡಿ |
ಲ್ದಡಿದುರುರುಂಡಮಂಡಳಿ ಪೆಣಂಗಳ ಬಂಗುಳಿ ಸಿತ್ರರಕ್ತರಂ || ೭೯

ಕಂ|| ರಿಪುವಿಬುಧ ವಿಜಯಸಿಥಭಟ |
ಜನಲತಿಲೋತ್ತುಂಗವರ್ಷಣಂ ದಿವಿ ಬಸಾ ||
ಸ್ತ್ರವರಂಪರೆಯಿಂ ಪತದಂ |
ವಿಸ್ಫುಳಸವತ್ತುಶಿಪ್ರೋಪಕ್ಷಂಸಿಥಪಸರಂ || ೮೦

ವ|| ಇಂತಾಗಲೊಡನಾಗಳಿದಿರ್ಚಿ ಪೋಗದೆ ಸಮಸಮರಂಗೆಯ್ವರಾತಿ ಬಲಮಂ ಕಂಡು ಕಾಯ್ಪುಗೊಂಡು ರಾಜಶೇಖರರಾಜೇಂದ್ರಂ ಮಿತವಚನಂ ಬೆರಸು ನಿಜಗಜೇಂದ್ರಮನಣೆದಲೆದು ನೂಂಕಿದಾಗಳ್

ವೃ|| ಘನಶುಂಡಾದಂಡಪಾತಚ್ಯುತ ಖರಕರಬಿಂಬಂಬೊಲಿಂಬಾಗೆ ಶುಂಭ |
ತ್ಕನದುದ್ಯದ್ದರ್ಪಣಂ ಫಾಲದೊಳೆ ಸೃಣಿ ಚಲತ್ಕುಂಭಕೂಟಾಗ್ರಸಂಘ ||
ಟ್ಟನದಿಂ ಬಿಳ್ದರ್ಧಚಂದ್ರಂಬೊಲಿರೆ ಪೃಥುಶಿರೋಮಧ್ಯದೊಳ್ಮುಕ್ತದಾನಾಂ ||
ಬುನಿಯುಕ್ತಂ ಕರ್ಣಮಬ್ದಂ ತೊಡರ್ದವೊಲಿರೆ ಕಣ್ಗೊಪ್ಪಿ ಬಂದತ್ತಿಭೇಂದ್ರಂ

ವ|| ಆಗಜೇಂದ್ರದಗ್ರದೊಳ್ಪೊಣರ್ಕೆಗಾಂತು ಬರ್ಪರಿಪುಬಲಬಲಾಹಕ ಪ್ರಬಲಜಂಝಾಪ್ರಭಂಜನನಂ ಕಂಡು ಸಿಂಹಳೇಂದ್ರಂ ಸಮರಸಮುತ್ಸಾಹಮಾನಸಂ ಮಾನಸಂಯುತಂ ತನ್ನಪನ್ನತಿಕೆವೆತ್ತಪಾರ್ಥಿವಕುಮಾರರೊಂದುಗೂಡಿ ಗಂಧಸಿಂಧುರಸ್ಕಂಧಾರೂಢನಾಗಿ ಕಡುವಹಿಲದಿನಿದಿರ್ಚಿಬರ್ಪಾಗಳ್

ಕಂ|| ಒಡಬನಳುರ್ಕೆಯೊ ಭೈರವ |
ನಡರ್ಪ್ಪೋ ಮಿಳ್ತುವಿನ ದರ್ಪಮೋ ವಿಳಯುದಮುಂ ||
ಗಡೆಯು ಸಿಡಿಲೇಳ್ಗೆಯೋ ಮಾ |
ರ್ಪಡೆಯೋ ಎಂದೆನೆ ಕರುತ್ತು ತಾಗಿತ್ತಾಗಳ್ || ೮೨

ವೃ|| ಪೊಡೆದುದು ಪೊಯ್ದುದಟ್ಟಿದುದುಮೆಟ್ಟಿದುದಿಟ್ಟುದು ಪೊಟ್ಟೆಯಿಂ ಕರು|
ಳ್ಗಡಣಿಸಿ ಪಾಯ್ದಿಸಂ ತುಳಿದುದೆತ್ತಿದುದೊತ್ತಿದುದತ್ತಮಿತ್ತಲುಂ ||
ಕೆಡಪಿದುದೀಳ್ದು ಸೀಳ್ದುದುರೆ ತೂಳ್ದುದು ಪೋಳ್ದುದು ನೀಳ್ದಹಸ್ತದಿಂ |
ಪಡಿಬಲಮಂ ಮಹಾರಣವಿದಾರಣ ದಾರುಣಮತ್ತವಾರಣಂ || ೮೩

ಕಂ|| ಗಿರಿಯನಿರದಿರಿದು ಕೆಡಪಿದೊ |
ಡಿರದದರಗ್ರದ ಮರಂಗಳು*ರುಳ್ವಂತಿರೆ ತ ||
ತ್ಕರಿ ಕರಿಯುನಿರಿದು ಕೆಡಪಿದೊ |
ಡುರು*ಳ್ದರ್ಜ್ಜೋದರ್ತ್ತದಗ್ರದಿಂ ರಣಧರೆಯೊಳ್ || ೮೪

ಕಂ|| ಕಡುಪಿಂ ಕರಿ ನಿಜಕರದಿಂ |
ಪಿಡಿಪಿಡಿದಿಟ್ಟುದುಪೊಣರ್ಚಿದರಿಸುಭಟರನಿ |
ಟ್ಟೆಡೆಗೊಂಡಚ್ಚರಸಿಯರಿ |
ರ್ಪೆಡೆಗಿವರೊಳಗಾಯ್ದುಕೊಳ್ಳಿಮೆಂದೊಪ್ಪಿಪವೋಲ್ || ೮೫

ವ|| ಅಗಳ್ಪ್ರಚಂಡ ಬಳನೆಂಬಸಿಂಹಳನ ಪಡೆವಳಂ ಪಡಿತಳಿಸುತಿದಿರ್ಚಿ ವರ ಲವನಾರೋಹಿಸಿರ್ದ್ದ

ಕಂ|| ರಥಮುಂ ನುಗ್ಗೊತ್ತುತೆ ಸಾ |
ರಥಿಯಾಂತೊಡೆ ಪಿಡಿದಿಭಂ ನಭಕ್ಕಿಡೆ ದಿನಕೃ ||
ದ್ರಥದೊಳಗೆ ಬಿಳ್ದು ತತ್ಸಾ |
ರಥಿಯೆನಿಸಿದನವಸನೂರುವರುಣತೆಯಿಂದಂ || ೮೬

ವ|| ಅದಲ್ಲದೆಯುವಾಪಡೆವಳನೂರುದಂಡಮುಂ ಕದಳೀಕಾಂಡಮಂ ಮುರಿವಂತೆ ಮುರಿದವನ ಭುಜಮುಂ ಕಶೇರಮುಂ ಕೀಳ್ವಂತೆ ಕಿಳ್ತವನ ರುಂಡಮಂ ಪುಂಡರೀಕಮುಂ ಪರಿವಂತೆ ಪರಿದು ಕೊಳುಗುಳದಿಳೆಯೆಂಬ ಕೊಳದೊಳೊತ್ತಿಡರ್ದ್ದ ನಳಿನನಾಳಂಗಳೆಂಬಂತೆ ಸರಸ ಸರವಮಾಲೆ ಮುಂಗಾಲೊಳೊತ್ತಿಡರೆ ವಾಲಿಸರವಳಿ ಯಂತೆ ಬಳ್ಳಿಗರುಳ್ಪಿಂಗಾಲೊಳೆಳಲ್ದುಬರೆ ಭರಂಗೊಂಡೋಜೆಯಿಂ ಬರ್ಪ್ಪ ರಾಜಶೇಖರಕರೀಂದ್ರದಿದಿರೊಳ್ಸಿಂಹಳೇಂದ್ರಂ ನಿಜಗಜಮುಂ ಪರಿಯಿಸಿ ನಿಂದು ಚಂಡಕೋದಂಡಮುನಡಸಿ ಪಿಡಿದು

ವೃ|| ಪಟುಭುಜಸೊತ್ತು ಜೇವೊಡೆದು ಸಿಂಜಿನಿಯುಂ ಸೆಳೆದಾರ್ದ್ದುಸಾರ್ದ್ದು ಸಂ|
ಘಟಿಸಿ ತೊಡರ್ಚ್ಚುತೆಚ್ಚೊಡರಿಸಿಂಹಳ ನೈದುವ ಲೋಕಭೀಕರೋ ||
ತ್ಕಟಶರಟನಾಸ್ತ್ರಮುಂ ತರಿದನೊಂದೆಶರಾಗ್ರದೆ ಮಧ್ಯದೊಳ್ಮಹಾ |
ಭಟರಿರಪಾರೆ ನಿರ್ಜರರಿದಚ್ಚರಿಯೆಂದೆನೆ ರಾಜಶೇಖರಂ || ೮೭

ವ|| ಅಂತವಂ ತರಿದುರುಳ್ಚಿ

ವೃ|| ಕಂಪದೊಳಿಂತುಟಪ್ಪಕಡುಸಾಹಸಿ ಕೇಳ್ದರೊಳಿಲ್ಲನೆಂದು ಮುಂ |
ಕೊಂಡತುಳಪ್ರತಾಪನಿಧಿ ಸಿಂಹಳಭೂಪತಿ ಮೆಚ್ಚಿ ಚಂಡಕೋ ||
ದಂಡಮುನಾರ್ಪ್ಪಿನಿಂ ಸೆಳೆದು ಜೊಬ್ಬಿರಿದೆಚ್ಚನತುಚ್ಛ ಬಾಣಮುಂ |
ಖಂಡಿಸಿದಂ ಬಳಿಕ್ಕಮದನಂತರದೊಳ್ನಿಜಬಾಣದಿಂ ನೃಪಂ || ೮೮

ವ|| ಅಂತು ಖಂಡಿಸುತಖಂಡಪ್ರತಾಪಂ ಗಂಡುಗೊಂಡಿದಿರ್ಚಿ ನಿಂದ ಸಿಂಹಳೇಂದ್ರನದಟಂ ಕಂಡು

ವೃ॥ ಪಟುಕೋಪಾಟೋಪಬದ್ಧಭ್ರುಕುಟಿವಿಚಳಿತಶ್ಮಶ್ರು ಘರ್ಮಾಂಬುಬಿಂದು।
ಸ್ಫುಟಫಾಲಂ ಪದ್ಮರಾಗಾರುಣವಿಕಟಕಟಾಕ್ಷಂ ಧನುರ್ಜ್ಯಾಲತಾಸಂ ॥
ಘಟಿತಾಪೋಘಾಸ್ತ್ರದಿಂ ತತ್ಕರಟಿಬಿದುವನಾರ್ದ್ದೆಚ್ಚಸೆಚ್ಚಂತೆ ಮುಂಧೂ ।
ರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪಕಾಲಾಗ್ನಿರುದ್ರಂ॥

ವ॥ ಅಂತೆಚ್ಚಶರಂ ಪಿಂಚಕದೊಳ್ನಟ್ಟುಚ್ಚಿ ಪಾಯೆ ಪಡಲಿಡುವ ನಿಜಗಜದಿನಿಳಿಗೆ ದುಮ್ಮಿಕ್ಕಿ ಹಂಪುಗೆಡದೆ ಧೀರಸಾರಥಿ ಸಾರ್ಚಿದ ರಥಮನೇರಿದಾಗಳ್ದ್ವಿರ್ಮಯುದ್ಧಕ್ಕೆ ಮನವಿತ್ತು ರಾಜಶೇಖರನಮರಗಿರಿಯಿನಿಳಿದಿಳಾರಥಮನಾರೋಹಿಸಭವನ ವಿಭವಮಂ ತಳೆದಿಭಮಸ್ತಕದಿನಿಳಿಗವತರಿಸಿ ಮಣಿರಥಮನಾರೋಹಿಸಿ ಸಾರ್ಕೆಗೆ ಪಂನತಿಕೆ ಮಿಗೆ ಪರಿಯಿಪಾಗಳ್ಸಿಂಹಳೇಂದ್ರಂ ಕೆರಳ್ದು ನೋಡಿ

ಕಂ॥ ಒಳಯುತರೇಳ್ದೂಗರ್ಗ್ಗವುದ ।
ದಳವಿಯೊಳೋಲ್ಯೈಪರರಸರಖಿಳರ್ಕ್ಕಪ್ಪಂ ॥
ಗಳನೀವರೆಂಬನಿನ್ನ ।
ಗ್ಗಳಿಕೆಯುದೇಂ ಸಿಂಹಳೇಂದ್ರನೊಳ್ಕೊಂಡಪುದೇ ॥ ೯೦

ವೃ॥ ಗುಹೆಯೊಳಗಿರ್ದ್ದಕೇಸರಿಯುನಾಸುರದಿಂ ವನದಂತಿ ಸೊರ್ಕ್ಕಿ ಬಂ ।
ದಹಹ ಕೆರಳ್ಚಿ ಜೀವಿಕುಮೆ ನೀನದರಂತಿರೆ ವಾರ್ಧಿಮಧ್ಯಮ ॥
ದ್ಗೃಹದೊಳೆ ಸಂತಮೊಪ್ಪುವನನೆನ್ನನಿಳೇಶ್ವರ ನೀಂ ಕೆರಳ್ಚಿ ಮೇ ।
ಣ್ಪ್ರಹತಿಯುನಾನಡೆಯುದ್ದುವೆಯುದೆಂತಲೆ ತೀರ್ಚ್ಚದೆ ನಿನ್ನನಿರ್ಪ್ಪನೇ ॥ ೯೧

ವ॥ ಎನೆ ಸಮರಷಣ್ಮುಖಂ ಸರೋಷಹಸನಮುಖನಾಗಿ ಮಗುಳ್ದಿಂತೆಂದಂ

ಕಂ॥ ಜಳನಿಧಿಯುನುಳಿದು ನೀಂ ಕೊಳು ।
ಗುಳಕ್ಕೈದಿದೆ ಕೈದುಗೊಂಡು ಮದವಿಹ್ವಳ ಸಿಂ ॥
ಹಳ ಭಾಪು ತೋರ್ಪ್ಪನೆಲೆ ಕೈ ।
ಚಳಕನುಸೊಂದಿನಿತು ಸೈರಿಸೈ ರಣದೆಡೆಯೊಳ್ ॥ ೯೨

ಸಿಂಹಳಭೂಪತಿ ನಿಜದೆ ನೃ ।
ಸಿಂಹಂ ನೀನಲ್ತೆ ನಿನ್ನನಾಹವದೆಡೆಯೊಳ್ ॥
ಸಂಹರಿಸಿ ಶರಭವಿಕ್ರಮ ।
ಮಂ ಹರಸುತನಾದುದರ್ಕ್ಕೆ ತೋರ್ದ್ದಪೆನೀಗಳ್ ॥ ೯೪

ವ|| ಎಂದು ಮುಟ್ಟಿ ಮೊದಲಿಸಿ

ಕಂ|| ಪೃಥುಳಭುಜಬಳವಿಜಿತದಶ |
ರಥಸುತಸಪ್ರತಿಮಗುಣಗಣಾಂಕಂ ಗುಣಮಂ ||
ಪ್ರಥಿತಶರಾಸನಕೇರಿಸಿ |
ಪೃಥಿವೀಶ್ವರಪುತ್ರನೊತ್ತಿ ಜೇವೊಡೆಯಲೊಡಂ || ೯೪

ವೃ|| ಅದರುದ್ಯದ್ಧ್ವನಿ ಪೊಯ್ಯೆ ಮೇಗಣುಡುಜಾಳಂ ಕಳ್ಕನೊಕ್ಕಂತದೊ |
ಕ್ಕುದು ಜಂಜತ್ಸುಮನಃಪ್ರಮುಕ್ತಸುಮಸೋವರ್ಷಂ ಪ್ರತಿಧ್ವಾನಮು ||
ಣ್ಮಿದುದೆಂಬಂತಿರೆ ಪೊಣ್ಮಿದತ್ತಮರಭೇರೀದಾಂಧಳಧ್ವಾನಮು |
ಬ್ಬಿದೊಳಾಬಲ್ಲನುಗೊಲ್ದು ಪೂಡಿದನಮೋಘತ್ರಾಣಮಂ ಬಾಣಮಂ ||

ವ|| ಅಂತುಪೂಡಿ ಸೀಡಡಿಗೊಂಡು ತೆಗೆನೆರೆದು ಸಿಂದಾಗಳ್

ವೃ|| ಕರ್ಣಸಹಾಯಮಂ ಪಡೆಯುದಂಡರಪ್ಯೈದಿದಸರ್ಪಬಾಣಮಾ |
ಪೂರ್ಣಮನೋರಥಂಬಡೆದುದಿಲ್ಲೆಸುತಂಬಿದು ರತ್ನಮಂಡನಾ ||
ಕೀರ್ಣರುಚಿಪ್ರಬದ್ಧಕವಚಾನ್ವಿತಕರ್ಣಸಹಾಯಮಂ ಗುಣೋ |
ದೀರ್ಣತೆಯಿಂದೆ ಪೊಂದಿತೆಸೆ ತನ್ನಿಕಟಸ್ಥಿತಮೇಂ ಮನೋಜ್ಞನೋ || ೯೫

ವ|| ಅಂತಾಬಾಣಮಂ ರಿಪುಮುಖವಿದಾರಣವೀರಭದ್ರಂ ರೌದ್ರಂಮಿಗೆ ಮಾಣದೆಚ್ಚಾಗಳ್

ಕಂ|| ಕಡಿದುದವನೆಚ್ಚ ಕಣೆಗಳ |
ನೆಡೆಯೊಳ್ಪಡಿತಳಿಸಿ ಪೊಕ್ಕು ತತ್ಸೂತನ ಪೇ ||
ರೊಡಲನೊಡೆದುಚ್ಚಿ ಪಾಯ್ದುದು |
ಬಿಡೆ ಸತ್ತರ ಸೆರೆ ತದಂಗದಿಂ ತಕ್ಷಣದೊಳ್ || ೯೬

ವ|| ಅದಂ ಕಂಡು ಕೌತುಕಂಬಟ್ಟು ಬೆರಲೆತ್ತಿ ಪೊಗಳ್ವಾಶುಗಾಶನಸಿಭಾಶುಗಮನಾಶುಗಾಸನಪೊಳೋಸರಿಸದೆ ತೊಡಚ್ಚಿ ಸಾರ್ಚಿ ತೆಗೆನೆರೆದು ಸಿಂದು

ಕಂ|| ಮಣಿಗೆಳಸಿ ಕೆಮ್ಮನೆಮ್ಮೊ |
ಳ್ಮಣಿಯದಿದಿಚ್ಚಪೆ ನರೇಂದ್ರಸುತ ಸಿಸಗೀಕೂ ||
ಗ್ಗಣೆಯಿತ್ತಪುದು ನವವ್ರಣ |
ಮಣಿಯುಂ ಕೊಳ್ಳೆಂದು ಸಿಂಹಳಂ ಪನೆದೆಚ್ಚಂ || ೯೭

ನಡುಗೆ ಸುರರೊಡನೆ ಕಿಡಿಗಳ |
ಗಡಣಮನುಗುತರ್ಪ್ಪ ಭೀಕರಾಸ್ತ್ರಮನದನಿ ||
ರ್ಕ್ಕಡಿಗೈವಮೋಘಶರಮಂ |
ತುಡುತೆಚ್ಚಂ ರಾಜಶೇಖರಂ ಸಿಂಹಳನಂ || ೯೯

ಎಚ್ಚೊಡಿಳೆ ನಡುಗೆ ಸೆಡೆಯೆ ವಿ |
ಯಚ್ಚರರಂಬದು ಪೊದಳ್ದು ಕೆನ್ನೀರ ಪೊನಲ್ ||
ಚೆಚ್ಚನೆ ಪಾಯ್ತುರೆ ವಕ್ಷಮ |
ನುಚ್ಚಳಿಸಿದೊಡಹಿತನೃಪತಿ ಮೂರ್ಛಿತನಾದಂ || ೧೦೦

ವ|| ಆಗಳದಂ ಕಂಡು ಕನಲ್ಕೆಗೊಂಡು ಮಂಡಳಿಸುತಿಂದ್ರಮನ್ಯುಭದ್ರ ಕೇತು ಹಿರಣ್ಯಕವಚಂ ಚಂಡಬಾಹು ಪ್ರಚಂಡವರ್ಮ್ಮಂ ಸಿಂಹಳಸೇನಂ ಕುಲಿಶ ದಂತಂ ಲೋಹಿತಾಕ್ಷಂ ಪಿಂಗೇಕ್ಷಣಂ ಕಾಲನೇಮಿ ಭೀಮನಾದನಾದಿತ್ಯ ವರ್ಮ್ಮಂ ವಿಕ್ರಮಬಾಹು ಮೊದಲಾದ ಪಾರ್ಥಿವರ್ನಿಜವರೂಥಂಗಳನೇರಿ ವಿಪುಳ ಪ್ರಚಂಡಧನುರ್ದಂಡಮಂ ತಿರುವೊಯ್ದು ಜೇವೊಡೆದು ಘುಡುಘುಡಿಸಿ ಸಿಡಿಲ ಪಡೆಯಂತೆ ಮೋಹರಿಸಿ ಶರವರ್ಷಮಂ ಕರೆಯುತ್ತೆ ನಿಜಬಲಂಬೆರಸು ಕಷಂಗಿ ಕವಿಯಲೊಡನೆ

ವೃ|| ಕಡುಪಿಂ ಕಾಯ್ಪೇರಿಸಿಂಗಾಡಿಯನೆಸೆಳೆದು ಮೆಯ್ಯ್ವರ್ಕಯ್ಯಿಕ್ಕಿತೋಡು |
ತ್ತೊಡನಂಬಂ ಬೆನ್ನಪೊಂಬತ್ತಳಿಕೆಯೊಳದಟಿಂ ಪೂಡಿ ಪೂಣ್ದೆಚ್ಚು ಕಾಲಾ ||
ಳ್ಕೆಡೆವನ್ನಂ ಪಾಯ್ವ ಚಂಚದ್ರಥಚಯಮುಡಿವನ್ನಂ ಗಜಾಶ್ವಪ್ರತಾನಂ |
ಮಡಿವನ್ನಂ ಮಾಣದೆಚ್ಚಂ ಮದವದರಿಮಹೀಭೃನ್ಮಹೀಭೃನ್ಮಹೇಂದ್ರಂ|| ೧೦೧

ವ|| ಆಗಳ್ಮಿತವಚನನುಚಿತಹಯಾರೂಢನಾಗಿ ಕರತಳದೊಳ್ಕಾಲಜಿಹ್ವೆ ಯಂ ಪೋಲ್ವ ಕರವಾಳಮಂ ಜಡಿದು ಝಳಂಪಿಸಿ ಜಳದಪಟಲದೊಳ್ಪೊಕ್ಕ ಜಂಝಾಪವನನಂತೆ ಮಿಕ್ಕು ಪೊಕ್ಕು

ವೃ|| ಪಡಲಿಡೆ ತೇರ್ಗ್ಗಳಂ ಪೊಡೆದು ಸಾರಥಿಯಂ ತಿವಿದಶ್ವಕಂಧರಂ |
ಕಡಿಯೆರಡಪ್ಪಿನಂ ತರಿದು ಖಂಡಿಸಿ ತದ್ಧ್ವಜಮಂ ಪೊರಳ್ಚಮಂ ||
ಗಡೆಯ ಭಟರ್ಕ್ಕಳಂ ರಥದ ಚಕ್ರಮನಿರ್ಕ್ಕಡಿಗೈದು ಸಾಹಸಂ |
ಒಡೆದಿದಿರಾಂತತದ್ರಥಿಕರಂ ತಲೆಗೊಂಡನಖಂಡವಿಕ್ರಮಂ || ೧೦೨

ವ|| ಮತ್ತಂ

ವೃ|| ಕರಿಶಿರಮಂ ಬಿದಾರಿಸೆ ಕರಾಗ್ರದ ಖಡ್ಗದೆ ವಜ್ರಪಾತದಿಂ |
ಗಿರಿ ಬಿರಿವಂತೆ ಪೋಳ್ದಿರಿದು ದಂತದರಂತರದೊಳ್ವೊದಳ್ದಕೇ ||
ಸುರಿಯಿರವೆಂಬಿಸಂ ರುಧಿರವಾರಿಯೊಸರ್ತ್ತುದು ತದ್ರಸಾರ್ದ್ರಬಂ |
ಧುರತರಮೌಕ್ತಿಕಂ ಸಿಡಿವಕೆಂಗಿಡಿಯಂತಿರೆ ಪಾರಿತಾಜಿಯೊಳ್ || ೧೦೩

ಕರಿಗಳ ಘಟ್ಟು ಪಟ್ಟಿಪರಿ ವಾಜಿಗಳೋಜೆಯ ಪೌಜು ಗಾಜುಗೋ |
ಜಿರದಿದಿರಾಗಿ ಪೊಗ್ಗರಿಸಿದಗ್ಗದತೇರ್ಗ್ಗಳ ನುಗ್ಗುನುಗ್ಗು ಬಿ ||
ತ್ತರದೊಳೆ ಸಿಂಡುಗೊಂಡಭಟಮಂಡಳಿ ತಂಡದೆ ತುಂಡುತುಂಡದಾ |
ಗಿರೆ ಕಡಿಗೊಕ್ಕಲಿಕ್ಕಿದನುದಗ್ರಸಮುಗ್ರಮುಖೋಗ್ರವಿಗ್ರಹಂ || ೧೦೪

ವ|| ಅದೆಲ್ಲದೆಯುಮಲ್ಲಿ

ವೃ|| ಇರಿದರಿದಿಟ್ಟಿದಪ್ಪಿಡಿದರಿಟ್ಟರುರುಳ್ಚಿದರೊತ್ತಿ ತತ್ತರಂ |
ಬರಿದರಪುತ್ತು ಸೀಳ್ದರರೆಯಟ್ಟಿದರೊಟ್ಟಿದರಟ್ಟಿಯಂ ಕೊರ |
ಳ್ಗೊರೆದರದಿಟ್ಟಿದಸ್ತ್ರದೆದರಣ್ಮಿದರಿಕ್ಕಿದರೆಚ್ಚರಾದ್ದು ಜೊ |
ಜ್ಜರಿದರಡಂಗೆ ಪೊಯ್ದರರಿಸೈನ್ಯಮನಾಹವದೊಳ್ಮಹಾಭಟರ್ || ೧೦೫

ವ|| ಆಗಳ್ಪ್ರಳಯಮೇಘಜ್ಯೋತಿಯೊಳ್ದಿಟ್ಟದಂಜನಾದ್ರಿಗಳೆಂಬಂತೆ ಕುಂಭಿಗಳ್ಕುಂಭಿಸಿಯೊಳ್ಕುಂದಿಟ್ಟು ಕೆಡೆಯೆಯುಂ ಶರಘನೊಳಾಂತಸಿಂಗಂಗಳಂತೆ ತುರಂಗಂಗಳ್ಪಿಂಗದೆ ಮುಂಗಡೆಯೊಳುರುಳೆಯುಂಜಂಝಾಪವನನೊಳೊಡ್ಡಿಸಿಂದನೀ ರತೇರ್ಗ್ಗಳಂತೆತೇರ್ಗ್ಗಳ್ನುಗ್ಗುನುರಿಗೊಂಡು ಪಡಲಿಡೆಯುಂ ದವಶಿಖಿಯೊಳ್ವೊಣ ಕ್ಕಿಗೊಂಡಪಾದಪಂಗಳಂತೆ ಪದಾತಿಗಳ್ಪನ್ನತಿಕೆಗೆಟ್ಟು ಮಡಿಯೆಯುಂ ಋತವ ಚನಂ ತನಗಿದಿರಾಂತರಿಬಲಮಸಿಂತು ತವಿಸಿದಾಗಳ್

ವೃ|| ತುಂಗಮತಂಗಜಪ್ರಕರಮಸ್ತಕಮೌಕ್ತಿಕರಾಶಿ ರಾಜಲೋ |
ಕಂಗಳ ಮೌಳಿಮಂಡಿತಮಣಿಪ್ರಕರಂ ನೃಪಚಾಪಮುಕ್ತಬಾ ||
ಣಂಗಳ ಪಾತದಿಂ ಸುರಿದಸ್ಕೃಜ್ಞದಿಯೊಳ್ಪರೆದೈದಿ ಕೂಡೆ ರ |
ತ್ನಂಗಳವಂಗೆ ಪೋಳ್ಪೊರೆದುವಲ್ಲದೊಡಬ್ಧಿಗವೆಂತುಸಾಧ್ಯವೋ || ೧೦೬

ಕಂ|| ಪಡಲಿಟ್ಟಪಡೆಯ ನೆತ್ತರ |
ಮಡುವಿನೊಳುಡಿದುಡಿದು ಕೆಡೆದಕರಿದಂತಂಗಳ್ ||
ಕಡಿವಡೆದಸುಭಟಶಿರಮುಂ |
ಪಡೆದುವು ತದ್ಬಿಸಬಿಸಪ್ರಸೂನದ ಸಿರಿಯಂ || ೧೦೭

ಘುಳುಘುಳಿಸಿ ಪರಿವನೆತ್ತರ |
ಪೊಳೆಯೊಳ್ನೆರೆ ಮುಳುಗಿ ಪಂದೊವಲಧೋತ್ರಮನು ||
ಟ್ಟೆಳನರದಜನ್ನಿವಾರಮ |
ನಳವಡಿಸುತ್ತಲ್ಲಿ ಬೊಮ್ಮರಕ್ಕಸರೆಸೆದರ್ || ೧೦೮

ತಳಿರುಡೆಯೆನೆ ಪಂದೊವಲು |
ಟ್ಟೆಳಲತೆಯೆನೆ ಸರವನೊತ್ತಿ ಸುತ್ತುತೆ ಗುಂಜಾ ||
ಫಳಮೆನೆ ತಳೆದಿಭಮುಕ್ತಾ |
ವಳಿಯಂ ಮರುಳನುಮ ಶಬರಿಯೆನಿಸಿತ್ತದರೊಳ್ || ೧೦೯

ವ|| ಆಗಳ್

ಕಂ|| ತಿಳಿಯೆ ನಿಜಮೂರ್ಛೆ ಮುರಿದಾ |
ಗಳೆ ಪರಿತಪ್ತಾರ್ತ್ತಬಳಮನೀಕ್ಷಿಸಿ ಭಯವಿ ||
ಹ್ವಳಸಿಂಹಳನಾಕೊಳುಗುಳ |
ದಿಳೆಯಂ ಬೆಂಗೊಟ್ಟು ಜಗುಳ್ದ*ನತಿಜವದಿಂದಂ || ೧೧೦

ವ|| ಅಂತು ಜಗುಳ್ದು ಜಳಧಿಮಧ್ಯದೊಳ್ಸಬಳದುರ್ಬಳನಸ್ತಮಯಸೂರ್ಯನಂತೆ ತೇಜಂಗುಂದಿ ಪೊಕ್ಕು ಪೋಪಾಗಳರಿವಿಜಯ ವಿಕ್ರಮಾರ್ಕನಮೋಘಬಾಣಮಂ ಕೇಣದಿಂ ಪ್ರಾಣಂಗೊಳಲೆಂದು ವಾಣದೆ ಬಾಣಾಸನದೊಳ್ತೊಡರ್ಚ್ಚುವಾಗಳ್

ವೃ|| ಶಕ್ರಮುಖಾಮರರ್ಕ್ಕಳೆಲೆನಿನ್ನದಟೆಂಗಗಿದೊಂದು ಗೊಂಟಿನೊ |
ಳ್ಸಕ್ರಮವಿರ್ಪ್ಪರಿನ್ನುಮೆನೆ ಸಿಂಹಳನಾಂಪನೆ ಗಾಂಪುದೋರಿ ಭೂ ||
ಚಕ್ರಕೆ ಪೊಕ್ಕನಕ್ಕೆಕಡಲಂ ತೊಡದಿರ್ತ್ತವಿಸಂಬನಿಂದು ನಿ |
ರ್ವ್ವಕ್ರಪರಾಕ್ರಮಾಕ್ರಮಿತ ವಿಕ್ರಮ ವಿಕ್ರಮ ರಾಜಶೇಖರಾ || ೧೧೧

ವ|| ಎಂಬವಿಂತವಜನನ ಹಿತವಚನಮನಾಕರ್ಣಿಸಿ ಸುಪರ್ಣಪರಾಕ್ರಮ ನಾಕರ್ಣಾಂತಮುಗಿದ ಕೊಗ್ಗೆಣೆಯನುಪಸಂಹರಿಸಿದಾಗಳಾಸಿಂಹಳಂ ಪಡಂಗೇರಿ ಕಡಲೊಳ್ಬೆಂಗೊಟ್ಟು ಪೋಗಲೊಡನೆ

ವೃ|| ಅತುಳಿತತತ್ಪ್ರತಾಪಬಡಂಗಗಿದಂತಿರೆ ಸಿಂಹಳೇಂದ್ರನ |
ಪ್ರತಿಮಮುದಾಬ್ಧಿ ಮೈದೆಗೆದವೋಲ್ಮುಳಿಸಿಂದಮೆ ರಾಜಶೇಖರ ||
ಕ್ಷಿತಿಪತಿ ಶೈವಮಂತ್ರನಿಧಿ ನೋಳ್ಪುದುಮುಕ್ಕಿ ಪಯೋಧಿ ಬಟ್ಟೆಗೊ |
ಟ್ಟತಿಶಯಮಾಗೆ ನೀರ್ದೆಗೆದುದಾರಿಪುನೀಮೆಯೆ ನೀಮೆಯಪ್ಪಿನಂ || ೧೧೨

ಕಂ|| ಪರಿಗತಪದ್ಮಮಹಾಪ |
ದ್ಮರುಚಿರವರಶಂಖಮುಕರ ಕಚ್ಛಪನೀಲ ||
ಸ್ಫುರಿತಮುಕುಂದಂ ಕುಂದದ |
ಶರನಿಧಿ ಯಕ್ಷೇಂದ್ರನಿಧಿಯಿಪೆನೆಸೊಗಯಿಸುಗುಂ || ೧೧೩

ಪೊಸಬಿಸಿಲದು ಪೆರದೆಗೆದಿರೆ |
ಕಿಸುಸಂಜೆಯುಮುಡುಸಮೂಹಮುಂ ಮಿಸುಪವೋಲ್ ||
ನೆಸೆದುದೊ ಪವಳಂ ಮುಕ್ತಾ |
ನಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ || ೧೧೪

ಅಘಟಿತಮಿದಲ್ತೆ ಮುನ್ನಂ |
ರಘುವಂಶಭವಂಗಮೇಸಿದಿತ್ತುದೆ ಪಥಮಂ ||
ಪ್ರಘನಪ್ರತಾಪಮಜಿವಾ |
ಲಘುತರನಿವಸದ್ಧಿಯಂ ಪೆಡಂಮೆಟ್ಟಿಸಿದಂ || ೧೧೫

ವ|| ಎಂದಂಬರದೊಳಂಬರಚರಪ್ರೌರ್ಗಗಳುತ್ತುಮಿರೆ ನಿಜಬಳಂ ಮುದಂಬಿಡುತ್ತಿರೆ ಪಡಿಬಳಂ ಕಂಗೆಡುತ್ತುಮಿರೆ ಕಡುವೇಗದಿಂ ಕನಕಾವತಿಯೆಂಬ ನಿಜದುರ್ಗಮನಸಂ ಪೋಗಿ ಪೊಕ್ಕಾಗಳ್ಕಿತಿಪ್ರಸನ್ನಗಸುಪರ್ಣಂ ಬೆನ್ನನೆ ಪೋಗಿ ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪತ್ತಿ ಮುತ್ತಿದಾಗಳ್

ವೃ|| ಉರಿವವಿಷಣ್ಣಪಂದಿದಲೆ ಪೆರ್ಪೊಲೆ ಬಲ್ಮೊನೆಗಲ್ಕೃಶಾನುವೊ |
ಪ್ಪಿರಸಿದ ಪುಲ್ಲಪೊಂಪೆ ಪೆಟಲುಪ್ಪಿನಪೆರ್ದ್ದಿದಿ ಮರ್ದ್ದವೆಂಬಿವಂ ||
ಸುರಿದಿಳಿಪಾಯ್ಕೆಸೊಂಕೆ ಸೆಳೆದಿಟ್ಟಿಡನಲ್ಲಿಳಿದಿಟ್ಟು ಸೂಸಿ ಪೊ |
ಯ್ದರಿಭಟರಿಂತು ಕಾದುತಿರೆ ಮುತ್ತಿದರಳ್ಕದೆ ತನ್ಮಹಾಭಟರ್ || ೧೧೬

ವ|| ಇಂತು ಮೊತ್ತಂಬೆತ್ತು ಮುತ್ತಿಲಗ್ಗಗಗ್ಗರಿಸಿಪರ್ಪಗಳಾಸಿಂಹಳೇಂದ್ರಂ ಘೂರ್ಮಿಸಿ ನಿಜಬಳಂಬೆರಸು ಕಾಳೆಗಕ್ಕೆಪೊರಮಡಲುಜ್ಜುಗಿಸಿ ಸಜ್ಜುಗೆಯ್ಯುತ್ತಿರ್ಪಿನಮಾಗಳ್ನೀತಿಭೂಷಣನೆಂಬಮಂತ್ರಿಪಂ ಕೃತಾಂಜಲಿಪುಟನಾಗಿ ವಿನಯದಿಂದಿಂತೆಂದಂ

ವೃ|| ಅವಧರಿಸಾತ್ಮ ಸಿಂಹಳನರೇಶ್ವರ ಮದ್ವಚಮಂ ಮನುಷ್ಯಭೂ |
ಧವನಿವನೆಂದು ನೀಂ ಬಗೆಯದಿರ್ಶಿವಮಂತ್ರಭವಂ ಮಹಾಪ್ರಭಾ ||
ವವಿದಿತ ಶೌರ್ಯನಾತನೊಳೆ ನಿಲ್ವುದು ಗೆಲ್ವುದುಮಾರ್ಗ್ಗ ಮಾಗದೇ ||
ಭುವನದೊಳಂತರಿಂದೆಸಗು ಸಂಧಿಯ ನೀಂ ಬಿಡು ತದ್ವಿರೋಧಮಂ || ೧೧೭

ವ|| ಅದಲ್ಲದೆಯುಂ

ವೃ|| ಪಿಡಿವಬಾಡಬವಹ್ನಿಯುಂ ಮಿಡಿವರಾದಿತ್ಯೇಂದುಬಿಂಬಂಗಳಂ |
ಕುಡಿವರ್ಸಪ್ತಸಮುದ್ರಮಂ ಪೊಡೆವರಾಶಾದಂತಿಯಂ ಕಿಳ್ತು ಮೇ ||
ಲಿಡುವರ್ಮೇರುವನೊತ್ತಿಸುತ್ತಿ ತುಡುವರ್ಶೇಷಾಹಿಯಂ ಪಾಯ್ದು ಪೊ |
ಯ್ದೊಡೆವರ್ಬ್ರಹ್ಮಭಾಂಡಮಂ ಮೃಡನ ಭಕ್ತರ್ಬಲ್ಲಿದರ್ಭೂವರಾ || ೧೧೮

ಕಂ|| ಪಡೆ ಪಡಲಿಡೆ ಪಡಗೇರು |
ತ್ತೊಡನೈತರೆ ನೀನುಮಾತನುಂ ಬೆಂಕೊಳಲಾ ||
ಕಡಲಳ್ಕಿ ಬಟ್ಟೆಗೊಟ್ಟುದು |
ಗಡ ಸಹಸೋಳ್ಪಗಳಾತನೇಂ ಜಾವಳನೇ || ೧೧೯

ವ|| ಅಂತುಮಲ್ಲದೆಯುಂ

ಕಂ|| ಅತಿಸಾಹಸಿ ಸತ್ಯವಚೋ |
ನ್ನಿತನಧಿಕಬಲನಾಳು ಧಾರ್ಮ್ಮಿಕಂ ಪರಹಿತಪಂ ||
ಜಿತಸುಜಿತಜ್ಞಂ ತಜ್ಞೋ |
ನ್ನತಶಾಸ್ತ್ರಂ ತನ್ನೃಪಾತ್ಮಜಂ ಸಂಧೇಯಂ || ೧೨೦

ಮಾಯಾವಿ ದೈವವಿಮುಖನ |
ಪಾಯಾಸ್ಪದನಾಪ್ತರಹಿತನತಿಚಪಲನುಪಾ ||
ದೇಯುಜಡಮತಿಯತಿಹತರೋ |
ಪಾಯಂ ಸಂಧೇಯನಲ್ತವಂ ರಣಜೇಯಂ || ೧೨೧

ಕ್ಷಿತಿಯೊಳ್ಸಮನೆನಿಪಮಹೀ |
ಪತಿಯೊಳ್ಸಲೆ ಸಂಧಿಗೈವುದಾಗದು ತನ್ನಿಂ ||
ದತಿಬಳನಜೇಯನೆನಿಪು |
ನ್ನತನೊಳ್ನತಪಲ್ತೆಸಂಧಿಕಾರ್ಯಂ ನೃಪತೀ || ೧೨೨

ಎಲ್ಲಂದದಿಂದೆ ಕಾರ್ಯದ |
ಗೆಲ್ಲಂಗಾಣಲ್ಕೆ ಬಲ್ಲೊಡಾತನೆ ಬಲ್ಲಂ ||
ಬಲ್ಲಹ ಮೋಣರಿಯದೊಡವ |
ನಲ್ಲದೆ ಗಾವಿಲನಿಳಾಗ್ರದೊಳ್ಪೆರನೊಳನೇ || ೧೨೩

ವೃ|| ಅತಿಕೋಪಾತುರನಾಪ್ತವಾಕ್ಯಬಧಿರಂ ಮಾಯಾವಿಸಂಘಾತಕಂ |
ಗತಿರಕ್ತಂ ರತಿಲಂಪಟಂ ಮದಯುತಂ ಮಾನಾತ್ಯಯಾಭೀತನು ||
ದ್ಧತವೃತ್ತಂ ಗತಧೈರ್ಯನಾರ್ಯವಿಮುಖಂ ನಿದ್ರಾಳು ತಾನಾದಭೂ |
ಪತಿಗಾದ್ಯೈಸಿರಿ ಗಾಳಿಗೊಡ್ಡಿದಸೊಡರ್ಪ್ಪೋಲಾಗದೇಂ ಪೋಕುಮೇ || ೧೨೪

ಕಂ|| ಅದರಿಂದೆ ನೀತಿವಿದನ |
ಪ್ಪುದು ನರಪತಿ ವಿಬುಧರೊರೆದವೋಲ್ನಡೆವುದು ತ ||
ಪ್ಪದೆ ಸಿರಿ ಜಸಮುಂಬೆರೆವುದು |
ಪುದುವಾಳ್ವುದು ಬಾಳ್ವುದಾರ್ಯತತಿ ಮೆಚ್ಚುವಿನಂ || ೧೨೫

ಕಲೆಯರಿಯದವಿಟನಾತ್ಮನ |
ನೆಲೆಯರಿಯದಯೋಗಿ ವೇದಮರಿಯದ ಪಾರ್ವಂ ||
ಬಲವರಿಯದ ದಳಪತಿ ನಯ |
ದೊಲವರಿಯದ ನೃಪತಿ ಬಲ್ಲರಂ ಮೆಚ್ಚುಕುಮೇ || ೧೨೬

ಸರಸಗುಣಶಾಲಿ ದೋಷಾ |
ಕರಾಹಿತಂ ಸ್ವಪ್ರಸಿದ್ಧಮತಿಬಂಧುರಮುಂ ||
ಬುರುಹಮುದು ಮಿತ್ರರುಚಿವಿ |
ಸ್ಫುರಿತಂ ಸಿರಿಗಾದಃದಲ್ತೆ ಮನೆ ಮನುಜೇಂದ್ರಾ || ೧೨೭

ಸೋದರಿಯು ಮನೆಗೆ ಪಗೆ ಪಗೆ |
ಗಾದಂ ನೆಲೆ ಸಲೆ ಕಲಂಕಿ ದೋಷಾಕರನಾ ||
ಹ್ಲಾದಿ ಗತಮಿತ್ರತೇಜದೊ |
ಳಾದಾರಾಜಂಗಮೇಂ ಕ್ಷಯಂ ಸಮನಿಸದೇ || ೧೨೮

ಎಡರಂ ಪರಿವೊಡೆ ಸಿರಿಯಂ |
ಪಡೆವೊಡೆ ಪಳಿಪೊರ್ದದಮಳಗುಣಗಣಮಂ ತಾ ||
ಳ್ದೊವಡೆ ಜಸಮನಾಂತು ಬಾ |
ಳ್ದೊವಡೆ ನುಡಿಯಂ ಕೇಳ್ವುದು ಜನಾಧಿಪಂ ಬುಧಜನರಾ || ೧೨೯

ಕ್ಷಿತಿನಾಥ ನೀತಿವಿದ್ಯಾ |
ಚತುರ್ಮುಖಂಗಮವು ನಿನಗೆ ನೃಪನೀತಿಗುಣೋ ||
ನ್ನತಿಯಂ ಪೇಳ್ವುದು ಕಂತುಗೆ |
ರತಿಕೃತಿಚತುರತೆಯನೊಸೆದು ಪೇಳ್ವವೊಲಕ್ಕುಂ || ೧೩೦

ನಯಜಲಧಿ ನಿನ್ನೊಳೀಷ |
ನ್ನಯಪಯಮಂ ಪಡೆದು ಮುನ್ನಮೀರಸನಾಬ್ದಂ ||
ರಯದಿಂ ಸುರಿಯಲ್ಕ್ರತಿಶು |
ಕ್ರಿಯೊಳೀಗಳ್ಸಫಲಭಾವಮಂ ತಳೆಯದೆ ಪೇಳ್ || ೧೩೧

ದೇವ ನೃಪನೀತಿಸಾರಮ |
ನಾವಂ ನಿನ್ನಂತೆ ಬಲ್ಲನೀಭುವನದೊಳೆ ||
ನ್ನೀವಿಜ್ಞಾಪನಮಂ ಪರಿ |
ಭಾವಿಸಿ ಸಂತಕ್ಕೆ ನಡೆ ಸಮುನ್ನತಸತ್ವಾ || ೧೩೨

ವ॥ ಎಂದನೇಕ ವಿಧದಿನಾಸೀತಿಭೂಷಣಮಂತ್ರಿಸಂ ಸಾಭಿಪ್ರಾಯಮುಚಿತ
ಮಿತಪ್ರಚುರವಚನನಿಚಯದಿನೊಡಂಬಡಿಸುತ್ತಿಲ್ಲಿಂ ತಳ್ವದೆ ಕೊಳುಗುಳದೆಡೆಗೆ
ತಳರ್ದು ತನ್ಮಂತ್ರಿಸಂ ಸಂಧಿಸಿ ಸಂಧಿಕಾರ್ಯೋಚಿತವಚನನಿಚಯದಿನೊಪ್ಪ
ಗೊಳಿಸಿ ತತ್ಸಮೇತಂ ಬಂದು ಮಣಿರಥದೊಳಿರ್ದ ರಾಜಶೇಖರ ರಾಜೇಂದ್ರಂಗೆ
ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ಪುದುಂ ನಿಜಮಂತ್ರಿ
ವದನವಿಜ್ಞಾಪನವಿದಿತಾಖಿಳ ವೃತ್ತಾಂತನುಪಶಾಂತ ಚಿತ್ತನಾಗಿ ನಡೆನೋಳ್ಪಾಗಳ್

ಕಂ ಅಳಿಯೆ ತಮಮಿಂದು ಚೆಂಗದಿ* |
ರ್ಗಳನುಳಿದಮಳಾಂಶುಗರೆವವೋಲ್ರಿಪುಗರ್ವಂ ||
ಕಳಿಯೆ ಗತರಾಗನಯನಾಂ |
ಬುಳರುಚಿಯಂ ತನ್ಮುಖಾಬ್ಜಮೇಂ ಸೂಸಿದುದೋ || ೧೩೩

ವ॥ ಆಗಳಾಸೀತಿ ಭೂಷಣನಿಂತೆಂದಂ

ಕಂ॥ ಯುವರಾಜ ರಾಜಶೇಖರ |
ಭವದಾಹವವಿಕ್ರಮಕ್ಕೆ ಕೌತುಕವಾಳ್ದ ||
ಮ್ಮವನೀಶಂ ಮೂರ್ಛೆಮಹೋ |
ತ್ಸವಮನನಾಗುತ್ತೆ ಮತ್ತೆ ಕಳಿಪಿದನೆನ್ನಂ || ೧೩೪

ಎಮಗಂ ತಮಗಂ ಸಲ್ಲದು |
ಸಮರಂ ಕಂಡಪೆವು ಕಪ್ಪಮಿತ್ತಪೆವೆಂಬೀ ||
ಕ್ರಮಮಂ ಬಿನ್ನವಿಸಲ್ಕೆಂ |
ದು ಮದೀಶ್ವರ ನೆನ್ನನಟ್ಟಿದಂ ಯುವರಾಜಾ || ೧೩೫

ವ॥ ಎಂಬುದುಮಾಧೀರೋದಾತ್ತಸಾರ್ವಭೌಮಂ ನಿಜಸಚಿವವದನಾರ
ವಿಂದಮಂ ನೋಡಲೊಡನೆ

ವೃ॥ ಎರೆದರ್ಗಿಲ್ಲೆನ್ನದೀವರ್ಗ್ಗಳಿಕೆ ಮರೆಗೆ ಬಂದಾತನಂ ಕಾವನೆಂಬಾಂ |
ತೆರನಂ ನೀಳ್ದಿಕ್ಕುವಾಪಾರ್ಪ್ಯತ್ರಿತನನುದಿನಂ ಪಾಲಿಪ್ಪೊಂದೊಳ್ಪುಗಾಣೇ ||
ನರಭಕ್ತವ್ರಾತಮಂ ಮನ್ನಿಪಬಗೆ ಕೊಡರ್ಗೊಂದಿಲ್ಲದೊಳ್ಪಾತು ಶಾಸ್ತ್ರೋ |
ತ್ಕರಪಾಂಡಿತ್ಯಂ ಭವದ್ವಂಶದೊಳಿದು ನಿಬದ್ಧಂ ನಿತಾಂತಂ ಪ್ರಸಿದ್ಧಂ ||೧೩೬

ವ|| ಎಂದುಳ್ಳುದನುಪಚಾರಮಿಲ್ಲದೆ ನುಡಿದು ಮತ್ತಮಿಂತೆಂದಂ

ಕಂ|| ಭುವನತ್ರಯದೊಳ್ನಿನ್ನೊ |
ಳ್ಬವರಂ ಗೊಳಲಾರ್ಸ್ಸಮರ್ಥರದರಿಂದವನೀ ||
ಧವ ಸಿಂಹಳೇಂದ್ರನೊಳ್ಸಂ |
ಧಿವಿಧಾನಮನಪ್ಪುಕೈದಯಾಳುಗಳರಸಾ || ೧೩೭

ವ|| ಎಂಬವಿಜ್ಞಾಪನದಿಂ ತನ್ಮನಃಪ್ರಸನ್ನತೆವಡೆದು, ಬಂದಸಚಿವನನುಚಿತೋಕ್ತಿಗಳಿಂ ಮನ್ನಿಸಿ ಗಳಿಲನೆ ಕಳಿಪಲವಂ ಬಂದೀವೃತ್ತಾಂತಮೆಲ್ಲಮನುನ್ನತೋತ್ಸವಂ ಬಿನ್ನಪಂಗೆಯ್ಯಲೊಡನೊಡಂಬಟ್ಟವಂಗೆ ಬಹುಭೂಷಣಾಂಬರಂಗಳಂ ಮಚ್ಚರ್ಗೊಟ್ಟು ಪಟ್ಟವಣೆಯಿಂದೆಳ್ದುಪಟ್ಟಣಮುಂ ಸಿಂಗರಿಸಿ ನಿಜಸಚಿವಸಾಮಂತದಂಡನಾಥಮಂಡಳಿಕವ್ವೆರಸು ವಿತತಕರಿತುರಗ ರಥಸುಭಟಪಟಲಪರಿವೃತಂ ಪಟಹಡಿಂಡಿಮಶಂಖತಾಳ ಕಹಳಾಬಹುಳನಾದಬಧಿರೀಕೃತದಿಶೇಂದ್ರಂ ಸಿಂಹಳೇಂದ್ರಂ ಸಾಂದ್ರಹರ್ಷಮನಾಂತು ನಡೆದಿದಿರ್ಗೊಂಡು ರಾಜಶೇಖರರಾಜೇಂದ್ರನಂ ರಾಜವೀಧಿಯೊಳೋಜೆ ಮಿಗೆ ತಪ್ಪರ್ಗಳ್

ವೃ|| ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿಸಾಕ|
ಲ್ಯಾಮರ್ತ್ಯಶ್ರೇಣಿ ರಕ್ಷಾಕರೆ ಭವಹರೆ ಶರ್ವಾಣಿ ಗೀರ್ವಾಣಮೌಳಿ ||
ಸ್ತೋಮಪ್ರೋದ್ದಾಮ ರತ್ನವ್ರಜಶಬಳರುಚಿಸ್ನಿಗ್ಧಪಾದಾಬ್ಜೆ ದೇವೀ|
ಪ್ರೇಮಂಜೆತ್ತೆನ್ನನಾಗಳ್ಪೊರೆ ಪುರಹರಚೇತಸ್ಸರೋರಾಜಹಂಸೀ || ೧೩೮

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣ ಮಹಾಪ್ರಭಾ
ಪಟಲ ಪರಿವೃತಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿ ರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿ
ತೋಭಯಕವಿತಾವಿಶಾರದ ಶ್ರೀಷಡಕ್ಷರದೇವ
ವಿರಚಿತಮಪ್ಪರಾಜಶೇಖರವಿಳಾಸವಿಪುಳ
ಪ್ರಬಂಧದೊಳ್ರಾಜಶೇಖರವಿಜಯ
ವರ್ಣನಂ ಷಷ್ಠಾಶ್ವಾಸಂ.

ಸಂಪೂರ್ಣಂ.

# ಸಪ್ತಮಾಶ್ವಾಸಂ.



ಕಂ|| ಶ್ರೀರಣೀಧರಜಾಕುಚ |
ಭೂಧರಕೃತಧಾತುನಿಜಕರಾರುಣರುಚಿ ಗಂ ||
ಗಾಧರನೆಮ್ಮಂ ಪೊರೆಗೆ ಪ |
ಯೋಧರಶಿತಿಕಂಧರಂ ಸದಾಶಿವಲಿಂಗಂ || ೧ ||

ಕರಿ ಕಾರ್ಮುಗಿಲಂತಿರೆ ಬ |
ಜ್ಜರದಂಕುಶಮುಮರ್ದ*ವಜ್ರದಂತಿರೆ ಮೇಱಿಂ ||
ಏರಸಾರೋಹಿಸಿ ಬರ್ಪ್ಪಂ |
ತಿರೆ ಬಂದಂ ರಾಜಶೇಖರಕ್ಷಿತಿಪಾಲಂ ||

ವೃ|| ಇನರುಚಿಯುಂ ಪಳಂಚಲೆಯೆ ಮೌಳಿಮಣಿಪ್ರಭೆ ಗಂಡಭಿತ್ತಿಯುಂ |
ಘನಮಣಿಕುಂಡಲಾಂಶು ಮಿಗೆ ಚಿತ್ರಿಸೆ ವಕ್ತ್ರಮರೀಚಿ ಪೂರ್ಣಚಂ ||
ದ್ರನ ಕದಿರಂ ಪಗಲ್ತರೆ ತನುದ್ಯುತಿ ತಳ್ಪದೆ ನೋೞ್ಪಕಾಮಿನೀ |
ಜನಮನದೊಳ್ಮನೋಜಜನನಂಬಡೆಯುತ್ತಿರೆ ಬಂದನಾನೃಪಂ ||

ಅಂತುಬರ್ಪ್ಪಾಗಳ್

ವೃ|| ಪಾಡುವಗೀತಮುಂ ನಿಲಿಸಿ ವೀಣೆಯನಾಳಿಯ ಕಯ್ಯೊಳಿತ್ತು ಮ |
ತ್ತಾಡುವಸತ್ತಮುಂ ಬಿಸುಟಲಂಕೃತಿಯುಂ ರಯದಿಂಮೊಡರ್ಚ್ಚಿ ಮೇ ||
ಳ್ನೋಡುವ ನೃತ್ಯಮುಂ ತೊಲಗಿ ಕೇಳ್ವಿಗಬ್ಬಮನೊತ್ತಿ ಬಂದವ |
ರ್ನೋಡಿದರಾಕುಮಾರಕನನಾಪುರದಂಗನೆಯರ್ವ್ವಿಳಾಸದಿಂ ||

ವ|| ಮತ್ತಮವರೊಳೊರ್ವ್ವಳ್ಜೆಗಾತ್ರಿ

ವೃ|| ಕೆಂಬರಲೋಲೆ ಕೇತಕಿಯ ಸೋರ್ಮುಡಿ ಕೆಂದಳಿರುದ್ಘಕರ್ಣಪೂ |
ರಂ ಬಸೆಗೊಂಬಮಲ್ಲಿಗೆಯ ಜೊಲ್ಲೆಯಮುಬ್ಬುಗುಣಾಂಬರಂ ಸುವ ||
ರ್ಣಾಂಬುಜಕರ್ಣಿಕಾರಚಿತಕಾಂಚಿ ತೆರಂಬೊಳೆದೊಪ್ಪೆ ಪೂತಮಾ |
ವಂ ಬಡದೇಱಿ ನೋೞ್ಪರತಿಯಂತಿರೆ ಸೌಧಮನೇಱಿ ನೋಡಿದಳ್ ||

ವ॥ ಮತ್ತಮೊಂದುಭರ್ಮಹರ್ಮ್ಯದಗ್ರಪ್ರದೇಶದಲ್ಲಿ

ವೃ॥ ಸಿರಿಪಿಡಿದುಟ್ಟು ಜೀನಲಲಿತಾಂಬರಮಂ ಪೊಸಮುತ್ತುದೊಟ್ಟು ಮೇ |
ಣ್ಮಿರುಗುವವಜ್ರದೋಲೆಗಳ ಪಾಲೆಗಳೊಳ್ತಳೆದಣ್ಪುಗೆಯ್ದು ಬಾಂ ||
ಮೊರೆಸೊರೆಯಂತೆ ತೋರ್ಪಸಿರಿಕಂಡಮನೊರ್ವ್ವಬೆಡಂಗಿ ವೀಣೆಯಂ |
ಸೆರೆ ಪಿಡಿದೇರಿ ವಾಣಿಯೆನೆ ಜಾಣೆ ಜಲಕ್ಕನೆ ನಿಂದು ನೋಡಿದಳ್ || ೬

ವೃ॥ ಕನತ್ಕನಕಭೂಷಣಂದಳೆದು ಕುಂಕುಮ ಕ್ಷೋದಮಂ |
ಘನಸ್ತನಕೆ ಲೇಪಿಸುತ್ತೊಡನೆ ತಾಳ್ದು ಪೊಂಬಟ್ಟೆಯಂ ||
ವನೇರುಹಮನೋಜೆಯಿಂ ಪಿಡಿದು ನಿಂದು ಹರ್ಮ್ಯಾಬ್ಜದೊಳ್ |
ಜನೇಶಸುತನಂ ರಮಾವಧುವೆನಲ್ಪೆರಳ್ನೋಡಿದಳ್ || ೭

ವ॥ ಮತ್ತಮೊರ್ವಳ್ಮಾಧುರ್ಯಮನೋಹರೆ

ವೃ॥ ಮುಡಿಯಿಂಪೂಮಾಲೆಸೂಸುತ್ತಿರೆಪೊಡರೆನಿತಂಬದ್ವಯಂಮುಂಗುರುಳ್ಗಾ
ಳ್ಪಿಡಿಪೆತ್ತಂ ನರ್ತಿಸುತ್ತೊಪ್ಪಿರೆ ಜಳಧವಳಾಪಾಂಗಮಿಂಬಾಗೆ ಕಂಪಂ ||
ಒಡೆದುತ್ತುಂಗಸ್ತನಂಗಳ್ಮಿಸುಗೆ ನಿರಿ ಕರಂ ಜಾರೆ ನೈಪಥ್ಯಮಂ ತಾಂ |
ತೊಡೆದಿದ್ದಿರ್ದ್ದಂತೆ ಬಂದಂದವನಿಪತಿಯನಬ್ಜಾಕ್ಷಿ ನೋಡುತ್ತುಮಿರ್ದ್ದಳ್ ||

ವ॥ ಮತ್ತಮೊರ್ವಳಖರ್ವಸಗರ್ವತಾರುಣ್ಯವತಿ

ವೃ॥ ಅಳಿದಳಕಾಳಿ ಕಂಪಿಸುವನುಣ್ದೊಡೆ ಸೂಸುವ ಸುಯ್ಬಮರ್ತ್ತಕೋ |
ಮಳತನು ಗುಜ್ಜುಗೊಂಡಮೊಲೆಯುರ್ಬ್ಬೆಳರ್ತ್ತಧರಂ ಸಡಿಲ್ದಮಂ ||
ಜುಳಪಸನಂ ಸರಾಗನಯನಾಂಚಳವೊಪ್ಪಿರೆ ಕಂತುಕೇಳಿಯಾಂ |
ತೆಳೆಯುಳೊರಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ಮಹೀಶನಂ || ೯

ಕುರುಳಂ ಕೂರುಗುರಿಂದೆ ನೇವರಿಸುತುಂ ಹಸ್ತಾಬ್ಜಲೀಲಾಬ್ಜಮಂ |
ತಿರುಪುತ್ತುಂ ಕಚಗಂಧಕಾರ್ದ್ದರಪಭೃಂಗವ್ರಾತಮಂ ಸೋವುತುಂ ||
ಪರಪುತ್ತುಂ ನವಪುಷ್ಪವೃಷ್ಟಿಯನಪಾಂಗದ್ಯೋತಿಯಿಂದೊರ್ವ್ವಸುಂ |
ದರಿ ಬಂದೀಕ್ಷಿಸಿದಳ್ಪ್ರಸೂನವಿಶಿಖಶ್ರೀರೂಪನಂ ಭೂಪನಂ || ೧೦

ವ॥ ಮತ್ತಂ

ವೃ|| ಮುಡಿ ಜಡಿತಂದು ಸೂಸೆ ಮುಗುಳಂ ಮೊಲೆ ಮೇಲುದನೊತ್ತೆ ಬಳ್ಕಿ ತೆ
ಳ್ನಡು ಕಡೆಗಣ್ವಿಳಾಸಮನೆ ಸೂಸೆ ರವಂಗುಡೆ ಕಾಂಚಿ ಜಿಙ್ಕೈಸಿಂ ||
ಜಡಿಯೆ ನಿತಂಬಬಿಂಬಮಿಳಿದೊಪ್ಪಿರೆ ಬಳ್ಳಿರಿ ನೀರೆ ಸಾರೆವಂ |
ದಡರ್ದೆಳೆಮುತ್ತಿನುಪ್ಪರಿಗೆಯಂ ನಜೆನೋಡಿದಳಾನರೇಂದ್ರನಂ || ೧

ಕಡೆಗಣ್ಕಂತುಶರಾಸನಕ್ಕೆ ಸುಮನೋಬಾಣಂಗಳಂ ನೀಡೆ ಸೋ |
ರ್ಮ್ಮುಡಿ ಸಾದರ್ದ್ದರಡಿಗಳ್ಗೆ ಸಾರ್ಚ್ಚೆ ಕುಸುಮಾಮೋದಂಗಳಂ ಚೆಲ್ಲಿಸೆ ||
ಲ್ನುಡಿ ಪಾಂಡಿತ್ಯಮನೀಯೆ ಕಯ್ಯ್ಗಳಿಗೊಲ್ದೈತಂದ ರಾಯಂಚೆಗೊ |
ಳ್ನಡೆಯಂಮೆಲ್ಲಡಿ ಬೀರೆ ಬಂದು ಪೆರಳೊರ್ವ್ವಳ್ಭೂಪನಂ ನೋಡಿದಳ್ || ೧

ಕುಡಿಮಿಂಚಂ ಮುಳಿದಂತಿರಾಗೆ ಕಡೆಗಣ್ನೋಟಂ ಮೃದುಸ್ಮೇರಮಿಂ |
ಗಡಲಂ ತುಳ್ಕಿದಮಾಳ್ಕೆಯಿಂದೊಗೆಯೆ ಜೇನ್ಪೈನೋಸೆಯಂ ಸೂಸೆ ಮೆ ||
ಲ್ನುಡಿ ಪಾದಾರುಣರೋಚಿ ಚೆಂದಳಿರ್ಗಳಂ ಸಾಲಿಟ್ಟವೋಲ್ತೋರೆ ಬಂ |
ದುಡುರಾಜಾನನೆ ರಾಜಶೇಖರನನೊರ್ವ್ವಳ್ಕಮ್ರ್ಮಯಿಂ ನೋಡಿದಳ್ ||೧

ವ|| ಇಂತು ನೀರೆಯರ್ನೆರೆನೆರೆದು ನೆಲೆಮಾಡಂಗಳ ನೆಲೆನೆಲೆಯೊಳ್ನೋಡು
ತ್ತುಮಿರೆಯಿರೆ

ಕಂ|| ಸೆಳೆದುದವರಾಸ್ಯರುಚಿನವ |
ಸಳಿಳಜಳಜ್ಜಪಳನಯನಶಫರಂಗಳನಾ ||
ನಳಿನದಳಧವಳನಯನೋ |
ಜ್ಜ್ವಳರುಚಿಜಾಳಕಮಿಳಾತಳಾಧಿಪಸುತನಾ || ೧

ವ|| ಆಗಳಿತ್ತಲಾಸಿಂಹಳೇಂದ್ರಸಂತಃಪುರಸರೋವರಬಾಲಹಂಸಿ ಸರ್ವ
ಮಂಗಳಾವರದಿಂದುದಯಿಸಿದಸರ್ವಮಂಗಳೆಯೆಂಬತದ್ರಾಜಪುತ್ರಿ ರತಿವಿಳಾಸಮಂ
ತಳೆದತಿವಿನೋದದಿಂ ಕೇಳೀವನದ ಕೆಂದಳಿರ್ವಂದರೊಳವಳ್ಪಡೆದ ಕುಸುಮ
ಮಂಟಪದೊಳಲರ್ವ್ವಸೆಯೊಳ್ಪಸದನಂಗೊಂಡು ಕುಳಿರ್ದ್ದು ಸೌಂದರ್ಯ ಶಾರ
ದೆಯೆಂಬ ಸಖಿಯ ಸಂಗೀತಮನಾಲಿಸುತಿರ್ಪ್ಪಿನಮಾಳೀಜನಂ ಪರಿತಂದು ಸಂದ
ಣಿಸಿ ನಿಂದು

ವೃ|| ಜಲಜಾತಾಯತಲೋಚನಂ ಕುಮುದಿನೀಕಾಂತಾನನಂ ಕಾಂತಿಮಂ |
ಜುಲಕಾಯಂ ನವಯೌವನಾಂಕನತಿಸೌಂದರ್ಯಾನ್ವಿತಂ ರಾಜಸಂ ||
ಕುಲದೊಳ್ಮೆರೆದ ನೀರನೈತರುತುಮಿರ್ಪ್ಪಂ ನೋಡಲೇಳೆಂದು ಪೇ |
ಳೆ ಲಸತ್ಸಿಂಹಳರಾಜನಂದನೆ ಮನಂದಂದೆಳ್ದಳಂದೀಕ್ಷಿಸಲ್ || ೧೫

ಅರಗಿಳಿವಿಂಡು ತೊಂಡುಗೆಡೆವಂತಿರೆ ಸುಣ್ಣದಿ ಸೋಗೆ ಸಾಗಿ ಸೈ |
ವರಿವೊಲೊಪ್ಪೆ ಸೋರ್ಮುಡಿ ತಳಿತರ್ತ್ತಳಪಂತಿರೆ ಕೆಂದಳಂ ಕಳ ||
ಸ್ವರಮದು ಕೋಕಿಲ ಸ್ವರದವೋಲಿರೆ ಬಲ್ಮೊಲೆ ಪೂದೊಡಂಬೆಯಂ |
ತಿರೆ ಬನಮೆಯ್ದುವಂತೆಸೆಯೆ ಪೆಣ್ಬಡೆ ಬಂದಳದೊಂದುಬಿಂಕದಿಂ || ೧೬

ವ|| ಅಂತು ವನಲಕ್ಷ್ಮಿ ವಸಂತನಂ ನೋಡಲೆಳಸುವಂತೆ ಸುಜನವನವಸಂತನಂ ಭೂಕಾಂತಸಂ ಕಾಂತೆ ನೋಡಲೆಳಸಿ ಗಳಿಲನೇಳ್ತಂದು

ವೃ|| ನೆಲೆವೊಲೆಗಳ್ಕದಕ್ಕದಿಸೆ ಸೂಸೆ ಬಳಲ್ಮುಡಿ ಪುಷ್ಪಬೃಂದಮಂ |
ಕಲರುತಿ ಕಿಂಕಿಣೀಕಲಿತಕಾಂಚಿ ರವಂಗುಡೆ ನೂಪುರಂ ಪೊದ ||
ಳ್ದಲಿಯೆ ನಿತಂಬಮುಂ ಜಡಿಯೆ ತೆಳ್ನಡು ಬಳ್ಕೆ ಸಖೀಕದಂಬಕಂ |
ನಲಿದೊಡನೇರೆ ನೀರೆ ಬಿಡದೇರಿದಳೊಯ್ಯನೆ ರಮ್ಯಹರ್ಮ್ಯಮಂ || ೧೭

ವ|| ಅಂತೇರಲಾಗಳ್ಸಡಗರಿಸುತೊಡನಾರೋಹಿಸಮುಡದಿಯರ ಮುಡಿಮುಡಿಗಳೊಡನೊಡನೊರಸಲೊಡನೊಗೆದು ನೆಗೆವಪುಡಿಗತ್ತುರಿಯ ಪರಾಗಪಟಲಂ ಪರೆದು ಪರಿಕಲಿಸಿ ಹಸನರುಚಿಚಂದ್ರಿಕೆಗಗಿದು ನೆಗೆವತಮಃಪಟಲದಂತೆ ಪರಿರಂಜಿಸೆಯುಂ ತನುಸಹಜಸರಸಸುರಭಿಗೆರಗಲವ್ವಳಿಪಳಿಪ್ರತಾನದನೂನಗಾನಧ್ವನಿಯನಾಕರ್ಣಿಸಿದಕರ್ಣಮದಕ್ಕೆಮಚ್ಚುಗೊಟ್ಟಪುದೆಂಬಮೊಲ್ಕೆಯಿಂ ಕಮಳಕಮನೀಯಕರ್ಣಪೂರಂಜಗುಳ್ದು ಬೀಳುತ್ತಿರೆಯುಂ ಬಿಂಬಾಧರದ ಕೆಂಬೊಳಪಂ ತಳೆದು ಕೆಂಬರಲಂತೆ ತೊಳತೊಳಪನಾಸಾಭರಣಮೌಕ್ತಿಕಂ ಸಂಜೆಗೆಂಪು ಪುದಿದಶುಕ್ರನಂತೆ ಮೆರೆದಲುಂಗುತ್ತುಮಿರೆಯುಂ ತಳತಳಸಿ ಬಳೆದು ಬಳ್ವಿವರಿದು ಪರೆದು ಪಸರಿಪ ಕಟಾಕ್ಷರುಚಿರರುಚಿಯೆಂಬ ವದನವಿಧುವಿಮಳಪ್ರಭಾಪಟಲಂ ಕನತ್ಕನಕಮಯಮಣಿಭೂಷಣಾಂಶುವಿಸರವಿಸರದರುಣತರುಣಾತಪದೊಳ್ಮಲ್ಲಗಾಳೆಗಮ

ನೊಡರ್ಚ್ಚೆ ಕಂಡು ಕಡುಸಡಗುವ ಚಕ್ರವಕ್ಕಿಗಳಂತೆ ನೆಲೆವೊಲೆಗಳ್ಕದಕ್ಕದಿಸೆಯುಂ ಮೃದುಳತರ ಬಾಹಾಮೃಣಾಳನಾಳದೊಳೊಗೆದರವಿಂದದ ಸಿರಿಯಂ ಸೊಳಕ್ಕೈದಲೀಲಾರವಿಂದದಮಂದಗಂಧಸಂದೋಹಕ್ಕೆ ಮೊರೆದೆರಗುವಿಂದಿಂದಿರಬೃಂದದೊಳ್ನೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿಯುತ್ತಿರೆಯುಂ ಮದನಮರಾಳನಾಡುವಮಳಲೊಟ್ಟಲೆಂಬಂತಿಂಬುವಡೆದ ನಿತಂಬಬಿಂಬಂ ನಿಜಭಾರಮಂ ಪೊರಲಾರದೆ ದಡದಡಿಪಸುಣ್ಣೊಡ್ಡೆಗೆ ವಿಪುಳತರಕುಚಭರಮಂ ತಳೆದ ಬಡನಡುವಂ ತೋರಿ ಪುರುಡಿಸಿ ಜಡಿವಂತೆ ಮಣಿಮೇಖಲೆ ಝಣಝಣಿಸುತ್ತಿರೆಯುಂ ಸೋರ್ಮ್ಮುಡಿಯೆಂಬ ಕಾರ್ಮ್ಮುಗಿಲಿಂದಿಳಿವಮುಗುಳ್ವೆಳಗೆ ಬಿಗುರ್ತ್ತು ಸೊಂಪೇರಿದ ಪಸಲೆಯಂತೆಸೆವಪಸುರ್ವ್ವಣೆಯ ಸೋಪಾನಕ್ಕೆ ಪದತಳಮಲಕ್ತರಸದಿನಲ್ಲಿಗಲ್ಲಿಗಂದಂಗೊಳಿಸಿದಕೆಂಬರಲ ಸಿರಿಯಂ ನಿರವಿಸುತ್ತಿರೆಯುಮತಿವಿಳಾಸದಿಂ ಯುವರಾಜವದನರಾಜಮಂಡಳದರ್ಶನೋತ್ಸುಕೆಯಾಗಿ ಕುವಲಯಾಕ್ಷಿಯುದರಮೇಲ್ನೆಲೆಗೇಳ್ತಂದಾಗಳ್

ಕಂ|| ಆಮಣಿಹರ್ಮ್ಯದಮುಂದಣ |
ಸೋಮಾಶ್ಮದ ವೇದಿಕಾಗ್ರದೊಳ್ನಿಂದವಳು ||
ದ್ದಾಮಯನನಾಂಶು ಪಸರಿಸೆ |
ಕೋಮಲೆ ತದ್ರಾಜವೀಧಿಯದನೀಕ್ಷಿಸಿದಳ್ || ೧೮

ವೃ|| ಹಿಮಕರಕಾಂತಿಯಂ ಕವರ್ದುದಲ್ಲದೆ ತನ್ಮೃಗನೇತ್ರಶೋಭೆಯಂ |
ಕಮಳದ ಚೆಲ್ವುಮಂ ಸೆಳೆದುದಲ್ಲದೆ ಮತ್ತದರೊಂದುಲಕ್ಷ್ಮಿಯಂ ||
ಭ್ರಮರದಕರ್ಪ್ಪುಮಂ ತೆಗೆದುದಲ್ಲದೆ ಮೇಣದು ಪಾರ್ವ್ವಲೀಲೆಯಂ |
ಪ್ರಮದೆಯ ಕಣ್ಗಳೀಲ್ವಿಳೆದುಕೊಂಡವೊಲಾದುದು ಕಣ್ಗೆ ಸೋಲ್ವರಾ || ೧೯

ವ|| ಆಪ್ರಸ್ತಾವದೊಳಾರಾಜವೀಧಿಯಲ್ಲಿ

ವೃ|| ತೊಳಪಕಿರೀಟರತ್ನಕರಮಂಬರಮಂ ಮಿಗೆ ಚಿತ್ರಿಸುತ್ತೆ ಕಂ |
ಗೊಳಿಸೆ ಮುಖೇಂದುಮಂಡಳಮರೀಚಿ ವಧೂನಯನೋತ್ಪಳಂಗಳಂ ||
ಕೆಳೆಗೊಳಿಸುತ್ತುಲರ್ಚ್ಚೆ ನಿಜರೂಪು ಮನೋಜನನಂಗಹೀನನಂ |
ದಿಳಿ ನುಡಿವಂತೆ ಮಾಡೆ ನಡೆತಂದನಿಭಾಗ್ರನೊಳಾನರಾಧಿಪಂ || ೨೦

ವ|| ಅಂತು ನಡೆತಪ್ಪಾಗಳ್

ವೃ|| ನಗೆಗಣ್ಗೊಸೆ ಸುಧಾಮರೀಚಿರುಚಿಯಂ ಘರ್ಮಾಂಭಸಂ ಪೊಣ್ಮೆ ಸು |
ಣ್ಣೊಗದೊಳ್ಚಿತ್ತದೊಳಾಗೆ ಕೌತುಕರಸಂ ಪೀನೋರುಗಳ್ಕಂಪನಂ ||
ಬುಗೆ ಲೀಲಾಕಮಲಂ ಕರಾಂಬುಜದಿನಾಗಳ್ಗೊಸೆ ಕಂಜಾಸ್ತ್ರನಂ |
ನಗುವಂತೊಪ್ಪುವನಂ ಮೃಗಾಕ್ಷಿ ನಡೆನೋಡುತ್ತಿರ್ದಳಾಭೂಪನಂ ||೨೧

ವ|| ಇಂತನಿಮಿಷದೃಷ್ಟಿಯಿಂ ನಿಂದು ನಿರೀಕ್ಷಿಪ ಸಖೀಜನಮಧ್ಯದೊಳ್ತ
ನ್ನನನೂನಸ್ನೇಹರಸಭರಭರಿತಕಟಾಕ್ಷದಿನಭೀಕ್ಷಿಸುತ್ತುಮಿರ್ಪ

ಕಂ|| ಕಾಮಿನಿಯಂ ತನುಜಿತಸೌ |
ದಾಮಿನಿಯಂ ಸೌಧದಗ್ರದೊಳ್ಕಂಡನಿಳಾ ||
ಭಾಮಿನಿಯುರಸಂ ಮುರರಿಪು |
ಗೋಮಿನಿಯಂ ಕಾಣ್ಬವೋಲ್ಸರೋರುಹದೆಡೆಯೊಳ್ || ೨೨

ವ|| ಅಂತುಕಂಡತಿವಿತತಕೌತುಕರಸಪ್ರವಾಹದೊಳ್ಮುಳುಂಗಿ ಮೋಹಿಸಿ

ಕಂ|| ಅಮರಾಂಗನೆಯಿವಳಲ್ಲದೊ |
ಡೆಮೆಯಿಕ್ಕದ ದೀರ್ಘನಯನಮೀಸೌಂದರ್ಯಂ ||
ಸಮನಿಪುದೆ ನೋಳ್ಪೊಡೆಂದಾ |
ರಮಣಿಯನಾನೃಪಕುಮಾರನೀಕ್ಷಿಸುತೆಂದಂ || ೨೩

ಪಡೆಯದೆ ಬಗೆಗಚ್ಚರಿಯಂ |
ಪಡೆಯದೆ ನಿಜಸೃಷ್ಟಿಗತುಳತರನವಯಶಮಂ ||
ಪಡೆಯದೆ ಹರ್ಷಮನತನುಗೆ |
ಪಡೆದನೆ ಕನ್ನಿಕೆಯನೀಕೆಯಂ ಕಮಳಭವಂ || ೨೪

ವ|| ಎಂದು ಬಗೆಯೊಳ್ಬಗೆದು ಭಾವಿಸಿ ಪೊಗಳ್ತೆವಡೆದವಳವಯವ ಸೌಂ
ದರ್ಯಮನಾಕಳಾನಿಳಯಂ ಬೇರೆಬೇರೆ ಪರೀಕ್ಷಿಪಾಗಳ್

ಕಂ|| ಆಸರ್ವಮಂಗಳೆಯ ಶೋ |
ಭಾಸೌಭಾಗ್ಯಮನದಾವನಭಿವರ್ಣಿಪನಾ ||
ವಾಸುಕಿವಾಣೀವರವರ |
ವಾಸವಸಚಿವರ್ಗ್ಗಮಾದೊಡಂ ತೀರ್ದ್ದಪುದೇ || ೨೫

ವೃ|| ತಾವರೆಯುಳ್ಳಿ ತೀರೆ ಜನನೆಂಬಡೆದಂದು ಸಗೇಂದ್ರಮೂಲದೊ |
ಳ್ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿಪುಟ್ಟಿದಂ ||
ದಾವಿಧುಬಿಂಬಮಿಂಬವಳೆಮಂ ಪಡೆದಂದು ತದಗ್ರದಲ್ಲಿ ಭೃಂ |
ಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ || ೨೬

ಕಂ|| ಕುಸುಮಶರನಸುಗೆಸರಮಂ |
ಮಸೆಯೆ ಸುಧಾಕಿರಣಬಿಂಬಶಾಣೋಪಲದೊಳ್ ||
ಮಸಗಿ ಪನಿಪತ್ತಿ ತುದಿಯೊ |
ಳ್ಮಿಸುಗುವ್ರಜಿನೆ ಮೆರೆದುವವಳ ಪದತಳದುಗುರ್ಗಳ್* || ೨೭

ಬಳೆದಡ*ದರ್ತುಂಗಕುಚಗಿರಿ |
ಗಳ ಮರೆಯೊಳ್ಕಾಣದಾಸ್ಯಶಶಿಯಂ ವಿರಹಾ ||
ಕುಳಮೆಳದಳಿರೊಳ್ಕಾತ್ರರಾ |
ವಳಿ ನಿಂದಪೊಲೆಸೆದುದವಳ ಪವನಬನಿಕರಂ || ೨೮

ಅಂದುಗೆಯ ಕಳನಿನಾದದೊ |
ಳೊಂದಿದಸುಂದರಿಯ ಮಂದಗತಿಯತಿಶಯಮಂ ||
ಕುಂದದೆ ಮಾಡೆಂದಜನಂ |
ಬಂದೀಗಳ್ಪೊತ್ತು ಸೇವಿಪುದು ಕಳಹಂಸಂ || ೨೯

ಲಲನೆಯನುಣ್ದೊಡೆ ತಮ್ಮಂ |
ಗೆಲೆ ಸೋಲ್ತೊಡನೈದಿ ಪೊಕ್ಕು ಭಯಭರದಿಂದಂ ||
ತಲೆವಾಗಿ ನೀರೊಳಿನ್ನುಂ |
ನೆಲಸಿರ್ದಪುವಲ್ತೆ ಬಾಳೆಗಳ್ಬಸಪೆಡೆಯೊಳ್ || ೩೦

ಕರಿಶಿರದ ಪಿರಿಯ ಸಿರಿಯಂ |
ಪರಿಭವಿಸಿಪೊಡವಳ ಸುಘನಜಘನಂ ಪಗೆ ತ ||
ತ್ಕರಚರಣಸೋದರಂಗಳ |
ಸರುಣಾಂಬುಜಪಲ್ಲವಂಗಳಂ ಪಡಿಪುಗುಂ || ೩೧

ಬಡಬಾಸೆಯೆಂಬಸಿತಫಣಿ |
ಯೆಡೆಗೊಂಡುದು ಸಿಂಹವಿಜಯಿಯೆಸಿದ್ದಿ್ಗಗಳ್ ||
ಪಿಡಿಗೊಳಗಾದೆನೆನುತ್ತುಂ |
ಬಡವಾಯ್ತೆನೆ ಮಧ್ಯಮೆಸೆದುದಾಮಾನಿನಿಯಾ || ೩೨

ಸ್ತನಕನಕಕಲಶನಿಧಿಯಂ |
ಮನಸಿಜಸಾಧಕನೆಯುಗುಳ್ದ ನೆಗಪಿದಕುಳಿಯೆಂ ||
ದೆನೆ ಸುಳಿನಾಭಿವಿಳಾಸಾ |
ವನಿ ವನಿತಾಮಣಿಯ ತೆಳ್ಪಸಿರೊಳೆಸೆದಿರ್ಕ್ಕುಂ || ೩೩

ಸುಲಲಿತಜಘನಸ್ಥಲಮೇ |
ಖಲೆಯುಗ್ರದೊಳೆಸೆವಮಂಜುಮಣಿದೀಪದ ಕ ||
ಜ್ಜಲರೇಖೆ ನೆಗೆದುದೆನೆ ಕ |
ಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ || ೩೪

ವ|| ಮತ್ತಂ

ಕಂ|| ಜಗಮಂ ಜಯಿಸುವೊಡೀಕೆಯ |
ನಗೆಮೊಗಮೇ ಸಾಲ್ಗುಮೆಂದು ಮದನಂ ಧನುವಿಂ ||
ತೆಗೆದಿಳಿಪಿದಳಿವೆದೆಯೊ ಎನೆ |
ಸೊಗಯಿಸಿದುದು ಬಾಸೆ ತರುಣಹರಿಣೇಕ್ಷಣೆಯಾ || ೩೫

ಸ್ಮರಸಿದ್ಧಂ ಮೋಹನಯಂ |
ತ್ರರಚನೆಯುನೊಡರ್ಚಲೆಂದು ಮಾಗೆರೆದೆಗೆದಂ ||
ತರಳೆಯುದರಪತ್ರದೊಳೆನೆ |
ಕರಮೆಸಗುಂ ತ್ರಿವಳಿ ಕಮಳದಳಲೋಚನೆಯಾ || ೩೬

ತರಳೆಯ ತಿವಳಿಯ ಪೋಲ್ವೆಯ |
ತರಂಗಮಂ ಪಡೆವೆನೆಂದು ಸುರನದಿ ಪಲವುಂ ||
ತೆರೆಗಳನೆ ಪಡೆದು ಪಡೆಯದೆ |
ಸಂದೆರೆಯುಂ ಮಾಂಜಿ ಮುಗುಳ್ದು ಪಡೆಪುದಿನ್ನುಂ|| ೩೭

ದದಕ್ಕೇಣಿ | ವರದೆಂದೇ

ಎಲೆನಡು ಬಡವಾಗದಿರೆಂ |
ದಲರಂಬಂ ಬರೆದನುಮರಜೋರಕ್ಷೆಯುಮಂ ||
ಜುಲರೇಖೆಗಳೆನೆ ಮೆರೆಗುಂ |
ವಲಿಗಳ್ಕೋಮಲೆಗೆ ಹಾರರುಚಿರುಚಿರಂಗಳ್ || ೩೮

ನೊಗಸಸಿ ಪೊಕ್ಕುರ್ಗೞ್ಗೞದಿಂ |
ತೆಗೆದೆತ್ತುತ್ತೆ ಕನಕಕಮಳಕಳಿಕೆಗಳಂ ತಾ ||
ರಗೆಯುಂ ಕಾಪಿಟ್ಟಂದದೆ !
ಸೊಗಯಿಸಿದುವು ಹಾರಮಣಿಯಿನವಳಕುಚಂಗಳ್ || ೩೯

ನವನವಮಣಿಮಯಮಾಲಿಕೆ |
ಕವಿದಿರೆ ಕಾಶ್ಮೀರಗಂಧಗೈರಿಕಗತತ ||
ದ್ಯುವತಿಸ್ತನಮಂಡಲಮದು |
ವಿವರಿಸೆ ರೋಹಣಗಿರೀಂದ್ರಮಪ್ಪುದು ಪುಸಿಯೇ || ೪೦

ಎಳೆಯಳ ನಳಿತೋಳಂದಂ |
ದಳೆವೆನೆನುತ್ತೆಳಸಿ ತಳೆಯುದಳಲಿಂ ಜಳದೊ ||
ಳ್ಮುಳುಗಿತು ಮೃಣಾಳಮಿಷ್ಟಮ |
ನಿಳೆಯೊಳ್ತಿಳಿ ದೀರ್ಘಸೂತ್ರನೇಂ ಪಡೆದಪನೇ || ೪೧

ಮೃದುಲತೆಯಿಂ ಬಿಸಕಾಂಡದ |
ಮೃದುಲತೆಯಂ ಜಯಿಸುವವಳ ಬಾಹಾಲತೆಯೊಳ್ ||
ಪುದಿದೆಳದಳಿರಂ ಪೋಲ್ತು |
ಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ || ೪೨

ಎಳದಳಿರಂಬಿದು ಮರುವೊನೆ |
ಗೊಳಲಾರದುಧೀರರೆರ್ದೆಯನೆಂದತನುವದ ||
ಕ್ಕಳವಡಿಸಿದನೆನೆ ಕೈತಕ |
ದಳಮುಂ ತುದಿಗೊಂಡು ಕರಜಮೊಪ್ಪಿದುದವಳಾ || ೪೩

ನೆರೆವೆರೆವೊಗದ ಮೃಗಾಕ್ಷಿಯ |
ಮಿರುಗುವನಖರುಚಿಗೆ ಸೋಲ್ತು ಮರನೇರುತ್ತುಂ ||
ಗರಿವೂವಿನ ಕಿರುಗರಿಗ |
ಳ್ತುರುಗಿದಬಹುಕಂಟಕಂಗಳೊಳ್ನೆಲಸಿರ್ಕ್ಕುಂ || ೪೪

ಮುಗುದೆಯ ಮೊಗದಾವರೆಯದು |
ಮುಗಿವುದೊ ನಗುವುದೊ ಪರೀಕ್ಷಿಸೆಂದಟ್ಟಲೊಡಂ ||
ಮೃಗಧರನಬ್ಜಮನದನದು |
ಮಿಗೆ ಸೆರೆವಿಡಿದಂತೆ ಕಂಠಮೊಪ್ಪಿದುದವಳಾ || ೪೫

ಹರಿಣನುಮಂ ಪುತ್ತ್ರಂ ವಟ |
ತರುವಂ ತೊರೆದಕ್ಷಿಫಣಿಫಲಂಗಳನಾಂತಂ ||
ತಿರೆ ನೇತ್ರಭ್ರೂಬಿಂಬಾ |
ಧರಂಗಳಿಂದವಳ ವದನವಿಧು ಕರಮೆಸೆಗುಂ || ೪೬

ಅರವಿಂದದ ಸಿರಿ ಮೋಣಿರು |
ಳಿರುಳೆಸೆಯನ ಸಿರಿಯೆ ಪಗಲೊಳಳಿಗುಮಿವೆರಡಂ ||
ಸರಿಮಾಳ್ಪುದೆಂತೊ ಸಿರಿ ಬಂ |
ದೆರವಿಲ್ಲದೆ ನೆಲಸಿ ನಿಂದತರಳೆಯ ಮೊಗದೊಳ್ || ೪೭

ಎನ್ನಂ ಪಡೆದಂಬುಜಮಂ |
ಮುನ್ನಂ ಮುಗಿಯಿಪಮೃಗಾಂಕನಂ ಜಯಿಸೆಂದಾ ||
ಕನ್ನೆಯ ಮೊಗಕ್ಕೆ ಕಡುಚೆ |
ಲ್ವನ್ನಿಸಜಸ್ರೀಯೆ ಕುಂದುಗುಂ ಕುಮುದಾಪ್ತಂ || ೪೮

ಮುಗುದೆಯ ಮೊಗಸಸಿಯೊಳ್ಬಿದಿ |
ಮಿಗಮಂ ನಿರ್ಮಿಸುವೆಸೆಂದು ಬಗೆದದರಂದಂ ||
ಬಗೆವುಗೆ ಮರಳ್ದು ಲೋಚನ |
ಯುಗಮಂ ಸಮೆದಂತೆ ಮೆರೆದುದವಳಲರ್ಗಣ್ಗಳ್ || ೪೯

ವನಿತೆಯ ವದನಶ್ರೀ ಜಂ |
ದನರಸಮಂ ನಳಿನದಳದೆ ತೀವಿದಳೆನೆ ಲೋ ||
ಚನರುಚಿಯಿರೆ ತಾರಕಮದು |
ನೆನೆಯಿಪುದದರೆಡೆಯೊಳೆರಗಿ ತೀಱ್ವಳಿಶಿಶುವಂ || ೫೦

ಸೊಗಯಿಪಸಂಪಗೆಮುಗುಳದು |
ಮುಗುಡೆಯ ಮೂಗಿಂ ಪರಾಭವಂಬಡೆದಳಲಿಂ ||
ಮೃಗನಯನೆಯ ಕುರುಳೊಡನಾ |
ಡಿಗಳೆನಿಪಳಿಗಳನೆ ತಗುಳ್ವು*ದಿನ್ನುಂ ಮುನ್ನುಂ || ೫೧

ಉದಯಿಪಪೂರ್ಣೇಂದುವ ಕೆಂ |
ಪೊದವಿದ ಕಳೆಗಿಗೆದಮರ್ಚ್ಚಿದಂತಿರ್ಪೊಲೆಸೆಗುಂ ||
ಸುದತಿಯ ಬಾಯ್ದೆರೆಯೊಸರ್ದಮೃ |
ತದ ಪನಿಗಳ ಪಙ್ಕ್ತಿಯಂತೆ ಪಲ್ಗಳ್ಮೆರೆಗುಂ || ೫೨

ಚೆಂದಳಿರ್ದಂಪಂ ಬಿಂಬದೊ |
ಳೊಂದಿದಕೆಂಪಂ ಪಯೋರಸದೊಳಮರ್ದಿಂಪಂ ||
ಕುಂದದ ರನ್ನದಲಂಪಂ |
ತಂದೊಂದೆನಿಸಿದಪೊಲಧರಮೊಪ್ಪಿದುದವಳಾ || ೫೩

ಅಲರದಕುಂದದ ಚಂದದ |
ಸುಲಲಿತಕುಟ್ಮಳಮನಾಯ್ದು ತೊಯ್ದಮರ್ದಿನೊಳಾ ||
ಲಲನೆಯ ಚೆಂದುಟಿದಳಿರೆಡೆ |
ನಲಿನಜನಿಟ್ಟಂತೆ ದಂತಮೇಂ ರಂಜಿಸಿತೋ || ೫೪

ಕಿವಿದೊಡವಿನಮುಕ್ತಾತತಿ |
ನಪ್ರೋಡುಗಣಮೆನಿಸೆ ಕರೆಯೆ ಮಕರಿಕೆಯೆನೆ ತ ||
ದ್ಯುವತಿಯ ನಯನೋತ್ಪಳದಂ |
ದವನೀಕ್ಷಿಸಲ್ಕೆವಿದಿಂದುವೆನೆ ಕದಪೆಸೆಗುಂ || ೫೫

ಕುರುಳೊಳ್ತೀವಿದ ಕತ್ತುರಿ |
ಯ ರಜಂ ಮೊಗರಸದೊಳುದಿರ್ದು ನರುಸುಯ್ಯೆಲರಿಂ ||
ಪರೆದು ತೆರೆಮಸಗಿ ನಿಂದಂ |
ತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ || ೫೬

ಸೆರೆವಿಡಿದುದು ಮುಖಕಮಳಂ |
ಪೆರಪಿಂಗದು ಚಿಕುರತಿಮಿರಮೆನ್ನನಿದೆಂದೇಂ ||
ಮರುಗಿ ಬಡವಾದನೋ ಪೇ |
ಳ್ನಿರವೆರೆಯೆನೆ ಪೆರೆನೊಸಲ್ಮೃಗೇಕ್ಷಣೆಗೆಸೆಗುಂ || ೫೭

ಅಗಲದೆ ಮೊಗದಾವರೆಯೊ |
ಳ್ಸೊಗಯಿಪ ಪಮೃಗವ ದಲಲಾಮ ಮಧುಪದ ಶಿಶುಗಳ್ ||
ಬಗೆಗೊಳಿಸಿ ಬಳಿಯೊಳಾಡುವ |
ಬಗೆಯನಿಸಿದುದವಳ ಪಣೆಯೊಳೊಲೆವಳಕಂಗಳ್ || ೫೮

ವನಿತೆಯ ತನುತನುಹರಿಜಂ |
ದನಶಾಖೆಯನಡರ್ದು ಬಾಸೆಸಿಸುವೆಲ್ಲಿದುಪೆಂ ||
ದೆನುತೆರಗಿ ನೋಳ್ಪಭುಜಗಾಂ |
ಗನೆಯೆನೆ ಘನವೇಣಿ ಜಾಣೆಗೇನೊಪ್ಪಿದುದೋ || ೫೯

ವ|| ಅಂತುಮಲ್ಲದೆಯುಂ

ವೃ|| ಹಿಮಕರಬಿಂಬವಕ್ತ್ರೆಗೆ ಮೃಗಾಯತಲೋಚನಮಬ್ಜಗಂಧಿಗು |
ತ್ತಮಮದಭೃಂಗಕುಂತಳಮುದಾರಶುಕೀಮೃದುವಾಣಿಗಚ್ಛದಾ ||
ಡಿಮರದನಾಳಿ ಶೈಲಜಘನಸ್ಥಳಿಗೊಪ್ಪುವಸಿಂಹಮಧ್ಯಮೊ |
ಪ್ಪಮಸಿರದೀವೃದಚ್ಛರಿಯೆ ಕೋಕಕುಚದ್ವಯೆಗಬ್ಜಪಾಣಿಗಳ್ || ೬೦

ನುಡಿ ನುಡಿವೆಣ್ಗೆ ಜಾಣ್ನುಡಿಗಳಂ ಕಲಿಸಲ್ಸಲೆ ಸಾಲ್ವುದೊಪ್ಪುವೊ |
ಳ್ನಡೆ ನಡೆವಕ್ಕಿಗಳ್ಗೆ ನಡೆಯಂ ನೆರಪಲ್ನೆರೆದಿಪ್ಪುದೆಯ್ದೆ ಕ ||
ಣ್ಗುಡಿ ಕುಡಿಮಿಂಚನುಕ್ಕುಡಿಯಲಾಪ್ಪುದು ಬಾಳೆಯ ಭಾಳವರ್ಣಮಂ |
ತೊಡೆ ತೊಡೆದಪ್ಪುದಾಂತೊಡೆ ಶುಭಾವಹಭಾವಭವಾಧಿದೇವಿಯಾ || ೬೧

ವ|| ಮತ್ತಮಾತರುಣಿ ಗಿರಿಸುತೆಯಂತೆ ಶಶಿಕಳಾಧರೆಯುಂ ರಮೆಯಂ ತೆತನು ಜನ್ಮಸ್ಥಳಿಯುಂ ಭಾರತಿಯಂತೆ ಪದ್ಮಜಾತ್ಯಾಮೋದಾವಹೆಯುಂ ವನಸ್ಥಳಿಯಂತೆ ಪೃಥುಲಕುಚಾಲಂಕೃತೆಯುಂ ನರ್ತಕಿಯಂತೆ ಮಂಜುಲಾಸ್ಯಮನೋಜ್ಞೆಯುಂ ಈಶಾನದಿಶೆಯಂತೆ ಸುಪ್ರತೀಕಸಮನ್ವಿತೆಯುಂ ಸುಗ್ರೀವಾಧಿರಾಮೆಯಾಗಿಯುಮಲಂಕಾರಾತಿಶೋಭಿತೆಯು ಮುದಿತಾರುಣಕರೋಲ್ಲಸಿತೆಯಾಗಿಯು ಮಪೂರ್ವಸ್ವಭಾವೆಯುಂ ಧೃತಕುಂಭಜಘನಸ್ಥಿತಿಯಾಗಿಯು ಮತಿಲಾವಣ್ಯನಿಧಾನೆಯುಂರಂಭೋರುವಿಭವಾನ್ವಿತೆಯಾಗಿಯುಂ ವಿತತಭೂಮಹಿತಗುಣೋದಯೆಯುಂ ನಳಿನನೇತ್ರವಿಳಸಿತೆಯಾಗಿಯುಮನಂತಮಣಿಕಿರಣಮನೋಜ್ಞೆಯುಮೆನಿಸಿರ್ದ್ದಳಂತು ಮಲ್ಲದೆ

ವೃ|| ಗತಿಯಿಂದಂ ರಾಜಹಂಸದ್ವಿಜವಿಜಯಿನಿಯಾಗಿರ್ದ್ದಮಾತಂಗಮಂ ನಿ |
ರ್ಜಿತಸಜ್ಜೈವಾತೃಕಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ ಕ್ಷಣತ್ವಿ ||
ಟ್ತ್ರತಿಯಂ ಸೌಂದರ್ಯದೂರೀಕೃತಸಕಳವಧೂವೃಂದೆಯಾಗಿರ್ದ್ದ ಭೂಭೃ |
ತ್ಸುತೆ ತಾಂ ತ್ರೈಪದಸ್ಥೆಯೋಳಿಜ್ಜನಮನನುದಿನಂ ಗೆಲ್ವುದಾಶ್ಚರ್ಯಮೇ ದಲ್ ||

ವ|| ಮತ್ತಂ

ವೃ|| ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾಪ್ಪರ್ ಮನೋಜನೋಜೆ ನೋ|
ಡಿದು ನನೆವಿಲ್ಲ ಬಲ್ಲಹನ ಜೆಲ್ವಿದು ಕಾವನ ಜೀವರತ್ನಮಿಂ ||
ತಿದು ರತಿಕಾಂತನಾಂತ ಪೊಸಕೂರಸಿ ತಾನಿದು ಮಾರವೀರನ |
ಗ್ಗದಸದಳಂಕೃತಿಧ್ವಜಮಿದೆಂದೆನಿಸಿರ್ದ್ದುದು ರೂಪು ನೀರೆಯಾ || ೩೭

ಕಂ|| ಕರೆದಳೆಯದಿಂದುಕಳೆ ಕಳೆ |
ನೆರೆಯದಚಂದ್ರಿಕೆ ಪಗಲ್ಪಗಲ್ಮಗಿದು ಮುದಂ ||
ಮುರಿಯದಕೋಮಳೆ ಕೋಮಳೆ |
ಬರೆಯದಸಿಂಗರದ ಪೋಳೆ ಪೋಳಿಯುತೆನೆವಿರ್ದ್ದಳ್ ||  ೬೮

ವ|| ಅಂತು ನಿರತಿಶಯ ಸೌಂದರ್ಯ ಮಾಧುರ್ಯಮಂ ಮೀರಿ ಕಾಂತೆ ಕಾಂತಿವೆತ್ತು ಕಂಗೊಳಿಸುತ್ತುಮಿರೆಯಿರೆ

ವೃ|| ಗುರುಜಘನಸ್ಥಳೀಪುಳಿನದೊಳ್ಪರಿದಾಡಿ ವಲಿತ್ರಯೋರ್ಮಿಯೊ |
ಳ್ಪಿರಿದಡರ್*ದಾಡಿ ನಾಭಿಸುಳಿಯೊಳ್ಸುಳಿದಾಡಿ ತಮಾಲನೀಲಭಾ ||
ಸುರತರರೋಮರಾಜಿನವಶೈವಲದೊಳ್ನಡೆದಾಡಿ ತನ್ಮುಖಾಂ |
ಬುರುಹರಸಪ್ರವಾಹದೆ ಮುಳುಂಗಿದುವಕ್ಷಿಝಷಂಗಳಾತನಾ || ೬೫

ವ|| ಮತ್ತಮಾಗಳ್

ವೃ|| ಲಲನಾನೇತ್ರತ್ರಿಭಾಗಪ್ರಭವಶಿತಿರುಚಿಶ್ವೇತರುಗ್ಲೋಹಿತಜ್ಯೋ |
ತಿ ಲಸದ್ಧಾತ್ರೀಶಪುತ್ರಾಂಗದೊಳೆ ಪಸರಿಸುತ್ತಿಯ್ದೆ ಕಣ್ಗೊಪ್ಪಿದತ್ತು ||
ಜ್ಜ್ವಲತನ್ನೇತ್ರಾಂಜಲಸ್ಥಸ್ಮರನಿಸೆ ಪರಿತಂದೊತ್ತಿ ಪಾಯ್ತುರ್ಪ್ವನೀಲೋ |
ತ್ಪಲಜಂಜನ್ಮಲ್ಲಿಕಾಶೋಕವಿಶಿಖತತಿಯೆಂದೆಂಬಪಾಂಗಿಂದಳುಂಬಂ || ೬೬

ವ|| ಆಪ್ರಸ್ತಾವಮುಂ ಸಾರ್ದ್ದು ಸಂಭ್ರಮಿಸಿ ನಿಂದು

ವೃ|| ಕರ್ಬ್ಬಿನ ಬಿಲ್ಗೆ ತುಂಬಿವೆದೆಯುಂ ಪದೆದೇರಿಸಿ ಗಂಡಗಾಡಿಯಿಂ |
ದುರ್ಬ್ಬಿ ಸರೋಜಕೋರಕದ ಕೂರ್ಗ್ಗಣೆಯುಂ ತವೆ ತೊಟ್ಟುಲಕ್ಷ್ಯಮಂ ||
ದೋರ್ಬ್ಬಲಶಾಲಿ ನೋಡಿ ಸೆಳೆದೆಚ್ಚನವಂದಿರನೊರ್ಮ್ಮೆ ತೊಟ್ಟನಂ |
ದಿರ್ಬ್ಬಗಿಯಾಗೆ ತನ್ಮನಮನಂಗಧನುರ್ಧರನಾಕ್ಷಣಾರ್ಧದೊಳ್ || ೬೭

ಕಂ|| ಗಡಿಗೆಟ್ಟುದು ಕಣ್ಬೇಟಂ |
ನಡೆಗೆಟ್ಟುದು ಚಿತ್ತವೃತ್ತಿ ಧೃತಿವಲ್ಲಿ ವಲಂ ||
ಕುಡಿಗೆಟ್ಟುದು ನವವಿರಹಂ |
ತಡೆಗೆಟ್ಟುದು ತನ್ನೃಪಾತ್ಮಜಂಗಾಕ್ಷಣದೊಳ್ || ೬೮

ಅರಸನ ಹೃದಯಪಟಾಭ್ಯಂ |
ತರದೊಳ್ನವರಾಗರಸದಿನಾಕನ್ನೆಯ ಸು ||
ಣ್ಣರಿಜಂ ಬರೆದಂಗಜನೇಂ |
ಪುಂಕಿಸೆ ಮುಂ ಚಿತ್ರಕರ್ಕಳೊಡನಾಡಿಪನೋ || ೬೯

ವ|| ಆಗಳರಸಂ ತನ್ನೊಳಿಂತೆಂದಂ

ವೃ॥ ಬಗೆಯಂ ಬಲ್ಸೆರೆಗೈದುದೀಗಳಿವಳೀಮಾಧುರ್ಯಮೀನೆಯ್ದಿಸು ।
ಣ್ಬೊಗರೀಕಣ್ಗಳಕಾಂತಿಯೀಮುಖಶಶಿಪ್ರದ್ಯೋತಮೀಕಂಜಮೊ ॥
ಳ್ಮುಗುಳಂ ಪೋಲ್ವಕುಚಂಗಳೀಪೃಥುಳವೃತ್ತಶ್ರೋಣಿಯೀಚೇಟದು ।
ಜ್ಜುಗಮೀವಿಭ್ರಮಮೀವಿನೋದಮೊದವೀ ಸೌಂದರ್ಯಮೀಸದ್ಗುಣಂ ॥ ೭೦

ಕಂ॥ ಈಲಲನೆಯ ಸೌಂದರ್ಯಂ ।
ಸೋಲಿಸಿದುದು ಗಡ ಮದೀಯಮಾನವನದಾಗ್ರ್ಯಂ ॥
ಸೋಲದುದಂ ಶಿವಶಿವ ಶಶಿ ।
ಮೌಲಿಯ ಮಾಯೆಯುನದಾರೊ ಮೀರಲ್ಬಲ್ಲರ್ ॥ ೭೧

ವ॥ ಎಂದು ವಿಸ್ಮಯಂಬಡೆದು ಚೆಲ್ಲಿದಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತಸಾರ್ವಭೌಮಂ ಮುಂದಣ್ಗೆ ನಡೆತರುತ್ತುಂ ಸಿಜನಯನ ಪಥಮಂ ಮೀರಲೊಡನೆ

ವೃ॥ ಪಡಿದೆರೆದಂತೆ ಪಾರಿತೆರ್ದೆ ಜುಂಮನೆ ಮೈನವಿರುರ್ವಿ ಮೂಡಿದ ।
ತ್ತಿಡಿಕಿರಿದಿರ್ದ್ದಬಲ್ಮೊಲೆಗಳಿಟ್ಟೆಡೆಯೊಳ್ಬಿಮರುಣ್ಮಿದತ್ತು ಮೇಣ್ ॥
ದಡದಡಿಸಿತ್ತು ಸುಣ್ಗೊಡೆ ರದಚ್ಛದಮಿರ್ಪುಡುಗಿತ್ತು ಸುಯ್ಗೆ ಕಾ ।
ಯ್ಪಡರ್ದುದೊಡಲ್ಗೆ ಮೆಲ್ಲನಡಿಯಿಟ್ಟುದು ಮೂರ್ಛೆ ಮೃಗಾಯತಾಕ್ಷಿಯಾ॥

ವ॥ ಅಂದವಳಂದವಳಿದಂದವಂ ಕಂಡು ಕಳಾರಮೆ ಮೊದಲಾದಕೆಳದಿಯರ್ವಿಸ್ಮಯಂಬಟ್ಟು ವಿರಹಾತಪಮಂ ತವಿಪಬಗೆಯಂ ಬಗೆದಲ್ಲಿಂ ಮೆಲ್ಲನೆ ಕೆಂಳೆದರಾಂದೋಳನದೊಳಿರಿಸಿ ಕೇಳೀವನಕ್ಕೆ ಕೊಂಡುಪೋಗಲೊಡನೆ

ವೃ॥ ಇನಿಯನಗಲ್ಕೆಗಿರ್ಚ್ಚು ಸುಡೆ ಸೈರಿಸಲಾರದೆ ಮುಗ್ಧೆ ಬಂದು ನಂ ।
ದನದೆಡೆ ನಿಂದು ಬೆಚ್ಚುಸಿರೊತ್ತಿದೊಡಾಗಳೆ ಕಂದಿಸಿತ್ತು ಮೇ ॥
ಣ್ಚಿಸುಗುವತುಂಬಿಯುಂ ಬಳಸಿ ಬಗ್ಗಿಪಕೋಗಿಲೆಯುಂ ಮೃಗಾಂಕನಂ ।
ಮನಸಿಜಮಾರುತತ್ರ್ತನುವನಾಂತೊಡೆ ಕಂದಿಸದೇನದಿರ್ಕ್ಕುಮೇ ॥ ೭೩

ವ॥ ಆನಂದನದೊಳಾಳೀಜನಮವಳಂ ಶಿಶಿರೋಪಚಾರಾಂಗಿದ್ದ್ವಲೆಂದು ಪೊಸಕುಸುಮ ಮಂಟಪಕ್ಕೆ ತಂದು

ವೃ|| ಸರಸರಸಾಲಸಲ್ಲಲಿತಪಲ್ಲವತಲ್ಪದೊಳಿಟ್ಟು ಪಚ್ಚೆಗ |
ರ್ಪುರವನಮುಚ್ಚುರ್ತೆಚ್ಚಿ ನಿಡುಗಣ್ಗೆ ಸರೋಜದಳಂಗಳಂ ಪಯೋ ||
ಧರದೆಡೆಯಲ್ಲಿ ತಂದಿರಿಸಿ ಸೂಸಿ ಹಿಮಾಂಬುವನೈದೆ ಪುಷ್ಪಚಾ |
ಮರಮನೆ ಬೀಸಿ ಚಂದನಮನಂಗದೆ ಪೂಸಿ ವಿಳಾಸಿನೀಜನಂ || ೭೪

ಕಂ|| ಪರಿಹರಿಸಲೆಂದು ವಿರಹ |
ಜ್ವರಮಂ ಶಿಶಿರೋಪಚಾರಮುಸಗಿದೊಡದು ತಾಂ ||
ಪಿರಿದಾದುದಕಟ ಮಧುರಾ |
ಧರೆಗದನಂತಿಂತುಟೆಂದು ಬಣ್ಣಿಪರೊಳರೇ || ೭೫

ವೃ|| ಬಿಸುಸುಯ್ಯಿಂದಿರ್ಪ್ಪುಗುಂದಿರ್ದ್ದಧರಕಿಸಲಯಂ ರಕ್ತನೇತ್ರಾಂಚಲಂಬಾ|
ಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮಮೃತಾಪಾಂಡುಗಂಡಸ್ಥಲಂ ಶೂ ||
ನ್ಯಸಮಾಲೋಕಂ ತನುತ್ವಂಬಡೆದತನು ವೃಥಾನಲ್ಪಸಂಕಲ್ಪಚಿತ್ತಂ |
ಮುಸುಕಿದ್ದಾಲಸ್ಯಭಾವಂ ನೆಗಳ್ದಿ*ರೆ ವಿರಹಾಕ್ರಾಂತೆ ತತ್ಕಾಂತೆಯಿರ್ದ್ದಳ್ ||

ಕಂ ತೀವಿದತಾಪಕ್ಕಿಕ್ಕಿದ |
ಬಾವನ್ನದ ಬಟ್ಟಬೊಟ್ಟು ವದನದ್ಯುತಿಯುಂ ||
ತಾವರೆವಗೆಯುಂ ಕಳಲೆಂ |
ದಾವೇಳೆಯು ನರಿದು ಬಂದು ನಿಂದವೊಲೆಸೆಗುಂ || ೭೭

ಆಸಿಯಳಸಿಯೊಡಲೊಳೊರಸಿದ |
ರಸವೊಸರ್ವ ಸುಚಂದನಂ ಕರಂ ಕಣ್ಗೆಸೆಗುಂ ||
ಕುಸುಮಾಸ್ತ್ರನ ಕುಸುಮಶರ |
ಪ್ರಸರದ ಹತಿಗಳ್ಕಿ ಕವಚಮಂ ತಾಳ್ದಿದವೋಲ್ || ೭೮

ಮಾನಿನಿಯ ಪೀನತರಕುಚ |
ವಿೂನಧ್ವಜಕುಂಭಿಕುಂಭಮದು ವಿರಹಗ್ರೀ ||
ಷ್ಮಾನಲನಿಂ ಬಿರಿದಂತೆವೊ |
ಲೇಸೊಪ್ಪಿತೊ ಬಿರಿಯೆ ತಾಳ್ದಕುಂಕುಮಪಂಕಂ || ೭೯

ಅರೆವಿರಿದಸಂಪಗೆಯ ಸುರು |
ಚಿರಮುಕುಲಂಬೊಕ್ಕು ಬಿಸುಪನಾಂತಿಳಿವೆಲರಂ ||
ತಿರೆ ಬಿಸುಸುಯ್ಯನ್ನದತಿಯ ಭಾ |
ಸುರನಾಸಿಕೆಯಿಂದೆ ಸೂಸುತುಂ ಸೊಗಯಿಸುಗುಂ || ೬೦

ವಿರಹಶಿಖಿ ಸುಟ್ಟೊಡಗಿದೊಳ |
ಗಿರಲಾರದೆ ಕಂದಿ ಕುಂದಿ ನೆಗೆದುದು ಬಗೆಯೊಂ ||
ಬರ ಬಗೆಗೇಂ ಬಂದುದೊ ಮಧು |
ಕರನವಳುರದಲ್ಲಿ ಚಂದನಸ್ಥಿತಪಕ್ಷಂ || ೬೧

ಅಂದರವಿಂದಸಖಂ ಕಾ |
ಳಿಂದಿಯನೆಲೆಪಡೆದನೆಂದು ಪುರುಡಿಂ ಪಡೆದಂ |
ಮಂದಾಕಿನಿಯಂ ಬಿದುವೆಂ |
ಬಂದದಿಸವಳಾಸ್ಯಬಾಷ್ಪನದಿ ಕಳಿದಿಳಿಗುಂ || ೬೨

ವ|| ಮತ್ತಂ

ಕಂ|| ಬಗೆವನೆಯೊಳಿರ್ಪ್ಪರತಿಪನ |
ನೊಗೆದುತ್ಕುಚಗಿರಿಯ ವಿರಹಶಿಖಿದವಶಿಖಿ ಚು ||
ರ್ಚ್ಚುಗುವೆಂದು ಮುಖಮೃಗಾಂಕಂ |
ಮಿಗೆ ಸುಧೆಗರೆವಂತೆ ಕರೆದುದವಳಶ್ರುಜಳಂ || ೬೩

ವೃ|| ನಾರೀಚಾರುಕುಚಂಗಳಂ ಮಿಗೆ ಮುಸುಂಕಿಟ್ಟಬ್ಜಪತ್ರಂಗಳೊ |
ಕ್ಷೀರಂ ಸಿಂಪಿಸೆ ನೀರೆಯುರ್ಕ್ಕಣಗಣಂ ಚಾಂಚಲ್ಯಮಂ ಪೊತ್ತು ತ ||
ಳ್ತೋರಂತಲ್ಲಿ ವಿರಾಜಿಸಿತ್ತು ಸುಡುಗುಂ ಕಾಮಾಗ್ನಿ ತಾನೆಂದು ತ |
ನ್ನೀರೇಜಚ್ಛದಜೀವಸಂ ಭಯದಿನಾಗಳ್ಕಂಪನಂಬೆತ್ತವೋಲ್ || ೬೪

ಅಂಗನೆಯಂಗದಂಗಜಮಹಾಶಿಖಿಗಾಜ್ಯಮದಾದುದಾಲಿಸೀ |
ರ್ತ್ತುಂಗಕುಚಾರ್ದ್ರಚಂದನರಸಂ ಘಟಪಾಕವಿಲೇಪನಂಬೊಲಾ ||
ಪ್ತಂಗಳವಾಯ್ತು ಚೆಂದಳಿರೆಲರ್ತ್ತಿದಿಪೊಂಪೆಲರಂದವಾಯ್ತು ಬೆ |
ಕ್ಕಿಂಗಳೆ ತಳ್ತದಳ್ಳುರಿಯುದಾಯ್ತೆನೆ ತಾಪಮದೇನಳುಂಬಮೋ || ೬೫

ಆಸಿಯುಳ ಸೋಷ್ಣನಿಶ್ವಸಿತ ಸೌರಭಲೋಭದೆನಾಸಿಕಾಗ್ರದೊ |
ಳ್ಪಸಿದಮುದಾಳಿ ಯುಂದೆರಗೆ ತಾಂ ಸುಡೆ ಕರ್ರನೆ ಕಂದಿ ಕುಂದಿ ಸಾ ||
ಧ್ವಸವಶದಿಂದೆ ಬಂಪೆರಗಲಣ್ಮದೆ ತತ್ಸಮುಚಾರುಚಂಪಕ |
ಪ್ರಸವದೊಳಿಸ್ಸುಮಿಲ್ಲಿಯುರವಿಂದಮರಂದದೊಳಳ್ದು ಜೀವಿಕುಂ || ೮೬

ಕರಿಮುರಿವೋಡುವಾರ್ದ್ರೆರಗುವಾರಡಿಗಳ್ತಳಿವಾಲಿನೀರ್ಪ್ಪಯೋ |
ಧರದೆಡೆ ಕಾಯ್ದುಘಟ್ಟಿಗೆರೆದಂತಿರೆ ಜುಯ್ಯನೆ ಬತ್ತಿದತ್ತು ಮೇ ||
ಲಿರಿಸಿದಪಲ್ಲವಂ ಮೃದುಮೃಣಾಳಕುಳಂ ಸಿರಿಗಂಪು ಪುಷ್ಪಮುಂ |
ಜರಿಯುರಿಪತ್ತೆ ಪೊತ್ತಿ ಪೊಗೆದತ್ತು ತನೂದರಿಯಂಗತಾಪದಿಂ || ೮೭

ವ|| ಆಗಳವಳ್ಗೆ ಶಿಶಿರೋಪಚಾರಮಂ ಮಾಳ್ಪಮುಗ್ಧೆಯರ್ಗೆ ವಿದಗ್ಧೆಯುಸ್ಸ್ರಂಜ್ಞೆಗೈದು

ವೃ|| ಘುಸಕಜೆಯುಂಜೆಯುಂ ತೊಲಿಗಿಸೀಯುಲರಂ ಫಣಿವೇಣಿ ಸಾರಿಸೀ |
ಜೆನುಗುವತುಂಬಿವಿಂಡನೆಲೆ ಚಂಪಕನಾಸಿಕೆ ನೂಂಕು ಮತ್ತಕೀ ||
ರನಸಿರದಟ್ಟು ಮಂಜುಳವಿಡೂರಜಭೂಷಣೆ ಚಂದ್ರಕಾಂತಿಯುಂ |
ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆಯೆಂದರಾಳಿಯರ್ || ೮೮

ವ|| ಮತ್ತಂ

ವೃ|| ಅಲರ್ಗಳ ಜೊಂಪಮಂ ಪಿಡಿದು ಬೀಸದಿರಿಂದುನಿಭಾಸ್ಯೆ ಜೊನ್ನಮಂ |
ದಲಸುವಳಂಗಜಾತಶರಲೋಚನೆ ಪೂಗಳನಿಕ್ಕದಿರ್ಪವೋ ||
ಜ್ವಲಶರಮೆಂದು ಕುಂದುವಳುದಂಚಿತಪಲ್ಲವಪಾಣಿ ಪಲ್ಲವಾ |
ವಲಿಯನೆ ಪಾಸದಿರ್ಮದನವಹ್ನಿಶಿಖಾತತಿಯೆಂದು ಜೆಚ್ಚರ್ವಳ್ || ೮೯

ವ|| ಎಂದುಸಿರ್ದ್ದರ್ ಮತ್ತಮಿರಪೆ

ವೃ|| ಅರವಿಂದಾನನೆಗಬ್ಜಲೋಚನೆಗೆ ಪದ್ಮಾಮೋದನಿಶ್ವಾಸೆಗಂ |
ಬುರುಹದ್ವಂದ್ವಸಮಾನಪಾಣಿಗೆ ಪಯೋರುಟ್ಪಾದೆಗಂಭೋಜಭಾ ||
ಸುರಕೋಶಸ್ತನೆಗೀಲತಾಂಗಿಗೆ ಸರೋಜಾತಾರಿ ತಾಂ ಕಾಯ್ಪುದ |
ಜ್ವರಿಯುಲ್ತೀಕಳಹಂಸನೀಮಧುಕರಂ ಪೇಳ್ಕಾಯ್ಪುದೇಂ ತಕ್ಕುದೇ || ೯೦

ತಳಿರುಂ ತಾಮರಸಂ ಮದಾಳಿಕುಳಮುಂ ಮಂದಾನಿಲಂ ಮಾಮರಂ |
ಕಳೆಯಾಣ್ಮಂ ಕಳಹಂಸಮಂಡಳಿ ಸರೋಜಾತಾಕರಂ ಷಟ್ಪದಂ ||
ಕಳಕಂಠಂ ಕದಳೀದಳಂ ಮಳಯಜಂ ಮಾಧುರ್ಯಗೀತಂ ಮನೋ |
ಜ್ಞಳತಾಗೇಹಮುಮೆಲ್ಲಮೀಕೆಗೆ ಕರಂ ಕಾಯ್ಪುಪ್ಪುವೇಗೆಯ್ವುಳೋ || ೯೧

ವಿರಹಶಿಖಿಪ್ರತಪ್ತ ತರುಣೀತತಲೋಚನರೋಚಿಯಿಂ ಸುಧಾ |
ಕರರುಚಿ ಸೋಷ್ಣಮಾಗುತಿಳಿಮೀ ಬಿಸುಸುಯ್ಯುಸೆ ಬೆಚ್ಚನಾಗಿ ತಂ ||
ಬೆರಲಿರದಾಳಿಯತ್ತ್ರೞಿವಸೀತ್ತ್ರಸುತಾಪದೆ ಕಾಯ್ದುವೆಲ್ಲಮೀ |
ತರಳೆಗೆ ತಾಪಮೀಗುಮಿವರೊಳ್ಬಿಯುಬ್ಬರಿದೂರನೇಱಿಪರ್ || ೯೨

ವ|| ಇಂತನೇಕವಿಧಾಲಾಪಂಗಳವರೊಳ್ಸೈಗಳುತ್ತುಮಿರ್ಪ್ಪಿನಮಾಗಳ್ಗಳ
ಗಳನೆ ಕಳಿದಿಳಿವ ಬಹುಳಬಾಷ್ಪಜಳಪೂರದಿಂ ತೊಳೆದು ಕಳೆದಂತೆ ನಿದ್ರೆ ನೆಲೆ
ಗೆಟ್ಟು ತೊಲಗೆ ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂ-
ಗೆಡೆ ಕಂದರ್ಪಂ ಬೆಸಸೆ ಮಂದಾನಿಲಂ ಪುಗುತಂದೊಳಗೆ ಮೊಳೆವವಿರಹದಹನ
ಜ್ವಾಲೆಯಂ ಮೇಲೆಮೇಲೆ ಪೆರ್ಚಿಸುತ್ತದರಬಿಸುಪನಾಂತಿಳಿತರ್ಪಂತೆ ನಾಸಾವಿವ
ರದಿಂ ಸೂಸುವ ಬಿಸುಸುಯ್ಯೆದಿವರಿಯೆ ಬಳಸಿ ಬಂದು ಬಗ್ಗಿಪಕೆಂಗಣ್ಪಕ್ಕಿಗಳ್ಗೆ
ಕಾಯ್ದಂತೆ ಕಡೆಗಣ್ಕಡುಗೆಂಪುವಡೆಯೆ ಅಳವಿಗಳಿದುಕೆಳದಿಯತ್ತ್ರೞಿವತುಹಿನಜಳ
ದೊಡಗೂಡಿ ಮದನಾಗ್ನಿಯಿಂ ಪೊಗೆವಪಸಿಯಬಿಸವಿಸರದ ಪಸರಿಸಿದ ಪೊಗೆ ಸುಱಿ
ವಂತೆ ಕಾರ್ಪುರಮಾಗಿ ಕರ್ಣ್ಣಾಸೀರ್ಕ್ಕವಿತರೆ ರಾಕಾಸುಧಾಕರಂ ಮುಖರುಚಿಯಂ
ಕವರ್ದ್ದು ನಿಜರುಚಿಯನಿತ್ತಂತೆ ಸಿರಿಮೊಗಂ ಬೆಳ್ಪೇರೆ ಮನದೊಳಿರ್ಪ್ಪ ಮನದನ್ನನಂ
ಮನಸಿಜನ ನನೆಯಂಬು ನಾಂಟಿದಂತಷ್ಟಮಿಟ್ಟುಪಳಿಸೆ ಕುಚಮಧ್ಯಕ್ಕೆ ಸಾರ್ಚ್ಚಿದ
ಕರಂ ಕರಮೆಸೆಯೆ ಚಿಂತಾಭಾರಮಂ ಪೊರಲಾರದಳವಳಿವಶಿರಕಮ್ರಾಂಕೆಗೊಟ್ಟಪ
ಳೆನೆ ತೆಳ್ಗದಂಪಂ ಕೈದಳಿತ್ತ್ರಳೆಯೆ ತನುನಾಮಮುಂ ಸಾರ್ಥಕಂಮಾಳ್ಪಂತೆ ತನು
ತನುತ್ವಂಬಡೆಯೆ ಕಂತುಗ್ರಹದ ಕಾಟಕ್ಕಳ್ಕಿ ಭಸಿತಮಂ ಧರಿಸಿದಂತಲರ ಮಲಯ
ಜದ ರಜಂ ನಿಜಾಂಗದೊಳ್ಕಂಗೊಳಿಸೆಘನತಾಪಕ್ಕೆಸೆಡೆದು ಘನಕವಚಂದೊಟ್ಟಂತೆ
ಕಂದಿದಚಂದನದಣ್ಪು ತೋರೆ ಮೀರಿದತನುತಾಪದಿಂ ನೊಂದು ಬೆಂದು ಸಸಿಮೊ

ನ್ನಕ್ಕೆ ಜೆಚ್ಚಿರ್ ಬಸಂತಂಗೆ ಜೆರಲ್ಗಚ್ಚಿರ್ ಕಳಕಂಠಂಗಳ್ಕಿ ಗಿಳಿವಿಂಡಿಂಗೆ ಬಳ್ಕಿ ತಳಿ
ರ್ಗ್ಗೆ ತಲ್ಲಣಂಗೊಂಡು ಮಳಯಜಕ್ಕೆ ಮಲ್ಲಳಿಗೊಂಡು ಮಂದಾನಿಲಂಗಳದ್ರ್ದು
ಕಂದರ್ಪಂಗೆ ಪೆಳದ್ರ್ದು ಕುಸುಮವಿಸರಕ್ಕಗಿದು ಬಿಸಕಾಂಡಕ್ಕೆ ಸುಗಿದು ಪೊಂ
ಬಾಳೆಯಿಂ ಮರವಟ್ಟು ತುಂಬಿಗಳಿಂ ಕಂಗೆಟ್ಟು ಕಮಳದಿಂ ಕಂದಿ ಕುಮು
ದದಿಂ ಕುಂದಿ ತಿಳಿಗೊಳಮಂ ಬೈದು ಕಳಹಂಸಂಗೆ ಸುಯ್ದ್ದುಳಲತೆಗೆ ತಲೆವಾಗಿ
ಪುಳಿನಕ್ಕೆಮೊರುವೋಗಿ ಮಾವಂ ನೋಡದೆ ಪೂವಂ ಸೂಡದೆ ಸಖಿಯುರಂ ಪರೀ
ಕ್ಷಿಸದೆ ಮುಕುರಮಂ ನಿರೀಕ್ಷಿಸದೆ ಕುರುಳಂ ನೇವರಿಸದೆ ಶರೀರಮಂ ಸಿಂಗರಿಸದೆ
ಜಳಕಮಂ ಪಾರದೆ ತಿಳಕಕ್ಕೆ ಸೇರದೂಟಕ್ಕೆಳಸದಾಟವಂ ಬಳಸದೆ ಕಾಯ್ಪೇರಿದಕ
ನಕಪುತ್ರಿಕೆಯಂತೆ ಜೇರೊಂದುಸೌಂದರ್ಯಕ್ಕೆಪಕ್ಕಾಗಿ ನಿಜಕಾಂತನಾಟವಮಂ ಕೂಟ
ಮಂ ಮೀಂಟುಜೌವನದ ಬೇಟಗಾತ್ತಿರ್ ಕೂತ್ತುರ್ ಬಗೆದು ಬಯಸಿ ಬಗೆಯೊಳ್ಭಾ
ವಿಸುತ್ತಿರ್ದ್ದಳಾ ಪ್ರಸ್ತಾವದೊಳ್

ವೃ॥ ಗುರುಕುಚದಲ್ಲಿ ಸಾಂದ್ರತರಕುಂಕುಮಪಂಕಮನಿಟ್ಟು ಪಲ್ಲವಾ ।
ಧರೆಗಿರದಾಳಿಯಬ್ಬಿರಿದ ಮಲ್ಲಿಗೆಮೊಗ್ಗೆಯನಲ್ಲಿ ಸಾರ್ಚ್ಚೆ ತಾ ॥
ನರುಣಕೆವೆತ್ತು ಕಾಣಿಸಿತು ಕಾಮನೃಪಂ ಕಡುಗಾಸುತೆಜ್ಜಬ ।
ಲ್ಸರಲೆನೆ ಮೂರ್ಛೆಯಿಂ ಮುಗಿದಕಣ್ಮಲರಿಂದೊರಗಿರ್ದ್ದನೀರೆಯಾ ॥ ೯೩

ವ॥ ಇಂತು ಸಂಮುದಂಗುಂದಿ ಹಂಮುದಂಬೋದ ಸರ್ವಮಂಗಳೆಗೆ ಕೆಳ
ದಿಯರ್ಮದನದಹನಸಂತಾಪಪರಿಹರಣಸಮುಚಿತೋಪಚಾರಂಗೆಯ್ಯುತ್ತುಮಿರ್ದ್ದ
ರನ್ನೆವರಮಿತ್ತಲ್ ವಿಪುಳವಿಭವಂ ಮಿಗೆ ಮುಂಬಂದರಾಜಶೇಖರನರೇಂದ್ರಂಗೆ ವಿವಿ
ಧೋಪಚಾರಂಗೈದನಂತರಮಂತಃಪುರದೊಳವಳಯದ ಕೇಳೀವನಾಂತಸ್ಥಳವಿಳಸಿ
ತ ಮಣಿಮಯಪ್ರಾಸಾದಮಂ ಬಿಡುದಾಣಂಮಾಡಿ ಕೊಟ್ಟುಮಜ್ಜನಭೋಜ
ನಾದಿಸಮುಚಿತೋಪಚಾರಕ್ಕೆ ತಕ್ಕಪರಿಚಾರಕಜನಮಂ ನಿಯಾಮಿಸಿ ನಿಜರಮಣಿ
ಯೊಡನೆ ಕನಕಪೀಠಮನಳಂಕರಿಸಿ ಸಿಂಹಳೇಂದ್ರಂ ಕುಳ್ಳಿರ್ದ್ದೀಕುಮಾರಂಗೆ ನಿಜಕು
ಮಾರಿಯುಂ ಪರಿಣಯಂಗೆಯ್ಯಲ್ವೇಳ್ಕುಮೆಂದು ಸುದಿವಸಮನಂತರದೊಳ್ಸಾಂದ
ರ್ಯಶಾರದೆಯೆಂಬ ಸರ್ವಮಂಗಳೆಯ ಕೆಳದಿ ಪರಿತಂದಿರ್ವ್ವರಡಿದಾವರೆಯುಂ ಕು

ರುಳ್ಳುಂಬಿಗಳಿನೋಲಗಿಸಿ ಕರಾರವಿಂದಮುಂ ಮುಗಿದು ನಿಂದು

ವೃ|| ಎಂದು ನರೇಂದ್ರಪುತ್ರನನಭೀಕ್ಷಿಸಿದಳ್ಳವದೀಯಪುತ್ರಿಯುಂ |
ದಿಂದಮನಂಗಬಾಣಹತಿಯಿಂ ಬಗೆಗುಂದಿ ಬಳಲ್ದು ಪಾಡದೇ ||
ನೊಂದುಮನಾಡದಂಚೆಗಿಳಿಕೋಗಿಲೆಯಿಂಚರಕಳ್ಕಿ ಬಳ್ಕಿ ಪೂ |
ರ್ಣೇಂದುನಿಭಾಸ್ಯೆ ನೊಂದವಳಿವಳ್ಗೆ ಸಪುಜ್ಜುಗಮೇಂ ಮಹೀಶ್ವರಾ || ೯೪

ಕಂ|| ಅಲರೆಲರಳಿ ಗಿಳಿ ಮಧು ವಿಧು |
ನಳಿನಂ ಪುಳಿನಂ ಮರಂದಬೃಂದಂ ಕುಂದಂ ||
ಕಲಗಲಕಲಕಲ ಘನವನ |
ಮಲೆಗುಂ ಭದೀಯತನುಜೆಯುಂ ಮನುಜೇಂದ್ರಾ || ೯೫

ವೃ|| ತರುಣಿಯ ವಕ್ತ್ರನೇತ್ರಪದಪಾಣಿದರಸ್ಮಿತಕಾಂತಿಗಳ್ಗೆ ಸೋ |
ಲ್ತುರುತರಕಂಜಕೈರವನವಾಮ್ರವಿರಾಜದಶೋಕಮಲ್ಲಿಕಾ |
ಶರನಿಕರಂ ಕರಂ ಸ್ಮರನಿಷಂಗಮನೈದಿ ವಿರೋಧಭಾವನಂ |
ಸ್ಮರಣದೆ ತನ್ನಿತಂಬನಿಯನುಂಗೊಳಲುಜ್ಜುಗಿಸಿಪ್ಪುವಿದು ವಿಪಾ || ೯೬

ವ|| ಅದುಕಾರಣದಿಂ ದಶಮದಶೆಗೆ ಪಕ್ಕಾಗದಮುನ್ನಂ ತಕ್ಕುದಂ ನೆಗ ಳಲ್ವೇಳ್ಕುಮೆಂದು ನುಡಿಯುಲೊಡನರಸಂ ಮನೋರಥಕ್ಕನುಗುಣಮಾದಮಗಳ ಬಗೆಗೆ ಸಂತಸಂಬಟ್ಟು

ಕಂ|| ಈಕುವರಗೆ ಬಗೆವೊಡೆ ಮ |
ತ್ತಾಕುವರನೊಳಲ್ಲದೊಲ್ಮೆ ಸಮನಿಸುಮೆ ವಲಂ ||
ಶ್ರೀಕುಮುದಿನಿಗೊಡವ್ರಗುಮೆಕೆ |
ಲಾಕಾಂತನೊಳಲ್ಲದಾತ್ಮಹರ್ಷೋತ್ಕರ್ಷಂ || ೯೭

ವ|| ಎಂದಿನಿಯಳೊಡನೆಸಾಪರಂ ಮಿಗೆ ಪೊಗಳ್ದು ನಿಂಪಳೇಂದ್ರಂ ಸಾಂದ್ರಹರ್ಷದಿಂದಿರ್ದ್ದು ಮರುದಿವಸಮುದಯಸಮಯದೊಳೇಕಾಂತಭವನದೊಳ್ಗೆ ಸಿರದೊಳ್ಕುಳ್ಳಿರ್ದ್ದು ನಿಜಾಮಾತ್ಯನೊಡನೆ ತತ್ಪರಿಣಯಪ್ರಸಂಗಂಗೆಯ್ವುತ್ತು ಮಿಪ್ಪಾಗಳ್ ಪತಿಮೋಹಿಮಂತ್ರಿಪಂ ರಾಜಕೇಸರಿಪ್ರೇಷಿತನಪ್ಪಿಗೇಳ್ತೆಂದು ನಿಜವಿ ನಯಮುಂ ಮೆರೆದು ತನ್ನರೇಂದ್ರನನ್ಮಾನಿತನುಚಿತವಚನದಿನಿಂತೆಂದಂ

ಕಂ॥ ವರರಾಜಶೇಖರಂಗಾ |
ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ ||
ವರರಾಜಶೇಖರಂಗೀಲೆ |
ನರೇಂದ್ರ ಕುಡು ಸರ್ವಮಂಗಳೆಯನನುನಯದಿಂ || ೯೮

ವ॥ ಎಂದಮಾತಿಂಗೆ ಮನೋರಥಂ ಕೈಸಾರ್ದಂತೆ ಸಂತಸಂಬಟ್ಟು ಕೊಟ್ಟೆಂ ಕೊಟ್ಟೆನೆಂದು ಸಿಂಹಳೇಂದ್ರಂ ನುಡಿದು ಮೌಹೂರ್ತಿಕರಂ ಬರಿಸಿ ಶುಭಲಗ್ನಮಂ ಬೆಸಗೊಂಡು ಮಗಳ ಪರಿಣಯಕ್ಕೆ ತಕ್ಕಕಲ್ಯಾಣಮಂಟಪಮಂ ಕೌತುಕಾವಹಮಪ್ಪಂತೆ ಮಯಮಾಂಡವ್ಯರಂ ಪಳಿವಶಿಲ್ಪವಿದ್ಯಾವಿಶಾರದರಿಂ ರಚಿಸುತ್ತಿರ್ದನಾಗಳ್ಪತಿಪೋಜಿಮಂತ್ರಿಪನಲ್ಲಿಂದೇಳ್ತಂದು ಕುಮಾರಂಗರಿಪಿ ತದನುಜ್ಞೆಯಿಂ ಧರ್ಮವತಿಗೈತಂದು ಸತ್ಯೇಂದ್ರಂಗೆ ಪೊಡಮಟ್ಟು ನೆಗಳ್ದಕಜ್ಜಮೆಲ್ಲಮಂ ಬಿನ್ನಪಂಗೈದು ಮತ್ತಮಿಂತೆಂದಂ

ಕಂ॥ ಮಣಿಯುವಸಿಂಹಳನಗ್ಗದ |
ಮಣಿಯಂ ಮಣಿದಿತ್ತುಮಾತ್ಮಭವೆಯೆನಿಸುವಪೆ ||
ಣ್ಮಣಿಯಂ ನೃಪಕುಳಚೂಡಾ |
ಮಣಿಯುವರಾಜಂಗೆ ಮದುವೆಯಂ ಮಾಡಿದಪಂ || ೯೯

ವೃ॥ ಸಿಂಗರದಿಕ್ಕೆ ಮಂಗಳದ ಮೊಯ್ಸಿರಿ ಜಾಣ್ಮೆಯ ಗೊತ್ತು ಕಾಮಶಾ |
ಸ್ತ್ರಂಗಳ ಕೋಶಮಿಂಪಿನ ತವರ್ಮನೆ ಸೈಪಿನ ಸೀಮೆ ಚಿತ್ತಜಾ ||
ತಂಗಧಿದೇವಿ ಸತ್ಕಳೆಗಳಾಗರ ಮೇಳ್ಗೆಯಡರ್ಪು ಸಜ್ಜರಿ |
ತ್ರಂಗಳ ಬೀಡು ಶೃಂಗಾರಮತದರ್ಪಣಮಾತನ ಪುತ್ರಿ ಭೂವರಾ || ೧೦೦

ವೃ॥ ನಗೆ ಸಡೆ ಮಾಂದ್ಯಮಾಳ್ದಿರೆ ಕುರುಳ್ಕುಡಿನೋಟಮುರಾಳಭಾವದೊ |
ಳ್ಬಗೆ ಪೊಸಜೌವನಂ ಜಘನಮುಂ ತನಿವೆರ್ಚೆ ಕಡಂಪು ಕಣ್ಬೊಗರ್ ||
ಪ್ಪೆರ್ಗಿಡೆ ಲಜ್ಜೆಯುಂ ಲಲಿತಲೀಲೆ ಪೊದಳ್ದಿರೆ ಸೊಂಪುದಾಳ್ದು ಮೇ |
ಣ್ಸೊಗಯಿಸೆ ಮೈವೊಗಂ ಕುವರಿಗೊಪ್ಪಿದುದುರ್ವಿದಯೌವನೋದಯಂ ||

ಕಂ॥ ತೊಳಗುವನಗೆವೊಗಮುಜ್ಜ್ವಳ |
ಕಳಶಸ್ತನಮುಳಿಜಳಾಳಕಂ ತಳಿರ್ದುಟಿ ಕೋ ||
ಮಳತನುಲತೆ ಘನಜಘನಂ |
ಸೆಳೆನಡು ಕಳಹಂಸಗಮನವೆಸೆಯುಳ್ಗಿಸೆಗುಂ || ೧೦೨

ರತಿ ಒಗೆಗೆ ಬರ್ಪ್ಪಳಾಭಾ |
ರತಿ ನುಡಿಯಂ ಮೀರಿ ನಡೆಯಳಿಂದಿರೆ ಜತುರ ||
ಸ್ಥಿತಿಯಿಂ ಮೈವಳಿಯೊಳ್ಸಂ |
ದತಿಶಯಮೆನೆ ನಡೆವಳಾಮಹೀಭೃತ್ಸುತೆಯಾ || ೧೦೩

ವ|| ಎಂದವಳ ರೂಪಾತಿಶಯಮುಮಂ ಸಚಿವೇಂದ್ರನರೇಂದ್ರಂಗೆ ವಿಜ್ಞಾಪನಂಗೈದು ತತ್ಪರಿಣಯಕರಣಲಬ್ಧಾಭ್ಯನುಜ್ಞನಾಗಿ ಮಗುಳ್ದು ಕಮಳಾವತಿಗೇಳ್ತಂದು ಸಚಿವೇಂದ್ರಂ ನರೇಂದ್ರಪುತ್ರಂಗೆಲ್ಲಮಂ ಬಿನ್ನಪಂಗೈದಾಗಳ್

ಕಂ|| ಮೊಗಸಸಿಗೆ ಸುಪ್ರಸನ್ನತೆ |
ನೆಗಳ್ದುದು ಹೃದಯಾಬ್ಜಮಲರ್ದು* ಸಾಮೋದತೆಯಂ ||
ಮಿಗೆ ತಳೆದುದು ಚಿತ್ರಂಗಡ |
ಬಗೆವೊಡೆ ತನ್ನೃಪಕುಮಾರಕುಸುಮಾಯುಧನಾ || ೧೦೪

ವ|| ಮತ್ತಮಾಗಳ್

ವೃ|| ಶಿವಪಾದಾಂಭೋಜಮಂ ಭಕ್ತಿಯೊಳೆ ಭಜಿಸುತುಂ ಶೈವಕಾವ್ಯಂಗಳಂ ಶಾಂ|
ಭವಲೀಲಾಸತ್ಕಥಾಸಂತತಿಯನೊಸಗೆಯಿಂ ಕೇಳುತುಂ ಭವ್ಯವಿದ್ವ ||
ನ್ನಿವಹಕ್ಕಾನಂದದಿಂದಂ ವಸುವಸನಮಣಿ ಶ್ರೇಣಿಯಂ ಮಾಣದೀಯು |
ತ್ತಮಸಿರ್ದ್ದಂ ಭೂರಿಭೂಮೀಶ್ವರನತಚರಣಂ ಭಾರತೀಭಾಗಧೇಯಂ || ೧೦೫

ಸುರೇಂದ್ರಪರಿಪೂಜಿತೇ ಸುಗುಣರಾಜಿವಿಭ್ರಾಜಿತೇ |
ಕರೀಂದ್ರವದನಾಂಬಿಕೇ ಕಲಿತಪದ್ಮಪತ್ರಾಂಬಕೇ ||
ಹರೀಂದ್ರವರವಾಹನೇ ಹರಕೃತೋರುಸಮ್ಮೋಹನೇ |
ಗಿರೀಂದ್ರತನುಸಂಭವೇ ಗತಿಭವತ್ಪದಂ ಶಾಂಭವೀ || ೧೦೬

ಗದ್ಯ|| ಇದು ವಿನಮದಮರವರಮಕುಟತಟ ಘಟಿತಮಣಿಗಣಮಹಾಪ್ರಭಾಪಟಲರಿಸ್ಫುತಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾನಸರಸಜನಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸವಿಪುಳ ಪ್ರಬಂಧದೊಳ್ಸರ್ವಮಂಗಳಾದರ್ಶನ ವರ್ಣನಂ ಸಪ್ತಮಾಶ್ವಾಸಂ.

ಸಂಪೂರ್ಣಂ.

# ಅಷ್ಟಮಾಶ್ವಾಸಂ.

ಕಂ|| ಶ್ರೀಮದುಮಾಮಧುರಾಧರ |
ಸೋಮಕಳಾರಸರಸಜ್ಞರಸನಂ ಪ್ರಮಥ ||
ಸ್ತೋಮಾವೃತಕನಕಾಚಳ |
ಧಾಮಂ ಕುಡುಗೆಮಗೆ ಸೌಖ್ಯಮಂ ಶಿವಲಿಂಗಂ || ೧

ವ|| ಆಗಳಿತ್ತಲ್

ವೃ|| ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ |
ಸುತ್ತಿಡಿದಿರ್ದ್ದಮಾಣಿಕದ ಲಂಬಣಮಾಲೆ ನವೀನಚೀನದಿಂ ||
ಚಿತ್ತರವೆತ್ತಮೇಲ್ಕುಡಿ ನಿಮಿರ್ಚ್ಚಿದಬಜ್ಜರಗಂಬಮಿಂಬುಗೊಂ |
ಡುತ್ತಮಸೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್ || ೨

ಬಳಸಿರೆ ಕಟ್ಟಿಬಿಟ್ಟಪೊಸಮಲ್ಲಿಗೆಮಾಲೆ ಮರಂದಬಿಂದುಗ |
ಳ್ತುಳುಕುವಿನಂ ಮಧುವ್ರತವಿತಾನಮೊರಲ್ದೆರಗಿರ್ದ್ದೊಡಲ್ಲಿ ಸಾ ||
ಲ್ಗೊಳಿಸಿದಮೌಕ್ತಿಕಪ್ರಸರಮಂ ಹರಿನೀಲಮಣಿ ಪ್ರತಾನದೊ |
ಳ್ಕೆಳೆಗೊಳಿಸುತ್ತೆ ತೆತ್ತಿಸಿದ ಪೋಲ್ಮೆರೆದಿರ್ದ್ದುದು ಮಂಟಪಾಗ್ರದೊಳ್ || ೩

ವ|| ಮತ್ತಂ

ಕಂ|| ಹರಿನೀಲದ ಭಿತ್ತಿಯೊಳಂ |
ಬುರುಹಾನನೆ ಕೂಡೆ ಕುಂಕುಮದ ಕಾರಣೆಯುಂ ||
ವಿರಚಿಸಿದಳರರೆ ಮುಂಗಾ |
ರ್ಸಿರಿ ಸೆಳೆಮಿಂಚಂ ಪಯೋದದೊಳ್ಪುಟ್ಟಿಪವೋಲ್ || ೪

ವೃ|| ರಜನಿ ನಭಃಪ್ರದೇಶದೊಳುಡುವ್ರಜಮಂ ರಚಿಪಂತೆ ಸಾರಸೀ |
ರಜನಿ ಮರಂದಬಿಂದುತತಿಯಂ ದಳದೊಳ್ತಳಿವಂತೆ ಕಾಂತಶು ||
ಕ್ತಿಜಮಣಿಬೃಂದಮಂ ಸುರಿದು ನೀಲದ ಪಚ್ಚೆಯ ಕುಟ್ಟಿಮಂಗಳೊ |
ಳ್ನಿಜಕರದಿಂದೆ ರಂಗಮನೊಡರ್ಚ್ಚಿದಳೊರ್ವ್ವಳುದಾತ್ತಲೀಲೆಯಿಂ || ೫

ವ|| ಮತ್ತಮದು ಘನಕನಕಮಯಸ್ತಂಭಸಹಸ್ರದಗ್ರದೊಳ್ನೆಲೆಗೊಳಿಸಿ ಕಟ್ಟಿದಪೊಂಬಟ್ಟೆಯ ವಿತಾನದ ಪರಿಸರದೊಳ್ನಿರಿವಿಡಿದೆಳಲೆವಿಟ್ಟತಳಿರ್ವಟ್ಟೆಯ

ಚಿತ್ರಾವಳಿಯಮೇಲ್ಕಟ್ಟಿನ ಮುತ್ತಿನಲಂಬಣಂಗಳ ತೆತ್ತಿಸಿದಕೆಂಬರಲ್ಗಳ ಸಾಲಿ
ಡಿದು ತೊಡರ್ಚಿದಜಲ್ಲಿಗಳ ಕೀಲಿಸಿದ ಪೊನ್ನಬಿಂಗಾರಿಗಳ ಸಾಲ್ಗೊಳಿಸಿದಮಾ
ಣಿಕದಿಂಡೆಗಳ ಕೀಲ್ಗೊಳಿಸಿದನಿಮಿರ್ಚಿದಪಚ್ಚೆಯ ಕುಚ್ಚುಗಳ ತೊಡರ್ಚಿದಕು
ಸುಮಮಾಲಿಕೆಗಳ ಸೆಗಳ್ಚಿದ ಚಿತ್ರಪುತ್ರಿಕೆಗಳ ಜಗಿದ ಮಣಿದರ್ಪಣಂಗಳ ಗಗನ
ಮಂ ತುಡುಂಕುವಪತಾಕೆಗಳ ಮುಗುಳ್ಗಳೆಯುಂ ಸುರಿವಜಂತ್ರದ ಮುಗಿಲ್ಗಳ
ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯ ಸಿಂಗರಿಸಿದ ಮಕರತೋರ
ಣದ ಸಂಗಳಿಸಿದ ನನೆಯಸೂಸಕಂಗಳ ಸಸಿಗಲ್ಲ ನೆಲಗಟ್ಟಿನ ಪೊಸಬಜ್ಜರದ ವೇದಿ
ಕೆಯ ನವನೀಲದ ಭಿತ್ತಿಯ ಪವಳದ ಬಾಗಿಲ್ವಾಡದ ಗೊಮೇಧಿಕಕವಾಟದ
ಹೇಮಮಯಾರ್ಗಳಸ್ತಂಭದ ಸುತ್ತಿಕಟ್ಟಿದ ಕನಕಘಂಟೆಯ ಬಿತ್ತರಂಬಡೆವ ಮಾ
ಣಿಕ್ಯಕಲಶದ ವೈಡೂರ್ಯದಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ
ನೆರೆದ ವಿಬುಧರಿಂ ತರಂಬಿಡಿದರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ
ತಿಂತಿಣಿಗೊಳ್ವ ರಾಜಪುರುಷರಿಂ ಬಣ್ಣಿಪಸತ್ಕವೀಂದ್ರರಿಂ ಕಣ್ಣಿಟ್ಟು ಕೌತುಕಂ
ಬಡುವಕಳಾವಿದರಿಂ ಬೆಡೆಯಾಡುವೆಳವೆಣ್ಗಳಿಂ ಗುಡಿಗಟ್ಟುವ ಪೌರಜನದಿಂ ಗಳಿ
ಗೆವಟ್ಟಲನಾರೈವಜೋಯಿಸರಿಂದೊಳಗೆಪಸದನಂಗೊಂಬವಿದಗ್ಧೆಯರಿಂ ನೆರಪಿದ
ಮಂಗಳಸಾಧನಂಗಳಿಂ ಸರಸಗೀತಮಂ ಪಾಡುವ ಗಾಯಕರಿಂ ಮೊಳಗುವ
ಮಂಗಳವರೆಗಳಿಂ ತೊಳಗುವ ಮಣಿದೀಪಿಕೆಗಳಿಂ ನೋಡಿನಲಿವ ಕುಮಾರಿಯರಿಂ
ಕೂಡೆ ನಡಗರಿಪ ವಿಳಾಸಿನಿಯರಿಂ ತೆರಂಬೊಳೆವ ಕಾಂಡಪಟದಿಂ ತುರುಗಿ ಸುರಿವಕ
ರ್ಪೂರರಜದಿಂ ಪರಿಮಳಕ್ಕೆರಗುವ ಪರಮೆವರಿಗಳಿಂ ಪುರುಳಿಗೂಡಿ ಗಳಪುವಕೇಳೀ
ಶುಕಂಗಳಿಂ ಕೆದರ್ದಕುಸುಮಂಗಳಿಂ, ಪದಂಗೊಳಿಸಿದ ಪನ್ನೀರ್ಗೊಡಂಗಳಿಂ
ಮುತ್ತಿನರಂಗವಲ್ಲಿಗಳಿಂ ಬಿತ್ತರಿಸಿದ ಚಿತ್ರಂಗಳಿಂ ಪೊರಗೆಸೆಯಿಸಿದ ನವಿಲು
ಯ್ಯಾಲಿಂ ಕಿರುವೆಂಡಿರಕೇಳಿಗೆಸಮೆದಮಣಿರಾಟಾಳದಿಂದಂಬುವೆತ್ತು ವಸಂತರಾ
ಜನ ವಿಳಾಸಮಂಟಪದಂತೆ ಕುಸುಮಕಳಂಬನ ಕೇಳೀನಿಳಯದಂತೆ ಕಾಣ್ಬರ
ಕಣ್ಗೆ ಕೌತುಕಮನೊದವಿಸಿ ನುತಿಪರ ರಸನೆಗತರ್ಕ್ಯಮೆನಿಸಿ ವಸುಧೆಗೆ ಬಸವಂದ
ಮನೀವಪಸದನಂಬಡೆದ ಪೊಸಸುವರ್ಣದರೊಸಗೆ ಮಿಗೆ ಮಿಸುಗುತಿರ್ದುದಂತು
ಮಲ್ಲದೆಯುಂ

ವೃ|| ಅದು ಪರಿಶೋಭಿಸಿತ್ತು ಮಧುವಿಂ ವಿಧುವಿಂ ವಧುವಿಂ ಪರಾಗಮಂ |
ಕೆದರ್ವ*ಲಸತ್ಪ್ರಸೂನಸರದಿಂ ತರದಿಂ ನೆರೆದಿಂಬುಗೊಂಡಕೋ ||
ವಿದಕುಲದಿಂ ನರೇಂದ್ರಸುತರಿಂ ಪಿತರಿಂ ನುತರಿಂ ಕವೀಂದ್ರರಿಂ |
ಸದಮಳ ಶೈವವಿಪ್ರತತಿಯಿಂ ಶ್ರುತಿಯಿಂ ಕ್ರತುವಿಂದೆ ಮಂಟಪಂ || ೬

ಅರಲ ಸರಂಗಳಂ ಸಜೆವ ಲಾಜೆಯನೋಜೆಯೊಳಾಯ್ವ ಪುಷ್ಪಮಂ |
ಜರಿಗೆ ಪಿಮೋದಕಂದಳಿವ ಕತ್ತುರಿಸಾರಣೆಗೆಯ್ವ ಚಿತ್ರಮಂ ||
ಒರೆವ ಕದಂಬಮಂ ನೆಗಳ್ವ ನೀವಿಯನೊತ್ತುವ ಪುಷ್ಪಪುತ್ರಿಕಾ |
ವಿರಚನೆಗೆಯ್ವ ನೀರೆಯರದೇನೆಸೆದಿರ್ದ್ದರೊ ಮಂಟಪಾಗ್ರದೊಳ್ || ೭

ವ|| ಮತ್ತಮಲ್ಲಿ

ವೃ|| ಮುಡಿಮುಡಿ ತಾಗಿ ಸೂಸೆ ಮುಡಿದುಳ್ಳಲರೆಲ್ಲೆಡೆಯೊಳ್ಪಳಂಚಿ ಪೊಂ |
ಗೊಡಮೆರಡೊಂದನೊಂದೊರಸೆ ತದ್ರುಚಮೊಕ್ಕುದೆನಿಪ್ಪಭಾವಮಂ ||
ಕುಡೆ ನಿಬಿಡಪ್ರಕಂಪಿತಕುಚಚ್ಯುತಕುಂಕುಮರೇಣು ತಮ್ಮ ಕೇ |
ಸಡಿಗಳ ಕೆಂಪು ಕೆಂದಳಿರ ಸಾಲಿಡೆ ಸಂಚರಿಪರ್ಲ್ಲತಾಂಗಿಯರ್ || ೮

ವ|| ಮತ್ತಮಾಮಂಟಪಂ ಮಧುಸಮಯದಂತೆನ್ರೋಲ್ಪ್ರಮದಾಳಿ ಸುಮನೋಮನೋಜ್ಞಮುಂ ದಿವದಂತನಂತಮಣಿಕಿರಣಾಲಂಕೃತಮುಂ ಸಮುದ್ರದಂತೆ ಸದಾರವಿಭವಾನ್ವಿತಮುಂ ಸಂಧ್ಯಾಸಮಯದಂತೆ ಸಭಾನುರಾಗರಂಜಿತಮುಂ ಸತ್ಯಲೋಕದಂತೆ ಸುಧೀರಃಜಾನ್ವಿತಮುಂ ಪುರಂದರಪುರದಂತೆ ಸದಾರಂಭಾನ್ವಿತವಿಬುಧಮಿಳಿತಮುಂ ಅಯೋಧ್ಯಾನಗರದಂತೆ ಮಹಾಲಂಕಾರಾತಿಶೋಭಿತಮುಂ ತಪೋವನದಂತೆ ಸದರ್ಥವೇದ್ಯುಪಶೋಭಿತಮುಂ ಪಾಂಚಾಲಿಕೋದಂಚಿತಮಾಗಿಯುಂ ಕಲಶಜಾತಸಮನ್ವಿತಮುಂ ಸದಾಮೋದರಮಣೀವಿಲಸಿತ ಮಾಗಿಯುಮಃಜಡಾಶ್ರಯಮುಂ ಚಿತ್ರಕಾಯಾಶ್ರಯಮಾಗಿಯುಂ ಮೃಗಮದಸಮೃದ್ಧಿಭಾಜನಮುಂ ಪ್ರವಾಳದಂಡಮಂಡಿತಮಾಗಿಯುಂ ಅಸಂಜನಾತ್ಮಜಾತಮುಂ ಸಮಧುರವಿತತಾಜ್ಯೋಪಲಸಿತಮಾಗಿಯುಂ ಮುಃಕ್ತಾಳಿವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮತನುವಿಳಾಸಾಸ್ಪದಮೆನಿಸಿದುದಲ್ಲಿ

ಕಂ|| ಭಗಣಂ ಬಳಸಿರೆ ಕಿರುವೆ |
ಳ್ಮುಗಿಲೊಪ್ಪುವ ತೆರದೆ ಸುತ್ತಿ ಮುತ್ತಿನಮಣಿಸಾ ||
ಲ್ಮೊಗಯಿಸೆ ನಡುವೆಸೆದುದು ಝುಗ |
ಝುಗಿಸುತೆ ಬಜ್ಜರದ ಪಟ್ಟವಣೆ ವೇದಿಕೆಯೊಳ್ || ೯

ವ|| ಅದರ ಮುಂಗಡೆಯಲ್ಲಿ

ಕಂ|| ಬಳಸಿರೆ ಮೃಣಾಳಗುಣಮು |
ಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂ ||
ಗೊಳಿಸಿರೆ ಪಲ್ಲವತತಿ ಸಂ |
ಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದದರೊಳ್ || ೧೦

ವೃ|| ದಧಿ ಜವೆ ದೂರ್ವೆ ಲಾಜೆ ಪೊಸಸಂಕು ಸರೋರುಹತಂತು ರೋಚನಂ |
ಮಧು ಮಣಿಮಾಲೆ ಮಾದಳದಪಣ್ಕದಳೀಫಳಮಿಕ್ಷುಬಾಸಿಗಂ ||
ಸುಧೆ ಸಿರಿಗಂಪು ಕುಂಕುಮರಸಂ ಕಳಮಾಕ್ಷತೆ ರತ್ನದರ್ಪಣಂ |
ವಿಧುಮಣಿಪೂರ್ಣಕುಂಭಮೆಸೆದತ್ತು ವಿವಾಹಗೃಹಾಂತರಾಳದೊಳ್ || ೧೧

ವ|| ಇಂತಸಂತಾನಂತಗರ್ಗಂ ನುತಿಸಲಸದಳಮಾದಶೋಭಾವಹಶುಭಮಂಟಪಂ ವಧೂವರರ ಬರವಂ ಬಯಸುತ್ತಿರ್ದುದಾಸಮಯದೊಳ್ಸಿಂಹಳೇಶ್ವರನ ಬೆಸದಿಂ ಕಳಾವಿದೆಯರಾದಕೆಳದಿಯರೇಳ್ತಂದೊಸಗೆಮರುಳ್ಗೊಂಡು ಬಂದುನಿಂದು

ಕಂ|| ಒದವಿದಯೌವನ ರಾಜ್ಯಾ |
ಭ್ಯುದಯಕ್ಕಭಿಷೇಕಿಪಂತೆ ಮದನನ ಬೆಸದಿಂ ||
ಸುದತಿಯರಾಯುವತಿಗೆ ಮಾ |
ಡಿದರೊಲವಿಂ ಪರಿಮಳಾಂಬುವಿಂ ಮಜ್ಜನಮಂ || ೧೨

ಅನಂತರದಲ್ಲಿ

ಕಂ|| ಉಗುರ್ಗದಿರಳಕಾಳಿಗೆ ಮ |
ಲ್ಲಿಗೆಗುಜೆ ಬಿಡೆಬಿದಿರ್ದು ಬಿಜ್ಜಿ ಬಿಡದಾರಿಸಿ ನೋೞ್ ||
ಮುಗಮುಗಿಪಮೃಗಮದದ ರೇ |
ಣುಗಳಂ ತಳೆದಾಳಿ ಕಟ್ಟಿದಳ್ಕೋಮರ್ಗುಡಿಯಂ || ೧೩

ದಿನಲಕ್ಷ್ಮಿಗಿಂದ್ರದಿಗ್ವಧು |
ವಿನಯದೆ ಪೊಂಬಿಸಿಲನುಡಿಸಿದಂತಿರೆ ಪದ್ಮಾ ||
ನನೆಗೆ ಪೆರಳ್ವೊಂಬಟ್ಟೆಯ |
ನನುಗೊಳಿದಳವಳ ವಿಪುಳಜಘನಾಚಳದೊಳ್ || ೧೪

ಎಳನೇಸರ ಕೆಂಬೆಳಗಂ |
ತಳೆದಬ್ಜನಿಯಂತೆ ಕಾಂತೆ ಕುಂಕುಮದಣ್ಪಂ ||
ತಳೆದೆಸೆದಳ್ತನುಲತೆಯೊ |
ಳ್ತೊಳಗುವಪೊಸಪೊನ್ನಪುತ್ತಳಿಯನೇಳಿಸುತುಂ || ೧೫

ವಿರಹಿಜನದೆರ್ದೆಯನೆತ್ತ |
ಪ್ಪೊರೆದಂಗಜನಸುಗೆಸರದ ಚೆಲ್ವಂ ತಳೆದ ||
ತ್ತರರೆ ನವಯಾವಕದ್ರವ |
ಪರಿಲಿಪ್ತಂ ಚರಣತಳಮುದಬ್ಜಾನನೆಯಾ || ೧೬

ಅಡಿಯಿದು ನಳಿನದೆ ಜಯಮಂ |
ಪಡೆದುದು ನಡೆಯಿಂದಮಾಮರಾಳದ ಮದಮಂ ||
ತೊಡೆದುದೆನುತಬಳೆ ಬಿರುದಿನ |
ತೊಡರಂ ತುಡಿಪಂತೆ ತುಡಿಸಿದಳ್ನೂಪುರಮಂ || ೧೭

ಸ್ಮರಕರಿಯ ಶಿರದ ಸಿರಿಯಂ |
ಗುರುಜಘನಂ ಕಳ್ದುದೆಂದು ಕಾವನ ಬೆಸದಿಂ ||
ತರಳೆ ಮಿಗೆ ಕಟ್ಟಿದಪಳೆನೆ |
ಸುರುಚಿರಕಟಿಸೂತ್ರಮಂ ತೊಡರ್ಚಿದಳೊರ್ವಳ್ || ೧೮

ಇನಿಯನ ಮನೋಮಯೂರಂ |
ಜಿನದಿಸುಗೆ ನಿತಂಬಗಿರಿನಿತಂಬದೊಳೆನುತುಂ ||
ವನಿತೆ ಸೆಳೆಮಿಂಚನಿಟ್ಟಪ |
ಳೆನೆ ಕಾಂಚನಕಾಂಚಿಯಂ ಕರಂ ಕೈಗೈದಳ್ || ೧೯

ಪದನವಿಧುರುಚಿ ಮುಸುಂಕಿದೊ |
ಡದಿರದಿರೆಂದಬಳೆ ತುಡಿಸಪ್ರೋಲೆಳವಿಸಿಲಂ ||
ಸುದತಿಯು ಕುಚಚಕ್ರಕೆ ತುಡಿ |
ಸಿದಳೊಲವಿಂ ಮಿಸುಪಮಿಸುನಿರವಕೆಯನೊರ್ವ್ವಳ್ || ೨೦

ಸ್ತನಕನಕಕಮಳಕಳಿಕೆಗ |
ಳನೆ ತಳೆದ ಮೃಣಾಳಮೆನಿಸಿ ತೋರ್ಪ್ಪವೊಲೊರ್ವ್ವಳ್ ||
ವನಿತೆಯುರದಲ್ಲಿ ಪೊಸಮು |
ತ್ತಿನ ಘನನಕ್ಷತ್ರಮಾಲೆಯುಂ ತೆಗೆದಿಟ್ಟಳ್ ೨೧

ವ|| ಆಗಳ್

ಕಂ|| ಸ್ತನಗಿರಿಯೊಳುದಯಿಪಂ ಕಾಂ |
ತನಖಕ್ಷತ ತರುಣಚಂದ್ರನೆಂದುಡುಗಣವೊ ||
ಯ್ಯನೆ ಬಂದು ಮುನ್ನಮಿರ್ದ್ದಪು |
ದೆನೆ ತಾರಾಹಾರಮಿಂಬುವೆತ್ತುದು ಸತಿಯಾ || ೨೨

ಸಂಪಗೆಯುದುಂಡುದಂಡೆಗ |
ಲಂಪಿಂ ಮಲ್ಲಿಗೆಯ ದಂಡೆಯುಂ ಕೆಳೆಗೊಳಿಪಂ ||
ತಿಂಪಡರೆ ತೋಳ್ಗೆ ಮೌಕ್ತಿಕ |
ದಿಂಪುದಿದುರುಬಾಹುಪೂರಮಂ ಪಡೆದಿತ್ತಳ್ || ೨೩

ಇನಕರಮುಡುಗಣಮುಂ ಕ |
ಟ್ಟಿನೆಲಕ್ಕಿಳಿತಂದು ನಳಿನಕಿತ್ತಪುದೆನೆ ಕಾ |
ಮಿನಿಯ ಕರಾಗ್ರದೊಳಿಡೆ ಕಾಂ ||
ಚನವಲಯುಂ ಮೌಕ್ತಿಕಾನ್ವಿತಂ ಕಣ್ಗೊಳಿಕುಂ || ೨೪

ಚೆಂಗುಡಿಗುಡಿಯೆಡೆ ಯೆಡೆಯೊ |
ಳ್ಪಿಂಗದೆ ನೆಗೆವೇರಿ ನಿಂದಮುಣ್ಗಳಿವೆಂಬೊಂ ||
ದಂಗಮ ನೊಡಚ್ಚಿ ಮಾಣಿಕ |
ದುಂಗುರಮುಂ ನುಣ್ಬೆರಲ್ಗಳೊಳ್ಕೈಗೈದಳ್ || ೨೫

ನುತಸುಕರಪದ್ಮರಾಗಂ |
ಕ್ಷಿತಿಯೊಳ್ರವಿಯಿಂದೆ ಮೆರೆವುದುಚಿತಮುದೀಗಳ್ ||
ನುತಸುಕರಪದ್ಮರಾಗ |
ಸ್ಥಿತಿಯಿಂ ರವಿ ರಾಗವಾಂಪುದಿದು ಚಿತ್ರತರಂ || ೨೬

ಸ್ತನಕನಕಕಂಜಕೋರಕ |
ಮನಿಶಂ ವಿಕಸನಮನಾನದಿರ್ಕೆಂದು ಪಳ ||
ಚ್ಚನೆ ಮೂಡುವಿಂದುವಿಟ್ಟಪ |
ಳನೆ ಕಟ್ಟಿದಳ್ಕರೆದಾಳಿಯುಂ ಪೆರಳೊರ್ವಳ್ || ೨೭

ವನಿತೆಯ ಕಣ್ಣೈದಿಲ ಸಿರಿ |
ಗನುಕೂಲಮಿದೆಂದು ಚಂದ್ರಬಿಂಬದ್ವಯಮಂ ||
ಮನಸಿಜಜಯರಮೆ ಸಾರ್ಚಿದ |
ಳನೆ ತುಡಿಸಿದಳೆಸೆವಮುತ್ತಿನೋಲೆಗಳೆರಡಂ || ೨೮

ಹಸನರಸವೆಂಬಸುಧೆ ತೆರೆ |
ಮಸಗೆ ಸಿಡಿಲ್ದದರತೋರಪನಿ ತಳ್ತವೊಲೊ ||
ರ್ವಸಿಯುಳಿಡೆ ಮಿಸುಪಮುತ್ತಿನ |
ಪೊಸಮೂಗುತಿ ಮೆರೆದುದಾಸ್ಯದೊಳ್ಸ್ಮಿತಮುಖಿಯಾ || ೨೯

ಸುರಗಿರ್ಯ*ಯಲಾಗದೆಲೆಚಂ |
ದಿರ ಕಲೆಗಳನೆಂದು ಬಂದು ಪೊಡೆಯೊಳ್ತಲೆಯಿ |
ಟ್ಟಿರದೆರೆವಶುಕ್ರನೆನೆ ಭಾ |
ಸುರನಾಸಾಮಣಿ ವಿರಾಜಿಸಿತು ಮೊಗಸಿಯೊಳ್ || ೩೦

ಇಂದೀವರದಸಿತರಜಂ |
ಪೊಂದಿದುದೆಲರಲೆಯೆ ತುದಿಯುನೆನಿಸುತ್ತೊರ್ವಳ್ ||
ಚಂದಿರಮೊಗದೆಳೆಯುಳ ನಯು |
ನೇಂದೀವರಕಾಗಳೆಚ್ಚಿದಳ್ಕಜ್ಜಳಮಂ || ೩೧

ಮೊಗವೆಂಬಪೂರ್ಣಚಂದ್ರನೊ|
ಳೊಗೆದಳಿಕಾರ್ಧೇಂದು ಪೆತ್ತುದೆನೆ ಸಸಿಗೆರೆಯಂ ||
ಮಿಗೆಮೆರೆವಭಸಿತತಿಲಕಮ |
ಸುಗುಗೊರ್ನೆಯಿಂ ತಿದ್ದಿ ರಚಿಸಿದಳ್ಪೆರಳೊರ್ವಳ್ || ೩೨

ಅಲರ್ದಸೆವಕರ್ಣಪೂರೋ |
ತ್ಪಲದಸಿತರಜಂ ಕಳಲ್ದು ಪಸರಿಸಿತೆನೆ ಕೋ ||
ಮಲೆಯು ಕದಪಿನೊಳೆ ಬರೆದ |
ಳ್ಚಲಿಸೇಕ್ಷಣೆ ಮಿಸುಪಮಕರಿಕಾಪತ್ರಿಕೆಯಂ|| ೩೩

ವದನೋದಿತೇಂದುವಿನ ಜೆಂ |
ಗದಿರಿದಿರ್ದೇಪ್ವಂತೆ ಸಿಂದುರಂ ತಳ್ತಿರೆ ತ |
ತ್ಸುದತಿಯ ಚಿಕುರತಮಂ ಕೊ |
ಟ್ಟುದೆಸಲ್ಬಟ್ಟೆಯನಡರ್ಕೆ ಜೈತಲೆ ಮೆರೆಗುಂ || ೩೪

ರಜನೀಮುಖವಿಧುವೆನೆ ಧೃತ |
ರಜನೀಮುಖವಿಧು ಪೊದಳ್ದ ಕಾರ್ತಸ್ವರನೀ ||
ರಜಮಧುರತೆದಾಳ್ದಿರೆ ನೀ |
ರಜಮಧುರತೆಯುಳಿಸಿ ಪಾಱುದೆನೆ ಕುರುಳೆಸೆಗುಂ || ೩೫

ವೃ|| ದರಹಾಸಜ್ಯೋತ್ಸ್ನೆಯಿಂತಳ್ತೆಸೆವವದನಪೂರ್ಣೇಂದುವಂಸಾರ್ದುನೀಲಾಂ|
ಬುರುಹಂಗಳ್ಕಂಗಳಾಕಾರಮನೆ ಪಡೆದು ಜಲ್ವಾದುವೆಂದಲ್ಲಿ ತಾಮುಂ ||
ಪುರುಡಿಂದಂತಪ್ಪಜಲ್ವಂ ತಳೆಯುಳಳಿಸಿ ಕಾದಿಪ್ಪವೆಂಬಂತೆ ಶೋಭಾ ||
ಕರಕಾಂತಾಕರ್ಣದೊಳ್ಕಂಗೊಳಿಸಿದುವು ಲಸತ್ಕರ್ಣಪೂರೋತ್ಪಲಂಗಳ್|| ೩೬

ಕಂ|| ಮುಡಿ ನವಿಲಸಖ್ಯದಿಂದಂ |
ಕುಡಿಮಿಂಚಮರ್ದಪ್ಪಿ ನಿಂದುದೆನೆ ಮೆರೆವಿನವಾ ||
ಮುಡದಿಗೆ ಸೂಡಿದಳೊರ್ವ |
ಳ್ಬಿಡಂಗುವಡೆಪೆಸನ ಸಂಪಗೆಯ ಮಾಲಿಕೆಯಂ || ೩೭

ವೃ|| ಕಾರ್ಮುಗಿಲಗ್ರದೊಳ್ಪೊಳೆವ ಭಾಸ್ಕರಬಿಂಬಮನುನ್ಮಯೂಖಮಾ |
ಲೋರ್ಮಿಯನೊರ್ಮೆ ಪೋಲ್ತಿರೆ ಮಣಿವ್ರಜಮಂಡಿತವೊಂದಿ ತೋಂಡಿಲಾ ||
ಸೋರ್ಮುಡಿಯಲ್ಲಿ ನಲ್ಮೆಸುನಿದಂಡೆ ಮೃಗಾಕ್ಷಿಗೆ ತತ್ಸಖೀಜನಂ |
ಕೂರ್ಮೆಯೊಳಿಟ್ಟು ಸಿಂಗರಿಸಿ ನೀಕ್ಷಿಸಿ ತಾಳ್ದುದು ರಾಗದೇಳ್ಗೆಯಂ || ೩೮

ವ|| ಅಗಳ್

ವೃ|| ಅನುದಿನಮಿಕ್ಷುಚಾಪನೆಳವೆಂಡಿರ ಪೆರ್ಮೆಲೆವೆಟ್ಟಿನಲ್ಲಿ ನೆ |
ಟ್ಟನೆ ನೆಲೆಗೊಂಡು ತನ್ನ ತನುಧರ್ಮವನೆಲ್ಲಮನೊತ್ತಿ ನಿಷ್ಠೆಯಿಂ ||
ನೆನೆಯೆ ನಿಜಪ್ರಸನ್ನೆಯೆನಿಸಿರ್ದ್ದಧಿದೇವತೆಯಂತೆ ಕಾಂತೆಕಾ |
ಮಿನಿಯರ ಕಣ್ಗೆ ಕಾಣಿಸಿದಳುಜ್ಜ್ವಳಭೂಷಣವಾಂತು ಜೆಲ್ವಿನಿಂ || ೩೯

ವ|| ಮತ್ತಂ

ವೃ|| ಮಸೆದಲರಂಬನಂಬಕಮರೀಚಿ ವಲಂ ಗೆಲೆ ಪಾರ್ವಣೇಂದುವಂ |
ಮಿಸುಪವೊಗಂ ಕರಂ ಪಳಿಯೆ ಪಂಕಜಕೋಶಮನುತ್ಕುಚಂ ಏಡಂ ||
ಬಿಸೆ ಗಜಕುಂಭಮಂ ಜಘನಮೇಳಿಸೆ ನುಣ್ದೊಡೆ ಬಾಳೆಯಂ ಬಳುಂ |
ಕಿಸೆ ತಳಿರಂದಮಂ ತೆಗಳೆ ಮೆಲ್ಲಡಿ ಕನ್ನಿಕೆ ಕಣ್ಗೆ ತೋರಿದಳ್ || ೪೦

ಕರಪಂಕೇಜಂಗಳೇಂ ಕಂಕಣದಿನೆಸೆವುದಾಶ್ಚರ್ಯಮೇ ಪಾಣಿಶಾಖೋ |
ತ್ಕರಜಂಚದ್ವಿದ್ರುಮೌಘಂ ಮಿಸುವುದು ಪಿರಿದೇ ರತ್ನಯುಕ್ತೋರ್ಮಿಕಾಬಂ||
ಧುರಪೂರ್ವಕ್ತ್ರೇಂದುಬಿಂಬಂ ಮೆರೆವುದರಿದೆ ನಕ್ಷತ್ರಮಾಲಾವೃತಂ ತ್ವ |
ತ್ಚರಣಾಬ್ಜಂ ಹಂಸಕಾರಾಜಿತಮೆನಿಪುದಿದೇಂ ಚಿತ್ರಮೋ ಪೇಳ್ಮೃಗಾಕ್ಷೀ||೪೧

ವ|| ಎಂದು ಕಳಾರಮೆ ಪೊಗಳುತ್ತಿರೆ ಮತ್ತೊರ್ವ್ವಳ್ಮುಕುರಮುಖಿ
ಯೀಮುಖೇಂದುಗಿಂದುಬಿಂಬಮಂ ಸರಿಯಿಟ್ಟು ಪರೀಕ್ಷಿಪಳೆನೆ ಮಣಿಮುಕುರ
ಮನೆತ್ತಿ ಪಿಡಿಯಲೊಡನೆ

ಕಂ|| ಒಳಕೈದುದವಳ ಮುಖಮಂ |
ಡಳವಿಧುಮಂಡಳಮನಮಳಮಣಿಮುಕುರವಿಳಾ ||
ತಳದೊಳ್ಪೆರರಿರ್ದ್ದರವಂ |
ತಿಳಿಪುವವಿಮುಳಗ್ರಧೀನಪಾಗದರೊಳರೇ || ೪೨

ವ|| ಇಂತುಮಾಸರ್ವಮಂಗಳಾಮಹಾದೇವಿ ಪಸದನಂಬಡೆದು ಸಖೀಜನ ಮಧ್ಯದೊಳ್ಸಂಭ್ರಮದಿಸಿಪ್ಪಿನಮಿತ್ತಲ್

ವೃ|| ಸನ್ನುತಿವೆತ್ತತನ್ನೃಪಸುತಂಗೆ ವಿಳಾಸಿನಿಯರ್ವಿಳಾಸದಿಂ |
ದನ್ನವಗಂಧತೈಲಮನೆ ಪೂಸಿ ಕಚೌಘಕೆ ಸಾರ್ಚಿ ನಲ್ಮೆಯಿಂ ||
ರನ್ನದಪೀಠಮಂ ಮೊಳಗೆ ವಾದ್ಯರವಂ ವಿವಿಧೋತ್ಸವಂಗಳಿಂ |
ಪನ್ನಗವೇಣಿಯರ್ಸ್ಸುರಿದು ಸೂಸಿದರೊಲ್ದು ಸುಗಂಧವಾರಿಯಂ || ೭೩

ಕಂ|| ತರುಣಸುರತರುಗೆ ಸುರಿವಂ |
ತಿರೆ ಸುರತರುಣಿಯರಮರ್ತ್ಯನದಿಯುದಕಮನಾ ||
ತರುಣಿಯರರಸಂಗೊಳ್ಗ |
ಪ್ಪುರವೆರೆದಮಳಾಂಬುವಿಂದೆ ಜಳಕಂಗೆಯ್ದರ್ || ೭೪

ವ|| ಅನಂತರಂ

ಕಂ|| ಸಿಂಗರಿಸಿದನಖಿಳಕಳಾ |
ಸಂಗತನಲರ್ವಿಲ್ಲನಂಗಮಂ ಸಿಂಗರಿಪಂ ||
ತಿಂಗದಿರಂ ಸಾಂಗಮನೋ |
ಜಂಗೆಣೆಯೆನೆ ಮಿಸುಪಕುವರನಂ ಸಖಿಸೊರ್ವ್ವರ್ಂ || ೭೫

ವ|| ಮತ್ತಮಾಗಳ್

ವೃ|| ಪರಿಸಲ್ಶ್ರೀಕಾಂತೆ ತಾಂ ತಂದಿಳಿಪಿದಳಿಸನ್ಮಲ್ಲಿಕಾಮಾಲ್ಯಮಂ ಬಂ |
ತಿರೆ ಹಾರಂ ವಕ್ಷದೊಳ್ಪಂಕಜಕೆ ಬಳಸಿ ನಿಂದಂತೆಯುಂ ಪಂಗಳೆಂಬಂ ||
ತಿರೆ ಮುಕ್ತಾಕಂಕಣಂ ಕೈಸೊದಲೊಳುಮುಗಳಂ ಕಟ್ಟಿ ವಕ್ತ್ರಾಬ್ಜಮಿಟ್ಟಂ |
ತಿರೆ ಕರ್ಣಾಲಂಬಿ ಸುಣ್ಮುತ್ತುಗಳ ತೊಡವು ಚೆಲ್ವಾದನಾರಾಜಪುತ್ರಂ || ೭೬

ಕೊಂಕಿದಪುಬ್ಬಿನ ನೀಳ್ಪಗೆಗಣ್ಣಳೆಪೆತ್ತ ಮುಖೇಂದು ಶಂಬಿಮಂ |
ಝುಂಕಿಪಸುಗ್ಗುರಲೆತ್ತಿಳಪ್ರಸ್ತನಮಾಯತಬಾಹು ಕಾಂತಿಯಿಂ ||
ಪಂಕಜಮುಂ ಕರಂ ತೆಗಳ್ವ ಕೆಂದಳದೊಳ್ನಡು ಜಕೆಗಂಬಮುಂ |
ಮಾಂಕರಿಸುತ್ತೆ ತೋರ್ಪ್ಪತೊಡೆ ಚೆಲ್ವಿನ ರಂಜಿಕುಮಾರಕನಾ || ೭೭

|| ಮಣಿವಿಭೂಷಣವೃತ್ತಂ ||

ವೃ|| ಕಾವನಾಕುವರನಂಗದ ಜೆಲ್ವಿಕೆಗಂಡು ರಾ |
ಜೀವಲೋಜನೆಯರೆನ್ನಿರವಂ ಪಳಿಕ್ಕೈವರೆಂ ||
ದೇವಿಚಾರಿಸುತೆ ನಾಣ್ಚುತೆ ವ್ಯೈಗರೆದಿರ್ಪ್ಪನಾ |
ಪೀವರಸ್ತನಮಹೀಧರಮಧ್ಯದೊಳೀಗಳುಂ || ೪೮

ವೃ|| ಪೊದೆದನವೀನಜೀನವಸನಂ ತಳೆದುಜ್ಜ್ವಳರತ್ನಭೂಷಣಂ |
ಪದೆದು ಕಿರೀಟವಮಧ್ಯದೊಳಮುಚ್ಚಿರ್ದರತ್ನದ ಶೇಖರಂ ಸಿಜಾಂ ||
ಗದೊಳಿರದಣ್ಪುಗ್ಯೆದಸಿರಿಗಂಪು ಕರಾಬ್ಜದೊಳಾಂತಮಾತುಳಂ |
ಗದಫಳವೊಪ್ಪೆ ಬಂದವನೀಶ್ವರಪುತ್ರನುದಾತ್ತವೈಭವಂ || ೪೯

ಕಂ|| ಮಿಳಿರ್ವ*ಪತಾಕಾವಳಿ ಮೇ |
ಲಳುಕ್ಕೆಗೊಳೆ ಮೌಕ್ತಿಕಾತಪತ್ರಪ್ರಕರಂ ||
ತೊಳಗೆ ಬಳಸಿರ್ದ್ದನೃಪಮಂ |
ಡಳಿಮೊಳ್ಕರಿಯೇರಿ ನೃಪತಿ ಜರ್ಪ್ಪವಸರದೊಳ್ || ೫೦

ವ|| ಮತ್ತಂ

ಕಂ|| ದೆಸೆಯಂ ತುಂಬಿರೆ ತೂರ್ಯ |
ಪ್ರಸರಧ್ವನಿ ತೀವೆ ಬಹುಳಕಹಳಾರವಮಿ ||
ರಸೆಯಿಂಬಿಲ್ಲೆಂಬಂತಿರೆ |
ಮುಸುಂಕೆ ಕರಿತುರಗರಥಪದಾತಿಗಳಾಗಳ್ || ೫೧

ವೃ|| ಕರಕಂಜಾತಕ್ಕೆ ಪುಟ್ಟಿರ್ದ್ದಬುಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾ|
ಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಲಳೊಳ್ಗಂಪುಪಾದಾಂ ||
ಬುರುಹಪ್ರಸ್ಯಂದನೊಕ್ಕಂತಿರೆ ಸಟುರುಚಿಸಂಮಿಶ್ರಿತಾಲಕ್ತಕಂ ಬಂ |
ದರಮಂದಾನಂದದಿಂದಂದಿದಿರಸವನಿಪಾಲಾಜ್ಞೆಯಿಂ ಕಾಂತೆಯರ್ಕ್ಕಳ್ ||೫೨

ವ|| ಅಂತುಮಲ್ಲದೆಯುಂ

ವೃ|| ಸ್ತನಯುಗ್ಮಂ ಪೂರ್ಣಕುಂಭದ್ವಯಮಳಿಜಳಜೂರ್ಣಾಳಕಂ ತೋರಣಂ ಕಾಂ|
ಚನಕಾಂಚೀದಾಮಜಂಜದ್ದ್ಯುತಿಯುರಿವನಲಂ ದರ್ಪಣಂ ಗಂಡಮಬ್ಜಾ ||
ನನಮಬ್ಜಂ ಶಂಖಮುದ್ಯದ್ಗಳಮಧರದಳಂ ಬಿಂಬಮಿಂತಾಗೆ ಕಾಂತಾ |
ಜನಮಂದೈತಂದುದಿಷ್ಟಾಸ್ತ್ರೀಯುಸರಪುವಮಾಂಗಲ್ಯಮೆಂಬಂದದಿಂದಂ || ೫೩

ವಿಸರಜ್ಜ್ಯೋತ್ಸ್ನಾಂಬೂಸದೀಪೂರದೊಳೆ ಬೆರೆವಗಂಗಾಪ್ರವಾಹಂಬೊಲಿಂಬಾ |
ಗೆ ಸುಧಾಧಾಮಪ್ರಭಾಭಾಸುರಮುದು ಬಿಸಿಲೊಳ್ತೀವಿ ನೇತ್ರಾಂಶು ಮಂಜೇ||
ರಸಮುದ್ಯಸ್ನಾದವಿಭೂಮಿಯ ತಳೆದಪಿಪಂಗೆಳ್ದರಂ ಪೇಳ್ವವೋಲ್ರಂ |
ಜಿಸೆ ತತ್ಪೀನಸ್ತನಪ್ರೋಜ್ಜ್ವಘನಪಹನದೊಳ್ಪೆಂಡಿರೈತಂದರಾಗಳ್ || ೫೪

ವ|| ಮತ್ತಂ

ವೃ|| ತರಳಕಟಾಕ್ಷರೋಚಿ ಪೊಸಲಾಜೆಯ ಸೂಸೆ ಮೃದುಸ್ಮಿತಂ ಸಿತಾಂ |
ಬುರುಹದೆ ತೋರಣಂಗೊಳಿಸೆ ವಾದ್ಯರವಂಗುಡೆ ಸಿಂಜಿತಂ ಜಲ ||
ಜ್ಜರಣನಖಾಂಶು ಪಾಸೆ ಮಡಿಯಂ ಗುಡಿಗಟ್ಟೆ ಜಳಾಳಕಂ ಪಯೋ |
ಧರಕಲಶಕ್ಕೆ ಚಂದಳಿರನೊಂದಿಸೆ ಜೆಂದುಟಿಗೆಂಪು ಕಾಂತೆಯರ್ || ೫೫

ಕಂ|| ಇದಿಗೊ*ರ್ಂಡರಮುರನಾರಿಯು |
ಇದಿಗೊ*ರ್ಂಬಂತಮರರಾಜನಂ ಕಣ್ಗದಿರ್ಗಳ್ ||
ಪುದಿದಿರೆ ಸುರಕರಿಯಿರವಂ |
ಪುದಗಜಮುದು ಪೋಲೆ ಮೋಲೆ ಮೆರೆವವನಿಪನಂ || ೫೬

ವ|| ಆಗಳ್ ಸಂಭ್ರಮಂ ನೆರೆದು ನೆಲೆವನೆಯ ನೆಲೆನೆಲೆಗಳೊಳ್ನೆರೆದಿರ್ಪ್ಪ ಪಟಕೆ
ಯರ ನೀಳ್ದ ಕಡೆಗಣ್ಣ ಕದಿರ್ದುಗುರುಗಳೆಂಬರಲ ಸುಯು ಪೆಸುಳೆಯಿಂ ಸಕಳ ರಾಜ
ನಿಕರಕಿರೀಟ ಕೋಟಿಘಟಿತ ಮಣಿಗಣಾರುಣರುಚಿನಿಚಯ ತರುಣಾತಪಕರಕರನಿಕರ
ದಳಿತ ಧವಳನಳಿನಂಗಳೆಂಬಂತೆ ನಿಱುಂಪ ಸಿಂದಧವಳಾತಪತ್ರಪ್ರತಾನದಿಂ ಪಸದಿಕೆ
ಯೊಳ್ಪರಕಲಿಸಿ ಪಟ್ಟದಪಟ್ಟವರ್ಧಿನಸಿಂಧು ಕಹಳಾಮುರಜಾವಷ್ಯದಂಗಧಕ್ಕಾದಿ
ವಾದ್ಯನಿನಾದದಿಂ ಮುಂದೆ ನಂದನಿಕೆಕ್ಕೆಯುತ್ತಿ ಪೊಗಳ್ವ ವಂದಿವೃಂದದ ಕೋಲಾ
ಹಲಧ್ವಾನದಿಂ ಓಂದೆ ಗೊಂದಣಂಗೊಂಡು ತುರಂಗಮನೇರಿ ಬಸ್ತುದಂಡನಾಥ

ಮಂಡಳಿಕರ ತಂಡದಿಂಪೆಡಬಲದೊಳ್ಬೀಸುವಧವಳಚಾಮರದ ನೆಗಪುವಸೀಗುರಿಯ
ಪಿಡಿದುಬರ್ಪ್ಪನವರತ್ನದ ನಡೆತೋರಣದ ನಭಮುನಳ್ಳಿರಿದುಮಿಳಿರ್ವಪಳವಿಗೆಗಳ
ವಿಳಾಸದಿಂ ಮಿಕ್ಕು ಪೊಕ್ಕು ಕಿಕ್ಕಿರಿಗಿರಿದು ಬರ್ಪ್ಪಕರಿತುರಗರಥಪದಾತಿಗಳ
ಪೆರ್ಮ್ಮೆಯಿಂ ವಿಸ್ತರಿಸಿದ ವಸ್ತುಕಾರದ ಕನಕಪಾತ್ರೆಗಳಂ ಮಣಿಭರಣಂಗಳ್ಪುದಿ
ದಪೆಟ್ಟಿಗೆಗಳಂ ಪರಿಮಳಪ್ರಕರಪರಿಮಿಳಿತಭಾಜನಂಗಳನೋಜೆಯಿಂ ಪಿಡಿದೆಡೆವಿ
ಡದೆ ಗಡಣಂಗೊಂಡು ಬರ್ಪ್ಪಮಡದಿಯರಿಂದತಿಸಂಭ್ರಮಂ ನೆಗೆಳೆ ಸುರೇಂದ್ರವೈ
ಭವಮಂ ನರೇಂದ್ರತನೂಭವಂ ತಾಳ್ದು ಮಿತವಚನಸಮೇತಂ ಬಂದು ರಾಜಗೃ
ಹದ ಬಹಿರ್ದ್ವಾರದೇಶದೊಳ್ಗಜಸ್ಕಂಧದಿನಿಳೆಗವತರಿಸಿ ಸಚಿವಂ ಕೈಗುಡೆ ನಡೆತಂದು
ಮಹೋತ್ಸವಂ ಮಿಗೆ ಮಾಂಗಲ್ಯಮಂಟಪಮಂ ಪೊಕ್ಕು ಮಧುಪರ್ಕಮಂ ಕೈ
ಕೊಂಡು ಪುಣ್ಯಾಹಮೆಂಬಪುರೋಹಿತರವದೊಡನೆ ಭದ್ರವೇದಿಕೆಯನಲಂಕರಿಸಿಸದ್ವ
ತಿಯಿಂದಿಪ್ರರ್ಗಳ್ಸುಮುಹೂರ್ತಂ ಸಾರ್ತ್ತಂದುದೆಂದು ಸಿಂಹಳೇಂದ್ರಂಗೆ ಪುರೋ
ಹಿತಂ ಬಿನ್ನವಿಸೆ ಕೇಳ್ದು ಕುವರಿಯುಂ ಕರೆದು ತರ್ಪ್ಪುದೆಂದು ಸಚಿವಂಗೆ ಪೇಳಲೊ
ಡನವಂ ಗಳಿಲನೆ ಪೋಗಿ ಮುನ್ನಮೆ ಪಸದನಂಗೊಂಡು ಪಸೆವೆಣ್ಣೆನಿಸಿರ್ದ್ದಕ
ನ್ನೆಯುಂ ಕರೆದುತರ್ಪ್ಪಾಗಳ್

|| ರಥೋದ್ಧತವೃತ್ತಂ ||

ಕಂ|| ಸುತ್ತಿತಳ್ತಸುದತೀಜನೇಕ್ಷಣೋ |
ದಾತ್ತಕಾಂತಿ ನವದುಗ್ಧವಾರ್ಧಿಯಂ |
ಕೆತ್ತಮುರ್ವ್ವೆ ಸಿರಿಯಲ್ಲಿ ಬರ್ಪ್ಪವೋ |
ವೃತ್ತಪೀನಕುಚೆ ಬರ್ಪ್ಪಳೊಪ್ಪಿದಳ್|| ೫೭

ವೃ|| ಮಣಿಭೂಷಾಭಾಸುಭಾಸು ಪ್ರಭೆಯನರುಣಿಮಂ ಮಾಡೆ ಚಂಚತ್ಕಟಾಕ್ಷೇ|
ಕ್ಷಣರೋಚಿರ್ಮಾಲೆ ಮಿಂಚಂ ಕರೆಯೆ ಮಿಸುಪವಕ್ತ್ರಾಂಶು ದಿಗ್ಭಾಗದೊಳ್ಪೂ||
ರ್ಣಚಂದ್ರದ್ಯೋತಿಯಂ ಪೇರ್ಪ್ಪರಪೆ ಮೃದುಪದನ್ಯಾಸಕಿಂಚಿಚ್ಚಲತ್ಕಂ |
ಕಣಕಾಂಚೀಕಿಂಕಿಣೀನಿಕ್ವಣಿತಯುತೆ ವರಾಭ್ಯರ್ಣಮಂ ಸಾರ್ದ್ದಳಾಗಳ್||

ಕಂ|| ಮೊಳಗುವಭೇರಿಯ ಶಂಖದ |
ಪಳಹದ ಮದ್ದಳೆಯ ಘನ ಮೃದಂಗದ ಪಟುಕಾ |
ಹಳೆಯ ಬಹುವಿಧದವಾದ್ಯದ |
ಕಳಕಳಮೆಣ್ದೆಸೆಯನಮರ್ದದೇಂ ಮುಸುಕಿದುದೋ || ೪೯

ಸಿರಿಯ ಹರಿಯೆಡೆಯೊಳಬ್ಧಿಯೊ |
ಳಿರದೇಳ್ವಸುವರ್ಣಕಂಜರಜದೊಡವೆರೆದೊ ||
ಳ್ಪರೆಗೆ ದೊರೆಯಾದುದು ವಧೂ |
ವರರೆಸೆಯೊಳ್ವಿಸುಪವಿಸುಪಿದರೆ ಮಣಿಗೃಹದೊಳ್ || ೫೦

ಜವನಿಕೆ ಸಡುವಿರೆ ನೋಡ |
ಲ್ತವಕದಿನೋರೊರ್ವ್ವರಂ ಸಮುನ್ನತದೇಶ ||
ಕ್ಕವತರಿಸಿದರೆನೆ ಮುದದಿಂ |
ದವರಾಗಳ್ಮೆಟ್ಟಿ ನಿಂದು ಮೆಟ್ಟಕ್ಕಿಗಳಂ || ೫೧

ಪದೆದಿಟ್ಟಜ್ಜಿರ್ಗೇರಿಗೆಬೆ |
ಲ್ಲದಿನೊರ್ವ್ವರನೊರ್ವ್ವರತುಳತರಸಂಭ್ರಮದಿಂ ||
ಮುದನಕ್ಕರ್ಳ್ನಿಜನಖರುಚಿ |
ಕೆದರುತ್ತಿರೆ ಕೂಡೆ ಮಲ್ಲಿಕಾಮಂಜರಿಯಂ || ೫೨

ನಳಿನಮುಡುಗಳನೆ ಸೆರೆವಿಡಿ |
ದೆಳಸೇಸಗ್ರೀವತೆರದೆ ಕರಮದು ಮಕುಟೋ ||
ಜ್ಜ್ವಳಮಣಿಶೇಖರದೆಡೆಯೊ |
ಳ್ತಳೆದುದುಪ್ರೊಸಮುತ್ತಿನಕ್ಷತೆಯನಾವಧುವಾ || ೫೩

ಕಂ|| ಕಂದದಕುಂದದ ನನೆಯಂ |
ಕಂದರ್ಪಂ ರತಿಯ ಮುಡಿಗೆ ಸೂಸುವವೋಲ್ಪೂ ||
ಕಂದರ್ಪಂ ಸೂಸಿದನೊಲ |
ಪಿಂದನಳ ಕಟಾಕ್ಷದಲ್ಲಿ ಧವಳಾಕ್ಷತೆಯಂ || ೫೪

ವೃ॥ ಎಲರಲೆಸೆತ್ತಿ ಸೂಂಕಿ ತೊಲಗುತ್ತಿರೆ ಪುಷ್ಪಪರಾಗಪೂಗಮಾ।
ವೃ್ರಲತೆಯ ಪಲ್ಲವಂ ಮಿಸುಪಶೋಕೆಯ ನುಣ್ದಳಿರೊಂದುವಂತೆ ಜೆ॥
ಲ್ವಲರೆ ಸುವರ್ಣಕಾಂಡಪಟಮೋಸರಿಸುತ್ತಿರೆ ಸನ್ಮುಹೂರ್ತಮು।
ಜ್ಜ್ವಲಿಸೆ ವಧೂವರರ್ಕ್ಕಳ ಕರಗ್ರಹಣಂ ಬಗೆಗೊಂಡುದಾಕ್ಷಣಂ॥ ೬೫

ಕಂ॥ ತೆರೆ ಸರಿಯೆ ಸಂಜೆ ಸರಿವಂ।
ತಿರೆ ವರವದನೇಂದುವಂ ನಿರೀಕ್ಷಿಸಿ ತಾರಾ॥
ತರುಣಿ ಮುಖವಾಂಪಮಾಳ್ಕೆಯೊ।
ಳರಸಿ ಮುದಂಬೆತ್ತು ಬೀರಿದಳ್ನಿಜರುಚಿಯಂ॥ ೬೬

ವ॥ ಆಗಳ್

ವೃ॥ ನನೆಯಿಂ ಪೇರಿದ್ದ ಮಲ್ಲೀಲತೆಗಮುಮುದ್ದುಸತ್ಕೋರಕಂಬೆತ್ತಚೂತಾ।
ವನಿಜಕ್ಕಂಜೈತ್ರನಚ್ಚಾಂಬುವನೆ ಸುರಿವವೋಲ್ಪ್ರೇದವಾಬ್ಬ್ರಂದುರೋಮಾಂ॥
ಚನಮುಂ ಕೈಕೊಂಡು ನಿಂದಾತ್ಮಜೆಗವೊಡನೆ ಜಾಮಾತೃಗಂ ಸಿಂಹಳೇಂದ್ರಂ।
ಮನವೊಲ್ದೋರಂತೆ ಕೈನೀರೆರೆದನಭಿನವ ಸ್ವರ್ಣ ಕುಂಭಾಂಬುವಿಂದಂ॥ ೬೭

ಪಾಡೆ ಶೋಭನಮನಂಗನೆಯರ್ಕ್ಕಳ್ಮಂಗಳ ಪಾಠಕರುರ್ವ್ವಿ ಕೊಂ।
ಡಾಡೆ ಭೋರ್ಗ್ಗರೆದು ವಾದ್ಯನಿನಾದಂ ತೀವಿರೆ ಭೂವರಬಾಂಧವರ್॥
ನೋಡೆ ಸಂತಸದಿನಾಗಮಘೋಷಂ ಪೊಣ್ಮಿರೆ ಜಾಣ್ಮೆಗೆ ಹೋಮಮಂ।
ಮಾಡೆ ಭೂಸುರರ್ಳಾಪತಿಪುತ್ರಂ ಕೈಪಿಡಿದಂ ಕಮಳಾಕ್ಷಿಯಂ॥ ೬೮

ವ॥ ಅಲ್ಲಿಂಬಳಿಯಿಂ

ಕಂ॥ ನಡೆಮುಡಿಯೊಳೊಯ್ಯನೊಯ್ಯನೆ।
ನಡೆವವಧೂವರರದೇಂ ವಿರಾಜಿಸಿದರೊ ಬೆ॥
ಳ್ಪಡರ್ದ್ದಪುಳಿನಸ್ಥಳದೊಳಡಿ।
ಯಿಡುತೊಡನೈದುವಮರಾಳದಂಪತಿಗಳವೋಲ್॥ ೬೯

ವೃ॥ ಶ್ರುತಿವಿಹಿತಕ್ರಿಯಾಕುಶಲಶೈವಮತಾಶ್ರಿತಶಾಸ್ತ್ರವಿತ್ಪ್ವರೋ।
ಹಿತಕೃತಹೋಮಕುಂಡದೆಡೆಗೇಳ್ತರುತುಂ ಮುದವರ್ಕ್ಕಳಂಬಿಕಾ॥
ಪತಿಯುತಮಿಂತಿಸೆಂದು ಬಲವಂದು ಜಯಸ್ವನಸರ್ವವಾದ್ಯಸಂ।
ತತಿರುತಿ ತೀವೆ ಮಂಡಿಸಿದರಿಕ್ಕಿದಮೆಲ್ವಸೆಯೊಳ್ವಿಳಾಸದಿಂ॥ ೭೦

ಕಂ|| ನನೆವಾಸನೆ ಮುತ್ತಿನಪಸೆ |
ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾ ||
ವನತಾಂಗಿ ಕೆಲದೊಳಿಳಿಪಿದ |
ನನೆವಿಲ್ಲನೆ ಸುಗುಣವತಿ ಕರಂ ಮೆರೆದಿರ್ದಳ್ || ೭೧

ಮೆಲ್ಲನೆ ನಲ್ಲನನೀಕ್ಷಿಪ |
ನಲ್ಲಳ ಕಣ್ಗದಿರ್ಗಳೆಸೆದುವಾಕೆಯ ಕಡೆಗ ||
ಣ್ಣಲ್ಲಿ ನೆಲಸಿದಮನೋಜಂ |
ಮಲ್ಲಿಗೆಬಿರಿಮುಗುಳ ಸೇಸೆಯಂ ಸೂಸುವವೋಲ್ || ೭೨

ವ|| ಮತ್ತಮಲ್ಲಿ

ವೃ|| ಮಾಣಿಕವಜ್ರಮಂ ತಳೆದು ಕುಂಕುಮದಣ್ಪನಮರ್ಚಿ ಕಾಯದೊ |
ಳ್ಪೋಣನವೀನಪಾಸಮನಲಂಪಿನೊಳುಟ್ಟಿಳಮುತ್ತುದೊಟ್ಟ ಕ ||
ಲ್ಯಾಣಿಯರಾಗಳಾರತಿಯ ಪೊಂಬರಿಯಾಣಮನಾಂತು ನಿಂದು ಮೇ |
ಣ್ಕಾಣಿಸಿದರ್ಸ್ವಘೇಂದುಮತಿಸಂಜೆ ಬಹುತ್ವಮನಾಂತು ನಿಂದವೋಲ್|| ೭೩

ಮನದನುರಾಗದಿಂ ವನಿತೆ ನೋಳ್ಪುದುಮಲ್ಲಿ ವರಾನನಾಬ್ಜಮಂ |
ತನು ಪುಳಕಂಗಳಂ ತಳೆಯೆ ನೇತ್ರದೊಳುಣ್ಮೆ ಸುಖಾಶ್ರು ಮೆಲ್ಲನೆ ||
ಲ್ಲನೆ ಬೆಮರುಣ್ಮೆ ಜಾಣ್ಮೆಯೊಳವಂ ಮರೆಸುತ್ತಿರೆ ದೂರದತ್ತು ಕಂ |
ಪನಕೃತ ಕಂಕಣಸ್ವನಮುಮ್ಯಾಪಿಕಾಸಮುಮಾತ್ಮರಾಗಮಂ || ೭೪

ಆಗಳ್

ಕಂ|| ಪರಸುವಮುತ್ತೈದೆಯರಾ |
ದರಿಸುವಕುಲವೃದ್ಧರತುಳಮಂಗಳಮಂ ಬಿ ||
ತ್ತರಿಸುವವಿಬುಧರ್ನೆರೆದೊ |
ತ್ತರಿಸುವನಲ್ಪಂಬಿರಿಸಿದರಾ ಮಂಟಪದೊಳ್ || ೭೫

ಘನಕಚಘನಕುಚಭಾರದೆ |
ವನಿತೆಯುರುಕೆ ಬಾಗುವಂತೆ ಬಾಗುತೆ ಕರದಿಂ ||
ದನವದ್ಯೆಯರಂಗಳ್ಮೆ |
ತ್ತಿನ ಸೇಸೆಯುಸಿಕ್ತ ಪವಿಪವ್ಮಾನನೊಲವಂ || ೭೬

ವ|| ಆಸಮಯದೊಳಖಿಳಕಳಾವಿದೆಯರಾದಕೆಳದಿಯರುಂ ನೆರೆದನರೇಂದ್ರಪುರಂಧ್ರಿಯರುಮಭೀಕ್ಷಿಸಿ

ಕಂ|| ಶಿವೆಯ ವರದಿಂದೆ ಪುಟ್ಟಿದ |
ಕುವರಿಯಿವಳತ್ತ್ರಪ್ರಸಾದದಿಂದಲ್ತೆ ಮನೋ ||
ಭವನಸಿಳಿಕೈವಜೆಲ್ವಿನ |
ಯುವರಾಜನೊಳೊಲ್ಮೆವೆತ್ತು ಪಸೆನಿಂದಿರ್ದ್ದಳ್ || ೭೭

ವ|| ಅಂತುಮಲ್ಲದೆಯುಂ

ಕಂ|| ಇವರಂದಮಿವರವಿಭ್ರಮ |
ಮಿವರತಿಲಾವಣ್ಯಮಿವರ ಸೊಬಗಿವರಕಳಾ ||
ನಿವಹಜ್ಞತೆಯಿವರಗುಣಂ |
ವಿವರಿಸೆ ಮತ್ತಿವರೊಳಲ್ಲದನ್ಯರೊಳೊಳವೇ || ೭೮

ವ|| ಎಂದುಮಗುಳ್ದುಮಗುಳ್ದೀಕ್ಷಿಸಿ ಪೊಗಳುತ್ತುಮಿರೆ

ಕಂ|| ಸರಿಯಿಟ್ಟು ನೋಳ್ಪವೋಲ್ಪಂ |
ಕರುಹಮನವಳಡಿಗೆ ತನ್ನ ಕರಮಿಡುತರಸಂ ||
ಸರಸಂ ಮಿಗೆ ಮೆಟ್ಟಿಸಿದಂ |
ಪರಹಾಸಂ ಮೊಳೆಯೆ ಸಪ್ತಪದಿಗಳನಾಗಳ್ || ೭೯

ವೃ|| ಮಂಗಳದುತ್ಸವಂ ನೆಗಳೆ ಸಿಂಹಳಭೂಪತಿ ರೋಹಣಾದ್ರಿಯುಂ |
ತಾಂ ಗೆಲೆವಂದು ಕಾನಕನಗೇಂದ್ರದವೋಲ್ಸಲೆ ಸಂದು ಸಿಂದರ ||
ತ್ನಂಗಳ ರಾಶಿಯುಂ ಮಿಸುಪಪೊಂಗಳ ರಾಶಿಯನಲ್ಲಿ ದೇವಭೂ |
ಜಂಗಳ ಪೆರ್ಮೆ ಕೀಳ್ಪಡೆ ಬುಧಪ್ರಕರಕ್ಕವಸಿತ್ತಸಕ್ತಿಯಿಂ || ೮೦

ವ|| ಆಗಳಾ ಸಿಂಹಳೇಂದ್ರನರ್ಧಾಂಗಿ ಕಳಾಧರೆ ಮಗಳುಮನಳಿಯನುಮನಭೀಕ್ಷಿಸಿ ಸಂತಸಂಬಟ್ಟು

ಕಂ|| ಹಿಮಮೃಗಮದಕುಂಕುಮಕ |
ರ್ದಮಸುಮನೋಮಾಲ್ಯವೀಟಿಕಾಭೂಷಣವ್ರಂ ||
ದಮನಸಮಳಾಂಜರಮಂ ಸ್ವಪ |
ರಮಣೀಸಮುದಯಕೆ ಪೊನ್ನಪಾತ್ರೆಯೊಳಿತ್ತಳ್ || ೮೧

ವ|| ಇಂತು ಯಥೋಚಿತವಿಧಾನಂ ಪರಿಣಯಂ ಬಡೆದನಂತರಮನೂ
ನಸ್ನೇಹರಸಭರಿತಾಂತಃಕರಣಂ ಕುಮಾರಕುಸುಮಾಯುಧಂ ಸಸಂಭ್ರಮಂ
ಸಜ್ಜುಗೆಯ್ದು ಸೆಜ್ಜೆಗೃಹದ ಪಜ್ಜಳಿಪಪರಿಮಳಪರಿಮಿಳಿತಕುಸುಮಸರವಿಸರಪರಿ
ವೃತ ಕನಕಪರ್ಯಂಕತಳದ ಮೃದುಳಧವಳತಳ್ಪಸ್ಥಳದೊಳಗ್ಗಡಿಯಿಂ ನಲ್ಲಳ ಬರ
ವಂ ಬಯಸುತ್ತೆ ಕುಳ್ಳಿರ್ದಾಪ್ರಸ್ತಾವದಲ್ಲಿ

ವೃ|| ವದನೇಂದುದ್ಯುತಿಪೊಣ್ಮೆ ಸೋಮ್ಮುರ್ಡಿಯ ಕಂಪಿಂಗೆಯ್ದೆ ಭೃಂಗಾಳಿ ಪಿಂ|
ಗಡೆ ಪೀನಸ್ತನಮುಂ ಕದಕ್ಕದಿಸೆ ಮಧ್ಯಂ ಬಳ್ಕೆ ಮಂಜೀರನಾ ||
ದದೊಳೊಂದಾಗಿ ಪಳಂಚೆ ಕಾಂಚಿನಿನದಂ ಸಾರ್ತಂದಳಿಂದೀವರಾ |
ಕ್ಷಿ ದರಸ್ಮೇರಮರೀಚಿ ಸೂಸೆ ಸುಧೆಯಂ ತನ್ಮಂದಿರಪ್ರಾಂತಮಂ || ೮೨

ವ|| ಇಂತೀಳ್ತಂದಸರ್ವಮಂಗಳಾದೇವಿಯೊಡನೆ ಕಳಾವಿದೆಯರಾದಕೆಳ
ದಿಯರೊಡನೇಳ್ತಂದತಿಶಯಪ್ರಮೋದದಿನಾಕುಮರಿಯನಾಯುವರಾಜನ ಕೆಲದೊ
ಳ್ಕುಳ್ಳಿರಿಸಿ ಸರಸಾಲೋಕನದಿನವಲೋಕಿಸಿ ತಂಗಿ ನಲ್ಲಂಗೆ ತಾಂಬೂಲಂಗುಡು
ವುದೆಂದು ಪೇಳ್ದೊಂದೊಂದುನೆವದಿನೆಲ್ಲರ್ಮೆಲ್ಲನೆ ಕೊಲಗಲೊಡನೆ ಜಲ್ಲದಿಂ
ನಲ್ಲಳ ಲಜ್ಜಾನತಮಾದನಗೆಮೊಗಮಂ ಸಂದಣಿಸಕಟಾಕ್ಷದಿನಡರೆ ನೋಡಿ ಕಾಮ
ಕೇಳಿಗೆ ಮನಂದಂದೊಯ್ಯನೆ ಕಯ್ಯಂ ಪಿಡಿದು ರಯ್ಯನೆ ಮೆಯ್ಯಂ ಸೋಂಕಿ
ಕುರುಳಂ ನೇವರಿಸಿ ಕರಾಂಗುಲಿಯಂ ಚಿಟುಂಕಿಸಿ ನೇಮದಾಣಮನಂಟಿ ಗಲ್ಲಮಂ
ಪಿಡಿದಲುಂಗಿ ಬಿಂಬಾಧರಮಂ ಚುಂಬಿಸಿ ಲಜ್ಜೆ ಪಜ್ಜೆದೆಗೆವಂತೆ ಜಾಗ್ರೆಯಂ
ನೆರೆದು ಮದನೋದ್ರೇಕಂ ಮನದೊಳೊದವಿದಪದಮಂ ಮೊಳೆವಪುಳಕದಿಂ ಮೊಗ
ದಪ್ಪೈಸ್ಸದಿಂ ನಗೆವಜೆಮರಿಂ ಮೋಲ್ಸರಿವಪಾಂಗದಿಂ ತಿಳಿದು ಮೋಹಮಸಿದು ಮು
ದ್ದಿಸಿ ತವಕವಸಿದು ತಕ್ಕಿಸಿ ಅಲ್ಲೆಯುಸಿದು ಬುಲ್ಲವಿಸಿ ಸೋಲವಸಿದು ಸೊರ್ಕ್
ಗೊಳಿಸಿ ಕಾಲವಸಿದು ಕಳೆಯೇರಿಸಿ ಕಳಾನಿಳಯಂ ಕಡಂಗಿ ಸುಸಿಲ ಜಕ್ಕವಕ್ಕಿ
ಯಂತೆ ಸುಸಿಲೆಸಗಲುಜ್ಜುಗಿಸಿರ್ಪನ್ನೆಗಂ

ವೃ|| ಬಳಿವರೆ ಪೊರ್ದೆ ಸೋಂಕಲೊಡನಂಗಮನೊಂದಿನಿಸಿತ್ತು ತಕ್ಕೆಗಂ |
ಪಿಳಿಸಿದೆ ತೋಳ್ಗಳಂ ನಗಮೆ ನಲ್ಲನೆ ಚುಂಬಿಸಲೊಂದೆ ವಕ್ತ್ರಮಂ ||
ಪಳಮನಸುಜ್ಜ್ಜಿ ಸಾದರಮೆ ಕೂಡಲೊಡರ್ಚಿರೆ ಲಜ್ಜೆಯೊಕ್ಕು ನೈ |
ಪಳಿಯೊಳೆ ಸಂದು ಮೈಗುಡುತವಳ್ಗಿದಳ್ಮನಮಂ ಮನೋಜ್ಞನಾ || ೮೩

ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ ನೀವೀಭರಂ ಜಾ |
ರೆ ತದೀಯಾಂಗಕ್ಕಪಾಂಗದ್ಯುತಿವಸನಮನಂತಿತ್ತು ಲುಪ್ತಾಂಗರಾಗೋ ||
ನ್ನತವಕ್ಷೋಜಕ್ಕೆ ಹಸ್ತಾರುಣರುಚಿಘುಸೃಣಕ್ಷೋದಮಂ ಸಾರ್ಚ್ಚಿಲೀಲಾ |
ಚ್ಯುತಹಾರಗ್ರೀವೆಯೊಳ್ಸ್ವೇದಲವಸರಮನಿತ್ತೊಲ್ದು ಕೂಡುತ್ತುಮಿರ್ದ್ದಂ|| ೮೪

ಒಳಪ್ಪುಗುವಂತೆ ಬಟ್ಟಮೊಲೆಗಳ್ನಿಜವಕ್ಷದೊಳಾಳೆ ಸೊರ್ಕ್ಕಿ ಸಂ |
ಗಳಿಸಿರೆ ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಿಡೆ ಜಾಣ್ಮೆದೋರೆ ಜೆಂ ||
ದಳಿ*ರ್ದುಟಿಯುಂ ಕರ್ದುಂಕಿ ಕಳೆವೆರ್ಚ್ಚಿಸಿ ಮುದ್ದಿಸಿ ಲಲ್ಲೆಗೈದು ತ |
ನ್ನಳ ಮನಮಂ ಮರುಳ್ಚಿದನದೇಂ ರತಕೋವಿದನೋ ಕುಮಾರಕಂ || ೮೫

ಮನದನುರಾಗಮುಳ್ತರದ ಕಾತುರಮಂ ಪಡೆದೀಯೆ ಸೋಂಕಿನಿಂ |
ಜನಿಯಿಪಸೊರ್ಕ್ಕಿ ಸೋಲಮನಮರ್ಚ್ಚಿ ಸುಧಾಧರದಿಂಪು ಕಂಠನಿ ||
ಸ್ವನಮನೊಡರ್ಚ್ಚಿ ತಳ್ಕೆ ತನಿನೇಹಮನುರ್ವ್ವಿಸೆ ತಳ್ತಕೂಟದೊಂ |
ದಿಃದರಿವಂ ಕಳಲ್ಚಿ ನೆರೆದರ್ಪ್ಪರಮೋತ್ಸವದಿಂ ವಧೂವರರ್ || ೮೬

ವ|| ಅಂತುಮಲ್ಲದೆಯುಂ

ವೃ|| ಬೆರಸುತ್ತುಂ ಬಿಗಿಯಪ್ಪಿ ಕೂಡುವೆಡೆಯೊಳ್ಕಂಠೋತ್ಥಿತಧ್ವಾನಮುಂ |
ಕರಸಂತಾಡನಮುಂ ಕಚಗ್ರಹಣಮುಂ ದಂತಕ್ಷತಂಗೆಯ್ವುದುಂ ||
ಕರಜಾತಾಹತಿಯುಂ ಪೊದಲ್ದರತದೊಳ್ಸೊಕ್ಕೇರಿ ಕಣ್ಮುಚ್ಚಿ ನಿ |
ರ್ಭರದಿಂ ಮೈಮರಪೊಂದದಂತೆಸಗುವಂತೋರೊರ್ವ್ವರೊಳ್ತೋರಿದರ್|| ೮೭

ಅಳಿಪಿ ನಿರೀಕ್ಷಿಪಾಸೆವಡುತುಂ ಬಿಗಿಯಪ್ಪುವ ನೇಹದಿಂ ಪದಂ |
ಗಳಿಯಿಪೆ ಪಾಯ್ದು ಚುಂಬಿಪ ಕಡಂಗಿ ಕರಾಗ್ರದೆ ಪೊಯ್ವ ಚೇಟಮು ||
ಗ್ಗಳಿಸೆ ನಖಾಗ್ರದಿಂದಿರಿವ ತೋಳ್ತೊಡೆ ತಳ್ತಿನೆ ಕೂಡುವಳ್ತಿವ |
ಟ್ಟಳಸುಮನೇಕಭಾವರಸಮೊಪ್ಪಿದುದಾಕೆಗೆ ಕಂತುಕೇಳಿಯೊಳ್ || ೮೮

ಕಂ|| ಮಣಿತಂ ತನುವೊಳ್ಗಳದೊ |
ಳ್ಮಣಿತಂ ನೆಗಳ್ದಿರೆ ವಿಳಾಸಮುಮದೊರ್ಪ್ಪಿರೆ ಪೆ ||
ಣ್ಮಣಿ ತನ್ನವರತಿಚಿಂತಾ |
ಮಣಿತನ್ನರಪತಿಗೆ ತನ್ನಪಂಜಿಸೆ ನೆರೆದಳ್ || ೮೯

ವೃ|| ಗಳನಾದಂ ನೆರವಾಗೆ ದೈನ್ಯನಿನದಂ ಕೈಗಣ್ಮೆ ಮಂದಸ್ಮಿತೋ |
ಜ್ಜ್ವಳವಕ್ತ್ರಂ ಪೊಸತಾಗೆ ನೇತ್ರಯುಗಳಂ ಬೆಂಡೇಳೆ ರೋಮಾಂಚಕಂ ||
ಚುಳಿತಾಂಗಂ ಬೆಮರೇರೆ ಸುಯ್ಯಿಮಿರೆ ಲೀಲಾವೇಗಮಿಂಬಾಗೆ ಮಂ |
ಜುಳಸೌಖ್ಯಂ ತನಿವೆರ್ಚೆ ಮರ್ಚೆ ಸೆರೆದಕ್ಕರ್ದಲ್ಮೆಯಿಂ ಕಾದಲರ್ || ೯೦

ವ|| ಮತ್ತಂ

ವೃ|| ಮುನಿಸೆಡೆಗೊಳ್ಳದಿರ್ಪ ಕಲಹಂ ಕಿನಿಸಿಲ್ಲದಪುಬ್ಬುಗಂಟು ನೆ |
ಟ್ಟನೆ ಬಹುಭಾರಮಂ ತಳೆಯದಾಡಬಳಲ್ಕೆ ಪೊದಳ್ದ ನಿದ್ರೆಯೊಂ ||
ದಿನಿಸಿರದುರ್ಪಿ ಪಾಯ್ವ ನಿಡುಸುಯ್ತಣಿವಿಲ್ಲದ ತೃಪ್ತಿ ಭಂಗಮುಂ |
ಟೆನಿಸದ ಸೋಲಮಂಜಿಕೆಯನಾನದ ಕಂಪನುಳುಂಬವೋಪರೊಳ್ || ೯೧

ಚುಂಬನದಿಂಪು ಸೋರ್ಮುಡಿಯ ಕಂಪು ಮೃದೂಕ್ತಿಯ ಲಂಪು ತಳ್ಕೆ ಚೆ |
ಲ್ವಂಬಿವು ಪೆರ್ಚೆ ಸೌಖ್ಯಮನೆ ಸಾರ್ಚೆ ನಿಜಾಕ್ಷಕಮರ್ಚೆ ತೋರೆ ಜೇ ||
ಟಂ ಬಿಡದುರ್ವೆ ಬಿನ್ನಣಮೆ ಪರ್ವೆ ಸುಸಿಲ್ತನಿಗೊರ್ವೆ ಭೂಮನೋ |
ಜಂ ಬಗೆದಂದು ಕಾಂತೆಯೊಡಸಂದು ಮುದಂಬಡೆದೊಂದು ತೋರ್ಪುದಂ || ೯೨

ವ|| ಇಂತು ಸಂತಸಂ ಮಿಗೆ ಸಮಂತು ಕಂತುಸುಖಸಾಮ್ರಾಜ್ಯಮನನುಭವಿಪ ದಂಪತಿಗಳ್ಗೆ ಮಾಸಂಗಳ್ದಿವಸಂಗಳಾಗಿ ದಿವಸಂಗಳ್ನಿಮಿಷಂಗಳಾಗಿ ಸಲುತ್ತುಮಿರೆಯಿರೆ .

ವೃ|| ಅಪರಾಶಾಕುಂಭಿಕುಂಭತ್ಕರಟತಟಗಳದ್ದಾನಸಂಭ್ರಾಂತಭೃಂಗಾ |
ಘಪಯೋದಾಲಂಬಿ ಜೃಂಭಜ್ಜಲಧಿಜಲಲವಾಶ್ಲಿಷ್ಟಮುಷ್ಣದ್ರುಕೃತ ||
ಕ್ಯಪರಾಗಶ್ರೇಣಿಚಂಚಜ್ಜಪಲಮುಪಲಸತ್ತಾಳಸಂಘೃಷ್ಟಭಾಂಡಾ |
ಘಪಟುಧ್ವಾನಾಬ್ದರಾವಂ ಸುಳಿದುದು ಪವನಂ ಕಾರಪೆಂಬಂತಳುಂಬಂ || ೯೩

ವ|| ಅಗಳ್

ವೃ|| ಅಲರ್ದುದು ಕಾಡಮಲ್ಲಿಗೆ ಮುಗುಳ್ತುದು ಜಾಜಿ ಕದಂಬಕುಟ್ಮಲಂ |
ಬಲಿದುದು ಪೂಸೊಡಂಬೆಯುನೊಡರ್ಚಿತು ಕೇತಕಿ ಕೇಕೆ ನರ್ತಿಸಿಂ ||
ಸಲಿಮುದು ಹಂಸೆವಾರಲುಸುಗೆಯ್ದುದು ಚಾದಗೆ ರಾಗಮಾಂತುದು |
ಜ್ಜ್ವಲತೆಯನಪ್ಪುಕೈದುದು ವಿಯೋಗಿಗಳಂಗದೊಳಂಗಜಾನಲಂ || ೯೪

ಸುಳಿಗೊಳುತೆತ್ತಿ ಸುಟ್ಟುರೆ ಧರಾರಜಮಂ ಕೆಳಗೊಂದೆದಂಡದಂ ।
ತುಳಿದತತಾತಪಂ ಬಳಸಿ ಪಲ್ಲವದಂತಿರೆ ಬಾನಮಧ್ಯದೊಳ್ ॥
ತೊಳಗುವಭಾನು ಭರ್ಮಕಳಶಂಬೊಲದೊಪ್ಪಿರೆ ಬಟ್ಟಬಲ್ಮುಗಿ ।
ಲ್ತಳೆದುದು ಕಾಲಭೂಪತಿಯ ಪೀಲಿಯಸತ್ತಿಗೆಯೊಂದುಲೀಲೆಯಂ ॥ ೯೫

ಗಗನ ಶ್ರೀ ಯುಟ್ಟಸೀಲಾಂಬರಮೊ ರವಿಸುಧಾಧಾಮಬಿಂಬಂಗಳಂ ಮು।
ತ್ತಿಗೆಯಂ ಮಾಳ್ಪಂಧಕಾರವ್ರಜವೊ ಸುರನದೀಸ್ನಾತದೇವಾಂಗನಾವೃ ॥
ಷ್ಟಿಗಳದ್ವಾರ್ಬಿಂದು ಚಂಚತ್ಕಚನಿಚಯಮೊ ಜಂಭಾರಿಕುಂಭೀಂದ್ರದಾನಾಂ।
ಬುಗೆ ಪಾಯ್ವಿಂದಿದಿಂರಶ್ರೇಣಿಯೊ ಎನೆ ನೆರೆದತ್ತಭ್ರನೀಲಾಭ್ರಜಾಲಂ॥ ೯೬

ಕಂ॥ ಧೃತಚಂಚಲಮತಿಚಪಲ ।
ಸ್ಥಿತಿ ಜಡಭರಿತಂ ಕಟುಸ್ವರಂ ಬರೆ ಮೇಘಂ ॥
ನುತಹಂಸಂ ತಳರ್ದುದು* ಮಲಿ ।
ನೆತರಂ ಬರೆ ಶುಚಿಸುವೃತ್ತನೇನಿರ್ದ್ದಪನೇ ॥ ೯೭

ಗರಿ ನೆನೆಯದ ಕಿರುವರಿಗಳ ।
ನಿರುಂಕಿ ಪಕ್ಷದೊಳೆ ಪಾರಲಾರದೆ ಪಿರಿದುಂ ॥
ಮರುಗುವಮರಾಳಿಗಳನು ।
ಙ್ಗರಿಪ್ಪೊತ್ತೆಪಿಡಿದಪೆ ತಳರ್ದುವಂಚೆಗಳಾಗಳ್ ॥ ೯೮

ವೃ॥ ರವಿಚಂದ್ರಪ್ರಚುರಪ್ರಭಾಪ್ರಚಯಮಂ ಮೇಘಂ ಪುಸುಂಕುತ್ತೆ ಕಾ।
ಪ್ಸ್ಯರ್ಗವಿಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀರಿತ್ತುದಗ್ರಸ್ಫುರ ॥
ತ್ಕವಿಕಾಪ್ಯಪ್ರಕಟಪ್ರಭಾವಮನದಂ ಕಿಲ್ಕಬ್ಬಿಗಂ ಗುಪ್ತಿಗೈ ।
ದಪರಾತ್ರೀಯಕೃತಿಪ್ರಭಾವತೆಯನಾದಂ ತೋರ್ಪ್ಪವೋಲಾದ್ಧತ್ರಿಯೊಳ್ ॥ ೯೯

ಘನಕರಿಗಿಕ್ಕಿದಂಕುಶಮಿದಬ್ದಮುಕುಂದನಸಂದಕಾಯುಧಂ ।
ಪಸಪೆ ತವನಾಂಕಕಾನನದ ಕಾನಕಪಲ್ಲರಿ ವಾರಿಭೃದ್ಘಸಾಂ ॥
ಜನನಗದಾನಪಾವಕಶಿಖಾತತಿ ಮೇಘಮಹಾಂಧಕಾಟ್ಯದ್ಯೈ ।
ತ್ಕಸ ಖರದಂಷ್ಟ್ರಮುಳ್ಕಿದುದು ಮಿಂಚುಮುಗಿಲ್ಮುಗುಳಂಬನೀಕ್ಷಣಂ॥ ೧೦೦

ಕಂ|| ಅಂಬುಜರಿಪುಬಿಂಬದ ಬೆಳ |
ಗಂ ಬಂಧಿಸಿ ಮಬ್ಬುರ್ವಿದಿ ಮಿಂಚುತೆ ಪಥದೊಳ್ ||
ತಾಂಬರಿಸಿ ನೆರಯಿಪಾಕಾ |
ದಂಬನಿ ಪಾಣ್ಬೆಯರ ಕೆಳದಿಯಾಗಲ್ವೇಳ್ಕುಂ || ೧೦೧

ವೃ|| ಅಡಿಗಡಿಗುರ್ವಿ ಮಿಂಚುವೆಳೆಮಿಂಚು ಮರುದ್ಭಟನೆತ್ತಿ ಬೇಗದಿಂ |
ಪೊಡೆವಸುವರ್ಣಕೋಣಮೆನೆ ತಳ್ತಿರೆ ತಾನೊಗೆದತ್ತು ಕಾಮುರ್ಗಿ ||
ಲ್ಗಡಣಮೆನಿಪ್ಪದಂತಿತತಿಯುಗ್ರದಡಿಂಡಿಮನಾದದಂತೆ ಪೇ |
ರ್ಗುಡುಗು ಸಿದಾಘನಂ ತಗುಳಲ್ಕೆದಿದಸೀರದ ಕಾಲರಾಜನಾ || ೧೦೨

ವ|| ಅಂತುಮಲ್ಲದೆಯುಂ

ವೃ|| ಅಂಬುಧಿಸಂಗಸಂಜನಿತಶಂಬರಸಿರ್ಭರಗರ್ಭೆ ಬಂದು ಕಾ |
ದಂಬನಿ ತತ್ಪ್ರಸೂತಿಸಮಯಂ ಬರೆ ಪುಷ್ಕರಗೇಹದೊಳ್ಕರಾ ||
ಲಂಬಿತಹೇಮರಜ್ಜುವೆನೆ ಮಿಂಚಿರೆ ಮುಂಚಿ ನರಲ್ವರಾವದಂ |
ತೇಂಬಗೆಗೊಂಡುದೋ ಗುಡುಗು ಸೂತಿಮರುತ್ಕೃತಕೋದಬೋಗ್ಗಿಯಿಂ ೧೦೩

ವಂಶಸ್ಥವೃತ್ತಂ||

ವೃ|| ಸ್ಫುರದ್ಧನುಶ್ರೀಕರಜಂಚಲೇಕ್ಷಣಂ |
ಶರಧ್ಯುಪಾತ್ತೋರುಶರಂ ಘನಸ್ವನಂ ||
ಹರಿಪ್ರಭಂ ನೀರದರಾಜನಟ್ಟಿದಂ |
ಧರಾತಿಸಂತಾಪದನಂ ಸಿದಾಘನಂ || ೧೦೪

ಕಂ|| ಗರಿ ಮೂಡಿದಂತೆ ಕೆಲದೊ |
ಳ್ಕಿರುಮುಗಿಲಿರೆ ಜಲದಸೀಲಗಿರಿ ನೆಗೆಯೆ ಕರು ||
ತ್ತೆರಗಿದವಜ್ರಿಯ ವಜ್ರದ |
ಬಿರುವೊಯ್ಲ ರವಕ್ಕೆ ಬರಸಿಡಿಲ್ಲಬಕ್ಕರ್ಗಂ || ೧೦೫

ವೃ|| ವರುಣಾಶಾಬ್ಧಿಪಯಃಪ್ರಪಾನಪರಿತಕ್ತಸ್ನಾನಂ ಪಸಿಧೂರ್ತಥಾ |
ತ್ರಿರಜಃಪ್ರೋತ್ಪಿಹಿತಾಂಗನುದ್ಧೃತಘನಕಾಲ್ಮಬಪ್ರಜಂ ಧೂಧರೋ ||
ತ್ಕರಸಂಚಾರಿಕದಂಬಸನ್ಮಧುಮದಾಂಭೋವಾಹಮಂಭೋದಿಂ |
ಧುರಮಂ ಪಾಯ್ಸು ಪಳಂಚಿ ಪೊಯ್ಯುದು ರಟಜ್ಜಂಘಾನುರುತ್ಸಂಜರಂ ||

ವೃ॥ ಗಜದಜಿನಂ ಮುಗಿಲ್ಗಜರಿ ಗರ್ಜಿಪರುಂಡಕದಂಬಘೋಷಮು |
ಭ್ರುಜಪಟುಘೋಷಮುತ್ಕಟತಟಿತ್ತತಿಯುತ್ಫಣಿತಾಹಿಶೀರ್ಷರ ||
ತ್ನಜಘೃಣಿಮಾಲೆ ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ |
ಗಜರಿಪುವೋಲ್ಘನಾಗಮಮದೇಂ ಬಗೆಗೊಂಡುದೊ ನೋಟಕರ್ಕ್ಗಳಾ ೧೦೭

ಕಂ॥ ಕಡಲವಿಷಮೀಂಟಿದೊಡೆ ತ |
ನ್ನೊಡಲಂ ಬಿಡದಡರೆ ಕರ್ಪುವೆತ್ತಂಗವಿನಾ ||
ಗಡೆ ಜೀವನಮುಂ ಬಿಟ್ಟುದು |
ಜಡದಂ ಪ್ರ್ಯಡನುಳಿದನೆಂದೊಡುಳಿದರ್ಗ್ಗಳವೇ || ೧೦೮

ನೆರೆದು ಘನಘನಮದೇಭೋ |
ತ್ಕರಮೀಂಟಿ ಮರುತ್ತರಂಗಿಣೀಜಳಮಂ ಪ್ರೂ ||
ತ್ಕರಿಸೆ ಸಿಡಿದಿಳಿವಕಣಗಣ |
ದಿರವೆನಿಸಿದುದಂರೆ ಸುರಿವಪೆರ್ಮ್ಮಳೆ ನಭದಿಂ || ೧೦೯

ಸುರಚಾಪಚಂಪಕಸ್ರುಜ |
ಕುರವಣೆಸುತ್ತಸಿತಜಳದಮದ ಮಧುಪಸಮು ||
ತ್ಕರಮೆರಗಿದಂತೆ ಮೆರೆದುದು |
ಪರಿಕಿಸದಾತ್ಮೀಯಜೀವನವ್ಯಯಭಯಮಂ || ೧೧೦

ನುಂಗೆ ರವಿರುಚಿಯನದು ತ |
ನ್ನಂಗುಳ್ಸುಪೆ ಶಿತಿಜಲದಪಿಧುಂತುದನುಗುಳ್ವ ||
ಪಾಂಗನನುಕರಿಸಿ ಮಿಂಚುತ |
ಡಂಗುವಸೆಳೆಮಿಂಚದೇಂ ಮನಂಗೊಳಿಸಿದುದೋ || ೧೧೧

ಮೆಲ್ಸರಿ ಸೂಳ್ಸರಿ ಮುಗಿಲೊ |
ಳ್ಗಲ್ಸರಿ ತೆಳ್ಸರಿ ಕರಂ ಪೊಸಲ್ವರಿಯಿಪಬಂ ||
ಬಲ್ಸರಿ ಬಲ್ಸರಿ ಕಾಲ್ಸರಿ |
ಸಾಲ್ಸರಿ ಸಲೆ ಸುರಿದು ಕರೆದುವಿರುಳುಂ ಪಗಲುಂ || ೧೧೨

ಘುಡುಘುಡುಛಿಳಿ ಛಿಟಿಲೆಂದು ।
ಗ್ಗಡದಸಿಡಿಲ್ವಸಿಯೆ ಪೊಡೆಯೆ ಗಗನಸ್ಥಳದಿಂ ॥
ದುಡುಗಲ್ಪಳಪಳನುದಿರ್ದವೊ ।
ಲೆಡೆವಿಡದಳಿವಾಲಿವರಲ ಮಳೆ ಬಗೆಗೊಳಿಕುಂ ॥ ೧೧೩

ವಂಶಸ್ಥವೃತ್ತಂ ॥
ವಿಯತ್ತಳಶ್ರೀವಧುವಂ ಘನಾಗಮ ।
ಪ್ರಿಯಂ ಸರಾಗಂ ಬಿಗಿದಪ್ಪೆ ಕಿಳ್ತು ತ ॥
ತ್ಪಯೋಧರಸ್ಥಂ ಮಣಿವೊಕ್ಕವೋಳ್ಪನೋ ।
ದಯೋಪಳಂ ಸೂಸಿದುದಿಂದ್ರಗೋಪಮುಂ ॥ ೧೧೪

ವೃ॥ ಸುರಚಾಪದ್ವಿಪವೈರಿ ಮಿಕ್ಕು ನೆಗೆದಭ್ರಾರಣ್ಯದಘ್ರೋರುಸಿಂ ।
ಧುರಕುಂಭಸ್ಥಳಮಂ ಸಿಡಿಲ್ದನಿ ನಿಜಧ್ವಾನಂಬೊಲಿಂಬಾಗೆ ಬಂ ॥
ಧುರವಿದ್ಯುತ್ಕರಜಾಗ್ರದಿಂದುಗಿದು ಸೀಳಲ್ಮೌಕ್ತಿಕಾಸೃಕ್ಕಣೋ ।
ತ್ಕರಮೆತ್ತಂ ಸುರಿವಂತೆ ಸೂಸಿತು ಘನಗ್ರಾವೇಂದ್ರಗೋಪವ್ರಜಂ ॥ ೧೧೫

ಎನ್ನ ಸಹಾಯದಿಂ ನೆರೆದು ತಾಳ್ದು ಘನತ್ವಮನಸ್ಮದೀಯುಮಿ ।
ತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು ಪೊ ।
ಯ್ದನ್ನೆಗಳಲ್ಕನಪ್ಪಸಿ ಕಳಲ್ದುದಿರ್ದತ್ತು ಘನೋಪಳಾಚ್ಛದಂ ॥
ತನ್ನಿಜಮಲ್ಲದಿರ್ದೊಡೆಳೆಯಲ್ಲದುಸೀರದನಾಮುವಾಂಪುಸೇ ॥ ೧೧೬

ಕಂ॥ ಎಳಸಿ ನಿಜಚಂಚುಪುಟದೊ ।
ಳ್ತಳಿದಿನಿಯಳ್ಗೆರೆದು ಮರಿಗಳಂ ತಣಿಪಿ ಮನಂ ॥
ಗೊಳುತಳಿಪಿ ಸೆಳೆದು ಜಳಕಣ ।
ಕುಳಮಂ ಪೀರ್ದತ್ತು ಚಾತಕಂ ಚಂಚುರಿಂದಂ ॥ ೧೧೭

ವೃ॥ ಮಂಗಳವಾದ್ಯಮಬ್ಬರಿಸಮುಣ್ಮುವ ಮಿಂಚಿದು ದೀಪಮಾಲೆಯು ।
ತ್ತುಂಗಪಯೋದಮುಚ್ಛ್ರಿತ ತೆರೆ ತೋರಣಮಿಂದಿರವಿಲ್ಲು ವೃಷ್ಟಿಯೋ ॥
ಸಂಗತಧಾರೆಯಾಲಿಕಲ್ಲೊಪ್ಪುವ ಮುತ್ತಿನಸೇಸೆಯಾಗೆ ಕಾ ।
ದಂ ಗಗನಸ್ಥಳೀರಮೆಯುಮುಂ ನೆಲದೊಂದು ವಿವಾಹಲೀಲೆಯಂ ॥ ೧೧೮

ವ|| ಮತ್ತಮಾಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನಭವಾಂಗದಂತೆ ಕಾದಂಬವಿತತಾಮೋದವಾಹಮುಂ ಗರೋದಯಸಮಯದಂತೆ ಸುರಚಾಪಲತಾನ್ವಿತಮುಂ ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರಮುಂ ವಿಧುಂತುದನಂತೆ ಸಂತರ್ಜಿತರಾಜಹಂಸಮಂಡಳಮುಂ ಘನನೀಲಾಂಬರಾಚ್ಛಾದಕನಾಗಿಯುಂ ಸಿತವಾರಿದೋಪಲಸಿತದ್ಯುತಿಯುಂ ಪ್ರಬಳಕೀಲಾಲಕ್ಷಣರುಚಿಯುತಮಾಗಿಯುಂ ವನಸಮೃದ್ಧಿದಮುಂ ಪರಕಬಂಧಸಂಸಕ್ತಸರಕ್ತಶಿಳೀಮುಖಮಿಳಿತಮಾಗಿಯುಮಪ್ರಕಟಿತಪ್ರಭಾವಮುಂ ಕೃತವಜ್ರನಿರ್ಘೋಷಮಾಗಿಯುಂ ಗೋತ್ರಾತಿಜಿತಕರಮುಂ ವಿಪಕ್ಷಗತಿರೋಧಕಮಾಗಿಯುಂ ಪರಿಗತಭಂಗವಾಜಿನೀಕಮುಮೆನಿಸಿದ್ದುದಂತುಮಲ್ಲದೆ

ಕಂ|| ಜಳಮಯಮಿಳೆ ಜಳದಮಯಂ |
ಜಳಧರಮಾರ್ಗಂ ತಟಿನ್ಮಯಂ ದಿಗ್ವಳಯಂ ||
ಕಳೆಗೊಳೆ ನವಸೃಷ್ಟಿಯನೇಂ |
ತಳೆದುದೊ ಭುವನಂ ಘನಾಗಮಾಂಬುಜಭವನಿಂ || ೧೧೯

ಫಣಿಯಂ ತುಂಡಿಸಿ ವಿಷಮಂ |
ನೊಣೆದಾನುಂ ನೀಲಕಂಠನಾದೆನೆನುತ್ತುಂ ||
ಕುಣಿವಂತೆ ವಿಷಧರದ ಮುಂ |
ದಣೆಯುರದಿಂ ಕೇಗಿ ಕುಣಿವನವಿಲೆಸೆದಿರ್ಕ್ಕುಂ || ೧೨೦

ಗರಿ ಪೊಂಪುಳಿವೋದಂತಿರೆ |
ಸೆರೆ ಸೆಟ್ಟನೆ ಸಿಲೆ ಮುದಶ್ರು ಗರಿಗಣ್ಗಳೊಳೇ ||
ಸೊರೆತುದೊ ಪೇಳೆನೆ ಕಿರುವನಿ |
ತುರುಗಿರೆ ಮತ್ತೊಂದು ನವಿಲದೇಂ ನರ್ತಿಸಿತೋ || ೧೨೧

ಪೃ|| ಚಾದಗೆಯಂತೆ ಮುಂಬನಿಯನೇಂ ಬರೆಪೇದ್ದುದೆ ವಲ್ಲಿಯಂತಿದೇಂ |
ತೋದುದೆ ವಾರಿಯಿಂ ಕಡವಿನಂತೆ ಮುಗುಳ್ತುದೆ ತತ್ಸಹಾಯದಿಂ ||
ಕೇದಗೆಯಂತೆ ಪೂತುದೆ ಮುಗಿಲ್ಗಳ ಪಂಗಿಸಿತುಂಟೆ ಕೇಕಿಯಾ |
ಹ್ಲಾದದೆ ಕಂಡು ನರ್ತಿಪುದಿದೆಲ್ತೆ ಸಮಾನವಯಃ ಪ್ರವರ್ತನಂ || ೧೨೨

ಸರಸಸುಗಂಧಬಂಧುರದಳದ್ದಳನೂತನಕೇತಕೀಸುಮಾ |
ವರಣಫಣಿಪ್ರಮುಕ್ತಗರಳೋಪಮಮತ್ತಮಧುವ್ರತಾಳಿ ಷ ||
ಟ್ಚರಣಗಳತ್ತದೀಯರಜಮುಣ್ಮಿವಮಿಂಚಿನೆ ಗಾವರಂ ಘನ |
ಸ್ವರಮೆನಲಲ್ಲಿ ತಳ್ತು ಕೆಳೆಗೊಂಡೆಳಗಾಮ್ರ್ಮಗಿಲಂತೆ ರಂಜಿಕುಂ || ೧೨೩

ವ|| ಮತ್ತಮಾಗಳ್

ವೃ|| ತಳರಲ್ಕೆಂದಡಿಯಿಟ್ಟು ಜಾರಿ ಜವದಿಂ ಕೈಯೂರಿ ಬಿಳ್ದೇಳ್ದು ಪಂ |
ಕಿಳಮಾದಂಶುಕಮಂ ಪೊಸಲ್ವರಿವನೀರೊಳ್ಕರ್ಚಿ ಮೈಸಾರ್ಚಿ ಪ ||
ಲ್ಗಳ ನಾದಂಪುಳಕಾಂಕುರಂ ಪೊಳೆಯೆ ಮೇಣಾರೈದು ಕಾಲಿಟ್ಟು ಕೋ |
ಲ್ಗಳನಾಂತೈದುವ ಪಾಂಥರಂ ನಗುವರಾಹರ್ಮ್ಯಾಗ್ರದಬ್ಜಾಕ್ಷಿಯರ್||೧೨೪

ಕಂ|| ಬೆಳೆದೆಳವುಲ್ಕರಮೆಸೆದ |
ತ್ತಿಳೆ ಮಳೆಯಿಂ ನಾಂದು ಸೇದುವಡೆದಿರೆ ಮೊಳೆತ ||
ಗ್ಗಳಪುಳಕಾಂಕುರಮೆನೆ ಸಂ |
ಜಳದಳವಸದೀದೆ ಕಂಪಿಪಂತಿರೆ ತೋಕ್ರ್ಕಂ || ೧೨೫

ವ|| ಇಂತೊಗೆತಂದ ಸಕಳಜನ ಮನೋನಯನ ಹರ್ಷಪ್ರದಮಾದವರ್ಷಾ
ಕಾಲದೊಳಿನಿಯಳೊಡನೆ ಪಡಗರಂ ಮಿಗೆ ಗಗನಮಂ ತುಡುಂಕುವಭರ್ಮ್ಯಹ
ರ್ಮ್ಯಮನಾರೋಹಿಸಿ ಮೇಲ್ಕೆಲೆಯ ಕನಕ ಪರ್ಯಂಕಪೀಠದೊಳ್ಗಾಡಿಯಿಂ ಕು
ಳ್ಳಿರ್ದು ಗವಾಕ್ಷವಿವರಪನಿಹಿತಕಟಾಕ್ಷನಾಗಿ

ವೃ|| ಅದೆ ನಿನ್ನೀಕೇಶಪಾಶಕ್ಕಗಿದು ನೆಗೆದಪೋಲ್ತ್ಮಾನ್ಮ್ರಗಿಳ್ತಿಂಚು ತಾಪಿಂ |
ತಿದೆ ನಿನ್ನ ದೃಕ್ಕಟಾಕ್ಷದ್ಯುತಿಗೆ ಬೆದರ್ದೋಡುವಂತೆ ಚಾಂಚಲ್ಯಮಂ ತಾ ||
ಳ್ದಿದೆ ನಿನ್ನೀಘನಶ್ರೀಸ್ತನಕ್ಕೆಣೆಯರ್ ಕರಗುವಂತಿಂದ್ರಚಾಪಂ ಕಳಾಸಂ |
ಸದೆ ನೋಡಂದಂಮ ತೋರುತ್ತಿರ್ದಪುದಳಿದ ಕ್ರೀವದೊಳ್ ಮೇಘಸಂಗಂ || ೧೨೬

ದುರ್ವಹಜಗದ್ಧರೆ ಸುಪರ್ವನುತವೈಭವೆ ಸಗರ್ವದಿತಿಜಾಪಹೆಯಖರ್ವಗುಣಹಾರೇ
ಗೀರ್ವರಸಮರ್ಚಿತೆ ಯಜುರ್ವಿನುತಸತದೆಹವಿರ್ವಿಧಿವಿಧಾಯಕೆ ಮಹೌರ್ವಶಿಖಿನೆತ್ರೇ
ಸರ್ವಮುನಿಭಾವಿತೆ ಸದೋರ್ವಿಜನಸೇವಿತೆ ವಪುರ್ವಿಜಿತವಲ್ಲರಿಯಪೂರ್ವಸುಚರಿತ್ರೇ|
ನಿರ್ವೃತಿಪದಾಸ್ಪದೆ ಚತುರ್ವಿಧಫಲಪ್ರದೆ ಸಶರ್ವತನು ಪಾಲಿಪುದು ಪರ್ವತತನೂಜೇ||

ಗದ್ಯ|| ಇದು ವಿನಮದಮರವರಮಕುಟತಟಘಟಿತ ಮಣಿಗಣಮಹಾಪ್ರ
ಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿರುಂ
ದ್ರಚಂದ್ರಿಕಾಚಂಚಚ್ಚರೋರಾಯಮಾನ ಸರಸಜಮಾನಿತೋ
ಭಯ ಕವಿತಾವಿಶಾರದ ಶ್ರೀಷಡರದೇವವಿರಚಿತ
ಮಪ್ಪ ರಾಜಖೇಖರವಿಳಾಸ ವಿಪುಳಪ್ರಬಂಧ
ದೊಳ್ಸರ್ವಮಂಗಳಾ ವಿವಾಹಾದಿ
ವರ್ಣನಂ. ಅಷ್ಟಮಾಶ್ವಾಸಂ
ಸಂಪೂರ್ಣಂ.



ರಯುದಿಂ ಮುಸುಂಕುತಿರ್ಪ್ಪತಿ |
ಶಯುಹಿಮಮುಂ ಕಳೆಯಲೆಂದಿಸಂ ಶಿಖಿಯ ಸಮಾ ||
ಶ್ರಯುವೆಸಗಿ ಕಳೆಯನೆನಲಾ |
ಶ್ರಯಾಶನಾಶ್ರಯದಿನಿಷ್ಟಮೇಂ ಸಮನಿಪುದೇ || ೧೨

ಹಿಮಕರಮುಖಿಯರ ಸೇವನೆ |
ಹಿಮಮಂ ಬರಿಕೈದುದಹಿಮಕರಸೇವನೆಯಿಂ ||
ಹಿಮಮಳಿದುದಿಲ್ಲಮೆನೆ ಕಾ |
ಲಮಹಿಮೆಯಾವಂಗದೇನನೆಸಗದೊ ಜಗದೊಳ್ || ೧೩

ಹರನುರಿಗಣ್ಣಡೆ ಮರೆವೊ |
ಕ್ಕರಲಂಬನ ಬಿಸುಪುಗಳಿದು ಪೊರೆದುದು ತರುಣೀ ||
ಗುರುಕುಚಮಿದು ಚಳಿಗಳೆದುದು |
ವರಂಗೆ ಮರೆವುಗೆ ಸುವೃತ್ತರೇಗೆಯ್ಯರೊ ಪೇಳ್ || ೧೪

ಸಸಿ ಬಾಂಜೊಳೆಯಂ ಬಾನೊ |
ಳ್ಪಿಸುಟುಂ ಬಿಡದಾನೆದೊವಲನಿಮ್ಮಡಿಕೆಯೊಳೊಂ ||
ದಿಸಿ ಪೊದೆದಗಜೆಯನಾಲಿಂ |
ಗಿಸಿ ಗಿರಿಶಂ ಮರೆವನೆಂದೊಡದನೇಸೆಂಬೆಂ || ೧೫

ಹರಿವಿಧಿಗಳುಳಿದು ನಳಿನಾ |
ಕರಸರಸಿರುಹಂಗಳಂ ರಮಾವಾಗ್ದೇವೀ ||
ಪರಿರಂಭಣಯುತರಿರ್ದ್ದ |
ಸ್ಸುರುಚಿರವೈಕುಂಠಸತ್ಯಲೋಕಾಂತರದೊಳ್ || ೧೬

ವೃ|| ಚಳಿಪೆಟ್ಟಾಣ್ಮಸಪುತ್ರ ಸುಕ್ಕೆ ಚಳಿಯಿಂ ನ್ಯೈಸಾದುರ್ವಾಸನ್ನಿಸಂ |
ಚಳಿಸಳ್ಳರ್ವನ ದೇಹವಂ ಸಿರಿ ಸರೋಜಾತಾಕ್ಷವಕ್ಷಸ್ಸ್ಥಳಿ ||
ಶ್ಚಳಿಯಾದಳ್ನುಡಿವೆಣ್ಣುಮುಮರ್ಬುಮುಖಾಂತವಾರ್ನೆ ಯಾಗಿರ್ಪ್ಪಳ್ |
ನ್ನಳಿದೀಲೋಕದ ಪೆಂಡಿರೇನುಳಿವರೇ ತಳ್ತಪ್ಪುದಾತ್ಮೀಯರಂ || ೧೭

ಕಂ|| ಪುದಿದಹಿಮನೊಡಲೊಳಿಳಿತಂ |
ದುದರಾಗ್ನಿಯನೈದೆ ನಂದೆವೊಯ್ದುದು ನಿಜಮ ||
ಲ್ಲದೊಡೆಂತು ತೋರ್ಪುದೋ ಪೇ |
ಳ್ಮೊದಲಿಲ್ಲದಪೊಗೆ ಪೊದಳ್ದ ಜನದಾನನದೊಳ್ || ೧೮

ಮೃಡನ ಕಿಡಿಗಣ್ಣ ಕಡುಬಿಸು |
ಪಡಂಗಿ ತ್ತೈಕಿಲಿದು ಮನೋರಮೆ ನೋಡೆಂ ||
ದಡಿಗಡಿಗೆ ರತಿಯ ಕರಮಂ |
ಪೊಡೆದಾರ್ದ್ದನ್ನಂಜೆನೆಂದು ನಲಿವಂ ಮದನಂ || ೧೯

ಕುಮುದಮನಲರ್ಚ್ಚಿ ಹಿಮರುಚಿ |
ಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿ ||
ಗ್ಮಮರೀಚಿಯನದು ಮಸುಳಿಸಿ |
ತು ಮಹೀಜನಮಾತ್ಮಸಮಕೆ ಮಾಳ್ಪುದು ಪಿತಮಂ || ೨೦

ಬೆರಲ್ಕೈಕಿಲಿಂ ಮುರುಂಟಿರೆ |
ವಿರಹಿಯ ಹೃದಯಸ್ಥವಿರಹವಹ್ನಿಗೆ ಕಯ್ಯಂ ||
ಸ್ಮರನೊಡ್ಡಿ ಕಾಸಿ ಬಿಲ್ಲಂ |
ತಿರುವೊಯ್ದಿಸುತಿರ್ಪನಸಿತಶರರುಹಶರದಿಂ || ೨೧

ವ|| ಆಕಾಲದೊಳ್

ವೃ|| ನಡುಕಂ ಕೈಮೀರೆ ದಂತಚ್ಛದಮೊಡೆದುಹುಹುಧ್ವಾನಮುಂಪೊಣ್ಮೆಮೆಯ್ಯೊ|
ಳ್ಬಿಡದೆತ್ತಂತೋರೆ ರೋಮೋದ್ಗಮಮಮರ್ದಿರೆಸೀತ್ಕಾರಮುಂಗೈವೆರಲ್ಕಾಲ್||
ಕಡಿವೆತ್ತಂತಾಗೆ ತಳ್ತೈಕಿಲಭರದೆ ಪಡಲ್ಪಟ್ಟು ಗೇಣಾಗಿ ಪಾಂಥ |
ತ್ರೊರ್ಡೆತೋಳ್ಗಳ್ಕೂಡೆ ಜಾನುಪ್ರಹಿತಶಿರರಪೇಸಿರ್ದ್ದರೋ ಶೀತಭೀತರ್ ||೨೨

ಕ|| ಮತ್ತಮುಪರೊಳೊರ್ವ್ವಮುಗ್ಧಾಧ್ವಗಂ
ಗೇರಪಣ್ಣನಿದು ಕೆಂಡಮೆನುತ್ತುಂ |
ಸಾರಿ ಮೇಲೆ ತೃಣಮಿಟ್ಟದನೂದಲ್ ||
ಸೇರಿಬಾಯ ಪೊಗೆ ತಳ್ತಿರೆ ಕಂಡಾ |
ದಾರಿಗಂ ಮುದದಿನೂದುತುಮಿರ್ದ್ದಂ || ೨೩

ಕಂ|| ಚಳಿಗಾಱದೆ ಪೇರಾಲದ |
ಕೆಳಗಿರ್ಪ್ಪನಿತರೊಳೆ ಚಪಳಕಪಿ ನಿಡುಗೋಡಂ ||
ಸೆಳೆದಲುಗೆ ಸೂಸುವೆಲೆವನಿ |
ಗಳಿನೊರ್ವ್ವಂ ನನೆದು ನಡುಗಿ ಸಿಡಿಮಿಡಿಗೊಂಡಂ || ೨೪

ಇಡಿದಿಂಧನದೊಳೆ ಫಣಿಯೊಳ |
ಗಡಂಗೆ ಮಣಿಗಂಡು ಕೆಂಡವೆಂದೊರ್ವ್ವಂ ಕೈ ||
ದುಡುಕೆ ಮೊರೆದೇಳೆ ಭಯದಿಂ |
ಕಡುಚಳಿಯಿಂದೊರ್ಮ್ಮೆ ಸೆಡೆದು ನಡುಗುತ್ತಿರ್ದ್ದಂ || ೨೫

ಹಾದಿಯೊಳೂದಿದನೊರ್ವ್ವಂ |
ಬೂದಿ ಕರಂ ಪಾಱೆ ಕೆಂಡಮಂ ಕಂಡಮಿದೆಂ ||
ದಾದರಿಸಿ ಕುಕ್ಕಿ ಕೊಕ್ಕಿಂ |
ಮೇದುದದಂ ಕಾಗೆ ಮಾಗೆಯೇನತಿ ಶಯಮೋ || ೨೬

ಪುಲ್ಲಿಕ್ಕಿ ಪೋಗೆ ಪಥಿಕ |
ರ್ಮ್ಮೆಲ್ಲನೆ ಸುಡಲಾರದಗ್ನಿ ಹಿಮಸಮಯಮಹೀ ||
ವಲ್ಲಭನತ್ತಣಿನಗಿದೇಂ |
ಪುಲ್ಲಂ ಕಚ್ಚಿರ್ದುದೊ ಪೇೞೆನಲ್ತುೞ್ತಿಸೆಗುಂ || ೨೭

ಗರಿಗೆದರಿ ಬಿದಿರ್ದು ಕೊಕ್ಕಿಂ |
ದಿರಿದಿರಿದೆಳವಿಸಿಲನೆಳಸಿ ಸೇಡುಂಗೊಂಡೇಂ ||
ತುರುಗಿರ್ದ್ದವೊ ತುದಿಗೋಡೊ |
ಳ್ಮರಿ ಜಿರಕಿರೆ ಸೋಡಿ ಬಾಡುತುಂ ವಿಹಗಂಗಳ್ || ೨೮

ವೃ|| ಪಳುತ್ತುಂ ಮೆಲ್ಲನಲ್ಲಿಂಮುಱಿಯುಮುರ್ಱೆ ಕೀಲ್ಗೊಬ್ಬಿಯೊಳ್ನಕ್ಕರ್ವೆತ್ತಾ |
ಬಾಳಂ ಮೇಣ್ಬಕ್ಕೆ ನೋಡುತ್ತಸವಸದೆ ಪಸಿಲ್ಗಿತ್ತು ಜೇರ್ಣಾಚ್ಛದಂಗಳ್ ||
ಮೇಳಂಗೊಂಡೊಪ್ಪೆ ಶಾಖಾಗ್ರದೊಳಡರ್ದಲುಗಲ್ ಸೂಸೆ ಮೇಲ್ವೈಕಿಲಿತ್ತಿಂ |
ನಾಳೀಜಂಘಂ ಕರಂ ಪಲ್ದೆರೆದು ನಡುಗಿ ಹತ್ರಿಂದು ಪುಷ್ಟ್ರಕ್ಕಿತಾಗಳ್|| ೨೯

ಕಂ॥ ಮೂಡಣೆಲರೂದೆ ಜವದಿಂ ।
ದೋಡುಗುವಿಹಿಮಸುಧಾಬ್ಧಿಯಗ್ರದೊಳೆನಿಪೊಂ ॥
ದಾಡಂಬರಮಂ ಜನದೊ ।
ಳ್ಮಾಡಿ ಕರಂ ತರಣಿ ತಳರ್ದುದಂಬರತಳದೊಳ್ ॥ ೩೦

ಉರಿಗಣ್ಣಿಂದುರಿದಂಗಜ ।
ನುರು*ಳ್ದಿರ್ಪಂ ಯುವತಿ ಸರಸಹೃದಯಪಯೋಜಾ ॥
ಕರದೊಳಗಲ್ಲದೊಡವರುರು ।
ತರಕುಚದೊಳ್ಬಿಸುಪು ಪೊಣ್ಮುಗುಮೆ ಪೊಗೆಯುಸಿರೊಳ್ ॥ ೩೧

ವೃ॥ ಪುಳಕಂ ಕಾಯದೊಳುಣ್ಮೆ ಕಂಪನಮದುಂ ಕೈಗಣ್ಮೆ ದಂತಚ್ಛದ ।
ಸ್ಖಳಿತಂಚೀತ್ಕೃತಿ ಪೊಣ್ಮೆ ಬಂದು ನೆರೆ ನಿಂದಾತ್ಮೇಶನಂ ಕಾಣುತ ॥
ಸ್ಥಳಸಂಗಕ್ಕೊಳಗಾಗಿ ಬಂದನೆನುತುಂ ಕಾಯ್ಪೇರೆ ತೋಳ್ಪಾಸದಿಂ ।
ಡಳೆದಾಕೋಮಳೆಯೊರ್ವಳೊತ್ತಿ ಬಿಗಿದಪ್ಪೀತಾತುರಂ ಪೋಪಿನಂ ॥ ೩೨

ಕಂ॥ ವಿಚಕಿಲಗಂಧಿಯುರ ಲಸ ।
ತ್ಕುಚಕುಲಗಿರಿದುರ್ಗದಲ್ಲಿ ನೆಲಸಿ ತದಂಗ ॥
ಪ್ರಚುರಘುಸೃಣಾಂಗರಾಗಕ ।
ವಚಮಾಂತರಸೈಕಿಲರಸನೇಗೈದಪನೋ ॥ ೩೩

ವೃ॥ ಗಿರಿಸಾನುಪ್ರಸರಝ್ಝರೋತ್ಕರತರಂಗಾಕೀರ್ಣವಾರ್ಬಿಂದುಬಂ ।
ಧುರಮುಕ್ತಾಫಲಮಾಲಿಕಾಲಸಿತರುಕ್ಪ್ರಾಲೇಯಶುಭ್ರಾಂಬರಾ ॥
ವರಣಶ್ಶ್ವೇತವಿಭೂತಿಚಂದನವಿಲಿಪ್ತಾಂಗಶ್ರೀರ್ವೈಕ್ಯಮ್ಮರ್ನೀ ।
ಶ್ವರರಿರ್ದರ್ಪ್ಪರಮುಕ್ತಿಕಾಂತೆಯೊಲಿಸಲ್ತಾಳ್ದಂತೆ ನೈಪಥ್ಯಮಂ ॥ ೩೪

ಹಿಮವಚ್ಛೈಲತರಂಗಿಣೀತಟಪಟುಪ್ರಾಲೇಯವಾರ್ಬ್ಬಿಂದುಸಂ ।
ಕ್ರಮಿತೋದ್ಯತ್ಪುಳಿನಸ್ಥಳಂಗಳೊಳೆ ನಿಂದಾನಂದದಿಂದೊಂದೆ ಸಂ ॥
ದು ಮನೋವೃತ್ತಿ ಮಹೇಶ್ವರಾಂಘ್ರಿಯೊಳಿರೋಮಾಂಚಂಗಳುಂ ಕಂಪಮುಂ।
ಬೆಮರುಂ ತಳ್ತಿರೆ ಶೈವಯೋಗಿವರರಿರ್ದರ್ಪ್ಪೀತಶೀತಾತುರರ್ ॥ ೩೫

ವ|| ಇಂತತಿಶಯಪ್ರಭಾವವಿಭವಂಬಡೆದೇಳ್ತಂದ ಹೇಮಂತಸಮಯದಲ್ಲಿ

ವೃ|| ರಮಣಿಯ ಕುಂಕುಮಾಂಕಿತತನುಪ್ರಭೆ ಜೆಂಬಿಸಿಲಾಗೆ ತದ್ರತ |
ಶ್ರಮಜನಿತೋಷ್ಣತುಂಗಕುಚಯುಗ್ಮಮೆ ವಕ್ಷದೊಳೊಪ್ಪೆ ತಳ್ತು ತ ||
ದ್ವಿಮಳಿನದೋರ್ಲತಾಕನಕಚಂಪಕದಾಮಮೆ ಕಂಠದೇಶದೊ |
ಳ್ಸಮನಿಸೆ ನೂಂಕಿದಂ ಹಿಮದಕಾಲಮನಾನರನಾಥಚಂದ್ರಮಂ || ೩೬

ವ|| ಇಂತು ಸಂತಸಂ ಮಿಗೆ ಶರಣಜನವನವಸಂತಂ ಕಾಂತೆಯೊಡನುಮಾ ಕಾಂತನಡಿದಾವರೆಯಂ ಭಕ್ತಿಯಿಂ ಭಜಿಸುತ್ತುಮಿರ್ದ್ದು ನಿಜದೇಶಕ್ಕೆ ಪೋಗಲೆ ಳಸಿ ಲಲನೆಗರಿಪೆ ಗಳಿಲನೆ ಸಿಂಹಳೇದ್ರಂಗೆ ಸಚಿವೇಂದ್ರನಿಂ ಪೇಳಿಸಲೊಡನವಂ ಕೇಳ್ದು ನಿಜರಮಣಿಗಿಂತೆಂದಂ

ಕಂ|| ಇನ್ನೆವರಮೆಮ್ಮಮಾತಂ |
ಮನ್ನಿಸಿ ಜಾಮಾತೃಪಿರ್ದ್ದನಿಪೆ ಸಾಲ್ಗುಮವಂ ||
ಗಿನ್ನಿರವೇಳ್ಪುದು ಕಜ್ಜದ |
ಬಿನ್ನಣಮಲ್ತಬಳೆ ಕಳಿಪುವುದು ನಿಜಸುತೆಯುಂ || ೩೭

ವ|| ಎಂದು ಕಾಂತೆಯನೆಂತಕ್ಕೆ ತಿಳುಪುತ್ತಿರ್ಪ್ಪರೇಕಚಿತ್ತರಾಗಿ ನಿಜಕು ಮಾರಿಯನೊಡಪ್ರೋಪಂತುಮಾಡಿಶುಭಮುಹೂರ್ತದೊಳ್ಮಗಳುಮನಳಿಯನುಮಂ ಬರಿಸಿ ಪಟ್ಟವಣೆಯೊಳ್ಕುಳ್ಳಿರಿಸಿ ಮಂಗಳಾಲಂಕಾರಂಗಳಿನಲಂಕರಿಸಿ ಕಳಿಪುವಾಗ ಳಾಕಳಾಧರೆ ನಿಜತನೂಜೆಯಮೊಗದಾವರೆಯುಮಂ ಸ್ನೇಹರಸತರಂಗಿತಕಟಾ ಕ್ಷದಿನಭೀಕ್ಷಿಸಿ

ವೃ|| ತಂಗಿ ನಿಜೇಶ್ವರಂಗೆ ಬಗೆದಂತಿರೆ ನೀಂ ಪೆಸಕೆಯ್ವುದಕ್ಕೆ ಮಾ |
ವಂಗಳ ಮಾತುಮಂ ಮರೆದು ಮೀರದಿರಾದ್ಯ ಹಿತೋಕ್ತಿಗಳ್ಗೆ ನೀ ||
ತ್ತಂಗುಡು ಬಂಧುವರ್ಗದುಪಚಾರಮನಾಂತಿರು ದೇವಭಕ್ತಿಯುಂ |
ಹಿಂಗದಿರೊಳ್ಪ ಸಂಚಿನದು ಬಾಳ್ವುಮಗೀವುದತಿಪ್ರಮೋದಮಂ || ೩೮

ವ॥ ಎಂದು ಬುದ್ಧಿವೇಳ್ದು ಶೇಷಾಕ್ಷತಮನಿಕ್ಕಿ ಪರಸಿ

ವೃ॥ ಚವರದ ಕುಂಚದಾರತಿಯ ಸೆಜ್ಜೆಯ ಮಜ್ಜನದಂಗರಾಗದು |
ತ್ಸವದ ಸುಗಂಧವೀಟಿಕೆಯ ಸಿಂಗರದೊಳ್ನೆರಿಗೈವ ಮಾಲೆಗ ||
ಟ್ಟುವ ತೊಡೆದಟ್ಟುವಿಂಚರದೆ ಪಾಡುವ ಕನ್ನಡಿ ದೋರ್ಪ ಜೋಸಮಂ |
ಸವೆಪಡಿಯೂಡುವಾಳಿಯುರುಮಂ ಪಡೆದಿತ್ತಳವಳ್ವಿಳಾಸದಿಂ || ೩೯

ವ॥ ಮತ್ತಂ

ವೃ॥ ರಸಚಿತ್ರಂ ರತ್ನಭೂಷಾವಳಿ ಮೃದುವಸನಶ್ರೇಣಿ ಮುಕ್ತಾತಪತ್ರ |
ಪ್ರಸರಂ ಪೊಂಬೆಟ್ಟ ಬಟ್ಟಲ್ಕನಕಕಳಶಮಾದರ್ಶಮಾಂದೋಳನಂ ದಂ ||
ತಿಸಮೂಹಂ ವಾಜಿವೃಂದಂ ಮೃಗಮದಘನಕಾಶ್ಮೀರಪತ್ರಾಳಿ ಕೇಳೀ |
ಲಸದುದ್ಯತ್ಕೀರಪಾರಾವತಶಿಖಿಹರಿಣೀಹಂಸಶಾರೀಪ್ರತಾನಂ || ೪೦

ಮಣಿಮಂಚಂ ದಿವ್ಯನವ್ಯಾಂಬರಮೃದುತರತಳ್ಪಂ ಮೃಗೇಂದ್ರಾಸನಂ ಸ |
ದ್ಗುಣಭಾಸ್ವದ್ವೇಣುವೀಣಾನಿಪುಣತರವಧೂವೃಂದಮುದ್ಗಾಯಕೀಸ್ತ್ರೀ ||
ಗಣಮುದ್ಯನ್ನರ್ತಕೀಸಂಚಯಮಖಿಳಕಳಾವಿದ್ವಧೂಟೀಸಮೂಹಂ |
ಪ್ರಣಯಪ್ರೌಢಪ್ರಹಾಸ್ಯೋಚಿತಹಿತಮಿತಸಲ್ಲಾಪಕಾಂತಾಕದಂಬಂ || ೪೧

ವ॥ ಎಂಬಿವೆಲ್ಲಮುಮಂ ಮಗಳ್ಗೆಬಳಿವಳಿಗೊಟ್ಟೊಡನ್ನೋಪಂತು ನಿಯಾಮಿಸಿ ಸಿಂಹಳೇಂದ್ರಂ ಮಂಗಳತೂರ್ಯತ್ರಯರವಂ ವಿಜೃಂಭಿಸೆ ನಿಜಪುರಮಂ ಪೊರಮಟ್ಟು ಕಿರಿದಂತರಮಂ ಕಳಿಪಿ ಮಗುಳ್ದು ಕಮಳಾವತಿಯುಂ ಪೊಕ್ಕಿರ್ದ್ದನಿತ್ತಲ್ ರಾಜಶೇಖರನರೇಂದ್ರಂ ವಿಮಳತರತರಂಗಿಣೀತಟವಿಪ್ರಳಗಿರಿಕಟಕವಿವಿಧಕಾಸಾರಪರಿಸರಸ್ಥಿತದಳಫಳಕುಸುಮವಿಸರವಿಳಸಿತದಿವ್ಯತರುಮನೋಜ್ಞನಂದನಂಗಳೊಳ್ಬೀಡುವಿಡುತ್ತಮಿನಿಯಳೊಡನೆ ಬಿನದಿಸುತ್ತುಂ ಮೆಲ್ಲಮೆಲ್ಲನೆಳ್ತಂದು ನಿಜರಾಜಧಾನಿಯಂ ಸಂಭ್ರಮಂ ಮಿಗೆ ಪುಗುತರ್ಪನ್ನೆಗಂ

ಮಂದಾನಿಲರಗಳೆ ॥ ಆವೇಳೆ ಯೊಳತಿಸಂಭ್ರಮಮೆಸೆದಿರೆ | ಪೂವಲಿ ಪುರವೀಥಿಗಳೊಳ್ನೆರೆದಿರೆ | ಪವಳದ ರನ್ನದ ಗುಡಿಗಳ ಗುಡಿಗಳ್ | ನವಮೌಕ್ತಿಕರಂಗದ ದಾಂಗುಡಿಗಳ್ | ಮೆರೆದುವು ಮಿರುಗುವಮಿಸುನಿಯ ತೋರಣ | ಮುರಿ

ಕೆಯ ಪುರಜನದುತ್ಸವದೋರಣ | ಮಾನೆಯ ಮೇಲಣ ಪಳವಿಗೆ ಮಿಳಿರ್ದಿರೆ* |
ನಾನಾವಿಧವಾದ್ಯಧ್ವನಿಯುಳುರ್ದಿರೆ | ಕರೆದುವು ಬಿರುದಿನ ಕಹಳೆಗಳಾಗಳ್ |
ಪರೆದುದು ಪಳಹದ ರವಮೆಣ್ದೆಸೆಯೊಳ್ | ಗಿರಿಬಂಧುರಸಿಂಧುರತತಿ ನಡೆತರೆ|
ಚರವೃಂದದ ಕುಂಡದ ಕಳಕಳಮಿರೆ| ಪೊಸಮೇಳದ ತಾಳದ ಮೃದುನಿನದಂ|
ಪಸರಿಸೆ ಗೀತರವಂ ಕಡುಬಿನದಂ| ಬಡೆದಿದಿರ್ವಂದುದು ರಾಜಪ್ರಜಯುಂ | ಬಿಡ
ದೊಡವಂದುದು ನಾರೀನಿಚಯುಂ| ಕಳಶಂ ಕಂನಡಿ ವೀಜನತತಿಯುಂ| ತಳೆದಿ
ಳಿಕ್ಕೈಯುತೆ ಜಲ್ಪಿಂ ರತಿಯುಂ| ಸಲೆ ವಾರಾಂಗನೆಯುಬ್ಬುರುತಿರ್ದ್ದರ್ | ಕೆಲ
ರಾರತಿವಿಡಿದೈತರುತಿರ್ದ್ದರ್ | ಮುತ್ತಿನ ಸತ್ತಿಗೆ ವೊತ್ತಂಬೆತ್ತಿರೆ| ಸುತ್ತಿತುರಂ
ಗಿಗಳೊತ್ತರಿಸುತ್ತಿರೆ| ವಂದಿಸೆ ವಂದಿಜನಂ ಜಯಜಯವೆನೆ| ಮುಂದೆಸೆ ಬಂದೆಸೆ
ವವರತಿಶಯಮೆನೆ | ಕಡೆಗಂಗಳ ಕುಡಿವೆಳಗೆಡೆವುಗುತಿರೆ| ನಿಡುಮುಡಿ ಮುಗು
ಳಂ ಪುರುಡಿಸುತುಗುತಿರೆ| ಪೆಣ್ಬಡೆ ಸೂಸಿತು ಲಾಜವ್ರಜಮುಂ| ತಣ್ಬಿಸಿಲೆನೆ
ಪಟವಾಸದ ರಜಮುಂ | ತನುರುಚಿನಿರ್ಜಿತಸೌದಾಮಿನಿಯರ್ | ಘನಸಂಭ್ರಮದ
ರೆಬಕರ್ಾಮಿನಿಯರ್ | ನೆಲವನೆ ನೆಲೆನೆಲೆಗಳನೇರುತ್ತುಂ| ಕಲಿತಕಟಾಕ್ಷದ ರುಚಿ
ವೀರುತ್ತಂ| ನೋಡುತ್ತಿರೆ ಕರಿವರಮಸ್ತಕದೊಳ್| ತೋಡಿಲ್ಲದೆ ಬಗೆಗೊಗೆದುತ್ಸ
ಕದೊಳ್ | ಯುವತಿಸಹಿತಮವನೀಶ್ವರತನಯಂ | ಸುವಿಳಾಸತಿರಸ್ಕೃತಹರಿತನ
ಯಂ | ಪಿರಿದುತ್ಸವದಿಂದೇಳ್ತಂದಾಗ | ಳ್ಭರದಿಂದರಮನೆಯುಂ ಪುಗುವಾಗಳ್ ||

ವೃ|| ಜಡಿಯೆ ಘನಸ್ತನಂ ಪೊಡರೆ ಪೂರ್ಣನಿತಂಬಮಪಾಂಗಕಾಂತಿ ಮುಂ|
ದಿಡೆ ಕುಸುಮಾಸ್ತ್ರಮುಂ ಕೆದರೆ ತಣ್ಗದಿರಂ ರದನಾಂಶು ಒಕ್ಕೆತ್ತೆ||
ನ್ನಿಡು ಮುಡಿ ಸೂಸೆ ಬಲ್ಮುಗುಳನಂದಿದಿರ್ವಂದು ಮಹೋತ್ಸವಂ ಮನ|
ಕ್ಕೆಡೆಗುಡೆರನ್ನದಾರತಿಯನೆತ್ತಿದುದೊಲ್ದು ವಿಳಾಸಿನೀಜನಂ|| ೪೨

ವ|| ಇಂತು ಸಖೀಜನ ಪೊಸಗುವ ಮಂಗಳೋಪಚಾರಂಗಳಂ ಕೈಕೊಳು
ತ್ತುಂ ನಿಜಜನನೀಜನಕರಿಪ್ಪೆಡೆಗೆ ರಮಣಿವೆರಸೇಳ್ತಂದು ಪೊಡಮಟ್ಟು ನಿಂದಾ
ಗಳಮೃತಮತಿಮಹಾದೇವಿ ಸತ್ಯೇಂದ್ರಜೋಳೇಂದ್ರರಿರ್ವ್ವರುಂ ನಲವರಕೆಯಿತ್ತು
ಸಂತೋಷದಿಂ ಪರಸಿ ಕುಳ್ಳಿರಿಸಿ ಸರಸಪ್ರಸನ್ನಸ್ನಿಗ್ಧಮಧುರ ತರಕಟಾಕ್ಷಂಗಳಿನ

ಭೀಕ್ಷಿಸಿ ಸಮಯೌವನರೂಪಲಾವಣ್ಯಸೌಶೀಲ್ಯಸಂಪದಕ್ಕೆ ಸಂತಸಂಬಟ್ಟು ಸಮು ಚಿತಮಂಗಳಂಗಳಂ ರಚಿಸಿ ಸುಮುಹೂರ್ತದೊಳ್ಮದುಂಬಿಸಲೊಡನೆ ನಿಜನಿತಂಬಿ ನಿಯೊಳ್ಕೂಡೆ ಸಾರತರಸಂಸಾರಸುಖಮನನುಭವಿಸುತ್ತುಮಾರಾಜಶೇಖರಂ ಹರ ಚರಣಪೂಜಾಸಾಮ್ರಾಜ್ಯಧುರಂಧರಂ ಶರಣಜನಸಂತಾನಸಂತಾನಂ ಪರಮಹರ್ಷ ದಿಮಿರುತ್ತುಮಿರ್ಪ್ಪಾಗಳ್ ||

ವೃ|| ಕಳಕಂಠೀಕಳನಾದಕಾಹಳಿಮಿಳದ್ಭೃಂಗಾವಳೀರಾವಮಂ |
ಜುಳಗೀತಂ ಶುಕವಂದಿವೃಂದನಿನದಂ ಮಂದಾನಿಲಾಂದೋಳಿತೋ ||
ಜ್ಜ್ವಳವಲ್ಲೀಮೃದುಲಾಸ್ಯಮೊಪ್ಪಿರೆ ವನಶ್ರೀವಲ್ಲಭಂ ಸಂಮುದಂ |
ದಳೆದೇಳ್ತಂದನಮಂದವೈಭವಯುತಂ ಚೈತ್ರರ್ಕ್ಷಮಾಧೀಶ್ವರಂ || ೪೩

ವ|| ಅಂತುಮಲ್ಲದೆಯುಂ

ವೃ|| ವನಿತಾವಕ್ತ್ರಾಂಬುಜಂ ಮುನ್ನಲರೆಸರಸಿಜಂಪಿಂತೆ ಕಾಂತಾಕಪೋಲೇಂ|
ದುಸಮಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ ಭಾಮಾಮನಶ್ಶೋ ||
ತನಗಂ ಮುಂ ಪಲ್ಲವಂಬೆತ್ತಿರೆ ಸರಸರಸಾಲವ್ರಜಂ ಪಿಂತೆ ತನ್ವೀ |
ತನುವಲ್ಲೀಶ್ರೇಣಿ ಮುಂ ರಂಜಿಸೆ ವನಲತೆ ತಾಂ ಪಿಂತೆ ಬಂದಂ ಬಸಂತಂ|| ೪೪

ಮಲಯೋರ್ವೀಧರತುಂಗ ಶೃಂಗವಿಚರದ್ವಿದ್ಯಾಧರೀಕೋಮಳಾಂ |
ಗಲತಾಸೌರಭಶಾಲಿ ವಾಮನಕರಾಕೀರ್ಣೋದಕೋದ್ಯತ್ಕಣಾ ||
ವಳಿ ಮಾರ್ಗಸ್ಥಿತಚಂದನಾಗಗತನಾಗಾಪೀತಶೇಷಂ ಧರಾ |
ತಲಕಾನಂದಮನೊಂದಿಸುತ್ತೆ ಸುಳಿದಂ ಮತ್ತಲ್ಲಿ ಮಂದಾನಿಲಂ || ೪೫

ನಗಿಸುತ್ತಂ ಮಲ್ಲಿಕಾಕಾಮಿನಿಯನಳಿರವವ್ಯಾಜದಿಂ ಸೋಂಕಿ ಮೆಯ್ಯೊ |
ಳ್ನೆಗಪುತ್ತುಂ ಚೈತ್ರದೂತೀಯುವತಿಗೆ ಮುಕುಳವ್ಯಾಜದಿಂಘರ್ಮವಾರ್ಜಂ||
ದುಗಳಂ ಮೇಣ್ಪೂತವಲ್ಲೀವನಿತೆಗೆ ಪಡೆಯುತ್ತಂಕುರವ್ಯಾಜದಿಂ ನೆ |
ಟ್ಟಗೆ ರೋಮಾಂಚಂಗಳಂ ಸದ್ವಿಟನೆನೆ ಸುಳಿದಂ ವೇಗದೂರಂ ಸಮೀರಂ|| ೪೬

ವ|| ಮತ್ತಮಾಗಳ್

ವೃ॥ ತಳಿರ್ವೆಳವಾವು ಪಲ್ಲವಿಪಶೋಕೆ ಮುಗುಳ್ತುದಿರ್ಮುರ್ತ್ತೆ ಪೊಗ್ಗೆಯಂ |
ತಳೆಯಲೊಡರ್ಚ್ಚೆ ನಿಂದವೊಸಮಲ್ಲಿಗೆ ಪುಷ್ಪಮನಾಂತಚಂಪಕಂ ||
ಪಳೆಯೆಲೆಯಿಕ್ಕೆ ಸಣ್ಣನೆಸೆಯೇರಿದಪಾಟಳಿ ಪೂವನಾಂತು ಕಂ |
ಗೊಳಿಸುವ ಕರ್ಣಿಕಾರಮಲರ್ದೀವಿದಮುತ್ತಮದೆತ್ತಸೋಳ್ವೊಡಂ || ೪೭

ಪೊಡವಿಗಳಂತೆ ಮೂಡೆ ಪೊಸವೊಗ್ಗೆಗಳಾಮಧುದೂತಿಯಲ್ಲಿ ಸೊಂ |
ಪಿಡಿದಿರೆ ವಲ್ಲರೀತನು ಸುಮಸ್ತಬಕಸ್ತನಮಲ್ಲಿ ಪೊಣ್ಮೆ ಕ ||
ರ್ಪ್ಪಡರ್ದತಮಾಲವಲ್ಲಿ ಬಡಜಾಸೆವೊಲೊಪ್ಪಿರೆ ಪದ್ಮಲೋಚನಂ |
ಬಿಡದಲರ್ದೊಪ್ಪೆ ಜೌವನಮನಾಂತವೊಲಾವನಲಕ್ಷ್ಮಿ ತೋರಿದಳ್ || ೪೮

ಕಂ॥ ಗಿಳಿಗಳೆರಂಕೆಯ ಪಚ್ಚೆಯ |
ಸಳಿಮಾಲೆಯ ನೀಲಮಾಲೆಯಂ ಮಾವಿನಜೆಂ ||
ದಳಿಗೆಗ್ಗೆಂಪಂ ಬನಸಿರಿ ತಾಂ |
ತಳೆದಾಮಾಧವಮನೋಜ್ಞೆಯೆನಿಸುತ್ತೆಸೆದಳ್ || ೪೯

ವ॥ ಅದಲ್ಲದೆಯುಮಲ್ಲಿ

ವೃ॥ ಮದನಂ ಪೂಸರಿಲಿಂದೆ ಪೂಣ್ದಿಸೆ ತಪಸ್ಸಂಯುಕ್ತಕಾರ್ಕಶ್ಯಚಿ |
ತ್ತದೆ ತಾಂ ನಾಂಟದಿದೆಂದು ಬಂದು ಮಧುವೆಂಪೆಂಬೋಜನಂದೊಟ್ಟಿ ಮು ||
ತ್ತದ ಪೂಗೆಂಡಮನಲ್ಲಿ ಬಲ್ಸರಲ ಮಾಡಲ್ಮೇಲಯಃಪಿಂಡಮಂ |
ಪದ ಸಾಲಿಟ್ಟದನೂದಿದಂತೆ ಮೆರೆಗುಂ ಭೃಂಗಾಳಿಯಿಂ ಗಾಳಿಯಿಂ || ೫೦

ಕಂ॥ ಮಧುಸೇವನೆಯಿಂ ಸೊರ್ಕ್ಕಿತೆ |
ಮಧುಪಂ ಸುಮನಃಪ್ರಜಯಮನಲೆದೊಡೆ ಶಿಖಿಯೊಳ್ |
ಮಧುರಿಪುಜನ ಬೆಸದಿನದಂ |
ಮಧು ದಂಡಿಪತೆರದೆ ಮುತ್ತದಲರೊಳದೆಸೆಗುಂ || ೫೧

ವ॥ ಮತ್ತಮದಲ್ಲದೆಯುಂ

ವೃ॥ ಅಂಗಜಭೂಭುಜಂ ವಿಜಯಯಾತ್ರೆಗೆ ಪೋಗಲೊಡರ್ಚೆ ಚೈತ್ರನು |
ತ್ತುಂಗಪಿಕಧ್ವನಿಸ್ಫುಟಮಹಾಪಟಹಧ್ವನಿಗೆಯ್ದೆ [illegible] ||
[illegible]ಂಗಳಿವಿಸ್ಫುರದ್ಧಟಿಕೆಗಳೆ ನವಾಂಕುರ ರೋಮರಾಜಿ ಸ |
ರ್ವಾಂಗದೊಳೆಂದು ಪಲ್ಲವಲಸತ್ಪತಾಕೆಗಳೊಪ್ಪೆ ತೋರಿದಳ್ || ೫೨

ಜೇವಣಸಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ ಕೀ |
ರಾವಳಿಕೋಕಿಲಾವಳಿಗಳಗ್ಗದಪಾಠದಪಟ್ಟಶಾಲೆ ಮ ||
ಲ್ಲೀವಧು ಲಾಸ್ಯಮಭ್ಯಸಿಪನರ್ತನಶಾಲೆ ನವೀನಚೈತ್ರಲ |
ಕ್ಷ್ಮೀವರಚಿತ್ರಶಾಲೆ ಮಧುಭೂಭುಜನೋಲಗಸಾಲೆ ಮಾಮರಂ || ೫೩

ವ|| ಮತ್ತಂ

ವೃ|| ಗಿಳಿ ಗಿಳಿದಾಲಿ ಚೆಂದಳಿರೆ ಚಂದಿರಗಾವಿಯನೂತನಾಂಬರಂ |
ಸುಳಿಯದೆ ಸಿಂದತುಂಬಿಗಳ ಸಾಲ್ಪವಿಭೃನ್ಮಣಿಮಾಲೆ ಪುಷ್ಪಸಂ ||
ಕುಳದ ರಜಂ ಸುಗಂಧದರಜಂ ತನಗಾಗಿರೆ ತಾಳ್ದು ಮಲ್ಲಿಕಾ |
ಲಳನೆಯೊಳೇಂ ಮನಂಬಿಡಿದನೋ ಬನದೊಳ್ಸಹಕಾರಪಲ್ಲವಂ || ೫೪

ಅತಿಕುಳಝೇಂಕೃತಿಪ್ರಚುರಕಿಂಕಿಣಿಕಾರಣಿತಂ ಶುಕಸ್ವನಾ |
ಕುಳವಿಕಟಾಟ್ಟಹಾಸನಿನದಂ ಸುಮನಸ್ಸ್ಫುಟಹಾಸರೋಚಿ ಸ ||
ತ್ಫಳಮಣಿಮಾಲ್ಯನುದ್ಗತರಜೋಭಸಿತಂ ಮಧುಮತ್ತನಲ್ಲಿಕೋ |
ಕಿಳರವಶೃಂಗನಾದನೆಸೆದಂ ತಳಿರ್ಗೈಯ ರಸಾಲಭೈರವಂ || ೫೫

ತಳಿರ್ಗಳೆ ದಟ್ಟಿಯಾಗೆ ಕೊನರೆಂಬಚೆರಲ್ಗದು ವಜ್ರಮುಷ್ಟಿಯಂ |
ತಳವಡೆ ತೋರಮಾಮಿಡಿ ಶಿಖಂಡಕದಂತಿರೆ ಮಧ್ಯದಲ್ಲಿ ಕಂ ||
ಗೊಳಿಪಳಿವಿಂಡು ತದ್ರುಜಮೆ ಮೃದ್ರುಜದಂತಿರೆ ಕೋಕಿಳಸ್ವರಂ |
ಕಳಕಳವಾಗೆ ಮಾಮರಮದೊಪ್ಪಿತು ಮಾರನಮಲ್ಲಸಂತೆನ್ನೋಲ್ || ೫೬

ಕಳರವಮಿತ್ತುದೆನ್ನ ಕಳಕಂಠನಕಂಠಕೆ ತನ್ನ ಕೋರಕಂ |
ಗಳ ರಸದಿಂದೆ ಪಣ್ಗಳರಸಂಗಳಿನೆನ್ನ ಶುಕಾಳಿಗಳ್ಗೆ ಮಂ ||
ಜುಳಮಧುರೋಕ್ತಿಯಿತ್ತುದದು ಮಲ್ಲದೆ ಪಲ್ಲವಬಾಣಮೀವುದೆ |
ನ್ನಳಿಯನೆ ಪೂಗಳಿಂ ಪೊರೆವುದೆಂದದನಾಮದನಂ ನಿರೀಕ್ಷಿಪಂ || ೫೭

ಚೆಂದಳಿರಂದವೆತ್ತ ಪೊಸಗಾಸೆ ಮದಾಳಿಗಳಿಂಚರಂ ನಯಂ |
ಗುಂಡದಕಿಂಕಿಣೀಕ್ವಣಿತ ಮುದ್ಗತಕೋರಕಹಸ್ತಶಾಖೆಯೊ |
ಳ್ಕೆಂದಳಜೋರ್ಣಮಮೋ ಪಿಡಿದಚಾಮರವಾಗಿರೆ ದೇಸಿವೆತ್ತುತ |
ನ್ನಂದನರಂಗದೊಳ್ಕುಣಿದಳಾಮ್ರಲತಾನಟಿ ಮಚ್ಚಿ ಮನ್ಮಥಂ || ೫೮

ಕಂ|| ಪಲ್ಲವದೊಳಿರ್ದು ಕೋಗಿಲೆ |
ಮೆಲ್ಲನೆ ದನಿಗೈಯೆ ತತ್ಪ್ರಸೂನದೊಳಳಿಗಳ್ ||
ಮೆಲ್ಲುಲಿಗುಡೆ ಮಾವುಂ ಪೊಸ |
ಮಲ್ಲಿಗೆಯುಂ ಕೂಡಿ ಪಾಡುವಂತಿರೆ ತೋರ್ಕುಂ || ೫೯

ವ|| ಅದಲ್ಲದೆಯುಂ

ವೃ|| ಗಿಳಿಗಳ್ಮತ್ತೊಂದುಪಣ್ಣಂತುಡುಕುಗುಮಳಿಗಳ್ಪೋಗಿಮತ್ತೊಂದುಪೂಪೊ |
ಕ್ಕಳಿವಂಡಂ ಪೀರ್ಗುವಿೂಕೋಕಿಳಶಿಶುಗೆಲೆ ನೀನಲ್ಲದಾರುಂಟು ನಿನ್ನೊಳ್ ||
ತಳಿರೆಂದಿಂಗಪ್ಪುದೆಂದೇ ಬಯಸಿ ಮಧುಗೆ ಮೌನವ್ರತಂಗೊಂಡುದೈ ಕೇ |
ಳಿಳಮಾವೇ ಪತ್ತರೊಳ್ಕಾಣದಿರಿದನೆನುತುಂ ಕಾಯಜಂ ಕಯ್ಯೊಳಿತ್ತಂ || ೬೦

ವ|| ಮತ್ತಂ

ವೃ|| ಅಳಿಕುಳಮೆಲ್ಲ ಪೀರ್ದೊಡಱಿಯಾಗದಸನ್ಮಧು ಮಂದಮಾರುತಂ |
ಸೆಳೆದೊಡೆ ಕುಂದದಿರ್ಪನರುಗಂಪಲರೊಳ್ಗಿಳಿವಿಂಡು ಪೀರ್ದೊಡಂ ||
ಕಳೆಯದೆ ತುಂಬಿ ತೀರ್ಪರಸವಾಪೊಸಪಣ್ಗೊಳನೇಕಕೋಕಿಳಾ |
ವಳಿ ಮುರಿದೊಟ್ಟೆ ಪಿಂಗದ ತಳಿರ್ಕಿರುಮಾಮರದೊಳ್ಮನೋಹರಂ || ೬೧

ಕಂ|| ಅಲಗೊಂಚಿನಲ್ಲಿ ತುಂಬಿಗ |
ಳುಲಿ ಮಿಳಿರ್ವೆಳದಳಿರನಾಂತಕೊಂಬುಗಳೊಳ್ಕೋ ||
ಗಿಲೆಗಳ ಕಳರುತಿ ಪಣ್ಗ |
ಳ್ಗೆಲಸಿದನಿಡುಗೊಂಚಿನಲ್ಲಿ ಪುರುಳಿಗಳ ರವಂ || ೬೨

ಅಳಿಗಳೊಡನೊಡನೆ ದನಿಗುಡೆ |
ಗಿಳಿಗಳ್ನಲಿನಲಿದು ಮಾರವೀರನ ಬಿರುದಾ ||
ವಳಿಯಂ ಪಾಡುತ್ತಾಡಿದು |
ವೆಳಗಾಳಿಗೆ ತೊನೆವತಳಿರ್ಗಳುಯ್ಯಲನಾಗಳ್ || ೬೩

ವ|| ಇಂತೊಪ್ಪುವಮಧುಮದನ ಮನೋಹರಂಗಳಾದ ಮಾಮರಂಗಳಲ್ಲದೆಯುಂ

ಕಂ|| ಅಸುಗೆ ತಳಿತ್ತು ವಿಯೋಗಿಗ |
ಳಸುಗೆ ಕರಂ ಮುಳಿಗುಮೆಂದು ಮುಳಿದೊದೆಯೆ ವಧೂ ||
ವಿಸರಂ ತತ್ಪದಯಾವಕ |
ರಸಮುಮರ್ದವ್ವೊಲೆಸೆದುದದರ ಚೆಂದಳಿರ್ದುರುಗಲ್* || ೬೪

ಸಿರಿಯುಳ್ಳೊಡಳಿಗಳಿಂದೀ |
ವರದೊಳ್ಬಿಡದಿರ್ದ್ದ ತೊಲಗೆ ತೊಲಗುತೆ ವಿಕಚಾಂ ||
ಬುರುಹದೊಳೆ ನೆಲಸೆ ನೆಲಸಿದು |
ವರರೆ ಗತಶ್ರೀಕನಪ್ಪನಂ ಸೇವಿಪರಾರ್ || ೬೫

ಬನಸಿರಿ ಸುರವರಲೋಕದ |
ಬನಸಿರಿಗುರೆ ತೋರಲೆಂದು ನಿಜವಿಭವಮನಂ ||
ದನುನಯದಿಂ ಕಟ್ಟಿದಕಾಂ |
ಚನತೋರಣಮೆನಿಸಿ ಕರ್ಣಿಕಾರಂ ಮೆರೆಗುಂ || ೬೬

ವೃ|| ಇದು ಮಧುದತ್ತಮೌಕ್ತಿಕಮೊ ಮಂಜುಳಚೂತಭುಜಂಗಸಂಗದಿಂ |
ದೊದವಿದಘರ್ಮವಾರಿಕಣಮೋ ರತಿದೇವಿ ವಿನೋದದಿಂದೆ ಸೂ ||
ಸಿದಜಳಯಂತ್ರಚಂದನಗತೋದಕಶೀಕರಮೋ ಮುದಾಳಿವೃಂ |
ದದ ಕೃತಪುಣ್ಯದೊಂದುರುಳಿಯೋ ಪೊಸಮಲ್ಲಿಗೆ ತಾಳ್ದಮೊಗ್ಗೆಯೋ || ೬೭

ವ|| ಎನಿಸಿರಂಜಿಸೆ

ಕಂ|| ಕಳೆದುದು ಮಧುಮದಮಧುಪಂ |
ಗಳ ವಿಪುಳಭ್ರಾಂತಿಯುಂ ನಿಜಪ್ರಸವರಸಂ ||
ಗಳಿನಾವಿಚಕಿಲಲತೆ ನಿ |
ರ್ಮಳರೆಜೆಗೈದಿದೊಡೆ ಮಾಡರೇ ಪರಹಿತಮುಂ || ೬೮

ವೃ|| ತರುಣಾಮ್ರಕೆಳ್ಕಳಗಾದವೋಲ್ತೊಲಗಳೆಂದುಂ ಬಂದತಂಗಾಳಿಯುಂ |
ಭರದಿಂದಪ್ಪುವಳಲ್ಲಿ ಜಾರೆ ವಸನಂಬೋಲ್ಬೀರ್ಣಪರ್ಣಂ ಸುಮಾ ||
ಧರಮುಂ ಚುಂಬಿಪತುಂಬಿಗೀವಳಿವಳಾಗಳ್ಸ್ಫಟಳೀನಾರಿ ಪಾ |
ದರಿಯೆಂದೊಳ್ಪೆಸರಿಟ್ಟನೀಕೆಗಜನೆಂದಂಗೋದ್ಭವಂ ಮುಚ್ಚುವಂ || ೬೯

ವ|| ಆನಂದನಾಂತರಾಳದಲ್ಲಿ

ವೃ|| ತಿಳಿಗೊಳದಲ್ಲಿ ಸುತ್ತಿ ಸುಳಿಪೆತ್ತಿ ಸರೋಜಪರಾಗಪೂಗಮಂ |
ಗಳಿಲನೆ ಪೊತ್ತು ಬರ್ಪೆಡೆಯೊಳುಯ್ಯಲನಾಡುವ ಗಾಡಿಕಾರ್ತಿಯ ||
ರ್ಕಳ ಪೊರವಾರ್ಗಳಪ್ಪಳಿಸೆ ತೊಪ್ಪನೆ ಬೀಳ್ದಲರೆಯ್ದೆ ನೊಂದು ಸಂ |
ಜಳಗತಿಯಿಂ ಮದಾಳಿನಿನದಚ್ಛಲದಿಂ ನರಳುತ್ತೆ ಬರ್ಪಿನಂ || ೭೦

ಗಿಳಿವಾತಿಂದುಪಚಾರಮಾಡಿ ತಳಿರ್ಗೈಯಿಂದಿತ್ತಬಾರೆಂದು ಕೋ |
ಕಿಳಜಂಜೂದಳಿತೋರುಕೋರಕರಸಸ್ನೇಹಂಗಳಿಂ ಸೀವಿ ಸಿ ||
ಶ್ಜ್ವಳಭೃಂಗೀರವದಿಂದೆ ಮಂತ್ರಿಸಿ ರಸಾಲಂ ರಕ್ಷೆಗೈದಾತನಂ |
ಕಳೆಗೊಂಡಂ ತನಗಾತಸಂದೆಸಗೆ ಲೇಸಂ ಮುಯ್ಯಸೀವಂತೆವೋಲ್ || ೭೧

ಮಾವಿನೊಳೇರಿ ಮಲ್ಲಿಗೆಗೆ ಪಾರಿ ಮರಂದದೊಳಳ್ದು ಜಾರಿ ಕೆಂ |
ದಾವರೆಗೋಡಿ ಕೇಸರದೊಳಾಡಿ ಕರಂ ಮಧುವೀಂಟಿ ಪಾಡಿ ಮೆ ||
ಲ್ಲಾವರಮೆತ್ತಿ ಮಾಧವಿಯುಮೊತ್ತಿ ಮಹೋತ್ಸವದಿಂದೆ ಸುತ್ತಿ ಭೃಂ |
ಗಾವಳಿ ಧೂಳಿಯುಕ್ತಕುಸುಮಾಳಿಯೊಳಾಂತುದು ಚಾರುಕೇಳಿಯಂ || ೭೨

ವ|| ಮತ್ತಮಸಂಗತೇಜದೊಡನೆ ಚಂಪಕನಿಕಾಯಮುಂ ಪೆಂಪುವಡೆಯೆ ರತಿಯು
ಮೊಗದೊಡನೆ ಸುರಯಿ ಸೊಂಪುವಡೆದಲರೆ ಜತಿಗಳ ಧೃತಿಯೊಡನೆ ಜಾತಿ ಬೀತಿರೆ
ಮುಸಿದಿನಿಯಳ್ಗೆ ಕಾಲ್ಗೆರಗಿ ಪಲ್ಗಿರಿವ ಕಾಮಿಜನವದನದೊಡನೆ ದಾಡಿಮಂ ಬಿರಿ
ಯೆ ಪಥಿಕರ ಮುಖದೊಡನರಸೇರಿಲ್ಪಣ್ತು ಕಳ್ತಲಿಸೆ ಕೊಳದ ಜಳಂಗಳೊಡನೆ ತಿಳಿ
ವೆಳ್ದಿಂಗಳುಜ್ಜ್ವಲಿಸೆ ವಿರಹಿಸಂತಾಪದೊಡನೆ ತಪನದ್ಯುತಿ ಕಡುವಿಸುವುದಳಿಮು
ವಿಜೃಂಭಿಸೆ ಬಂದಘಾವಸಜನಮನೋಜ್ಞಮಾದಮಧುಮಾಸದಲ್ಲಿ

ವೃ|| ಅಳಿಮುಳಿಸಿಂಬಿಪರ್ಣ್ಣಲೆ ಕಳಲ್ದುದು ಸದ್ವೃತಿಯುತ್ಪಾಂಕುರಂ |
ಮೊಳೆತುದು ರಾಗಮೆಂಬತಳಿರೊತ್ತಿದುದುನ್ಮದಕುಟ್ಮಳಾಳಿ ಸಂ ||
ಗಳಿಸಿದುದಲ್ಲಿ ಮೋಹಕುಸುಮಂ ಪೊಸತಾಗಲರ್ದತ್ತು ಸಂಗಸ |
ತ್ಫಳಮುಮದರ್ದತ್ತು* ಕಾದಲಬಸಂಗಳೊಳಿಪ್ಪ ಮನೋಜಮಾರುತಂ || ೭೩

ವ|| ಅದಲ್ಲದೆಯುಮಲ್ಲಿ

ವೃ|| ಕೊನರಪೆ ಕೊಕ್ಕಿಸಿಂ ಸೆಳೆದು ಬಂಡಿಸಿ ಸೊರ್ಪರಸಪ್ರವಾಹಮಂ |
ಮನಮೊಸೆದೀಂಟಿ ಗಂಟಲೊಳೆ ನುಣ್ಣಿಸಿ ಪೊಣ್ಮೆ ವಿಯೋಗವೀಥಿಮೇ ||
ವನಮುಮ ಕಂಪನಂಗೊಳೆ ಪುಗಿಲ್ವುಗಿಲೆಂಬ ಪಿಕಪ್ರಸಂಗಳಂ |
ಮನಸಿಜನೊಲ್ದು ಕೇಳ್ದು ಘನಪ್ರೇಮಮುಮ್ ಬೆರಲ್ಮಿಡಿದಾವಸಂತನಂ || ೭೪

ಪೊಗಳ್ದಿಂದಂ ಚತುರಂಗಸೈನ್ಯಮನಿತಂ ನೀಂ ಕೂಡು ನೀಡಿತ್ತ ಮೂ |
ಜಗಮಂ ಮೋಹಿಪಪುಷ್ಪಚಾಪಸುಮನೋಬಾಣಂಗಳಂ ಕಯ್ಗೆ ಯೋ ||
ಗಿಗಣಂ ಮಾರ್ಮಲೆತಿರ್ಪ್ಪುದೆತ್ತ ಬಿಡದತ್ತಲ್ಪೋಪಮೇಳೆಂದು ಸಂ |
ಪಗೆಜೋಡಂ ಮಿಗೆತೊಟ್ಟು ದಿಗ್ವಿಜಯಯಾತ್ರಾರಂಭಮಂ ತಾಳ್ದಿದಂ|| ೭೫

ವ|| ಆಗಳ್

ವೃ|| ವಸಂತವನಪಾಲಕಂ ತಳಿರ ತೋರಣ ಶ್ರೇಣಿಯಿಂ |
ರಸಂಬಿಡಿದಪಣ್ಗಳಿಂದಲರ್ದ* ಪುಷ್ಪಗುಚ್ಛಂಗಳಿಂ ||
ಮುಸುಂಕಿ ವನಮೆಲ್ಲಮಂ ಕರೆದು ಕಾಮನಂ ಪ್ರೇಮದಿಂ |
ಜಸಂಬಡೆದಬಾಣಮಂ ಪಿಡಿದು ಕಾಣ್ಕೆಯಂ ನೀಡಿದಂ || ೭೬

ವ|| ಇಂತು ವಿಶ್ವಜನಮನಮಂ ಬನಮುನೊರ್ಮ್ಮೆ ಸೊಂಪೇರಿಸುತ್ತುಂ ಬಂದಬಸಂತಮಾಸದೊಳೊಂದುವಾಸರದುಷಃಕಾಲದೊಳುಮಾಕಾಂತನಂ ಪೂಜಿಸಿದನಂತರಂ

ವೃ|| ರಮಣೀಸಸ್ಮೇರವಕ್ತ್ರಾಂಬುರುಹವಿಸರದೊಳ್ಕಾಮಿನೀದೋರ್ಲತಾಲಿ |
ಭ್ರಮದೊಳ್ಕಾಂತಾಕಚಾಳಿಪ್ರಚಯದೊಳಬಲಾಂಘ್ರಿಪ್ರವಾಳೌಘದೊಳ್ಚಂ||
ದ್ರಮುಖೀಸಂಗೀತಝಂಝತ್ಕಿಕಳರುತಿಯೊಳ್ಕಾಮಿನೀ ಮಂದಹಾಸೋ |
ದ್ಗಮದೊಳ್ತಾನಿರ್ದ್ದನಾಸ್ಥಾನದೊಳತುಳವನಸ್ಪರ್ಧಿಯೊಳ್ಭೂವಸಂತಂ|| ೭೭

ಕುಂದಮಂದಹಾಸಮಂಜುಳಾಂಬುಜಪ್ರಭಾಸನೇ |
ಚಂದನೇಂದುಗೌರಶಂಕರಾಂಕಪೀಠಿಕಾಶ್ರಿತೇ ||
ನಂದಿತೇಂದಿರಾವಿಶಕ್ತಿವಂದಿತಾಂಘ್ರಿಪಂಕಜೇ |
ಚಂದಮೊಂದೆ ರಕ್ಷಿಸೆನ್ನನಿಂದು ಸರ್ವಮಂಗಳೇ || ೭೮

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣಮಹಾಪ್ರ
ಭಾಪಟಲಪರಿವೃತಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂ
ದ್ರಚಂದ್ರಿಕಾಚಂಚಚ್ಚಕೋರಾಯಮಾಣಸರಸಜನಮಾನಿ
ತೋಭಯಕವಿತಾವಿಶಾರದಶ್ರೀಷಡಕ್ಷರದೇವವಿರಚಿ
ತಮಪ್ಪ ರಾಜಶೇಖರವಿಳಾಸವಿಪುಳಪ್ರಬಂಧ
ದೊಳ್ಹೇಮಂತವಸಂತಋತುವರ್ಣ
ನಂ. ನವಮಾಶ್ವಾಸಂ.
ಸಂಪೂರ್ಣಂ.

---

# ದಶಮಾಶ್ವಾಸಂ

ಕಂ|| ಶ್ರೀಗಿರಿರಾಜಸುತಾಸುಖ |
ಸಾಗರರಾಕಾಶಶಾಂಕನಕಳಂಕನಶೇ ||
ಷಾಗಮನುತನಭವಂ ಬಿಡ |
ದೀಗೆಮಗೆ ನಿಜಾಂಘ್ರಿಭಕ್ತಿಯಂ ಶಿವಲಿಂಗಂ || ೧

ವ|| ಅಂತುಮಾಯುವರಾಜಂ ರಾಜಿಸುತ್ತಿರ್ಪ್ಪಿನಮೊರ್ವ್ವಂ ದ್ವಾರಪಾಪಾಲನಿವಾರಿತಂ ವೇತ್ರಧರನಿವೇದಿತನಾಮಹಾಸ್ಥಾನಮಂ ಪೊಕ್ಕು ಮೆಯ್ಯಿಕ್ಕಿ ಕಯ್ಯಂ ಮುಗಿದುನಿಂದು

ವೃ|| ವನಪಾಲಂ ಕಾಣ್ಕೆಗೈದಂ ವಿಚಕಿಲದಲರಂ ಪಚ್ಚೆಯಂ ಬಾಳೆವಣ್ಣೊ |
ಳ್ಗೊನೆಯಂದಾಳಿಂಬವಣ್ಣಂಸುರಯಿಯನುರುಚಾಂಪೇಯಮಂಚೈತ್ರದೂತೀ ||
ಘನಗುಚ್ಛವ್ರಾತಮಂ ಪಾಟಳಿಯನೆಸೆವಶೋಕಪ್ರಸೂನಾಳಿಯಂ ಮಾಂ |
ಗೊನರಂ ಮಾಧೂಫಳಶ್ರೇಣಿಯನರೆವಿರಿದಂಭೋಜಮಂ ಕೂರ್ಮ್ಮೆಯಿಂದಂ ||

ವ|| ಅಂತಿತ್ತು ಸಂತಸಂ ಮಿಗೆ

ವೃ|| ಮುಗುಳ ತೊಡಂಬೆ ಮಾಧವಿಗೆ ಮಾಮರದೊಳ್ಕಳಿಕಾಳಿ ಚೆಲ್ವಮ |
ಲ್ಲಿಗೆಗೆ ಪೊದಳ್ದಪೂಗುಡಿ ಪಯೋಜಿನಿಗುಳ್ಳರಲಿಂಪುವೆತ್ತಸಂ ||
ಪಗೆಗಲರ್ಜೊಂ*ಪಮುದ್ಗಮದಮಂಜರಿ ಪಾಟಳಿಗಾಗೆ ಬಂದನಿಂ |
ದಗಣಿತಕೋಕಿಳಾಳಿಕುಳಸಂಮದಕಾರಿ ಮನೋಜ್ಞಮಾಧವಂ || ೨

ಎಳದಳಿರಿಂದ್ರಗೋಪಮಣಿಮಾಲಿಕೆ ಸೀಲದಮಾಲೆ ಮಲ್ಲಿಕಾ |
ಸುಳಿತಕುಟ್ಮಳಸ್ತಬಕಮೊಪ್ಪುವಮುತ್ತಿನಕುಚ್ಚು ಕೀರಮಂ ||
ಡಳಿಯಮುಖಂ ಪ್ರವಾಳಮಡಿಮುರ್ತ್ತಿಯಪೂಗುಡಿ ಚಾಮರಂ ಸಮು |
ಜ್ಜ್ವಳಿಸಿರೆ ಚೈತ್ರಪಾರ್ಥಿವಪವಿತ್ರಮಿದೆಂದೆಸೆಸಿತ್ತು ನಂದನಂ || ೩

ಕಂ|| ಆನೆಂದನಮಂ ವಿಜಿತಮ |
ಹಾನಂದನಮಂ ನಿಜಾಂತರಾಳಾಶ್ರಿತಲೋ |
ಕಾನಂದನಮಂ ತೋಷಿತ |
ಮಾನಂದನಮಂ ನಿರೀಕ್ಷಿಸಲ್ಕಡೆನೃಪತೀ || ೫೫

ವ|| ಎಂದು ಬಿನ್ನಪಂಗೆಯ್ದು ತೋಟವಾಳಂಗೆ ಪಸಾಯನಮನಿತ್ತು ಪಟ್ಟವಣೆಯಿಂದೆಳ್ದೋಲಗಮಂ ಪರೆಯಿಸಿ ವನಕೇಳೀಲೋಲಮಾನಸಂ ಮಾನವೇಶ್ವರಂ ಮಹೋತ್ಸವಂಬೆರಸಂತಃಪುರಕ್ಕೇಳ್ತಂದು ಸರ್ವಮಂಗಳಾಮಹಾದೇವಿಯಿರ್ಪ್ಪ ಮಣಿಮಯಮಂದಿರದೊಳಗನೆ ಪೊಕ್ಕು ನಿರೀಕ್ಷಿಪಾಗಳ್

ವೃ|| ತೊಳಗುವಭೂಷಣಪ್ರಭೆ ಮುಖೇಂದುಲಸದ್ದ್ಯುತಿ ಕಾಯಕಾಂತಿ ಕಂ|
ಗೊಳಿಸೆ ಕರಾಗ್ರಕಂಕಣಝಣತ್ಕೃತಿ ಪೊಣ್ಮೆ ಮೃಗಾಕ್ಷಿಯೊರ್ವ್ವಳು ||
ಜ್ಜ್ವಳತರ ಪಾದಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮಂ |
ಡಳಮುಖಿಯಂ ಮನೋರಮೆಯನಾನೃಪರೂಪಿನ ಮೀನಕೇತನಂ || ೭೬

ವ|| ಅಪ್ರಸ್ತಾವದೊಳ್

ಕಂ|| ಉಲಿಯೆ ಕಲಕಾಂಚಿ ಮುಡಿಯಿಂ |
ದಲರುಗೆ ಬಡನಡು ಬಳುಂಕೆ ಪೊಡರೆ ನಿತಂಬಂ ||
ನೆಲೆನೊಲೆಗಳಲುಗೆ ಬಿಡದೇ |
ಳ್ವಲತಾಂಗಿಯ ಕೈಯನೊಯ್ಯನರಸಂ ಪಿಡಿದಂ || ೭೭

ವ|| ಅಂತು ಪಿಡಿದೇಳಲೀಯದೆ ಮಣಿಮಂಚದೊಳವಳ್ಗಾಡಿ ಗಾಡಿಯಿಂ ಕುಳ್ಳಿರ್ದ್ದು

ಕಂ|| ಕುರುಳಂ ಕೂರುಗುರಿಂ ನೇ |
ವರಿಸುತೆ ಮಣಿಹಾರಮಂ ಕರಾಬ್ಜದೆ ತಿರುಪು ||
ತ್ತರಸಿಯ ಮೊಗದಾವರೆಯಂ |
ನರಪತಿ ನಡೆನೋಡಿ ನೇಹದಿಂದಿಂತೆಂದಂ || ೭೮

ವಿನುತಮಧುಲಕ್ಷ್ಮಿ ನಿಜನಂ |
ದನಾವಲೋಕನಮನೆಳಸಿ ಮಾಧವಯುತೆ ಭೋಂ ||
ಕನೆ ಬಂದು ನಿಂದು ಚಂದ್ರಾ |
ನನೆ ನಿನ್ನಂ ಕರೆದಪಪ್ಪಿಕಸ್ವನವಿಷದಿಂ || ೯

ವ|| ಅದುಕಾರಣದಿಂ

ವೃ|| ಕಳರವಮಂ ಪಿಕಾಂಗನೆಗೆ ಮಂಜುಮೃದೂಕ್ತಿಗಳಂ ಪೊದಳ್ದಪೆ |
ಣ್ಗಿಳಿಗೆ ನವೀನಯಾನಮನನೂನಮರಾಳಿಗೆ ಶಿಕ್ಷೆಗೈಯಲೋ ||
ಪಳೆ ನಡೆ ನಂದನಕ್ಕೆ ವನಲಕ್ಷ್ಮಿಗೆ ಕೌತುಕಮಪ್ಪಿನಂ ನಿರಾ |
ಕುಳಮೆನಗುತ್ಸವಂ ಬಳೆವಿನಂ ಮೃಗಶಾಬವಿಲೋಲಲೋಚನೇ || ೧೦

ವ|| ಎನೆ ನಿಜವಲ್ಲಭೆಯತಿಪ್ರಸನ್ನಮಧುರತರಕಟಾಕ್ಷಪಾತದಿನುಚಿತವ
ಚನನಿಚಯದಿನೊಡಂಬಟ್ಟುದಂ ಪ್ರಕಟಿಸಲೊಡನವಳ್ಗೂಡಿ ಗಾಡಿಯಿಂದೆಳ್ದನಂತ
ಕಾಂತಾಜನಂಬೆರಸು ಪೊರಮಟ್ಟು ಚೈತ್ರೋದ್ಯಾನಕೇಳೀಪ್ರಸ್ಥಾನಭೇರಿಯಂ ಪೊ
ಯ್ಸಲೊಡಂ

ಕಂ|| ಘನರಾಜಹಂಸಗಮನ
ಕ್ಕನುಕೂಲಮಿದೆಂದು ಗಗನದೊಡನುಸಿರ್ವವೊಲಾ ||
ಘನರಾಜಹಂಸಗಮನಮ |
ನೆನಸುಂ ಪಪ್ಪುದುದು ಪಟಹಪಟುರವಪಟಲಂ || ೧೧

ವ|| ಆಗಳ್ಪಣ್ಣಿಬಂದಸಿಂಧುರೇಂದ್ರಮನಿಂದ್ರಾಣಿಬೆರಸು ಕಾರ್ಮುಗಿಲ
ನಾರೋಹಿಪಮಹೇಂದ್ರನಂತೆ ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋ
ಹಿಸಿ ರಾಜವೀಧಿಯೊಳ್ಬರ್ಪಾಗಳ್

ವೃ|| ಇದು ಮಧುಮಿತ್ರಮತ್ತಗಜರಾಜಿಯೊ ನೋಡಿದು ಪುಷ್ಪಚಾಪನಾ |
ಖ್ಯದ ಸುರವಲ್ಲರೀತತಿಯೊ ಭಾವಿಪ್ಪೊಡಿಂತಿದು ಕಾಮತತ್ತ್ವನಾ ||
ರದ ನವಕೋಶರಾಶಿಯೊ ವಿಚಾರಿಪ್ಪೊಡಿಂತಿದು ದರ್ಪಕಪ್ರತಾ |
ಪದಪರಿಜೋಂಮುಸಂದಣಿಯೊ ಪೇಳೆನೆ ಬಂದುದು ಭಾಮಿನೀಜನಂ || ೧೨

ಕಂ|| ಪಿಡಿಗಳನೇರಿ ಕೆಲಂಬ |
ರ್ಮ್ಮಡದಿಯರರೆಬಸ್ಸೆಖಾಸನಂಗಳೊಳೆ ಕೆಲರ್ ||
ಪಿಡಿಗುದುರೆಗಳೊಳ್ಪೆರವ |
ರ್ಪ್ಪಡವಿಯೊಳಡಿಯಿಟ್ಟು ತಳರ್ದ*ರತಿಸಂಭ್ರಮದಿಂ || ೧೩

ವೃ|| ಪರಿಕಿಪುದೀಗಳೀಗಜದ ಕುಂಭದ ಜೆಲ್ವಮನೆನ್ನದೊಂದುಭಾ |
ಸುರತೆಯನೆಂದು ತದ್ಗುರುಪಯೋಧರಮೆಳ್ದಿರಿಪಂತೆ ಬೆನ್ನಸೊ ||
ತ್ತೆ ರುಚಿರತನ್ಮುಖೇಂದುವನಭೀಕ್ಷಿಸಲೈದಿದ ಚಂದ್ರಬಿಂಬದಂ |
ತಿರೆ ಧವಳಾತಪತ್ರವಿಭದಗ್ರದೆ ಬಂಡನವಂ ವಧೂಯುತಂ || ೧೪

ವ|| ಅಂತನಂತಸಂಭ್ರಮಮಿಂಬುವಡೆಯೆ ಕುಂಭಿನೀಕಾಂತನಾವನೋಪ
ಕಂಠಮಂ ಮುಟ್ಟಿಪರೆ ತೊಟ್ಟನೆ ಕಟ್ಟಿದಿರೊಳ್

ವೃ|| ಅಳಿಕುಳಪಕ್ಷತಿಕ್ಷಪಿತ ಪದ್ಮಪರಾಗರಜೋಂಕಮುದ್ಧಕೋ |
ಕಿಳಕಳನಾದಬೃಂಹಿತಮುಮಂಡಮುರಂದಮುದಾಂಬು ತತ್ಸರ ||
ಸ್ಥಳಜಳಕೇಳಿಗೆಯ್ದು ಪೊರಮಟ್ಟುದಿದೆಂಬುದನಿಂಬುಕೈದು ಕೋ |
ಮಳಮಳಯಾನಿಳಾಂಗಜಗಜಂ ಪರಿದತ್ತಿದಿರೊಳ್ಮಹೀಶನಾ || ೧೫

ವ|| ಅದಂ ಮನದೆಗೊಂಡು ಮದಗಜಸ್ಕಂಧದಿನಿಳಿತಂದು ಫಳಕುಸುಮ
ಪರಿರಚಿತಚಾರುತರತೋರಣಾನ್ವಿತಮಾದುದ್ಯಾನಪ್ರತೋಳಿಕಾದ್ವಾರಮಂ ಪೊಕ್ಕು
ಸವ್ಯಪಾರ್ಶ್ವಗಸರ್ವಮಂಗಳಾಪಾಂಗಸಂಗತನುಂ ವನವಿಹರಣಸಮುಚಿತಪರಿ
ಮಿತಪರಿಜನಾವೃತನುಂ ವನಪಾಲಪುರಃಪ್ರದರ್ಶಿತಾನಂತತರುಲತಾಸಂದೋಹಸಂ
ದರ್ಶನಾನಂದಕಂದಳಿತಹೃದಯಾರವಿಂದನುಂ ನಿಜವದನತನುಸಹಜಸೌರಭ್ಯ
ಸಮಾಕೃಷ್ಟಮದವದಳಿಪರಿಸರಣಕರಣಚಣಚರಕರಪರಿವೀಜ್ಯಮಾನಧವಳಚಾಮ
ರಜನಿತಪವನಪರಿಪತಿತಾನೇಕಸರಜಃಕುಸುಮರಸಪಿಸರಕರ್ದಮಿತಧರಣೀಭಾಗನುಂ
ನರ್ಮಸಚಿವಪ್ರಸಾರಿತಕರಪಲ್ಲವನ್ಯಸ್ತಹಸ್ತಕಮಳನುಂ ಲೀಲಾವಲೋಕನ ಸಾಂ
ದ್ರಚಂದ್ರಿಕಾನಿರಸ್ತನಿಬಿಡತರತರುಪಲ್ಲವಪಕರಯವನಿಕಾಂತರ್ಗತತತತಮಸ್ತೋ
ಮನುಮಾಗಿ ನಡೆತಪ್ಪಾಗಳ್

ಕಂ|| ನಗೆಮೊಗಮಲರ್ದ*ಂಬುಜಮಂ |
ನಗೆ ನಗೆಗಣ್ಣಗೆ ನವೀನದಳಿತೋತ್ಪಳಮಂ ||
ನಗೆ ಬೆಳ್ದಿಂಗಳಸಿರಿಯುಂ |
ನಗೆ ನಡೆತಂದಳ್ನರೇಂದ್ರವಧು ನಂದನದೊಳ್ || ೧೬

ವ|| ಮತ್ತಂ

ವೃ|| ಮಣಿಯುನೆ ಕಾತಕಲ್ಪಲತೆ ಸಿಂಜಿನಿಯುಂ ತೆಗೆದಿಟ್ಟಪುಷ್ಪಮಾ |
ರ್ಗಣನ ಧನುಶ್ಶಲಾಕೆ ಮುಗುಳೇರಿದ ಮಲ್ಲಿಗೆ ಸುತ್ತುತುಂ ನಭೋ ||
ಮಣಿರುಚಿಯುಂ ತೆರಂಬೊಳೆವಪದ್ಮಿನಿ ತಾನೆನಿಸುತ್ತೆ ತಾಳ್ದಸ |
ನ್ಮಣಿಪೆಣಿಲಜ್ಜಮುತ್ತು ಕನಕಾಂಬರದಿಂ ಕಮಳಾಕ್ಷಿತೋರಿದಳ್ || ೧೭

ವ|| ಇಂತೊಪ್ಪಿಬಪರ್ಪನಿಜವಲ್ಲಭೆವೆರಸು ಬರೆವರೆ

ವೃ|| ತಳಿರ್*ಗಳನಾಂತು ನಿಂದಸುಗೆ ಕುಟ್ಮಳಪಙ್ಕ್ತಿ ಪೊದಳ್ದಜಂಪಕಂ |
ವಿಳಸಿತಮಾದ ಪೂಗುಡಿಗಳಿಂದೆಡೆಗೊಂಡದಿರ್ಗಂತಿ ಕಾಯ್ಗಳಂ ||
ತಳೆದು ನಿಲುಂಬನಿಂದ ಪೊಸತೆಂಗು ಫಳಂಗಳಬಿಣ್ಪನಾಳ್ದು ಸಂ |
ಗಳಿಸಿದಮಾವು ತೀವಿದಬನಂ ಬಗೆಗೊಂಡಿರೆ ಕಂಡನಾನೃಪಂ || ೧೮

ಸುರಯಿಯ ಸೊರ್ಕ್ಗಂಪು ಪೊಸಸಂಪಗೆಯೊಳ್ಪಸುಗಂಪು ತೋರ್ಪವಾ |
ದರಿಗಳ ತಣ್ಪುಗಂಪು ಸರಸೀರುಹದೊಳ್ತನಿಗಂಪು ಮಲ್ಲಿಕೋ ||
ತ್ಕರದಬೆಡಂಗುಗಂಪು ಮಧುದೂತಿಯ ತಳ್ತಿನಿಗಂಪು ಚೂತವ |
ಲ್ಲರಿಯಲರಜ್ಜಗಂಪು ಬಗೆಗೊಂಡುದು ತದ್ವನದೊಳ್ನರೇಂದ್ರನಾ || ೧೯

ಕಂ|| ಎಲರಲೆಯೆ ನೆಗೆದು ಬಾಗೊಲೆ |
ವಲರ್ಗೊಂಚಲ್ಧವಳಚಾಮರಕ್ಕೆಣೆವರೆ ಸ ||
ಲ್ಲಲಿತಮಧುದೂತಿ ತಾನಿದು |
ಗೆಲೆವಂದುದು ಚೈತ್ರಚಾಮರ ಗ್ರಾಹಿಣಿಯಂ || ೨೦

ವ|| ಎಂದರಸಿಯುಕೆಳದಿಯುಪ್ಪಕಳಾರಮೆ ನುಡಿಯೆ ನೋಡುತ್ತುಂ ನಡೆ
ಯೆ ಸೌಂದರ್ಯಶಾರದೆಯೆಂಬಳಿಂತೆಂದಳ್

ಕಂ|| ಮಲ್ಲಿಗೆಯ ಮುಗುಳಕುಳಮಿಡಿ |
ದೆಲ್ಲೆಡೆಯೊಳ್ತೋರೆ ಮಿಳಿರ್ದ ಬಳಸಿರೆ ವಿಳಸ ||
ತ್ಪಲ್ಲವತತಿ ಮೆರೆವುದು ರತಿ |
ವಲ್ಲಭಮುಕ್ತಾತಪತ್ರಮೆನೆ ತರುಣಾಮ್ರಂ || ೨೧

ವ|| ಮತ್ತಂ

ಕಂ|| ಕಾಮನ ಸಾಮಜಮಿದು ಮಧು |
ಭೂಮೀಶನ ಕೋಶಮತುಳವಿಚಕಿಲಲತಿಕಾ ||
ಕಾಮಿನಿಯುರಸಂ ಮಾಮರ |
ಸೀಮರಮನ್ಯಕ್ಷಿತೀಜಮೇಂ ಮಾಮರನೇ || ೨೨

ವ|| ಅವಳ ಜಾಣ್ಮಾತುಗೇಳ್ದು ಚೆನ್ನಾದುದೆಂದು ಮಚ್ಚುತ್ತುಂಬರ್ಪಲ್ಲಿ

ವೃ|| ಪ್ರಿಯದಿಂದಪ್ಪಿರ್ದಮಲ್ಲೀವಧುವ ತನುಸುಖಕ್ಕೊಲ್ದು ಮೆಯ್ಯಿತ್ತು ಜೂತ|
ಪ್ರಿಯನಾಗಳ್ಕೋರಕಂ ಪೊಂಪುಳಿಯೆನಿಸೆ ಕರಂ ಕಂಪನಂ ಪೊಣ್ಮೆ ಘರ್ಮೋ||
ದಯತೋಯಂಬೋಲ್ಮರಂದಂ ಸುರಿಯೆ ತವೆ ತದೀಯಾಳಿಮಾಲಾಳಕಶ್ರೇ|
ಣಿಯನಾದಂ ತಿದ್ದುವಂತೊಪ್ಪಿದುದಲೆವತಳಿತ್ತಗ್ಗಿರಲ್ಪಾಣಿಯಿಂದಂ|| ೨೩

ವ|| ಅದಂ ನಿಂದು ನೋಳ್ಪರಸಂಗೆ ನರ್ಮಸಚಿವನಿಂತೆಂದಂ

ವೃ|| ಅಳಿ ನೀಲಂ ಮಿಡಿ ಪಚ್ಚೆ ಕೀರಮುಖಮುದ್ಯತ್ಪದ್ಮರಾಗಂ ಕೊನ |
ರ್ವಿಳಸದ್ವಿದ್ರುಮಮಲ್ಲಿ ತಳ್ತೆಸೆವಮಲ್ಲೀಕುಟ್ಮಳಂ ಮುತ್ತು ಚೆಂ ||
ದಳಿರಂದಂಬಡೆದಿರ್ದಪಟ್ಟಿಯೆನೆ ಜೈತ್ರಂ ಪಂಚರತ್ನಂಗಳಿಂ |
ಕೆಳೆಯುಂ ಪಂಚಶರಂಗೆ ನಿರ್ಮಿಸಿದಗೂಡಾರಂಬೊಲೀಮಾಮರಂ || ೨೪

ವ|| ಮೆರೆದಪುದೆಂಬ ನುಡಿಯುನವಧರಿಸಿ ನಡೆವಾಗಳ್ಮತ್ತೊಂದುಕುಸುಮ
ಮಿಳಿತರಸಾಲರಸಾರುಹದ ಕೆಳಗೆ

ವೃ|| ಅರಲಪರಾಗಮೆಂಬ ಪೊಸಬೇಳ್ವೆಯ ಬೂದಿಯನಿಟ್ಟುಮಲ್ಲಿಕಾ |
ತರುಣಿಯ ಭೃಂಗನೀಲಮಣಿಮಾಲೆಯನೊಯ್ವಲರೆಂಬ ಜೋರನಂ ||
ಪರಭೃತಸಂದು ಕಂಡು ಮಿಗೆ ಕೂಗೆ ಭಯಂಬಡೆದೇಳ್ದು ಕಣ್ಣನೀ |
ರ್ಸುರಿವವೊಲಾಕೆ ತದ್ವಿಕಚಪುಷ್ಪಗಳನ್ಮಧುಬಿಂದು ತೋರುಗುಂ || ೨೫

ವ॥ ಆದಲ್ಲದೆಯುಮದರ ಕೆಲದಲ್ಲಿ

ಕಂ॥ ತಳಿಗೊರ್ಗಿಂಬಿಂ ವೇಗಣ್ಗೊಗೆ ।
ವಳಿಮಾಲೆ ಮನೋಜ್ಞಮಾದುದಾಮ್ರಂ ಮಲ್ಲೀ ॥
ಲಳನೆಯೊಡವೆರೆದೆಲರನುರೆ ।
ಮುಳಿದಿರಿಯಲ್ಕಡಿದಕೈದುವೆನೆ ಕರತಳದಿಂ ॥ ೨೬

ವ॥ ಆದಂ ನಿರೀಕ್ಷಿಪನೃಪಂಗೆ ದೇವಿ ನುಡಿದಪಳೆಂದು ಕಳಾರಮೆಯಿಂ
ತೆಂದಳ್

ಕಂ॥ ಎಲರಲುಗಿದೊಡಲರ್ವಡಿ ತ ।
ನ್ನಲರ್ಗಣ್ಣೊಳ್ನಸೆ ಮಲ್ಲಿಕಾವಧು ಬಂದುಂ ॥
ಬಲಿಯೂದುವಂತೆಸೆಯೆ ಬಾ ।
ಷ್ಪಲವಂ ಸುರಿವಂತೆ ಮಧುಕಣಂ ಬಿಡೆ ಮೆರೆದಳ್ ॥ ೨೭

ವ॥ ಎಂಬುದುಮದಕ್ಕೆ ಮಚ್ಚುರ್ತಿಪ್ಪಿನಂ ಪೆರತೊಂದುಮಲ್ಲಿಕಾವಲ್ಲಿಯುಂ
ತೋರಿತಾನುಮಿಂತೆಂದಳ್

ವೃ॥ ಅಳಿಮಿಂಡಿಂಗಲರ್ವಂಡನಲ್ಲಿ ಗಿಳಿಗಳ್ಗಿಂಜಾಡಪಣ್ಣಂ ಪಿಕಾ ।
ವಳಿಗಾಕೋರಕಮಂ ಪ್ರಸೂನವಿಳಸತ್ಸೌರಭ್ಯಮಂ ಮಾರುತಂ ॥
ಗೆಳವಾವಿತ್ತುದಿದಕ್ಕೆ ಮಿಕ್ಕಮರನೊಂದುಂ ಸಾಟಿಯಲ್ತೆಂದುಮಂ ।
ಜುಳಮಲ್ಲೀವಧು ಬಣ್ಣಿಪಳ್ಪ್ರಗತಭೃಂಗೀನಿಸ್ವನವ್ಯಾಜದಿಂ ॥ ೨೮

ವ॥ ಎನೆ ಜನ್ನಾದುದೆಂದು ಮುಂದಣ್ಗೆ ನಡೆತಂದೊಂದುರಸಾಲಸರಳ
ಶಾಖಾಗ್ರದೊಳ್ತನಿವಣ್ಣಂ ಮನದಸ್ನೆಳೊಡನೆ ಸವಿವರಗಿಳಿಯುಂ ನಿಜಾಪಾಂಗಪಲ್ಲ
ವದಿಂ ನಲ್ಲಳ್ಗೆ ತೋರಿ

ವೃ॥ ಎಳದಳಿರಂ ಕದುರ್ಕಿಂಕಿ ಕನಲೊಂದಿದತಪ್ರಸವಿಾಂಟಿದತ್ತು ಕೋ ।
ಕಿಳನಳಿ ಧೂಳಿಯೊಳ್ಬೆರೆದ ಪುಷ್ಪರಸಂಗೆನುಂಡುದಿಲ್ಲಿ ಕೇಳ್ ॥
ಗ್ಗಿಳಿಯುಮೊಳೇನಿವೆಲ್ಲವಿನಿವಣ್ಣಿನಿದಂ ಸವಿದಪ್ಪುವೇಯೆನು ।
ತ್ತೆಳಸಿ ಮನೋಜನಿಟ್ಟನಿದು ಪಂಚಿತವಕ್ತ್ರಯೆನುತ್ತೆ ನಾಮಮಂ ॥ ೨೯

ವ|| ಎಂದದರ ಪರಿಸರದೊಳ್ಸೊಂಪುವಡೆದಲರ್ದಚಂಪಕಮಂ ತೋರಿ

ವೃ|| ಪಾರುವ ಪಾಯ್ವ ಸಂದಣಿಪ ಸುತ್ತುವ ಪತ್ತುವ ಭೋಂಕನೈದುವಿಂ |
ಪೇರಿದಪೂದೊಡಂಬೆಯನೆ ನೋಡುವ ಪಾಡುವ ಜೋಲ್ವಬೀಳ್ವಬಾ ||
ಯೂರುವ ಮತ್ತೆಮತ್ತೆ ಮಧುವೀಂಟುವ ಸೊರ್ಕ್ಕಿನವಳಿಪ್ರತಾನಮಂ |
ಜಾರಿಸಿದತ್ತು ಸಂಪಗೆ ಮಧುಪ್ರಿಯರುಜ್ಜ್ವಲಸೇವ್ಯರಕ್ಕುಮೇ || ೩೦

ವ|| ಎಂದು ಚತುರಜನಚಕ್ರೇಶ್ವರಂ ನುಡಿದು ನಡೆವಾಗಳದರ ಮುಗುಳಂ ಬಗೆದು ಭಾವಿಸಿ ನಿಜಸಖಿಗೆ ದೇವಿಯಿಂತೆಂದಳ್

ಕಂ|| ಅಳಿನೀಶಿಂಜಿನಿಗಿದು ತಾ |
ನಳವಡದೆಂದುಳಿದು ಕಳೆದು ಚಂಪಕದಲರಂ ||
ಕೆಳದಿ ಮನೋಜಂ ತಳ್ವದೆ |
ತಳೆದಂ ಮಿಕ್ಕಲರ ತಳಿರ ಶರಸಮುದಯಮಂ || ೩೧

ವ|| ಎಂಬನುಡಿಯಂ ಕೇಳ್ದು ಮುರ್ಚ್ಚಿತಲ್ಲಿಂ ತಳರ್ದು ಮಧುಲಕ್ಷ್ಮೀಮಧುರತರವಿಳಾಸಮಂ ಬಗೆಗೊಂಡು ಪೊಗಳುತ್ತುಂ ಬರೆವರೆ ವನಮಧ್ಯದ ತೆರಂಬೊಳೆವ ತೆರಪಿನೊಳಳವಟ್ಟ ಕೊಳವೇರ್ಗ್ಗಳ ಕೇರ್ಗ್ಗಳೊಳಗೆ ತಮಾಲದೆಳದಳಿರಂ ಕೊರೆದು ಚಿತ್ರಪತ್ರಮಪ್ಪಂತೆ ಪತ್ತಿಸಿ ನಟ್ಟಪೊಂಬಾಳೆಯ ಬಾಳ್ಗಂಬಂಗಳಿಂ ಸೋಗೆವೆರಸಿದ ಪುಂಡ್ರೇಕ್ಷುದಂಡಂಗಳನಮರ್ಚ್ಚಿ ಬಾಳವೇರ್ಗ್ಗಳಿಂ ಬಿಗಿದೆಸೆಯೆಸೆಯೊಳ್ಸಂಪಗೆಯಬಿರಿಮುಗುಳ್ಗಳಂ ತೆತ್ತಿಸಿ ನಿಬಿಡಮೆನಿಸಿ ನಿಮಿರ್ಚ್ಚಿದ ಪೊಂಗೇದಗೆಯ ನುಣ್ಗರಿಯ ಒಲ್ಲಂತೆಗಳಿಂ ಚಂದನರಸಂಗಳಿಂ ತೊಯ್ದೆಳೆಯುದವಸದ ಮೇಲ್ವೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿ ರಚಿಸಿದ ಕರ್ಣಿಕಾರದ ಪಲಗೆಗಟ್ಟಿನೆಸೆಯೆಡೆಯೊಳರೆಯಸಳ್ಗಳಂ ನೆಗಪಿ ಕೀಲಿಸಿದಪೊಂದಾವರೆಯ ಮೊಗ್ಗೆಗಳನುಣ್ಬೊಗರಿಗಳಿಂ ಮಲ್ಲಿಗೆಮುಗುಳಸೂಸಕಂಗಳಂತೊಡರ್ಚ್ಚಿ ನಿಮಿರ್ಚ್ಚಿದ ಚೂತಪಲ್ಲವದ ಚುಂಚುಲೋವೆಯಿಂ ಸರಸಪರಿಮಳಕೆ ಸಾರ್ಗೊಂಡೆರಗಲಪ್ಪಳಿಪಳಿಪ್ರತಾನಮನೊಳಗಣ್ಗೆ ಪೋಗಲೀಯದೆ ಸೋದುಕಳಿಪೆಳಗಾಂಗಿನ ಬಾಗಿಲ್ವಾಡದ ಕಾಪಿನ ಚಾಂಪೇಯನಿ

ರ್ಮಿತಮಾದ ಜಂತ್ರದಪುತ್ತಳಿಗಳಿಂ ಕುಂಕುಮರಸದೊಳಳ್ದಿದಕುಮುದಮುಕು
ಳದ ವೊಳೆಗಳಂ ತೊಡರ್ಚಿ ಮಾಡಿದ ಮೃಣಾಳನಾಳದಮಳ್ಗದಂಗಳಿಂ ರಂಜಿಸಿ
ಕಂಪಿನ ಕರಂಡಕಮುಂ ತಣ್ಪಿನ ತವರ್ಮನೆಯುಂ ಸಿಂಗರದ ಲೀಲಾಭವನಮು
ಮೆನಿಸಿರ್ದವಸಂತಮಂಟಪದ ಮಧ್ಯದ ಮಕರಂದರಸದ ತುಂತುರಂ ತೂರುವಪ
ಜ್ಜಳಿಪಗೊಜ್ಜಗೆಯುರಲ ಜಂತ್ರದ ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯುರಲ
ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿನೊಳರಸಿವೆರಸಿ ಕುಳ್ಳಿ
ರ್ದ್ದ ನರೇಂದ್ರಂ ಚಂದ್ರಧರಪೂಜೆಗೆ ಮನಂದಂದು ಸುಂದರೀಜನಮಂ ಬನದೊ
ಳ್ಪೂಗೊಯ್ಯಲ್ಬೆಸಸಿ ಗಾನವಿದ್ಯಾಧರಿಯೆಂಬ ವೀಣಾಪಾಣಿಯ ನಗೆಮೊಗಮಂ
ನಡೆನೋಡಿದಾಗಳ್

ವೃ|| ಗಮಕಂ ತಳ್ತಿರೆ ತಾಯೆ ಮಿಂಚಿರೆ ಚಮತ್ಕಾರಂ ಕರಂ ಪೊಣ್ಮೆ ದೇ |
ಸೆ ಮನಂಬೊಕ್ಕಿರೆ ಮೂರ್ಛನಾಪ್ರಸರಮುಂ ಚೆಲ್ವಾಗೆ ಪಂಚಪ್ರಪಂ ||
ಚಮದಿಂಬಾಗಿರೆ ತೇನತೇನವೊದವಲ್ತಾನಂಲಯಂ ಮುಂಚೆ ಸಂ |
ಭ್ರಮದಿಂ ಬಾಜಿಸಿದಳ್ಬಜಾವಣೆಯಿನಂದಂಬೆತ್ತವಳ್ವೀಣೆಯಂ || ೩೨

ವ|| ಅದಂ ಕೇಳ್ದು ಮರ್ಚ್ಚತಿರ್ದ್ದನಿತ್ತಲ್ವಿಳಾಸಿನೀಜನಂ ಪರಿತಂದು
ಪೂಗೊಯ್ಯಲೆಂದು ಮನಂದಂದು ಸಂದಣಿಸಿ ನಿಂದು

ವೃ|| ಸಡು ನಸುಬಳ್ಕೆ ನೇತ್ರರುಚಿ ನಿಳ್ಕೆ ಮುಖೇಂದುಮರೀಚಿ ತುಳ್ಕೆ ಪೊಂ |
ಗೊಡವೊಲೆ ಪೊಣ್ಮೆ ಘರ್ಮಜಳಮುಣ್ಮೆ ಮನೋಭವನಣ್ಮೆ ಬಟ್ಟಬ ||
ಲ್ಮುಡಿ ಕಡುಜಾರೆ ಮಂದಗತಿ ಮೀರೆ ಮದಾಳಿಗಳೊಂದಿ ಪಾರೆ ಮೇ |
ಣ್ಪಡಿಯೆ ನಿತಂಬಮೈದಿದುದಳುಂಬಮುದಾತ್ತವಧೂಕದಂಬಕಂ || ೩೩

ವ|| ಅಂತೈದಿವಂದು ಕುಸುಮಾಕರವನಮಧ್ಯದೊಳ್ನಿಂದು

ಕಂ|| ಚೆಂದಳಿರ ಕರಂಡಕಮರ |
ವಿಂದದಳಸ್ಫುಟಿಕೆ ಕದಳಿಯೆಲೆವಡಲಿಗೆ ಚೆ ||
ಲ್ವೊಂದಿರೆ ಕರದೊಳ್ತಳೆದೊಲ |
ವಿಂದಂ ನೆರೆನೆರೆದು ಪರೆದು ಪೂಗೊಯ್ವೆಡೆಯೊಳ್ || ೩೪

ಕರತಳದರುಣದ್ಯುತಿ ತ |
ಳ್ತಿರೆ ಬಂದುಗೆಗೆತ್ತು ನೋಡೆ ಕಣ್ಗದಿರಳುದೊರ್* ||
ಪ್ಪಿರೆ ಶಂಕೆ ತೊಲಗೆ ಮಲ್ಲಿಗೆ |
ಯರಲಂ ಮನವೊಲ್ದು ಕೊಯ್ದುಳೆಳವೆಣ್ಣೊರ್ವ್ವಳ್ || ೩೫

ವ|| ಮತ್ತಂ

ಕಂ|| ವನವಸಥಿಯಲ್ಲಿ ಜನಿಸಿದ |
ಘನಮೌಕ್ತಿಕದಂತೆ ಮೆರೆವಮಲ್ಲಿಗೆ ಮುಗುಳಂ ||
ವನಜಾಲಯೆಯಂತೊಪ್ಪುವ |
ವನಜಾನನೆಯೊರ್ವ್ವಳಾಯ್ದಳತಿಸಂಭ್ರಮದಿಂ || ೩೬

ಅಳಿಗೆ ಪಗೆಯಾದೊಡೇನೆ |
ನ್ನಳಕಾಳಿಗೆ ಕೆಳೆಯಿದೆಂದು ಸಂಪಗೆಯ ಸಮು ||
ಜ್ಜ್ವಳಮುಕುಳಕುಳಮನಾಯ್ದ |
ಳ್ಕಳಶಸ್ತನೆ ಕರಜರುಚಿರರುಚಿ ತುಳ್ಕುವಿನಂ || ೩೭

ಮಿಸುನಿಯೊಳಿಸಗಿದಪೂವೆನೆ |
ಮಿಸುಗುವ ನವಕರ್ಣಿಕಾರಮಂ ಕೊಯ್ವಳೆಬೆ||
ಳ್ಪೆಸೆವಕರಜಾಂಶು ತಳ್ತಿರೆ |
ರಸಲಿಪ್ತಂ ಕನಕಚಷಕಮೆನೆ ಕಣ್ಗೊಳಿಕುಂ || ೩೮

ಮೊದಲೊಳ್ಸಂಪಗೆಯರಲಂ |
ಸುದತಿ ಕರಂ ಕೊಯ್ದು ಮುಡಿದು ಬಳಿಕುಳಿದಲರಂ ||
ಚದುರೆಸೆವಿನಮೊರ್ವ್ವಳ್ಮೃಗ |
ಮದಗಂಧಿ ಗಜೇಂದ್ರಯಾನೆ ತಿರಿದಳದೊರ್ವ್ವಳ್ || ೩೯

ವ|| ಪೆರತೊಂದುಚಂದನಮಹೀಜದಲ್ಲಿ

ಕಂ ಜಡೆ ಮರವಾವೆಂದು ನವಿ |
ಲ್ಪಿಡಿಯಲೊಡಜ್ಜಿರೆ ವರಾಂಗಿ ಬೆದರ್ದೀಕ್ಷಿಸೆ ಕ* ||
ಣ್ಗಡೆವೆಳಗುಗಂಡು ಮಿಂಚೆಂ |
ದೊಡನದು ಗರಿಗೆದರ್ದು* ನಲಿದುನರ್ತಿಸಿತಾಗಳ್ || ೪೦

ವ|| ಮತ್ತಮೊಂದೆಡೆಯೊಳ್

ಕಂ|| ಮರದೆಲೆವೊದರೊಳ್ಮೃಗರೆ |
ದಿರುತರಲಂ ಕೊಯ್ಯಲೊರ್ವ್ವಳಿಡೆ ಕಯ್ಯನದಂ ||
ತರುಣಿ ಪೆರಳ್ತಳಿರ್ಗೆತ್ತೇಂ |
ಕರಮುಟ್ಟಳೊ ಕೆಲದ ಕೆಳದಿಯರ್ನ್ನಗೆ ಬನದೊಳ್ || ೪೧

ವ|| ಮತ್ತಮೊರ್ವ್ವಳ್

ಕಂ|| ತಳಿರ್ಗೊಯ್ಯಲೆಂದು ಕನಕೋ |
ಜ್ಜ್ವಳರುಚಿತನುಪಡರ್ದ ನವತಮಾಲದ ತರುವಂ ||
ಸೆಳೆಮಿಂಚು ಜಳದಮಂಡಲ |
ದೊಳೆ ಥಳಥಳಿಪಂತೆ ಕಣ್ಗೆ ದೇಂ ತೊಳಗಿದಳೋ || ೪೨

ವ|| ಅಶೋಭಾವತಿಯಲ್ಲದೆಯುಂ

ಕಂ|| ತರುಣತಮಾಲದ ತರುವಂ |
ತರುಣಿ ಕರಂ ಪತ್ತಿಪೊಕ್ಕವಳ್ನೆಯಿಸಿದಳ್ ||
ಸ್ಮರನಸಿಲತೆಯುಂ ಕಾರೊರೆ |
ಗಿರದೊಳಪುಗಿಪ್ಪೊಂದುಭಾವಮಂ ಬನದೆಡೆಯೊಳ್ || ೪೩

ಚೆಂದಳಿರೊಳೊಂದೆ ಮೈ ಮೊಗ |
ಪೊಂಪೊಗೆದುದು ಕುಂಕುಮಾಂಕಿತಂ ಸಂಜೆಯುಕೆಂ ||
ಪೊಂದಿದ ಮೂಡುವ ಪರಿಪೂ |
ರ್ಣ್ಣೇಂದುಗೆ ಪಡಿಯೆನಿಸುತಸುಗೆ ಯುವರ್ದಂಗನೆಯಾ || ೪೪

ವ|| ಪೆರತೊಂದೆಡೆಯೊಳೊರ್ವ್ವ ಪೃಥುನಿತಂಬೆ

ಕಂ|| ಜಡಿವನಿತಂಬಂ ಮುಡಿವೊಲೆ
ಯುಡೆಯಲ್ಬಿಡಿದಿರೆ ಪರಾಂಗಿಯುಸುಗೆಯುಮುದದೊಳ್ ||
ಪಡೆದಳ್ಬಡದೊಳ್ಪಡೆದೊಡೆ |
ದೊಡನಿಡಿದೆಳೆದಿರೆ ನಡೆದೊಳ್ಪರ್ಕ್ಕೆಭರದಿಂ || ೪೫

ವ|| ಅತಳಿರಂ ತನ್ನಸೋಮ್ಮ್ರ್ಡಿಯೊಳ್ಮಡಿದು ನಳಿನಾಕರಕ್ಕೆ ಬಂದು

ಕಂ|| ಕೊಳದೊಳಲರ್ದ*ಬ್ಜದಲರಂ |
ನಳಿನೇಕ್ಷಣೆ ಮುಱಿವೆನೆಂದು ಪುಗೆ ತೆರೆವ್ರೊಯ್ಲ್ಲಿಂ ||
ಮುಳುಗುತ್ತೇಳುತೆ ಭಯದಿಂ |
ತಳವುಳಗೊಳ್ವಂತೆ ಕಣ್ಗದೇಂ ರಂಜಿಸಿತೋ || ೪೬

ವ|| ಪೆರತೊಂದು ತಾಣದೊಳ್ಮ್ಮರನಂ ಪಬ್ಬಿದಮಲ್ಲಿಗೆಯಲ್ಲಿಗೈತಂದು

ವೃ|| ಜಡುಮುಡಿ ಸೂಸೆ ಮುಂತಳೆದ ಪೂಗಳಸೀಗಳೆ ನವ್ಯಪುಷ್ಪಮಂ |
ಮುಡಿಸೆನಗೆಂಬವೊಲ್ಕಲಿತಕಂಕಣ ನಿಕ್ವಣ ಮುಣ್ಮೆ ತತ್ಕರಂ ||
ಜಡಿವವೊಲಲ್ಲಿ ಪಲ್ಲವಮನಾಲತೆಯೊಳ್ಪುರುಡಿಂದೆ ಕೋರಕಂ |
ಬಿಡೆವವೊಲೇಳೆ ಮೈಬೆಮರದೊರ್ವ್ವಳರಲ್ವಿರಿದಳ್ತಿಳಾಸದಿಂ || ೪೭

ವ|| ಪೆರತೊಂದೆಡೆಯೊಳ್

ವೃ|| ಮಲ್ಲಿಗೆ ಮೇಲೆಪಬ್ಬಿ ಮುಗುಳೊತ್ತಿರೆ ಕೊಯ್ಯಲೊಡಚ್ಚಿಸಿಂದಸಂ |
ಫುಲ್ಲಸರೋರುಹಾಕ್ಷಿಯ ಘನಸ್ತನಮುಂಟಿರೆ ಕೊಂಬುವೋಳಸ ||
ತ್ಪಲ್ಲವಪಾಣಿಯುಂ ತರುಣಚೂತಯುವಾಂಗಮೆ ಕಂಪಿಪಂತದೇಂ |
ನಿಲ್ಲದೆ ಪಾಯೆ ಕಂಪಿಸುತೆ ಕಣ್ಗೆಸೆದಿರ್ದ್ದುದೊ ನೋಟಕರ್ಕ್ಕಳಾ || ೪೮

ಕಂ|| ಅಳಿವೆರಸಿದಲರ ಗೊಂಚಲ |
ನೆಳವೆಣ್ಮುಡಿದಿರೆ ಕರಾಗ್ರದೊಳ್ಕೆದುದು ಮಂ ||
ಜುಳಶಶಿಮಂಡಳಮಂ ನವ |
ನಳಿನಂ ಸೆರೆವಿಡಿಯೆ ತೋರ್ಪ್ಪವೊಲ್ಬನವೆಡೆಯೊಳ್ || ೪೯

ಪೂಗುಡಿಯನುಡಿವೆಡೆಯೊಳೆ ಪ |
ರಾಗಂ ಪರಕಲಿಸೆ ಮೆಯ್ಯೊಳಾಮುರಗೊಂಬಂ ||
ಬಾಗೊತ್ತಿ ತಳಿರನುಡಿವ |
ಳ್ಪೊಗಣೆಯನ ಕರಿಣಿಯಂತಿರೇನೊಪ್ಪಿದಳೋ || ೫೦

ವೃ॥ ನಲ್ಲಳೊರ್ವ್ವಳೆಳಮಾವಿನಲ್ಲಿ ಸ ।
ತ್ಪಲ್ಲವಪ್ರಕರಮಂ ಕರಾಗ್ರದಿಂ ॥
ಮೆಲ್ಲನೊತ್ತಿ ಮುರಿದಾನೆ ಕಂದಿತಾ ।
ಪಲ್ಲವಕ್ಕೆ ಮೊದಲಾ ಕರಾಂಬುಜಂ ॥ ೫೧

ಕಂ॥ ಮುಗಮುಗಿಪ ಬೆಮರನಾಂತೀಂ ।
ಸೊಗಯಿಸಿದಳೊ ಕಣ್ಗೆ ಕಮಳೆ ಕಮಳಮರಂದಂ ॥
ಮಿಗೆ ಪತ್ತಿರೆ ತೋರ್ಪ್ಪವೊಲಾ ।
ಮೃಗಾಕ್ಷಿ ಮೈಗೆರೆಗೆ ಪರಮೆಗಳ್ಪಸದೆಡೆಯೊಳ್ ॥ ೫೨

ವೃ॥ ಕರದಿಂದೊಕ್ಕೊಂಬನಿಂಬಾಗಿರೆ ಪಿಡಿದೆಳೆಯಳ್ಕಿ ಮತ್ತೊಂದು ಕೈಪಾ।
ವರೆಯಂಮೇಲೆತ್ತಿ ಪೂಗೊಯ್ವೆಡೆಯೊಳವಳ ವಕ್ತ್ರಾಬ್ಜಮಂ ಮತ್ತಭೃಂಗೋ॥
ತ್ಕರಮಾಗಳ್ಬರ್ಚ್ಚೆ ಕೊಂಬಂ ಬಿಡೆ ತರು ಕರುಣಂಬೆತ್ತವೋಲ್ಪಲ್ಲವಶ್ರೀ ।
ಕರದಿಂದಂ ಸೋದದಂ ಪಾಯ್ದೊಲೆವಸೆವದೆ ಪುಷ್ಪೌಘಮಂ ಸೂಸಿತಾಗಳ್ ॥

ವ॥ ಮತ್ತಮೊಂದಾಮ್ರಮಹೀಜದಲ್ಲಿ

ಕಂ॥ ತಳಿ*ರ್ಗೊಯ್ವೆಳೆಯಳ ಜೆಂಡುಟಿ ।
ದಳಿರಂ ತಳಿರ್ಗೆ*ತ್ತು ಕರ್ದುಕಿದುದು ಪಿಕನೀಮಂ ॥
ಜುಳಪಲ್ಲವಮೆಲ್ಲಮನೀ ।
ಗಳೆ ಪರಿದಪಳೆಂದು ಮುಳಿಸಿನಿಂ ಕರ್ದುಕುವವೋಲ್ ॥ ೫೪

ವ॥ ಮತ್ತಮೊರ್ವ್ವಳ್ಮತ್ತಕಾಶಿನಿ ಪೆರತೊಂದು ಸರಳಚೂತಶಾಖಾಂತರಾ
ಳದೊಳ್

ಕಂ॥ ಪೂಗೊಯ್ಯಲೆತ್ತೆ ತೋಳಂ ।
ಮೇಗಣ್ಗೆಸಿಸೊಗೆದ ದಕ್ಷಿಣಸ್ತನಮುಕುಳಂ ॥
ಪೂಗಣೆಯನೀಕ್ಷಿಪರನಿಸ ।
ಲಾಗಳ್ತೆಗೆದಬ್ಜಬಾಣಮೆನೆ ಕಂಗೊಳಿಕುಂ ॥ ೫೫

ವ॥ ವಿಳಾಸವತಿ ಮತ್ತೊರ್ವ್ವಳ್

ವೃ|| ಸೆಳೆನಡು ಬಳ್ಕೆ ತೋರಮೊಲೆ ಮೇಲುದನೊಯ್ಯನೆ ನೂಂಕೆ ಕಣ್ಣನು |
ಣ್ಬೆಳಗಡರ್ದೊಪ್ಪೆ ಪೀನಜಘನಂ ಜಡಿಯುತ್ತಿರೆ ಬಾಹುಮೂಲಮುಂ||
ಪೊಳೆಯೆ ಬಳಲ್ದು ಜಾರೆ ಮುಡಿ ಮುಗ್ಧೆ ಪದಾಗ್ರದೆ ನಿಂದು ನಿಕ್ಕಿ ಕೆಂ |
ದಳಮನಮರ್ಚೆ ಕೊಯ್ದಳೆಳಮಾವಿನಕೆಂದಳಿರಂ ವಿಳಾಸದಿಂ || ೫೬

ಕಂ|| ಎಳೆಯಳೆಳದಳಿರಿಸುಜ್ವಳ |
ಕಳಶಮನರ್ಚಿಪವೊಲಿಳಿಪಿದಳ್ಕುಚದೊಳ್ಮಂ ||
ಜುಳಹೃದಯಸ್ಥಿತಮದನಂ |
ಗೆಳಸಿತ್ತಪಳೆನೆ ರಸಾಲಪಲ್ಲವಶರಮಂ || ೫೭

ವ|| ಅವಿಳಾಸಾನ್ವಿತೆಯರುಮಲ್ಲದೆ ಮತ್ತೆ ಕೆಲಂಬರ್ವಿದಗ್ಧೆಯರ್ನೆರೆದು ಲಲಿತರಗಳೆ|| ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ | ಯೆಳಅಸುಗೆಮರದಲ್ಲಿ ಜಳರುಹಾಕರದಲ್ಲಿ | ಸಂಪಗೆಯತರುಗಳೊಳ್ಸೊಂಪಿಡಿದಸುರಯಿಯೊಳ್ | ಪಾದರಿಯಬನದಲ್ಲಿಮಾಧವಿಯ ಲತೆಯಲ್ಲಿ | ತಿಳಕವಕುಳಾದಿತರುನಿವಹದಾರವೆಗಳೊಳ್ | ದಳಫಳಕುಸುಮವಿಸರವಿದಿತವಿಟಪಂಗಳೊಳ್ | ಪೂಗೊಯ್ಯಲೆಂದಬಲೆಯರ್ನೆರೆದುಬಗೆದಂದು | ಬೇಗದಿಂ ಪರಿತಂದು ಪರಿತೋಷದಿಂ ನಿಂದು। ಕಡೆಗಣ್ಣಕುಡಿವೆಳಗು ಬಿಡದಡರೆ ನಡೆನೋಡಿ | ನಿಡುಗೊಂಬನೆಡಗಯ್ಯೊಳಡಸಿಪಿಡಿದೊಳ್ಗಾಡಿ | ಪೆರಸಿನೆಲೆವೊಲೆಯೊಗೆಯೆ ಬಲಗೈಯನಿಮಿರ್ಚೆತ್ತಿ | ಕರಕರಜರುಚಿರರುಚಿ ತಳಿರಲರ್ಗಳಂಮುತ್ತಿ | ಮುಸುಕುತಿರೆ ಮುಡಿ ಸಡಿಲೆ ಪೊಸಮುಗುಳ್ಗಳಂ ತಿರಿದು | ಮಿಸುಪಕಿಸಲಯಚಯಮನೊಸಗೆ ಮಿಗೆ ಸೆರೆ ಪರಿದು | ನಸೆಗೊನೆಯಸಲರ್ದಲರಕೊಸರ್ಗಳಂ ಕೊಯ್ಕೊಯ್ದು | ವನಜದಳದೊಳ್ತದಳಿಯೆಲೆಯೆಲೆಗಳೊಳ್ಪೊಯ್ದು | ಕುಳಿರ್ವಹಿಮಜಳವೆ ಜಳೆಯಂಗೊಟ್ಟು ಬೇರಾಯ್ದು | ನಳಿನದೆಸಳೆಗಳಿಂ ಗಳಿಲನೆ ಸರಂಗೆಯ್ದು | ಸುಯ್ಗಂಪು ಮೆಯ್ಗಂಪು ಬಾಯ್ಗಂಪು ಬೆರಸುತಿರೆ | ಕಪ್ಪಿಂಪು ಕೆಂದಾವರೆಯ ಸಿರಿಯನೊರಸುತಿರೆ | ಮಲ್ಲಿಗೆಯ ಹಾರಮುಂ ಪಲ್ಲದದ ಪದಕಮುಂ | ಸಲ್ಲಲಿತಮಂಜರಿಯ ಕರ್ಣಾವತಂಸಮುಂ | ಸುರಯಿಯರೆದಲರ ಮುಡಿಯ ಮುತ್ತಿನ ಬಲೆಯ| ಸುರುತರದ ಸರಸಿಜದಕರ್ಣಿಕೆಯ ಮು

ದ್ರಿಕೆಯ | ನೆಸೆವಪೊಸಬಂದುಗೆಯ ಮಿಸುಪಮುಗುಳಂದುಗೆಯ | ನಸುಗೆಯರ
ಲುಂಗುರಮನುತ್ಪಳದ ಮಂಟಿಗೆಯ | ನುಜ್ಜ್ವಳಿಪಗೊಜ್ಜುಗೆಯ ಸಜ್ಜುಕದ ಜಳಿ
ಕಿಗೆಯ | ನಜ್ಜುಗೆಯ ಪಜ್ಜಳಿಪ ಬಜ್ಜುರದ ಬಾಪುರಿಯ | ನಾಂಪಡೊಳಲಂಪೆಸೆ
ವಸಂಪಗೆಯ ಮೇಖಲೆಯ | ನಿಂಪಡರ್ದ ಸುರಹೊನ್ನೆಮುಗುಳ ಮೃದುಕಂಠಿ
ಕೆಯ | ನೆಸಗಿ ಮಿಕ್ಕಲರ್ಗಳಿಂ ಬಾಸಿಗಗಳಂ ರಚಿಸಿ | ಪೊಸಜೌವನೆಯರಲ್ಲಿ
ಪೋಗಲುರೆಸಡಗರಿಸಿ | ಶಿವಪೂಜೆಗಳವಟ್ಟಕುಸುಮಮಂ ಜೇರಾಯ್ದು | ತವೆ
ಬಹುವಿಚಿತ್ರತರಮಾಲಿಕೆಗಳಂ ಸವೆದು | ಮುಡಿಯುಳಿಯೆ ನಡುಸೆಳೆಯೆ ಸುಯ್ನು
ಮಿರೆ ಮೆಯ್ಬೆಮರೆ | ತೊಡೆ ಸೆಡೆಯೆ ಅಡಿ ಪಡೆಯೆ ಪುಗು*ಳ್ಗಳಂ ಮುಗು*ಳ್ಗಳಂ |
ಸೂಸುತುಂ ಜೀಸುತುಂ ನಳಿತೋಳನಳಿಜಾಳ| ಮೆಳಸಿ ಬರೆ ಬಳಸಿ ನೆರೆದ ವರಿಸಿಗಾ
ವರಿಸಿ | ಕರದಿಂದಮರವಿಂದದರಲಿಂದೆ ಭರದಿಂದೆ | ಪೊಡೆಯುತುಂ ನಡೆಯುತುಂ
ಬಳ್ಕುತುಂ ತುಳ್ಕುತುಂ | ಕಣ್ಬೆಳಗತಣ್ಬೆಳಗಸೈತಂದು ಸೈತಂದು| ಭೂಪತಿಗೆ ಕೈ
ಮುಗಿದು ಪೂಪುಟ್ಟಿಯಂ ತೆಗೆದು | ಹರುಸದಿಂ ನೋಡುತಿರೆ ಕರತಳಕೆ ನೀಡುತಿರೆ

ವ|| ಆಗಳಾರಾಜಶೇಖರನರೇಂದ್ರಂ ಪ್ರಭಾತಪದ್ಮದಂತಿರಾಮೋದಾಂ
ತರಂಗನಾಗಿ ಕಲ್ಪತರುಸ್ಕಂದಂತೆ ಸುರಭಿಪಯದೊಳ್ಮುಳುಂಗಿ ಶಾರದಶಶಾಂಕ
ನಂತೆ ವಿಮಳಾಂಬರದಿನಳಂಕರಿಸಿ ಯಾಮಿನೀಪ್ರೇಮದಂತೆ ಭಸಿತರುಚಿದಾಳ್ದು
ಧನಂಜಯನಂತೆ ರುದ್ರಾಕ್ಷದಿಂ ರಂಜಿಸಿ ಪರಮೇಷ್ಠಿಯಂತೆ ಪದ್ಮಾಸನಮನವಷ್ಟಂ
ಭಿಸಿ ಬೃಹಸ್ಪತಿಯಂತಸುಮನೋಜಯಮೂಲಮಂತ್ರಮಂ ಬಗೆಯೊಳಸುಗೊ
ಳಿಸಿ ನಗರಾಜನಂತಜಲಾಂಗನಾಗಿ ಧನಿಯಂತೆ ಲಕ್ಷ್ಮೈಕಾಗ್ರಚಿತ್ತನೆನಿಸಿ ಕಲ್ಯಾ
ಣಗೃಹದಂತೆ ಶಿವಪ್ರಭಾವಮಂ ಪಡೆದಿಸಿರಾಸುಂ ಜೇಗಮಿರ್ದ್ದ

ವೃ|| ಶಿವಲಿಂಗಾಘ್ರಿಯನೊಲ್ದು ಪೂಜಿಸಿದನುದ್ಯತ್ಸೌರಭಾಂಭಸ್ತತೋ |
ಭವಮುಖ್ಯಪ್ರಸವಾತಿಶೋಭಿತಸುಗಂಧಾಚಾಕ್ಷತಸ್ನಿಗ್ಧಧೂ ||
ಪವಿರಾಜದ್ರುಚಿದೀಪಸತ್ಫಳಮಹಾ ನೈವೇದ್ಯಮುದ್ವೀಟಿಕಾ |
ಳಿವಿಳಾಸಾಸ್ಪದಗೀತವಾದ್ಯರವದಿಂ ಭೂಭಾಮಿನೀ ಭೂಷಣಂ || ೫೮

ವ|| ಅಂತುಪೂಜಿಸಿ ಪರಮಭಕ್ತಿಯಿಂ ಪ್ರದಕ್ಷಿಣನಮಸ್ಕಾರಂಗಳಂರಚಿಸಿ

ವೃ|| ಧನಪತಿಮಿತ್ರ ಗಾತ್ರರುಚಿನಿರ್ಜಿತಮಿತ್ರ ಕರಾಲಕಾಲಮ |
ರ್ದನ ಗರಕಾಲಕಂಧರ ಧರಾಧರಧನ್ವ ಶಶಾಂಕಖಂಡಮಂ ||
ಡನ ಸದಖಂಡಚಿನ್ಮಯ ನತವ್ರಜಪಾಲ ಕಪಾಲಶೂಲರಂ |
ಜನಕರ ದೇವದೇವ ಜಗತೀಧರಮಂದಿರ ಮಂಗಳಾಕರಾ || ೫೯

ವ|| ಎಂದು ಪೊಗಳ್ದು ಪೊಡಮಟ್ಟು ಮುದಂದಳೆದು

ವೃ|| ಅನರನಾಥನಾಕುಸುಮಭೂಷಣಮಂ ಪಡೆದಿತ್ತು ಪಾರ್ವತೀ |
ಜಾನಿಗೆ ತಾನುಮಾತ್ಮರಮೆಯುಂ ಬಳಿಯಂ ತಳೆದಿರ್ಪಿನಂ ಪರಿ ||
ಮ್ಲಾನಸಖೀಮುಖಾಬ್ಜಮನಭೀಕ್ಷಿಪ ನಲ್ಲಳಪಾಂಗದಿಂಗಿತಂ |
ಮಾನಸದೊಳ್ತೊಡರ್ಚಿದುದು ತಣ್ಗೊಳದೊಳ್ಜಳಕೇಳಿಯಾಂಪುದಂ || ೬೦

ವ|| ಆಗಳಾಯುವರಾಜಂ ನಿಜರಮಣಿಯಾನನಾಬ್ಜಮಂ ನಿರೀಕ್ಷಿಸಿ

ವೃ|| ಸರಸಿಜವಕ್ತ್ರೆ ಚಕ್ರಮಿಥುನಸ್ತನೆ ಬಾಳಮೃಣಾಳಬಾಹುವ |
ಲ್ಲರಿ ಕುಮುದಾಕ್ಷಿ ಭೃಂಗಕಚೆ ಶೈವಲಮಂಜುಳರೋಮರಾಜಿ ಬಂ ||
ಧುರಪುಳಿನೋಲ್ಲಸಜ್ಜಘನೆ ನಿನ್ನಿರವಂ ತಳೆದೊಪ್ಪುತಿರ್ಪ್ಪತ |
ತ್ಸರಸಿಗೆ ಮಾಡಲಿಂದು ನವಸಂಗತಿಯಂ ನಡೆ ಮನ್ಮನೋರಮೇ || ೬೧

ವ|| ಎಂಬುದುಮತೀವಹರ್ಷೋದಯಮನೊಳಕೊಂಡು ತೊಳಪಕಟಾ
ಕ್ಷರುಚಿ ಮಂದಸ್ಮಿತದ್ಯುತಿಗೂಡಿ ತದ್ವಾಣಿಗೆ ಪಸಾಯಮನಿತ್ತಂತೆ ಮೇಲ್ವಾ
ಯ್ದು ಪಸರಿಸೆಯುಂ ತನ್ನ ಮೆಲ್ನಡೆಗೆ ಮಚ್ಚರಿಪಂಚೆಯೊಳ್ಪಳಂಚುವೆನೆಂದು
ರಾಷೆಗುಡುವಂತೆ ಪಾಯುವಟ್ಟಂ ದನಿಗುಡುತ್ತುಮಿರೆಯುಂ ಪೂದುರುಂಬಿಂಗೆ
ಗಿ ಪಾಡುವಪರಮೆವರಿಗಳಿಂಜರಕ್ಕೆಮರ್ಚ್ಚಿ ತಲೆವೊಲೆದಪುದೆಂಬಂತೆ ಕರ್ಣಪೂರಂ
ಂಪಿಸೆಯುಂ ಜಳಕೇಳಿಯ ಪೊಕ್ಕುಳಿಯೊಳ್ಗುರುಪಯೋಧರಭಾರಮನಾಂಪು
ನಗಸದಳಮೆಂದು ಬಳುಂಕುವಂತೆ ಬಡನಡುಬಳುಂಕೆಯುಂ ಸರಸಿಯಂ ಪೊಕ್ಕ
ವೆಂಬಸಂಮದದಿಂ ಕುಣಿವಂತೆ ಕುಚಚಕ್ರಯುಗಂ ಕದಕ್ಕದಿಸೆಯುಮಮರ
ವ.ಜದೊಡನನೇಕಕರಿಣಿಗಳ್ಪೆರಸು ನೀರಾಟಕ್ಕೆ ತಳರ್ವಭ್ರಮುವೆಂಬಂತೆ ಮ

ನಿಃಪ್ರಿಯನೊಡನನೇಕಸಖಿಯರ್ವೆರಸು ಸಂಭ್ರಮಂ ಮಿಗೆ ಸಲಿಲಕೇಳಿಗೆಳಸಿ ಸರ್ವಮಂಗಳಾದೇವಿ ತನ್ನಂದನದೊಳ್ಪೆತಂದು ಕಾಸಾರದ ತೀರದ ನುಣ್ಬಸಲೆಯ ನಲಂಕರಿಸಿ ನಿಂದು ನೀಡುಂ ನಿರೀಕ್ಷಿಪಾಗಳ್

ವೃ|| ಮರುದುದ್ಧೂತಪಯಃಪ್ರಕೀರ್ಣಕಣಜಾಲಂ ಮೇಲೆ ಸಾಲಿಟ್ಟ ಪ |
ಟ್ಟರಣ ಶ್ರೇಣಿಯುಮೊಂದೆ ರತ್ನರಚಿತೋದ್ಯತ್ತೋರಣಶ್ರೀಯನೂ ||
ರ್ಮಿರವಂ ವಾದ್ಯಮದಾಗಲಾರತಿಯ ಚೆಲ್ವಂ ಪೋಲೆ ಪದ್ಮಂ ಮಹೀ |
ಶ್ವರನಂ ತಾನಿದಿರ್ಗೊಂಬುದೆಂಬಬಗೆಯಂ ತಾಳ್ದತ್ತು ಪದ್ಮಾಕರಂ || ೬೨

ವ|| ಮತ್ತಮಾತಿಳಿಗೊಳಂ

ಕಂ|| ಲುಲಿತಜಲಲವಲಲಿತನವ |
ಜಲರುಹದಳವಿಸರಲಸಿತವಿಮಳಮರಾಳಾ ||
ವಲಿಕಲಿತ ನಳಿನಮಧುಮದ |
ಜಲದಳಿಕುಲಮಿಲಿತ ಮಂದಮಾರುತಮುಪಿತಂ || ೬೩

ವ|| ಮತ್ತಂ

ವೃ|| ಬಾಲಮಧುವ್ರತಪ್ರತತಿ ಪಾಡೆ ರತೋದ್ಧತ ಚಕ್ರಚಕ್ರಪ |
ಕ್ತ್ಯಾಳಿಯೆ ತಾಳಮಾಗಿರೆ ಸರೋಜಿನಿ ನರ್ತಿಸೆ ನೀರಪಕ್ಷಿಗ ||
ಳ್ಗೀಲೆಯೊಳೊಂದು ತುಗ್ಘಡಿಸೆ ನೀಗುರಿಯಾಗಿರೆ ವೀಚಿಮಾಲೆ ತಾ |
ನೋಲಗಶಾಲೆಯಾದುದು ಕೊಳಂ ಕಮಳಾಸನರಾಜಹಂಸನಾ || ೬೪

ದರದಳದರವಿಂದಬೃಂದಗಂಧಾ |
ದರಸರದುನ್ಮದಭೃಂಗನಾದಗೀತಂ ||
ತರಳತರತರಂಗರಂಗದಂಗಂ |
ಸರಸಿ ಸುಲಾಸಿನಿಯಂತೆ ಕಣ್ಗೆ ತೋರ್ಕುಂ || ೬೫

ತಡಿಯೊಳ್ನಿಂದ ತಟಿತ್ಕಟಾಕ್ಷೆಯ ಕಟಾಕ್ಷಜ್ಯೋತ್ಸ್ನೆಯಿಂ ತೀವಿ ಪಾ ||
ಲ್ಗಡಲಂ ಪೋಲ್ತಿರೆ ತತ್ಸರಂ ನೊರೆಯ ಸಾಲ್ಶೇಷಾಹಿಯುಂ ಪೋಲೆ ಮೇ ||
ಲೆಸೆಗುಂ ಪೊಪ್ಪುವನೀಲನೀರಜವನಂ ಸ್ವರ್ಣಾಂಬುಜೋದ್ಯದ್ವ್ರಜಂ |
ಕುಮೆ ಪೀತಾಂಬರಲಕ್ಷ್ಮಿಯುಂ ಮುಳುಗಿದಂಭೋಜಾಕ್ಷನಂತೊಪ್ಪುಗುಂ|| ೬೬

ವ|| ಮತ್ತಮಲ್ಲಿ

ಕಂ|| ಬಿರಯಿಗಳನೆಚ್ಚು ರಕ್ತಂ |
ಬೊರೆದರಲಂಬಂ ಸರೋಂಬುವೊಳ್ತೊಳೆಯಲ್ಕೆಂ ||
ದರಲಂಬನಿಳಿಪಿದಂತಿರೆ |
ತರುಣಿಯುರ ಸರಕ್ತಕೇಕರಂ ಮಾರ್ಪೊರ್ಳಗುಂ || ೬೭

ವ|| ಅಂತದಂ ನೋಡಿ ಕಾಂತಾಜನಂ ಸಂತಸಂ ಮಿಗೆ ಪುಗಲೆಳಸಿ ಮೆಲ್ಲ ನಿಳಿತರುತ್ತುಮಿರ್ಪ್ಪಲ್ಲಿ

ಕಂ|| ಎಳವಳಿಕಿನ ಸೋಪಾನದೊ |
ಳಿಳಿವಳ ಪಡಯಾವಕದ್ರವಂ ಪತ್ತಿರೆ ಕಂ ||
ಡೆಳೆಯುಳದೊರ್ವ್ವಳ್ತಳಿರೆಂ |
ದೆಳಸಿ ಕರಂ ತುಡುಕಿ ನಗಿಸಿದಳ್ಕೆಳದಿಯುರಂ || ೬೮

ಗುರುಕುಚಭರದಿಂ ಬಳ್ಕುವ |
ಧರಾಧಿಪತಿಪತ್ನಿಗೀವವೋಲ್ಕೈಲಾಗಂ ||
ಸರಸಿ ತೆರೆದೋಳ ತುದಿಯೊ |
ಳ್ಕರವೊಗೆವರವಿಂದದಿಂದದೇಂ ರಂಜಿಸಿತೋ || ೬೯

ವೃ|| ಕರದೊಳ್ಪೊನ್ನಂಡೆಯುಂಚೀಕರ್ಕ್ಕಳವಿಯೆಸೆಯೆ ಕಾಂಚೀರವಂಚಾರುಮಂಜೀ|
ರರವಂ ಕೈಗಣ್ಮೆ ಕಾಸಾರದ ಪರಿಸರದೊಳ್ನಿಂದು ನಿಂದೀಕ್ಷಿಸುತ್ತಾ ||
ದರಿಸುತ್ತಂದಂ ಮಿಗಲ್ಮೆಲ್ನಗೆ ಮಿಸುಗೆ ಮೊಗಂನೋಡಿ ನೀರಾಟಕೆಂದೊ |
ರ್ವ್ವನೊರ್ವ್ವಳ್ಗಲ್ಲದಿಂದಂ ಕರೆದು ನೆರೆದು ಕಾಂತಾಳಿನೀರ್ವ್ವಕ್ಕುದಾಗಳ್ ||

ಕಂ|| ತರುಣೀನಿತಂಬಕುಚಗಿರಿ |
ವರಂಗಳಿಟ್ಟಣಿಸೆ ತತ್ಸರಶ್ಯರಧಿ ಕರಂ ||
ಪರಿವರ್ಧಿಸಿದಂತುರ್ವ್ವಿದು |
ದರರೆ ತದಾನನಸುಧಾಂಶುಬಿಂಬದ್ಯುತಿಯಿಂ || ೭೧

ವೃ|| ಕರದಿಂ ನೂಂಕಿ ತುಳುಂಕಿ ಕೂಂಕಿ ಜಳಮಂ ತೇಂಕಾಡಿ ಮೇಲೊರ್ವ್ವರೊ|
ರ್ವ್ವರೊಳಿಟ್ಟಾಡಿ ಮುಳುಂಗಿ ಮೂಡಿ ಪೊಳೆದಾ ಪೊನ್ನಂಡೆಯಿಂ ಪೊಯ್ದು ಪಾ||
ಯ್ದಿರದೀಸಾಡಿ ಕಡಂಗಿ ಚೀಕೊರ್ಳವಿಯಿಂ ಮೇಲೊತ್ತಿ ಬೆಂಬತ್ತಿ ಮುಂ |
ಬರಿದಬ್ಜಾಕರದಂಬುಕೇಳಿವಡೆದರ್ಪ್ಪಂಕೇಜಪತ್ರಾಕ್ಷಿಯರ್|| ೭೨

ಕಂ|| ಅರಸನೆಸಪನಿತರೊಳೆ ಕ |
ಪ್ಪುರದಂಬುವಸೊತ್ತಲೆಂದು ಕಮಳಾಕ್ಷಿ ಕಟಾ ||
ಕ್ಷರುಚಿಪಿಮವಿಮಳಜಳಮಂ |
ಪರಪಿದಳೊರ್ಮ್ಮದಲಾಳಾಸ್ಯಶಶಿರುಚಿಸಪಿತಂ || ೭೩

ವ|| ಮತ್ತಮದಲ್ಲದೆಯುಂ

ಕಂ|| ಚಂದನ ಚಂದ್ರಿಕೆಯಂ ರಮ |
ಣೇಂದುಕರಂ ಸೂಸೆ ಮುಗಿದುದದು ಕಾಂತೆಯನೇ ||
ತ್ರೇಂದೀವರಮಾಸ್ಯಾಂಬುಜ |
ಮಂದಲರ್ದ* ದು ಕೊಳದೊಳೆಳೆಗಿದೇನಚ್ಚರಿಯೋ || ೭೪

ವ|| ಮತ್ತವೊರ್ವ್ವಳ್

ವೃ|| ನೃಪಕರವಾರಿಯಂತ್ರಮುಖಮುಕ್ತಮೃಗೋದ್ಭವಮಿಶ್ರಧಾರೆಗ |
ಳ್ದ್ವಿಪಪತಿಕುಂಭಸನ್ನಿಭಕುಚಾಚಲಮಂ ಮುಗಿಲಂತೆ ಮುತ್ತೆ ತ||
ಚ್ಚಪಲಕಟಾಕ್ಷಮಲ್ಲಿ ಸಳೆಮಿಂಚಿನೆ ಮಿಂಚಿರೆ ಚಂದನೋದಕ |
ಸ್ನಪಿತೆ ತದೀಯಬಿಂದು ಮಳೆಯಂತಿರೆ ಕಾಸ್ಮಿರಿಯಂತಿರೊಪ್ಪಿದಳ್ || ೭೫

ಮುಡಿಮುಗಿಲಲ್ಲಿ ಬಲ್ಮಳೆ ಮುಖೇಂದುಗೆ ಚಂದ್ರಿಕೆ ತೋಕ್ಕೆವೆತ್ತಪೊಂ|
ಗೊಡಮೊಲೆವೆಟ್ಟುಗಳ್ಗೆ ಸವನಿರ್ಝರಮೊಪ್ಪುವಬಾಹುವಲ್ಲಿಗಿಂ ||
ಪಿಡಿದಡರ್ದ* ಜ್ಜಗುಚ್ಛಮೆಸಿಸಿತ್ತು ನರೇಶ್ವರನಾತ್ಮಹಸ್ತದಿಂ |
ಪಿಡಿದಲಡರ್ೊಟ್ಟೆಯಿಂ ಸುರಿಯೆ ಸೂಸುವಚಂದನವಾರಿ ನಾರಿಯಾ || ೭೬

ಕಂ|| ವರನೊತ್ತೆ ಕುಂಕುಮಾಂಬುವ |
ನರವಿಂದಾನನೆಯ ಮೊಗದೊಳೆಳೆಯುತ್ತೆಸೆದ ||
ತ್ತರವಿಂದದರಲ ಮಕರಂ |
ದರಸಂ ಸುರಿವಂತೆ ಕಣ್ಗೆ ಕಮಳಾಕರದೊಳ್ || ೭೭

ಲೋಲಾಕ್ಷಿಯ ನಗೆಮೊಗದೊ |
ಳ್ಲೀಲೆಯಿನಿನನೊತ್ತೆ ಕತ್ತುರಿಯ ಧಾರೆ ಕರಂ ||
ಕಾಲಾಹಿ ಚಂದ್ರಬಿಂಬಮ |
ನಾಲಂಬಿಸಿ ತುಡುಕಿದಂತದೇನೊಪ್ಪಿದುದೋ || ೭೮

ಮೊಗಸಸಿಯ ಹಸನಚಂದ್ರಿಕೆ |
ಗಗಿವ ಪೊಲದಿರ್ಗನಿಯಳುರುತರಸ್ತನಚಕ್ರ ||
ಕ್ಕೊಗುಮಿಗೆಯಿಂದೆಳವಿಸಿಲಂ |
ನೆಗಳ್ವಂತಿನನೊತ್ತಿದಂ ಸಕುಂಕುಮಜಳಮಂ || ೭೯

ರಮಣಿಯ ಕಬರಿಯೊಳರಸಂ |
ಹಿಮಜಳಮಂ ಸುರಿಯೆ ಮುಗುಳ್ಗಳೊಡವೆರೆದಿಳಿದ ||
ತ್ತಮದಾಲಿವರಲೊಡನೆ ಕಾ |
ರ ಮುಗಿಳೊಳಿತರ್ಪ್ಪವಿಮಳಜಳವೃಷ್ಟಿಯವೋಲ್ || ೮೦

ವೃ|| ಹಿಮಮಿಶ್ರಾಂಬುವನೊಯ್ಯನೋಪನಿದಿರೊಳ್ನಿಂದಂಗನಾಚಂದನಾಂ |
ಕಮನೋಜಜ್ಞಾಂಗದೊಳೊತ್ತೆ ನಾಂದು ಪನಿಯಂ ಸೂಸುತ್ತಮಿಂಬಾದುದಾ ||
ಹಿಮರೋಚಿಸ್ಕರಪಾತದಿಂ ಹಿಮರುಚಿಗ್ರಾವಸ್ಫುರತ್ಪುತ್ರಿಕಾಂ |
ಗಮೆ ತಾನೊಲ್ದೊಸರ್ದಿಕ್ಕುವಂತೆ ವಿಳಸನ್ಮುಕ್ತಾಚ್ಛವಾರ್ಬಿಂದುವಂ || ೮೧

ಕಂ|| ಒಡಬಾಸೆಯೆಂಬಜಗುನೆಯೊ |
ಳೊಡವೆರೆಯಲ್ಕುಚಹಿಮಾದ್ರಿಯಿಂದೈದುವಬಾಂ ||
ಗಡಲೆನೆ ಹಿಮಾಂಬು ಪೊಸಪೊಂ |
ಗೊಡದಿಂ ವಧು ಸೂಸೆ ಸುರಿಯುತುಂ ಸೊಗಯಿಸುಗುಂ || ೮೨

ಕೆಳದಿಯ ಮೇಲೆ ಹಿಮಾಂಬುವ |
ತುಳುಂಕಲೆಂದೊರ್ವಳಟ್ಟೆ ಮುಳುಗಿರೆ ಕೊಳದೊ ||
ಳ್ಜಳರುಹಮುಸಪನ ಮೊಗಮೆಂ |
ದೆಳಸಿ ಕರಂ ಪೊಯ್ದಳಂಬುವಂ ಸಂಭ್ರಮದಿಂ || ೮೩

ನಳಿನಿಯುನಾಲಿಂಗಿಸಿ ಪೂ |
ಗೊಳಲೆಂದುರೆ ಬಾಗಿ ನಿಂದಳಂಗದೊಳೊರ್ವ್ವಳ್ ||
ತಳಿಯೆ ಘುಸೃಣಾಂಬುವಂ ತಂ |
ಗೊಳಮುಗಿಲಮರೇಂದ್ರಚಾಪಲತೆಯೆನೆ ಮೆರೆದಳ್ || ೮೪

ಅರಸನಿರದೊತ್ತೆ ಕತ್ತುರಿ |
ಯ ರಸಂ ಕಿರುವಾಸೆವಿಡಿದು ಮೇಲಿಳಿದಿಳಿಪೆ ||
ತ್ತರರೆ ಕರಿವಾವು ಕರ್ಪ್ಪಿಡಿ |
ದುರಗಸನುರೆ ನುಂಗುವಂದಮಂ ತಿಳಿಗೊಳದೊಳ್ || ೮೫

ವರನೊತ್ತಿದ ಘುಸೃಣರಸಂ |
ಗುರುಕುಚನಗಧಾತುನಿರ್ಝರಪ್ಲವಮಿಳಿವಂ ||
ತಿರೆ ನುಸುಳ್ದೈ*ತರೆ ತಳ್ತೀಂ |
ಕರಮೆಸೆದುದೊ ಬಾಸೆವಳ್ಳಿ ತಳಿರೇರಿದವೋಲ್ || ೮೬

ಯಾಮಿನಿಯುಂಗದೊಳುದಯಿಪ |
ಸೋಮಂ ಕೆಂಗದಿರಸಿದಿರೊಳುರೆ ಕರೆವವೊಲಾ ||
ಶ್ಯಾಮಾಂಗಿಯಂಗಲತೆಯೊ |
ಳ್ಭೂಮೀಶ್ವರಚಂದ್ರನೊತ್ತಿದಂ ಕುಂಕುಮಮಂ || ೮೭

ಹೃದಯಸ್ಥಿತಮದನಂ ಸಂ |
ಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆ ||
ತ್ತಿದಪೊನ್ನಕಳಸವೆನಿಸಿದು |
ದದರೊಳಿದಿರ್ಚ್ಚಿದಪಘೂಜನದ ಕುಚಕಳಶಂ || ೮೮

ಓಪಳ ಕುಚದೊಳ್ಕುಂಕುಮ |
ಲೇಪಂ ಜಲದಿಂದೆ ತೊಲಗೆ ನಖಪದಮಿರಾ ||
ಶಾಪರ್ವತದಗ್ರದೊಳೆ ಕ |
ಲಾಪತಿಕಲೆ ಸಂಜೆ ಸಂಜೆ ತೋರ್ಪ್ಪವೊಲೆಸೆಗುಂ || ೮೯

ವ|| ಆಗಳರಸಿ ಸರಸಿಯೊಳ್ನಿಂದು ಸರಿಸದೊಳರಸನಂ ಸರಸದಿಂ ನಿರೀಕ್ಷಿಸಿ

ವೃ|| ಸೂಸಿದುದೊಂದು ಚಂದನಮೆ ಕಾಮಿನಿ ತನ್ನಮುಖಪ್ರಕಾಶಮಂ |
ಸೂಸದೆ ನೀಳ್ದಕಣ್ಮರಲ ಕೋರೆಯನುಣ್ಗದಿರೆಂಬಜೊನ್ನಮಂ ||
ಸೂಸದೆ ಕೂಡೆ ಕುಂದಣದ ಕುಂಭಮನೇಳಿಪುರೋಜದಂಶುವಂ |
ಸೂಸದೆ ಮಂದಹಾಸರಸಮಂ ಸಲೆ ಸೂಸದೆ ನಲ್ಲನಂಗದೊಳ್ || ೯೦

ವ|| ಮತ್ತಂ

ವೃ|| ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದು ಕಂ |
ಗೊಳಿಸಿದನರ್ಕಜಾಂಬು ಮುಸುಕಿರ್ದ್ದಮರೇಂದ್ರಗಜೇಂದ್ರದಂತೆ ಮೇ ||
ಣ್ತುಳುಕೆ ಹಿಮಾಂಬುವಂ ನನೆದು ಚಂದ್ರಿಕೆತೀವಿದ ಚಂದ್ರನಂತೆ ಮಂ |
ಜುಳಘುಸೃಣೋದಮಂ ಸುರಿಯೆ ತಳ್ತು ತಳಿರ್ತ್ತನವಾಮ್ರದಂತೆವೋಲ್ ||೯೧

ಕಂ|| ಲಲನಾಕುಚದೊಳ್ಮೃಗಮದ ।
ಜಳಬಿಂದುಗಳೆಸೆದುವರಸನೊತ್ತಲೊಡಂ ತ ||
ಳ್ತಲರ್ವ್ವದನೆ ಪಾರ್ದ್ದು ಸಾರ್ದ್ದ |
ಜ್ಜಲಸತ್ಕೋಶಮನೆ ಮುತ್ತಿದೆಳ ಅಳಿಗಳವೊಲ್ || ೯೨

ವ|| ಆಗಳ್

ಕಂ|| ವನಜಿನಿ ಕರದಿಂ ಮೃಗಮದ |
ವನಧಾರೆಯನೆತ್ತಿ ಸೂಸಿದಳ್ರಾನುವೊರ ||
ಲ್ದೆಸೆ ವನಜದಿಂದೆ ರಮಣೀ |
ಜನಾಸ್ಯಕಂಜಕ್ಕೆ ಕವಿದುವಳಿಗಳ್ಕೊಳದೊಳ್ || ೯೩

ಎಲೆಯುಳ್ಳಳಿನೋಜ್ಜ್ವಳಕು |
ಟ್ಮಳಮಂ ಕೊಯ್ಯಲ್ಕೆ ಸಾರ್ದ್ದು ನಳಿನಾಕರದೊಳ್ ||
ಮುಳುಗುವಳ ಮೊಲೆಯನಬ್ಜದ |
ಕಳಿಕೆಂಬಿಡೆಂದೆಳಸಿ ಪಾಯ್ದು ಸಗಿಸಿದಳೊರ್ವ್ವಳ್ || ೯೪

ಮೊಲೆಯಲರ್ದಬ್ಜದೊಳಿರೆ ತನು |
ವೆಲೆವರೆಯೊಳಡಂಗೆ ಬಾಗಿ ಪೂಗೊಯ್ವಳ ತೋ ||
ರ್ಪ್ಪಲಘುತರಜಘನಭರವೇಂ |
ಗೆಲೆಪಂದುದೊ ಕೊಳದೊಳೇಳ್ವಕರಿಶಿರದಿರವಂ || ೯೫

ವೃ|| ಸ್ಮರಸಬಾಣಸರೋಜಕೆ ಕೂರ್ಪ್ಪನಾ |
ತರುಣಿ ಕಣ್ಗಡೆಯಿಂದುಪದೇಶಿಪಂ ||
ತರರ ಪೂಗೊಳದೊಳ್ಮರಿದಾಂತು ಪಂ |
ಕರುಹಮಂ ನಡೆಸೋಳ್ಪವಳೊಪ್ಪಿದಳ್ || ೯೬

ವ|| ಇಂತನಂತಸಂಭ್ರಮಂ ಮಿಗೆ ಸಲಿಲಕೇಳಿಯಂ ತಳೆದನಂತರಂ

ಕಂ|| ಅರೆವಿರಿದಂಬುಜದಲರಂ |
ಕರತಳದೊಳ್ತಳೆದು ಕನಕವನಜರಜಂಗ ||
ಳ್ಪೊರೆದಿರೆ ನಿಜತನುಲತೆಯೊ |
ಳ್ಸಿರಿಯೆನೆ ನಿಂದರಸಿ ಸರಸಿಯಂ ಪೊರಮಟ್ಟಳ್ || ೯೭

ವ|| ಮತ್ತಮಾಗಳ್

ಕಂ|| ಎಳವಾಸೆ ತೊಡರ್ದುಡೆನೆ ಮಿಸು |
ಪೆಳವಾಸೆಯುದೆಸೆಯೆ ನಿಂದಳಂ ಕೈವಿಡಿದೊ ||
ರ್ದ್ದಳೆವಾಸೆಯಾಂತಸಂಬುಜ |
ದೆಳೆವಾಸೆಡೆಗೊಂಡ ಪುಳಿನದೆಡೆಗವನೀಶಂ || ೯೮

ವೃ|| ನನೆಗಳ್ಸೋರ್ವ್ವಿನಪೊಲುವಿರ್ಸೂಸೆ ಮುಡಿಯಿಂ ವಾರ್ಬಿಂದುಗಳ್ಗಂಡದೊ|
ಳ್ಪನದಶ್ಯಾಮಳಕುಂತಳಂ ಶಶಿಯೊಳಂಕಂ ತೋರ್ಪ್ಪ ಪೋಲ್ತೋರೆ ಕ ||
ಣ್ಗೊನೆ ರೋಷಾಡೆ ವಿಲೋಹಿತಂ ವಿರಪಿರಕ್ತಾಕ್ತಾಂಗಜಾಸ್ತ್ರಂಗಳಂ |
ಪನಿತಾನೀಕಮದಿಂಬುವೆತ್ತು ಪೊರಮಟ್ಟೈದಿತ್ತು ಕಾಸಾರಮಂ || ೯೯

ಕಂ|| ಅಂಗನೆಯುರಂಗಕಾಂತಿಯು |
ಪಾಂಗದ್ಯುತಿ ಮುಸುಕಿದಂತಿರೆಸೆದುದು ಕೊಳದೊಳ್ ||
ಪಿಂಗದವರೆತ್ತಿ ಸೂಸೆ ತ |
ರಂಗಿಪಕುಂಕುಮಮುಮುಮುಳಚಂದನರಸಮುಂ || ೧೦೦

ತಳಿರ್ವಣ್ಣವಾಂತಕಡೆಗ |
ಣ್ಬೆಳರ್ವಣ್ಣಂಬಡೆದತುಟಿದಳಿರ್ಪ್ಪರೆದಳಕಂ ||
ಮಿಳಿರ್ವ ನಿರಿಮಿಣಿಲುಮೆಸೆದುದು |
ತಳರ್ವೆಳವೆಣ್ಗಳ್ಗೆ ಕುಳಿರ್ವ ಕೊಳದಿಂದಾಗಳ್ || ೧೧೧

ವೃ|| ಪೋಗಲೆಂದು ತಡಿಯೊಳ್ಧರಣೀಶ |
ಸ್ತ್ರೀಗಣಂ ನೆಲಸಿ ನೋಳ್ಪುದುಮಾಗಳ್ ||
ರಾಗದಿಂ ಸರಸಿಗೊಳ್ಪುಡೆಯಿರಾವಂ |
ತಾಗಿ ಪಬ್ಬಿತಲರ್ಗಣ್ಬೆಳಗೆತ್ತಂ || ೧೦೨

ಕಂ|| ಅಂಬರಮುದಮುರೆ ನಾಂದು ನಿ |
ರಂಬರೆಯುಂತಿರ್ದ್ದ ಯುವತಿಗಿತ್ತಪಳೆನೆ ಪೀ ||
ತಾಂಬರಮುಂ ಸರಸಿ ಸುವ |
ರ್ಣಾಂಬುಜರಜಮೆಲರ ಪೊಯ್ಗಳಿಂ ನೆಗೆದೆಸೆಗುಂ || ೧೦೩

ತರಳೆಯುರೆಮುಗುಳ್ಪಂಬುಜ |
ದರಲಂ ಕೊಯ್ದೊಯ್ದರೆಂದು ಮರಿದುಂಬಿಗಳಾ ||
ಸರಸಿಯೊಡನಳ್ತುದೂರುವ |
ಸರಮೆನೆ ಕರಮೆಸೆದುದವರಗಾವರಮುದರೊಳ್ || ೧೦೪

ತೆರೆ ಮುಸಗೆ ನೆಗೆದು ನಿಂದಂ |
ಬುರುಹದೊಳೆಳಮಿಾಂಗಳೆರೆ ವಿರಾಜಿಸಿದುದು ತ ||
ತ್ಸರಸಿ ಪೊರಮಟ್ಟು ಪೋಪಾ |
ತರುಣಿಯರಂ ನಿಳ್ಕಿನೀಕ್ಷಿಸಂತಿರೆ ಕೊಳದೊಳ್ || ೧೦೫

ವೃ|| ಕರದಿಂದಂ ಪಿಕ್ಕಿಬಳ್ಪಿಂದಲರ್ದಕುಮುದಮಂ ಸೂಡೆ ಕಂಜಾಕ್ಷಿ ಕಾಶ್ಮೀ|
ರರಸಂ ಕಸ್ತೂರಿಯುಂ ಕೂಡಿರೆ ಬಿಡದದರೊಳ್ಕೇಳಿಯಿಂ ಪೀಲಿಗಣ್ಣಂ ||
ತಿರೆ ತಾಂ ತತ್ಕೇಶಬಂಧಂ ನವಿಲೆನೆ ಕರಮೊಪ್ಪಿತ್ತು ಕರ್ಚ್ಚಿದ್ದಕಾಕೋ |
ದರನೆಂಬಂತಾಗೆ ನೀಲುತ್ತೆಸೆವನವಸರಃ ಪ್ರಾಪ್ತಶೈವಾಲಪಾಶಂ || ೧೦೬

ಕಂ|| ಕುರುಳೆಂಬಮಾಲೆದುಂಬಿಗ |
ಳರವಿಂದಾಕರಸರೋಜದೊಳ್ಮಧುಕಣಮಂ ||
ಬರೆಪೀರ್ದ್ದಳ್ಕಿಸಲಾರದೆ |
ಭರದಿಂ ಕಾರುವವೊಲಿವಜಳಕಣಮೆಸೆಗುಂ || ೧೦೭

ವ|| ಇಂತುಮಾಸಾರ್ವಭೌಮಲಲಾಮಂ ನಿರ್ವರ್ತಿತಜಲವಿಹಾರನಾಗಿ ಕಾಸಾರತಟದೊಳ್ಕಾಸಾರಘನಕಚಭರೆಯರೊಡಗೂಡಿ ನಿಂದಿರ್ಪ್ಪಾಗಳ್ಕೋಶರಕ್ಷಕರ್ನ್ನೀಡಿದವಿಮಳ ವಸನಸುಗಂಧಮಾಲ್ಯಮಣಿಭೂಷಣಂಗಳಂ ತಾನುಮರಸಿಯುಮಾಪೃಥುನಿತಂಬೆಯರುಂ ಪರಿಗ್ರಹಿಸಿ ಬೇರೆಬೇರೆ ಪಸದನಂಗೊಂಡು ಪರಮಹರ್ಷದಿಂದಿನಿಸಾನುಂಬೇಗಮಿರ್ದ್ದು ವನಮಹತ್ತರನಂ ಕರೆದು

ಕಂ|| ಇದು ಮಾಮರಕಿದು ಮಲ್ಲಿಗೆ |
ಗಿದು ಸಂಪಗೆಗಿದು ಸರೋವರಕ್ಕಿದಶೋಕ ||
ಕ್ಕಿದು ಲತೆವನೆಗೆಂದಿತ್ತಂ |
ಪದಪಿಂ ಬಹುಭೂಷಣಾಂಬರಂಗಳನರಸಂ || ೧೦೮

ವ|| ಅಂತಿತ್ತು ಮತ್ತಮಿರದೆ

ಕಂ|| ಆವನನಂದನಮಧ್ಯದ |
ದೇವಾವನಿಜಾತವಿಾತನೆಂಬವ್ರೊಲಿತ್ತಂ ||
ಶ್ರೀವಿಬುಧತತಿಗೆ ವಸುರತ್ನಾ |
ವಳಿಯಂ ರಾಜಶೇಖರಕ್ಷಿತಿಪಾಲಂ || ೧೦೯

ವ|| ಅಂತು ವಿತರಣವಿಳಾಸಮಂ ನಿರ್ವರ್ತಿಸಿ ಕೆಳದಿಯರಂ ಕರಿಣಿಗಳನೇರಲ್ನಿಯಾಮಿಸಿ ನಿರತಿಶಯವಿಭವಂ ಮಿಗೆ ನಿಜನಿತಂಬಿನಿವೆರಸು ವನಮಂ ಪೊರಮಟ್ಟು ಕರೀಂದ್ರಕಂಧರಾರೂಢನಾಗಿ ಪಟುಭಟಪಟಲಪರಿವೃತಜಯರವಮುಖರಮುಖವಂದಿಸಂದೋಹವಂದ್ಯಮಾನನುಂದದುಂದುಭಿಮೃದಂಗಢಕ್ಕಾಕಹಳಾದಿವಾದ್ಯಾನವದ್ಯರವಪೂರಿತದಶದಿಶಾವಳಯನಾನರೇಂದ್ರವೃಂದಾರಕಂ ನಡೆತಂದು ನಿಜರಾಜಧಾನಿಯಂ ಪುಗುವಾಗಳ್

ವೃ॥ ಏಳಸತ್ಸೌಧಂಗಳೊಳ್ಸಜ್ಜೆಗಳ ನೆಲೆಗಳೊಳ್ದೇವಕೂಟಂಗಳೊಳ್ನಿಂ।
ದೆಳವೆಣ್ಗಳ್ಕಂತುವಿಂತೊಪ್ಪುಗುಮೆ ಹರಿಗವಿಾಜೆಲ್ವು ಕೈಸಾರ್ಗುಮೇ ಕೇ॥
ಳ್ಕೆಳದೀ ನೋಡೆಂದು ನೋಡುತ್ತೆಸೆಯೆ ಬಿಡದೆ ತನ್ನಂದಮಂ ಬಂದು ಪೊಕ್ಕಂ।
ಲಳನಾಯುಕ್ತಂ ನಿಜಾಂತಃಪುರಮನುರುಶಿವಾದ್ವೈತವಿದ್ಯಾಸಮುದ್ರಂ॥

ಅಳಿಪ್ರಭಲಲಾಟಗಜಳಾಳಕೆ ಖಳಾಪಹೆ ಬಳಾನ್ವಿತೆ ವಿಾಳದ್ಘನಗುಣೆ। ೮
ಬಳಾನುಜಬಲಿಪ್ರಿಯೆ ತಳಾಂಚಿತಜಳೋದ್ಭವೆ ಬಳಾಜಿತ ಮುಖಾಮರನತೆ॥
ಗಳಾನ್ವಿತ ಹಲಾಹಲಬಿಲೇಶಯಕಳೇವರವಿಳಾಸದೆ ಕಳಂಕರಹಿತೆ।
ಕಳಾಧರಕಳಾಧರೆಸುಲೋಚನೆ ಕಳೋಜ್ವಳಿಶಿಲೋಚ್ಚಯಸುತೇ ಜಯಜಯ॥

ಗದ್ಯ॥ ಇದು ವಿನಮದಮರವರಮಕುಟತಟಘಟಿತಮಣಿಗಣಮಹಾಪ್ರ
ಭಾಪಟಲಪರಿವೃತಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನಸರಸಜವಾನಿತೋ
ಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿ
ತಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂ
ಧದೊಳ್ರಾಜಶೇಖರವನವಿಹಾರಾದಿ
ವರ್ಣನಂ. ದಶಮಾಶ್ವಾಸಂ
ಸಂಪೂರ್ಣಂ.



# ಏಕಾದಶಾಶ್ವಾಸಂ.



ಕಂ|| ಶ್ರೀಚಂಡಿಕಾಮುಖೇಂದುವಿ |
ಲೋಚನರುಚಿಚಂದ್ರಿಕಾಚಕೋರಂ ನತರ ||
ಕ್ಷಾಚತುರಂ ಭವಪಾಶವಿ |
ಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ ||

ವ|| ಅನಂತರಮರಸನಮಾತ್ಯಸುತಂಬೆರಸು ರಾಜಗೃಹದ್ವಾರದ ಪಜ್ಜಳಿಪ ಬಜ್ಜರದಸೆಜ್ಜೆವನೆಯೊಳೊಡ್ಡೋಲಗಂಗೊಟ್ಟಿರುತ್ತುಮಿರೆಯಿರೆ

ಕಂ|| ಗಗನಗಜನಿಟಿಲತಟದಿಂ |
ಜಗುಳ್ದಂತೆ ಪುರಾಣರಶ್ಮಿ ಮಣಿಮಯಮುಕುರಂ ||
ಮಿಗೆ ಮೆರೆದುದರರೆ ಪಶ್ಚಿಮ |
ನಗದಗ್ರದೊಳಿಳಿದು ತೋರ್ಪ್ಪದಿನಕರಬಿಂಬಂ || ೨

ವ|| ಅಂತುಮಲ್ಲದೆಯುಂ

ಕಂ|| ಪಡುವೆಟ್ಟಿನೆಡೆಯೊಳೊಪ್ಪುವ |
ಕಡಲೊಡೆಯನ ಮಡದಿ ತೇದಸಿಂದೂರದ ಕೆಂ ||
ಪಿಡಿದೆಸೆವಸಾಣೆಗೆಯಿಡಿನೆ |
ಪೆಡಂಗುವಡೆದಿರ್ದ್ದದಸ್ತಭಾಸ್ಕರಬಿಂಬಂ || ೩

ವ|| ಮತ್ತಂ

ಕಂ|| ಇದು ಸಂಧ್ಯಾನಟರುದ್ರನ |
ವಿದಿತಜಟಾಕ್ಷ್ಮಬ್ಧಫಣಿ ಮಹಾಬಿಲಮಂ ತ ||
ಳ್ವಿದೆ ಪುಗಲೊಗೆದಿರೆ ಪೊಳೆವ |
ಗ್ಗದಫಣಮಣಿಯೆನಿಸಿತರುಣರುಚಿಬಿಂಬಂ || ೪

ಶರಧಿಗತಪ್ರತಿಬಿಂಬಂ |
ಸರಿಸದೊಳಿರೆ ಬದ್ಧರಶ್ಮಿಯುಂತರವಿಬಿಂಬಂ ||
ಹರನಾಟ್ಯಕೆ ಕಾಲನಟಂ |
ಕರವೆತ್ತಿದ ಪೊನ್ನತಾಳಮೆನೆ ಕಣ್ಗೊಳಿಕುಂ || ೫

ಒದೆಯೆ ನಭೋಲಕ್ಷ್ಮೀವಧು |
ಪದಪಿಂ ವರುಣಾಶೆಯೆಂಬಶೋಕೆಯ ಲತೆ ಕೆಂ ||
ಪೊದವಿದ ತಳಿರಂ ತಳೆದಂ |
ದದೆ ತಳ್ತಿಸೆದಿರ್ದ್ದುದರರೆ ಸಂಧ್ಯಾರಾಗಂ || ೬

ಅರುಣಂ ಬಳಲ್ದ ತುರಗೋ |
ತ್ಕರಮಂ ಪೈದೊಳೆಯಲಬ್ಧಿಯೊಳ್ತೆಗೆದು ಕೆಲ ||
ಕ್ಕಿರಿಸಿದರನ್ನದ ಪಲ್ಲಣ |
ದಿರವೆನೆ ನೆರೆನೆಗೆದಸಂಜೆಗೆಂಪೆಸೆದಿರ್ಕ್ಕುಂ || ೭

ವ|| ಅಂತುಮಲ್ಲದೆಯುಂ

ಸ್ರ|| ಗಗನಾಂಭೋರಾಶಿಯೊಳ್ತಳ್ತಿಸೆವಪವಳಮೋ ಪಶ್ಚಿಮಾಶಾಂಗನಾಂಗ |
ಪ್ರಗತೋದ್ಯತ್ಕುಂಕುಮಕ್ಷೋದಮೊವರುಣಗೃಹದ್ವಾರಸೌವರ್ಣಹರ್ಮ್ಯ ||
ಸ್ಥಗಿತಶ್ರೀಪದ್ಮರಾಗಪ್ರಭೆಯೊ ಮದನ ಯಾತ್ರಾದಿಯೊಳ್ಪೊಯ್ದ ಕೆಂಬ |
ಟ್ಟೆಗಳೊಳ್ಗಾರವೋ ಪೇಳೆನೆ ಪಸರಿಸಿ ಸಂಧ್ಯಾರುಣಜ್ಯೋತಿ ತೋರ್ಕ್ಕುಂ|| ೮

ಎನ್ನ ತನೂಜೆ ನಿನ್ನರಸಿಯೊಳ್ಕೆಳೆಗೊಂಡೊಡನಿರ್ಪ್ಪಳಾಗಳುಂ |
ನಿನ್ನ ತನೂಜೆಯೆನ್ನರಸಿ ಕೇಳದರಿಂದೆಮಗಿಲ್ಲಭೇದಮಿ ||
ನ್ನೆನ್ನಮಗಂಗೆ ಕಾಯದಿರೆನುತ್ತೆ ಸರೋನಿಧಿ ಬಂದಭಾನುವಂ |
ಮನ್ನಿಸುತಿತ್ತ ಪೀತವಸನಂ ನಿಜಮೆಂದೆನೆ ಸಂಜೆ ರಂಜಿಕುಂ || ೯

ವ|| ಮತ್ತಮಾಗಳ್

ಕಂ|| ಇನವಿರಹಿಣಿ ಪದ್ಮಿನಿಕಾಂ |
ತನಗಲ್ಕೆಯ ನಾಂತಿರಸುಗೆಮುಳಿವಸಿಶಾಕಾಂ ||
ತನ ಕರಕೆ ಬೆರ್ಚ್ಚಿ ಮುಚ್ಚಿದ |
ಳೆನೆ ಮೊಗಮಂ ಮುಗಿವಪಂಕಜಂ ಕರಮೆಗುಂ || ೧೦

ಅಲರಂಬಂಗಂಬಾಗದಿ |
ದಲರ್ದಂಬುಜಮೆಂದು ಬಂದು ತಜ್ಜಯಯಾತ್ರಾ ||
ವಿಲಸತ್ಸಮಯದೆ ಮುಗಿಯಿಪು |
ದೆಲರೆಸೆ ಮುಗಿವಂಬುಜೋತ್ಕರಂ ಕರಮೆಸೆಗುಂ ||

ಹರನೇತ್ರಸಖಂ ಗಡ ಮುರ |
ಹರನೇತ್ರಂಗಡ ವಿಧಾತೃಜನಕಂಗಡ ತಾ ||
ವರೆಯುದಕರೆಯಾದುದುಗಡ |
ಸಿರಿಯೆನೆ ತಿಳಿ ಕಾಲವಶಮನಾರ್ಕ್ಕಳಿದಪರೋ ||

ಎಲೆನೈದಿಲೆ ಸಿರಿಯಿದರೊ |
ಳ್ನೆಲಸಿದೆಯೆನೆ ಪೊರೆವನೆವದಿ ನಳಿಯದು ನೋಳ್ಪಂ ||
ತಲರ್ದುದದನರಿದು ಭಯದಿಂ |
ಜಲಜನಿ ಮುಚ್ಚುಪವೊಲಲ್ಲಿ ಮುಗಿದುದು ಕಮಳಂ ||

ಎಳಲುತ್ತಿರೆ ಪಕ್ಷಂ ತನು |
ಬಳಲುತ್ತಿರೆ ಚಿತ್ತಮಿನಿಯಳಂ ನೆನೆನೆನೆಯು ||
ತ್ತಳಲುತ್ತಿರೆ ಜೀವನಮದು |
ತೊಳಲುತ್ತಿರೆ ಸುಳಿದು ಸುಯ್ವುದೊಂದುರಥಾಂಗಂ ||

ನಲ್ಲಳಗಲ್ದಳಲುರ್ವಿರೆ |
ಮೆಲ್ಲನೆ ಬಾಯಲ್ಲಿ ಪಾಸೆದಳೆದು ರಥಾಂಗಂ ||
ಪುಲ್ಲಶರನಿಸುನೆಗಾರದೆ |
ಪುಲ್ಲಂ ಕಚ್ಚಿದವೊಲಾಗಳೇನೊಪ್ಪಿದುದೋ ||

ವೃ|| ನಳಿನದಳಂಗಳಲ್ಲಿ ಪುಳಿನಸ್ಥಳದಲ್ಲಿ ಲತಾವಿತಾನದೊ |
ಳ್ತಿಳಿಗೊಳದಲ್ಲಿ ತನ್ನಮನದನ್ನಳನೊಲ್ದರಸುತ್ತೆ ಸುತ್ತಿಕ ||
ಗ್ಗೊಳಲಿ ಕರಂಗಿ ಕಂಪಿಸಿ ಪಲುಂಬಿ ಬಳಲ್ದು ತೊಳಲ್ದಳಲ್ದು ಮೋ |
ಹ್ಕಳವಳಿಸಿತ್ತು ಕಾಂತೆಯನಗಲ್ದ ಣವಕ್ಕಿ ನಿಶಾಪ್ರವೇಶದೊಳ್ ||

ಕಂ|| ಇಲ್ಲಿ ನಡೆತಂದೆವಪ್ಪೆದೆ |
ವಿಲ್ಲಿ ಬಿಸಂಗೊಂಡೆವಿಲ್ಲಿ ಬಾಯುಗ್ಗಡಿದೆವಿ ||
ಲ್ಲಿಲ್ಲಿ ನೆರೆದಿರ್ದೆವೆಂದ |
ಲ್ಲಲ್ಲಿ ಕರಂ ನಿಂದು ನೆನೆದು ಸುಯ್ಯುದು ಕೋಕಂ || ೧೭

ಪೊಸಕಲ್ತಲೆಯುದು ತನುವಂ |
ಮುಸುಂಕೆ ಕರ್ಬಕ್ಕಿಗೆತ್ತಗಲ್ವುದು ಚಕ್ರ ||
ಪ್ರಸರಂ ರಸೆಯೊಳದಲ್ಲದೊ |
ಡೆಸೆವಿರುಳೊಳಗಲ್ಕೆಯುದಕದೇಂ ಸಮನಿಸುಮೇ || ೧೮

ವೃ|| ಘನಸಂಧ್ಯಾರಾಗತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುವೆಂದೆಂ |
ಬನವೀನಸ್ವರ್ಣಸತ್ಪಿಂಡಮನಮಳನಭಶ್ರೀಗಲಂಕಾರಮಂ ಮಾ ||
ಳ್ಪೆನೆನುತ್ತಿಟ್ಟೈಸಿ ಪೂರ್ವೇತರಶರನಿಧಿಯೊಳ್ಕಾಲಮೆಂಬೋಜನಲ್ದ |
ಲ್ಜನಿಸುತ್ತುರ್ಬಿಳ್ದುದೋ ಕರ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ||

ನಿಜಕರದಿಂದೆ ರಾಜವಸುವೆಲ್ಲಮನೊಯ್ಯನೆ ಕಳ್ದು ನೀಲನೀ |
ರಜನಿಯ ಬಾಯ ಮುದ್ರಿಸಿ ಪಿಸುಣ್ಗೆಡೆದಪ್ಪಳೆನುತ್ತೆ ಮತ್ತೆ ನೀ ||
ರಜನಿಯೊಳೊಲ್ದು ಪುಷ್ಪವತಿಯೊಳ್ದಿವದೊಳ್ಪರೆದಿಂತು ಸತ್ಪಥ ||
ತ್ಯಜನಮನಾಳ್ದು ಬಿಳ್ದಳಿದ ಸೂರ್ಯನ ದುರ್ಯಶಮಪ್ಪುದೀತಮಂ || ೨೦

ವ|| ಮತ್ತಂ

ಪುರಹರನರ್ತನೋತ್ಸವದೊಳೋಸರಿಸಿರ್ದ ಕರೀಂದ್ರಚರ್ಮಮೋ |
ನರನಯಸಾಳಿಮತ್ಸ್ಯತತಿಯಾಳಿಪಕಂಮಡುಪ್ರೋ ನಭಸ್ತಮಾ ||
ಲರುಚಿರಪಲ್ಲವಾವಲಿಯೊ ತೀವಿದತಾರಗೆದುತ್ತುಗಳ್ಗೆ ಮೇ |
ಲುರವಣೆಸುತ್ತೆ ಬಪ್ಪಬಲಿಭೋಜನಜಾಲಮೊ ಮರ್ಬಿನೇಳ್ಗೆಯೋ || ೨೧

ಉಡುಪೊಡೆ ನೀಲಚೇಲಮುಲರ್ಗಣ್ಗಿರದೆಚ್ಚು ಪೊಡಂಜನಂ ಒಳ |
ಲ್ಮುಡಿಯೊಳೆ ತಾಳ್ಪೊಡುತ್ಪಳದಳಸ್ರಜಮುಂಗದೊಳಣ್ಪುಗೈದು ಜೊ ||
ಟ್ಟಿಡುಪ್ರೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರಮಣೀವಿಭೂಷಣಂ |
ತುಡುಪ್ರೊಡೆ ಜೋಡಿಯುಗ್ಗೆ ಪಿರಿದಾದುದು ಪರ್ಬಿದಮುಬ್ಬು ಲೋಕಮಂ||

ವ|| ದ್ರುತವಿಳಂಬಿತವೃತ್ತಂ ||

ವೃ|| ಬಿಗಿದಬೆಳ್ಳಿಯ ನುಣ್ಮಣಿಯಂತೆವೋ |
ಲ್ಭಗಣವೊಪ್ಪಿರೆ ಕಾಲವನೇಚರಂ ||
ಜಗದಲೋಚನಮೀನಕೆ ಬೀಸಿದಾ |
ನೆಗಳ್ದಕಬ್ಬಲೆವ್ರೋಲ್ತಮವೊಪ್ಪುಗುಂ ||

ವ|| ಅಂತಿಟ್ಟಣಿಸಿ ಪರ್ಬಿದಂಧಕಾರದಲ್ಲಿ

ವೃ|| ಬಳೆಗಳ್ಗಲ್ಕೆನದಂತೆ ಕಣ್ಬೆಳಗದೆತ್ತಂ ಸೂಸದಂತಿಟ್ಟವಂ |
ಜುಳಭೂಷಾಳಿಯ ಶಿಂಜಿತಂ ನೆಗಳದಂತಾಸ್ಯಾಬ್ಜಗಂಧಕ್ಕೆ ವಂ ||
ಡಳಿಗೊಂಡಾರಡಿವಿಂಡು ಗಾವರಿಸದಂತೋರಂತೆ ಜಾಣ್ಮೆಕ್ಕು ಪುಂ |
ಶ್ಚಳಿಯರ್ಬಂದುಪಕಾಂತಸೂಚಿತನಿಶಾಂತಾಂತಂಗಳಂ ಪೊರ್ದಿದರ್ ||

ವ|| ಅವರೊಳೊರ್ವಳ್

ಕಂ|| ಕ್ಷಣರುಚಿರುಚಿರೇಕ್ಷಣೆ ಪಾ |
ರ್ವಣವಿಧುಮುಖಿ ಪಾಣ್ಬೆ ಪೋಗಲಳವಲ್ಲದೆ ತ ||
ಲ್ಲಣಿಸಿ ಪೆಡಂಮೆಟ್ಟುತ್ತಂ |
ಗಣಕೈದುತೆ ಸುಯ್ದು ಬೈದಳಾಕಮಳಜನಂ ||

ಮಾರನೃಪಂ ಕಾರೊರೆಯೊ |
ಳ್ಕೂರಸಿಯಂ ಪುಗಿಸುವಂತೆ ವೀಧಿಯ ತಮದೊಳ್ ||
ಜಾರೆ ಘನದೀರೆ ತನುರುಚಿ |
ಸಾರಾಂಗೆ ಪೊದಳ್ದು ಪೊಕ್ಕು ಬರ್ಪವಳೆಸೆದಳ್ ||

ರಸೆಯಂ ಪರ್ಬಿದಮರ್ಬಿನೊ |
ಳಸಮಶರಂ ನಿಜಶರಂಗಳಿಂ ಗುರಿನೋಡು ||
ತ್ತ್ರಸತಿಯರನಿಸುವನವರ್ಗಳ |
ಬಿಸರುಹದಳಧವಳವಿಪುಳ ಕೇಕರ ರುಚಿಯಿಂ ||

ವೃ|| ಉಟ್ಟು ತಮಾಲಪಟ್ಟೆಯನೆ ಕತ್ತುರಿಯಂ ನಿಜದೇಹದಲ್ಲಿಗ |
ಣ್ಪಿಟ್ಟು ಸುರೇಂದ್ರನೀಲಮಣಿಭೂಷಣಮಂ ತಳೆದುತ್ಪಳಸ್ರಜಂ ||
ಬಟ್ಟದುರುಂಬಿನೊಳ್ಮೆರೆಯೆ ನೀಲದ ಜೇಲದ ಮೇಲುದಾಂತು ಕ |
ಣ್ಗೆಟ್ಟಳನಾದಳೊರ್ವಳಿಳೆಯುತ್ತಮಮಂ ಪಡೆದಪ್ಪಿದಂತೆವೋಲ್ || ೨೮

ವ|| ಆಗಳೊರ್ವಳ್ದೂತಿ ಧೂರ್ತವಿಪ್ರಸಂಕೇತಸದನಕ್ಕೆ ನಿಜಸಖಿಯ
ನೊಡಗೊಂಡೇಳ್ತಂದು ಕಳಿಪುವಲ್ಲಿ

ವೃ|| ಮುಳಿಯದಿರಾಳಿ ನಿನ್ನ ಮನದಾಸರವಾತುಮನಾಡಿ ಪೊಳ್ತ ನೀಂ |
ಕಳಿಯದಿರಾತನೊಳ್ನಖರದಕ್ಷತಸಂತತಿಯಂ ರತಾಂತದೊಳ್ ||
ತ್ತಳೆಯದಿರುಟ್ಟುದಂ ಕಳೆಯದಿರ್ನೆರೆದೀಗಳೆ ಜೇಗಬಪ್ಪುದು |
ತ್ಪಳಸಖಮುಂಡಳೋದಯಕೆ ಮುನ್ನಮೆನುತ್ತುರೆ ಬುದ್ಧಿವೇಳಿದಳ್ || ೨೯

ವ|| ಅವಳೆಂದುದನಪ್ಪುಕೈದು ಪಕಾಂತನೆಡೆಗೆ ಬಂದು

ವೃ|| ಉಡುಗಣದಂತೆ ಮೈಯೊಳಿಡಿದೊಪ್ಪೆ ಜಿಮನ್ನಿಜನೇತ್ರಕೈರವಂ |
ಬಿಡದನುರಾಗಮಂ ತಳೆಯೆ ಪೆರ್ಮೊಲೆಯೆಂಬೆಣೆವಕ್ಕಿ ಗಾಸಿಯಂ ||
ಪಡೆದಿರೆ ತತ್ಕರಾಹತಿಯಿನಂದಿನನಿಲ್ಲದವೇಳೆಯುಲ್ಲಿರು |
ಳ್ಮಡದಿವೊಲಂಬರಂಬೆರಸು ಪಾರ್ಣ್ಬೆ ಕಳಾನಿಧಿಯೊಂದುಗೂಡಿದಳ್ || ೩೦

ವ|| ಮತ್ತಮೊಂದೆಡೆಯೊಳೊರ್ವಳ್ಪಣ್ಬೆ

ವೃ|| ಉಗುಗರ್*ನೆಸಾಂಟದಂತೆ ಪಿಡಿ ಬಲ್ಮೊಲೆಯಂ ನಿರಿಯಂ ಸಡಿಲ್ಚಿ ನೀ |
ಸುಗಿಯದಿರುಟ್ಟುದಂ ಜಡಿದು ಪೊಯ್ಯುದಿರೊಯ್ಯನೆ ಮೆಯ್ಯ ಬಾಸುಳಂ ||
ನೆಗಪದಿರೆನ್ನ ಜೆಂದುಟಿಗೆ ಪಲ್ಮೊನೆ ನಾಂಟದವಾಳ್ಕೆಯಿಂದೆ ಮೆ |
ಲ್ಲಗೆ ಮಿಗೆ ಜುಂಬಿಸೆಂದಸತಿ ಶಿಕ್ಷಿಸಿದಳ್ಪೊಸಪಾಣ್ಬನೊರ್ವನಂ || ೩೧

ವ|| ಅದಲ್ಲದೆ ಪೆರತೊಂದು ತಾಣದೊಳೊರ್ವಜಾತಿಜಾರೆ ಜೌವನದ
ಕಾರನಂ ಕಂಡು

ಕಂ|| ಇನನಿಲ್ಲನಿಂದುಬಾರಂ |
ಘನತಿಮಿರಮಿದಪ್ಪುದಕಟ ನೇಹಮುದಿಲ್ಲಂ ||
ಮನೆಯೊಳ್ಪೊಡರಿದೆ ಪೋದುದು |
ಜನರಜಿತಂ ನೆರೆಯಿದೆಂದು ಪದಿರಿಂ ನುಡಿದಳ್ || ೩೨

ವ|| ಅದಂ ಕೇಳ್ದದಿರದ್ರೈತಂದವಂ ಮದನಕೇಳಿವಡೆದೆಸೆದಿರ್ದನಲ್ಲಿ ಮತ್ತ ಮೊಂದೆಡೆಯೊಳ್

ವೃ|| ತೊಡೆ ಕಡುಕಂಪಿಸುತ್ತುಮಿದೆ ಮೈ ಬೆಮರುತ್ತಿದೆ ಕೆತ್ತುಗುಂದದಿ |
ಟ್ಟೆಡೆಮೊಲೆ ನೋಹಿಸುತ್ತಿದೆ ವಿಲೋಚನಮಂಚಿತಚಂಚಲತ್ವಮಂ ||
ಬಿಡದಿದೆ ಗದ್ಗದಂಬಡೆದಮಾತಿದೆ ಭೀತಿಯೊ ಕೂರ್ತರೀತಿಯೋ |
ಮಡದಿಗೆನುತ್ತೆ ಶಂಕಿಪನ ಸಂದೆಗಮಂ ಬಿಡಿಸಿತ್ತು ಮುಂಬದಂ || ೩೩

ವ|| ಮತ್ತಂ

ವೃ|| ವದನೇಂದುಜ್ಯೋತ್ಸ್ನೆಯೆತ್ತಂ ಕವಿದಪುದೆನುತುಂಪಾಣ್ಬನಾಸ್ಯಾಬ್ಜದೊಳ್ಮು
ಚ್ಚಿದಳಕ್ಕುಂ ಕಣ್ಗದಿರ್ಮಿಂಚುಗುಮೆನುತದನಾವಿಾಲನಂಗೈದಳಕ್ಕುಂ ||
ಮದಭೃಂಗಂ ಬರ್ಕುಮೆಂದಳ್ಕುತೆ ಪಿರಿದು ನಿಜಶ್ವಾಸಮಂ ಸೂಸಳಕ್ಕುಂ |
ವಿದಿತಂತಾನೆಂಬಿನಂ ಜಾಣ್ಮೆಗುತುಪಪತಿಯೊಳ್ಕೂಡಿದಳ್ಜೋಹೆಬೊರ್ವಳ್ ||

ವ|| ಮತ್ತಮೊಂದು ಪಾಳ್ದೇಗುಲದಲ್ಲಿ

ವೃ|| ಗಳನಿನದಕ್ಕೆ ಕಾತರಿಪಕಂತಮನೊಯ್ಯನೆ ಸಂತವಿಟ್ಟು ಮೈ |
ಗಳ ಮುಸಪಿಂಗೆ ಮೈಮರೆವಚಿತ್ತಮನೆಳ್ಚರಿಸುತ್ತೆ ದೈನ್ಯಮಂ ||
ಗಳಪಲೊಡರ್ಚೆ ಗದ್ಗದಿಪ ಮಾತುಗಳಂ ಮರೆಪಿಕ್ಕಿ ಪೊಯ್ಯಲಿಂ |
ದೆಳಸುವಕಯ್ಯನೋಸರಿಸಿ ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ || ೩೫

ಕಂ|| ಅಗಳೆ ಮುಳಿಸಾಗಳೆ ತಿಳಿ |
ವಾಗಳೆ ಪೊಸಬೈಗುಳಾಗಳೇ ಪೊಯ್ಗಳ್ ||
ತ್ತಾಗಳೆ ಸವಿಸುಸಿಲೆಸಗುವ |
ಳಾಗಳೆ ಪಾಣ್ಬಂಗೆ ಸುರತಸುರಲತೆ ನಿಬಿಡಂ || ೩೬

ವೃ|| ಮೆಲ್ಲನೆ ಬರ್ಪ* ಮೆಲ್ಲನುರ್ದಪ್ಪುವ ಮೆಲ್ಲನೆ ಜಾಂಪಪಕ್ಕರಿಂ |
ಮೆಲ್ಲನೆ ನೋಳ್ಪ ಮೆಲ್ಲನುಸಿರಿಕ್ಕುವ ಮೆಲ್ಲನಿಲಿಲ್ಲೆಗೈವ ಮೇ ||
ಗ್ಮೆಲ್ಲನೆ ಪಾಯ್ವ ಮೆಲ್ಲನೊಡಗೂಡುವ ಮೆಲ್ಲನೆ ಸೌಖ್ಯಪಾಂಪತಿ |
ಮ್ಮೆಲ್ಲನೆಗಲ್ತೆದೋರಪೊಸಜಾಣ್ಮೆಯುಪಾಣ್ಬೆಯುರ್ದ್ವರದೋಱದೊಳ್ || ೩೭

ಕಂ|| ಇಡಿದತಮಮೆಂಬಜಗುನೆಯ |
ಮಡುವಿನ ಮಧ್ಯದೊಳೆ ಸುಳಿವಮೀಂಗಳಿವೆಂಬಂ ||
ತಿಡಿಕಿರಿದು ತುರುಗಿ ಮಿರುಗುತೆ |
ಕಡುಸೊಗಸಂ ಪಡೆದುವರರೆ ತಾರೆಗಳಾಗಳ್ || ೩೮

ವ|| ಮತ್ತಂ

ದಿನಮಣಿಯೆನ್ನೊಳಗಿರೆ ಮು |
ತ್ತಿನಮಣಿಯೇವಾಳ್ತೆವಯೆಂದು ವನನಿಧಿ ಪೊಸಮು |
ತ್ತಿನಮಣಿಗಳನಿದೆ ಚೆಲ್ಲಿದ |
ನೆನೆ ಮಣಿನಿಭತಾರೆಗಳ್ಮನಂಗೊಳಿಸಿರ್ಕುಂ || ೩೯

ಬಿಸಜಾಪ್ತನ ಬಿಸುವಿಸಿಲಿಂ |
ಬಸವಳಿದಾಕಾಶಂಕೇಶವಾಂಗದೆ ನಿಶೆಸಿಂ ||
ಪಿಸಿದಮಲಯರುಹರಸಕಣ |
ವಿಸರಂ ತಳ್ತಂತೆ ತಾರೆಗಳ್ಸೊಗಯಿಸುಗುಂ || ೪೦

ವೃ|| ಇನನಪರಾಂಬುರಾಶಿಯೊಳೆ ಬಿಳ್ದಳಿಯುತ್ತಿರೆ ಕಂಡಗಲ್ಕೆಗಿ |
ರ್ಚಿನ ಸೆಕೆ ಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣನೀ ||
ರ್ವನಿಗಳನ್ನೈದೆ ಸೆಳ್ಳುಗುರ್ಗಳಿಂ ಮಿಡಿಯಲ್ಕಿಡಿದಲ್ಲಿ ತಳ್ತುಪೆಂ |
ದೆನೆ ರಮಣೀಯಮಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ || ೪೧

ಕಂ|| ಸುರಪಶಿಖಿಶಮನನೈಋತಿ |
ವರುಣಾನಿಲಧನಪತೀಶರೊಲವಿಂ ಕೆದರ್ದಂ ||
ತಿರೆ ಪುಷ್ಪಾಂಜಲಿಯಂ ಶಂ |
ಕರಂಗೆ ಸಂಧ್ಯಾನಟಂಗೆ ಸೆಗೆದುದು ಭಗಣಂ || ೪೨

ವ|| ಅನಂತರದಲ್ಲಿ

ವೃ|| ನಳಿನಂಕುಂದೆ ವಿಕಾಸಮೊಂದೆ ಕುಮುದಂ ಸೊಂಪೆಂದೆ ಚಂದ್ರೋಪಳಂ |
ಜಳಮಂ ಜೇರೆ ಪಯೋಧಿ ಮೀರೆ ವಿರಹಿಪ್ರಾತಕ್ಕೆ ಕಾಯ್ಪೇರೆ ಕೋ ||
ಮಳೆಯುಪರ್ವಡೆ ಚಕೋರಿ ನೋಡೆ ಮದನಂ ಪಂಚಾಸ್ತ್ರಮಂ ಪೂಡೆ ಚಾ |
ಪಳೆಯುಜ್ಯೋತ್ಸ್ನೆಯರೋಡೆ ಮೂಡಿದುದು ತೇಜೋಮಂದಿರಂ ಚಂದಿರಂ ||

ಅಂಬರಪುಷ್ಪವಾಟಿಯೊಳರಲ್ದುಡುಪುಷ್ಪಕದಂಬಮಂ ಚಕೋ |
ರಾಂಬಕಿ ಪೂರ್ವದಿಗ್ವಧು ಕರಂ ತಿರಿಯಲ್ಕರಮೆತ್ತಿ ನಿಕ್ಕಿರಾ ||
ಗಾಂಬರದಂತೆ ಸಂಜೆ ನಸುಜಾರೆ ಜಲಕ್ಕನೆ ಪೊಣ್ಮಿದೊಂದುರೋ |
ಜಂ ಬಗೆವಂದು ರಂಜಿಪವೊಲುಜ್ಜ್ವಳವಾದುದು ಚಂದ್ರಮಂಡಳಂ || ೪೪

ವ|| ಅಂತುಮಲ್ಲದೆಯುಂ

ವೃ|| ಇದು ತಮವೆಂಬಶಂಬರಧಿಯಂ ಸಲೆ ಪೀರ್ವಮಹೌರ್ವವಹ್ನಿಯೋ |
ಇದು ತಮವೆಂಬಕರ್ಪಿಡಿದಕಾನನಮಂ ಸುಡುವಗ್ನಿಪಿಂಡವೋ ||
ಇದು ತಮವೆಂಬಕೃಷ್ಣಭುಜಗವ್ರಜಮಂ ತವೆಕೊಲ್ವತಾರ್ಕ್ಷ್ಯವೋ |
ಇದು ತಮವೆಂಬರಕ್ಕಸನನಿಕ್ಕುವಚಕ್ರವೊ ಚಂದ್ರಬಿಂಬವೋ || ೪೫

ವ|| ಮತ್ತಂ

ಕಂ|| ತಿಮಿರಭ್ರಮರವ್ರಜಮಾ |
ಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರದಿಶಾ ||
ರಮಣಿ ತೆಮರಲ್ಕೆ ಚಂಪಕ |
ಸುಮಕಂತುಕಮಿಟ್ಟಳೆನಿಕುಮಾವಿಧುಬಿಂಬಂ || ೪೬

ಸಿಡಿದಕಿಡಿಬಳಸಿದುಡುಗಣ |
ಮಡರ್ದು*ರಿ ಸಂಧ್ಯಾಂಶುವೆನೆ ತಮೋಯಮನೊಡಲಂ ||
ಸುಡಲೆಸಪಕಾಲಶೂಲಿಯ |
ಕಿಡಿಗಣ್ಗೆಣೆವಂದುದರುಣರುಚಿ ವಿಧುಬಿಂಬಂ || ೪೭

ಬಳಸಿದಕೆಂಬೆಳಗಿನಿಸಿನಿ |
ಸಳೆದುದು ಬೆಳ್ವೆಳಗು ಬಳೆದುದೀಕ್ಷಿಸುವೆಳವೆ ||
ಣ್ಗಳ ಕಣ್ಗಳ ಸುಣ್ಬೆಳಗುಗ |
ಳ*ಳುರ್ದಂತಿರೆ ಮೂಡಿ ಮೋಹಿಸುವಮೃಗಧರನಾ || ೪೮

ಬರಸೆ ಮದವ್ಯೆದೆ ಪೊರೆದಂ |
ತಿರೆ ಕರೆಯುಡುರಾಜಿ ಪ್ರೋತ್ಕರಿಸಿದಂಬುಕಣೋ ||
ತ್ಕರದಂತಿರೆ ಚಂದಿರನಿಂ |
ದಿರನಾಸೆಯ ಪುಷ್ಕರಂಬೊಲೇನೊಪ್ಪಿದನೋ || ೪೯

ವೃ|| ನೀಲನಭಸ್ಸ್ಥಳಾಚ್ಯುತಲಲಾಟತಟಚ್ಯುತರಕ್ತಧಾರೆಗ |
ಳ್ಸಾಲಿಡುತೊಕ್ಕು ಮಿಕ್ಕು ಪರೆದಂತಿರೆ ಪರ್ಬಿದಸಂಜೆಗೆಂಪು ತ ||
ತ್ಕಾಲಕಪಾಲಪಾಣಿಧೃತಚಂದ್ರಕಪಾಲಮೆ ಪೀರ್ದುದೆಂಬಿನಂ |
ಬಾಲರಸಾಲಪಲ್ಲವಸಮುದ್ಯುತಿ ತದ್ಯುತಿ ಪಿಂಗಿತಾಕ್ಷಣಂ || ೫೦

ಅಮಿತಾಖಂಡಾಂತರಿಕ್ಷೋನ್ನತನುತಶಿವಲಿಂಗಾಂಘ್ರಿಯಂ ನೋಡಲುದ್ಯ |
ತ್ತಮುಮೆಂಬಾಸೂಕರಾಕಾರದ ಹರಿ ಧರೆಯೊಳ್ಪೊಕ್ಕವೋಲ್ಪೋಗೆ ತಲ್ಲಿಂ ||
ಗಮುಹಾಶೀರ್ಷಾಗ್ರಮಂ ನೋಡುವಜವದೆಮಳಾಳಾಂಗಮಂ ತಾಳ್ದಜಂ ಸಂ|
ಭ್ರಮದಿಂ ಪಾರ್ವಂತೆಕಣ್ಗೊಪ್ಪಿದುದಮೃತಕಳಾಪೂರಿತಾಂಗಂಸುಧಾಂಗಂ||

ವ|| ಮತ್ತಂ

ಕಂ|| ಚೆನ್ನಾದುದಮೃತಕರಬಿಂ |
ಬನ್ನೋಳ್ಪರ ಕಣ್ಗೆ ಜೊನ್ನಮೆಂಬಮಹೇಶಂ ||
ತನ್ನವಿಯಚ್ಚಿಕುರದೊಳೆ ಸ |
ಮುನ್ನತಸಿತನೀರಜಾತಮಂ ಸೂಡಿದವೊಲ್ || ೫೧

ವೃ|| ಭಗಣಮೌಕ್ತಿಕಧರಾಭ್ರಕೃಷ್ಣಸಂ |
ದಗಿಯುಲಿಂದ್ರಹರಿದದ್ರಿಭಾಂಡದಿಂ ||
ತೆಗೆದು ತಾಳ್ದನವನೀತಪಿಂಡಮಂ |
ಬಗೆಯೆ ಪೋಲ್ತುದಮೃತಾಂಶುಮಂಡಳಂ || ೫೨

ವೃ|| ವ್ಯೋಮಶ್ರೀಪತಿಪಾಂಚಜನ್ಯಮುಡುಮಾರ್ಗಾಗಾರಮುಕ್ತಾಮಯೋ|
ದ್ದಾಮಶ್ರೀಕಳಶಂ ನಭೋಂಬುಧಿಸಿತಾಂಭೋಜಂ ವಿಯದ್ದಂತಿವ ||
ಕ್ತ್ರಾನೋಪಾವಹಚಂದ್ರಕಾಂತಮುಕುರಂ ಚೆಲ್ವಾದುದಾಕಾಶಮಾ |
ರಾಮಾಜಾತಸಿತಾತಪತ್ರಮುವದಾತಂ ಬಿಂಬಮಬ್ಜಾರಿಯಾ || ೫೪

ಕಂ|| ಚಂಚಚ್ಚಕೋರಪಾಂಥ |
ಮ್ಮರ್ಗಂಜುವಸಂಭ್ರಮದಿನೀಂಟೆ ರಜನೀಸತಿ ಶೋ ||
ಭಾಂಚಿತಹಿಮಕರಕಲಶದಿ |
ನೇಂ ಚಂದ್ರಿಕೆಯೆಂಬಜಲಮನೆರೆದಳೊ ನಭದೊಳ್ || ೫೫

ತಮಮೆಂದು ವಿಧುಂತುದನಾ |
ಮಮನಿಟ್ಟದರಂಗರುಚಿಯನಾಂತುದಿದೆಂದಾ ||
ಹಿಮರುಚಿ ಕರದಿಂ ಸದೆದಂ |
ತಿಮಿರಮನಿನಿಸುಳಿಯದಂತೆ ಬಿಡದೆಲ್ಲೆಡೆಯೊಳ್ || ೫೬

ಎಳವಳಿಕಿನ ಕರಗದೊಳು |
ಜ್ಜ್ವಳಜಳಮಂ ತೀವಿ ರಜನಿ ಪರಿಮಳಕೆಂದು ||
ತ್ಪಳಮಿಳಿಪಿದೊಡದು ತೋರ್ಪ್ಪವೊ |
ಲಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ || ೫೭

ವೃ|| ಭುವನಮನೆಲ್ಲಮಂ ಪುದಿದು ತೀವಿದಚಂದ್ರಿಕೆಯೆಂಬ ಪಾಲ್ಗಡ |
ಲ್ತವಕದಿನೆನ್ನಪುತ್ರನವಿಳಾಜನವೀಕ್ಷಿಸೆ ದೃಷ್ಟಿಪಾತದಿಂ ||
ನವೆದಪನೆಂದು ತೂಪಿರಿದಶೀಕರದಂತಿರೆ ತಾರಕಾಳಿಯೊ |
ಪ್ಪುವಪಣೆಗಿಟ್ಟಕಜ್ಜಳದ ಬೊಟ್ಟಿನಲೊಪ್ಪಿದುದಿಂದುಲಾಂಛನಂ || ೫೮

ತಿಮಿರೋದ್ಯದ್ಯಮುನಾತರಂಗಿಣಿ ಪಿತಂ ತಾನೆತ್ತ ಪೋದಂ ಗಡೆಂ |
ದು ಮಹಾದುಃಖದಿನೆಂಟುದಿಕ್ಕಿನೊಳೆ ನೋಡುತ್ತಿರ್ಪ್ಪದಂ ಕೂಡೆ ಚಂ ||
ದ್ರಮನಾರಕ್ತತೆವೆತ್ತು ಮತ್ತುದಿಸೆ ತಾತಭ್ರಾಂತಿಯಿಂದಪ್ಪಿದ |
ಕ್ಕ್ರಮದಿಂದೆಂಬವೊಲಿಂಬುವೆತ್ತುದು ಕಳಂಕಂ ತತ್ಸುಧಾಧಾಮನಾ || ೫೯

ಗಿರಿಶಲಲಾಟಲೋಚನಧನಂಜಯನಿಂ ಪರಿದಗ್ಧನಾದಭಾ |
ಸುರಕುಸುಮೇಷುಪಂಕೆರುಹನಾಭನ ನಾಭಿಸಿತಾಂಬುಜಾತದೊಳ್ ||
ಮರಳಿ ಜಲಕ್ಕನುದ್ಭವಿಪನೆಂಬವೊಲೊಪ್ಪಿದುದಭ್ರಮಧ್ಯದೊ |
ಳ್ಕರಮೆಸೆದಿರ್ಪಚಂದ್ರಮನ ನುಣ್ಗರೆ ಸೋಳ್ಪಡದೊಂದುಚಿಪ್ಪಿನಿಂ || ೬೦

ಕಂ|| ಇದು ಪೂರ್ವದಿಶಾವಧುವೆ |
ತ್ತಿದಶಶಿಮುಖಿಮುಕುರಮಮೃತಕರಮಂಡಳಮು ||
ಲ್ತಿದು ಚಿಹ್ನಮಲ್ತು ಮಧ್ಯದೊ |
ಳೊದವಿದಮಾರ್ಪೊಳವು ವಿಷ್ಣುಪದವಿಷ್ಣುವಿನಾ || ೬೧

ವೃ|| ಚಂದ್ರಿಕಾಜಲಧಿ ತೀವಿ ಲೋಕಮಂ |
ಸಾಂದ್ರಮಾಗಿ ನೆಗೆದುರ್ವೆ ಭೀತಿಯಿಂ ||
ಚಂದ್ರಮಧ್ಯವಟಪತ್ರದಲ್ಲಿ ಲ |
ಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮವೊಪ್ಪುಗುಂ || ೬೨

ಕಂ|| ದೆಸೆವೆಣ್ಗಳಂಗಮಂ ಮಿಗೆ |
ಮುಸುಕಿದತಿಮಿರಗ್ರಹಂಗಳಂ ಕೂರ್ಪಿಂದೋ ||
ಡಿಸಿದಂ ಮೃಗಾಂಕಮಾಂತ್ರಿಕ |
ನಸಮಜ್ಯೋತ್ಸ್ನಾವಿಭೂತಿಯಂ ತಳಿದಾಗಳ್ || ೬೩

ಎರಳೆವರಿ ತನ್ನ ಕೋಡಿ |
ಟ್ಟೊರಸಿದೊಡೆ ಸುಧಾಂಗನಂಗಮಂ ಸೀಳ್ದೆಡೆಯಿಂ ||
ಸುರಿದು ಪಸರಿಸಿತೊ ಪೊಸಪಾ |
ಲ್ಸರಿಯೆನೆ ಬೆಳ್ದೊನ್ನಮಿಳೆದದೇಂ ಮುಸುಕಿದುದೋ || ೬೪

ವೃ|| ಮಿಸುಪನಿಶಾನಿತಂಬಿನಿಗೆ ಬೆಳ್ಳುಡೆಯಾದುದು ಭಾನುರೋಚಿಯಿಂ |
ಬಸವಳಿದೀಧರಾಂಗನೆಗೆ ಚಂದನಲೇಪನಮಾದುದಂಬುಜ ||
ಪ್ರಸರದಗಲ್ಕೆಯಿಂ ನೆಗೆದತುಂಬಿಗೆ ಮಲ್ಲಿಗೆಮಾಲೆಯಾದುದಾ |
ಪಸಿದಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ || ೬೫

ಮೊಗೆಮೊಗೆದುಂಟೆ ಯಿಂಟೆ ತನುಮಧ್ಯಕೆ ತಳ್ವದೆ ಸುತ್ತಿಸುತ್ತಿ ವೇ |
ಣಿಗೆ ಮಿಗೆ ಸೂಡಿಸೂಡಿ ಲಲಿತಾಂಗದೊಳೊಯ್ಯನೆ ಪೂಸಿಪೂಸಿ ಮೆ ||
ಲ್ಲಗೆ ಬಿಿಡದೆಬ್ಬಿಯೆಬ್ಬಿ ಬಗೆದಂದು ಮುಳುಂಗಿಮುಳುಂಗಿ ಕೌತುಕಂ |
ಬಗೆಗೊಳೆ ನೋಡಿನೋಡಿ ನಲಿದತ್ತಬಳಾಜನಮಚ್ಚಜೊನ್ನಮಂ || ೬೬

ಧರೆಯೆಲ್ಲಂ ಚಾರುಚಂದ್ರೋಪಳವಿರಚಿತಮಾದಂತೆ ತೋರ್ದತ್ತು ಮೇಲಂ|
ಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದಾಶೋ ||
ತ್ಕರಮೆಲ್ಲಂ ಚಂದನಾಲೇಪನದೆ ಬಳಿದವೋಲೊಪ್ಪುತಿರ್ದತ್ತು ಧಾತ್ರೀ |
ಸರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದರ್ || ೬೭

ಗಗನಮೆನಿಪ್ಪಪಾಳ್ಪೊಲದೊಳರ್ಕಸಮುದ್ಧೃತಿಗೈದು ಸಂಜೆಯೆಂ |
ಬಗಿನಿಯನಿಟ್ಟು ಮರ್ಬ್ಬೆನಿಪಗೊಬ್ಬರವಂ ತಳಿದಲ್ಲಿ ಜಲ್ಲಿ ತಾ ||
ರಗೆಗಳೆನಿಪ್ಪ ಬಿಳ್ತುಗಳನಂತವಕೈಂದವಬಿಂಬರೌಪ್ಯಕುಂ |
ಭಗತಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರಂ || ೭೮

ಇದು ಚಂದ್ರಾತಪಮಲ್ತು ತೀವಿದಸುಧಾಪಾರಾಕರಂ ಮೇಲೆ ತೋ |
ರ್ಪುದಿದಂಭೋಜವಿರೋಧಿಮಂಡಳಮುಮಲ್ತಲ್ಲೀಸುತ್ತಿರ್ಪ್ಪಂಜೆ ಮ ||
ತ್ತಿದು ತಾಂ ಲಾಂಛನಮಲ್ತು ತದ್ವದನದೊಳ್ಕರ್ಚ್ಚಿರ್ದ್ದಸೀಲಾಬ್ಜಮಿಂ |
ತಿದು ತಾರಾತತಿಯಲ್ತು ಪಕ್ಷಯುಗಳ ವ್ಯಾಕೀರ್ಣಬಿಂದುವ್ರಜಂ || ೭೯

ವ|| ಎಂಬಸಂಭ್ರಮಮಸಪ್ಪುಕೈದೊಪ್ಪುವ ಸಾಂದ್ರಚಂದ್ರಿಕಾಸಂಪದ ಮನಭೀಕ್ಷಿಸಿ

ವೃ|| ಅವಧರಿಸೆನ್ನ ಬಿನ್ನಪವನುರ್ವಿಪ ಪರ್ವ್ವದಪಾರ್ವಣೇಂದುಸಂ |
ಭವನವರುಂದ್ರಚಂದ್ರಿಕೆಯೊಳಾಂಪುದು ರಾತ್ರಿವಿಹಾರಕೇಳಿಯು ||
ತ್ಸವಮನೆನುತ್ತೆ ಕೈಮುಗಿದ ನಾಗರಿಕಂಗುಡಲಿತ್ತು ತಳ್ಪದೇ |
ಳ್ದವನಿಪರೂಪಪಂಚಶರನೋಲಗದಿಂ ನಡೆತಂದನಳ್ತಿಯಿಂ || ೮೦

ವ|| ಅಂತೈತಂದಂತಃಪುರಮಂ ಪೊಕ್ಕು ಸುಗಂಧೋದಕಕೃತಸ್ನಾನನುಂ ವಿಭೂತಿರುದ್ರಾಕ್ಷವಿಳಸಿತಕಳೇವರನುಂ ಪರಿರಚಿತಶಿವಲಿಂಗಸಮರ್ಚನತತ್ಪ್ರಸಾದಪಾದೋದಕಾಸ್ವಾದನಸಂತುಷ್ಟಹೃದಯನುಂ ಸಾರಕರ್ಪೂರಸುರಭಿಪರಿಮಿಳಿತತಾಂಬೂಲನಿಜಮುಖಾಂತರ್ವಳಯನುಂ ಸರಸಪರಿಮಳಮಧುರಮಾಲತೀಮಾಲಿಕಾಲಂಕೃತಮನೋಜ್ಞಕಬರೀಭರನುಂ ಮೃಗಮದಲಲಾಮಲಸಿತಲಲಾಟತಟನುಮಮಳಮೌಕ್ತಿಕಕರ್ಣಾಭರಣಕಮನೀಯಮುಖಮಂಡಳನುಂ ಭಗಣಭಾಸುರರುಚಿನಿಚಯನಿಚಿತರುಚಿರತರ ತಾರಾಹಾರರಮಣೀಯವಿಶಾಲೋರಸ್ಥಳನುಮತಿವಿಶದವಜ್ರಮಣಿಖಚಿತಕಂಕಣಾಭಿರಾಮಕರಾಗ್ರನುಮನೇಕಮಣಿಗಣಾಗಣಿತಭೂಷಣಭೂಷಿತಾವಯವನುಮಭಿನವಕಸ್ತೂರಿಕಾಕಾಶ್ಮೀರಕದಂಬಕರ್ದಮಾನುಲಿಪ್ತವಕ್ಷಸ್ಸ್ಥಳನುಮತಿನವೀನದಿವ್ಯಾಂಬರಾವೃತಸೌಂದರ್ಯವಿಗ್ರಹನುಮಾಗಿ

ನಾಗರಿಕಾದಿಭೋಗಸಖರಿಂದನುಕೂಲದಕ್ಷಿಣದುಷ್ಟಶಠರೆಂಬ ಶೃಂಗಾರರಸಪ್ರಧಾನನಾಯಕರಿಂ ಧೀರೋದಾತ್ತಮುಖಸರ್ವರಸಪ್ರಧಾನನಾಯಕರಿಂದಾವೃತನಾಗಿ ರಾಗದಿಂ ಸಚಿವಸುತಸಮೇತಂ ಚಂದ್ರಿಕಾವಿಹರಣಂಗೈಯಲ್ಮನಂದಂದುನೃಪೇಂದ್ರಚಂದ್ರ ನಿಜಕಟಾಕ್ಷವೀಕ್ಷಣಸಾಂದ್ರಚಂದ್ರಿಕಾದ್ವಿಗುಣಿತ ಚಂದ್ರಿಕಾವಿಳಾಸನುಮಾಗಿ ಮದನಮುದಮಧುಕರಮಧುರ ಮಾಲತೀಮಾಲಾನುಕಾರಿಯುಂ ಸೂಳೆಗೇರಿಯುಂ ಪುಗುತಂದಿಂದ್ರದಿಗ್ಭಾಗದೊಳಂದಂಬಡೆದಿಂದುಬಿಂಬಮನವಲೋಕಿಪಾಗಳ್ನಾಗರಿಕಂ ಕೈಮುಗಿದಿಂ ತೆಂದಂ

ಕಂ|| ಜೊನ್ನಂಪಾಲ್ಗಡಲಂತಿದೆ |
ಜೊನ್ನೊಡಲಂ ನಳಿನನಾವೆಯುಂತಿದೆ ಚಿಹ್ನಂ ||
ತನ್ನಂಪೆತ್ತಳ ತವರೆನು |
ತುಂ ನೋಡಲ್ತಳರ್ವಮದನಸಂತಿದೆ ನೃಪತೀ || ೭೧

ವ|| ಅಂತುಮಲ್ಲದೆ

ವೃ|| ಸಂಜೆಗೆ ರಾಗಮಾಗೆ ನಗೆ ನೈದಿಲಮಂದತಮೋಸಿತಾಂಬರಂ |
ತಾಂ ಜರಿದೊಪ್ಪೆ ರಾತ್ರಿಗುಡುಘರ್ಮಪಯಃಕಣಮೇಳೆ ಮೈಯೊಳೆ ||
ತ್ತಂ ಜವದಿಂ ನಭಸ್ಸಖಿಗೆ ಸೋಂಕಿ ಕರಾಗ್ರದೆಕಣ್ಗೆ ರಂಜಿಪೀ |
ಮಂಜುಳಚಂದ್ರಮಂಗೆ ಮಹಿಯಲ್ಲಿ ಕಳಾನಿಧಿನಾಮಮೊಪ್ಪದೇ || ೭೨

ವ|| ಎನೆ ಮುಗುಳ್ದು ಮತ್ತಮೊರ್ವನಿಂತೆಂದಂ

ವೃ|| ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ |
ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ |
ನಿಜದಿಂದಬ್ಜನಭಂಗಲಕ್ಷಣಯುತಂ ತಾನಾಗಿ ದೋಷಾಕರಂ |
ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ || ೭೩

ವ|| ಎನೆ ಕೇಳ್ದು ಮಿತವಚನನಿಂತೆಂದಂ

ವೃ|| ದ್ವಿಜರಾಜಾಭಿಧೆಯೊಪ್ಪದೇ ಸಸಿತಪಕ್ಷಂಗೇನನಂತಾಶ್ರಯಂ |
ಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾನಂ ಘನಶ್ರೀಯುತಂ ||
ಗೆ ಜನಂ ಮುಚ್ಚದೆಮಬ್ಜನಾಮಮನೆ ದಲ್ದೋಷಾಕರಾಹ್ವಾನಮೀ |
ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇನಲ್ಲನೇ || ೭೪

ವ|| ಎಂದು ಮತ್ತಮಿಂತೆಂದಂ

ಕಂ|| ಕುವಲಯಕಧಿಪತಿಯಪ್ಪನೆ |
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ||
ಕುವಲಯಕಧಿಪತಿಯಪ್ಪನೆ |
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ || ೭೫

ಸುರತಿವರಚಕ್ರರುಚಿವಿ |
ಸ್ಫುರಿತಸಿತದ್ಯುತಿ ಮಹೋತ್ಪಳಪ್ರಿಯಮಿತ್ರಂ ||
ವರಮಂಡಳಾಂಕನೀಹಿಮ |
ಕರೆನೆಸೆದಪನಾದಿನೇಶನೆನೆ ನೋಡರಸಾ || ೭೬

ವ|| ಎಂಬಚತುರವಚನನಿಚಯಮಂ ಕೇಳ್ದು ಮಚ್ಚುತ್ತುಂ ಮನುಜಮ ನೋಜನಲ್ಲಿಂ ಮುಂದಣ್ಗೆ ನಡೆತರುತ್ತಿರೆ ತೊಟ್ಟನೆ ಕಟ್ಟಿದಿರೊಳ್

ವೃ|| ಸುತವಾರಸ್ತ್ರೀಕುಚಾಗ್ರಚ್ಯುತಮೃಗಮದಕಾಶ್ಮೀರಕರ್ಪೂರಧೂಳೀ |
ಕೃತಧೂಳೀಕೇಳಿಚಂಚದ್ಭ್ರಮರಚಲಶಿಖಂಡಂ ತದೀಯಾಲಯಾಲಂ ||
ಜಿತಘಂಟಾನಾದಕೋಲಾಹಲರುತಿವಿದಳತ್ಕೈರವಾನೀತಮಧ್ವಂ |
ಚಿತಲಾಲಂ ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ || ೭೭

ವ|| ಅಂತು ಸುಳಿವಮಂದಾನಿಲನಂ ಮನದಕ್ಕರಿಂದಾಲಿಂಗಿಸುತ್ತುಂ ಬರೆವರೆ ಮದನಮಹಾರಾಜನ ಮನ್ನಣೆಯ ವಿಳಾಸಿನಿಯರೊಂದುಗೂಡಿ

ವೃ|| ತರಳಾಪಾಂಗಪ್ರಕಾಶಂ ಕೆದರೆ ಮದನಬಾಣಂಗಳಂ ಮಂಜುಮಂಜೀ |
ರರವಂ ಕಂದರ್ಪಬಾಣಾಸನಗುಣರುಚಿಯಂ ಸೂಸೆ ಮಂದಸ್ಮಿತಂ ಶಂ ||
ಬರಸಂಪ್ರತ್ಕೀರ್ತಿಯಂ ಮುಂತಿಡೆ ರತಿಪಲಸತ್ತೇಜಮಂ ಜೀರೆ ಬಿಂಬಾ |
ಧರ ರಾಗಂ ರಾಗಮಂಸೋಳ್ಪರೊಳ್ಪಡೆಯುತುಂ ಪೋಯ್ತು ಪಣ್ಯಾಪ್ರತಾನಂ||

ವ|| ಅದಸಾನಾಗರಿಕನರಸಂಗೆ ತೋರುತ್ತೈತರುತ್ತಿರೆಯಿರೆ

ವೃ|| ಮನೆಮನೆದಪ್ಪದೊಪ್ಪಿದುದು ಮಾರನ ಪೆಂಪು ಮಹೋತ್ಸಲಾಸ್ತ್ರಕೀ |
ರ್ತನೆ ಮಕರಾಂಕಸಂಭ್ರಮಮನಂಗನಕರ್ಪೂರಮನೋಜ್ಞಪುಷ್ಪಧ ||
ನ್ವನ ಬಿರುದಾಂಕಮಾಲೆ ಮಧುಮಿತ್ರನ ಪೂಜೆ ಮನೋಸಿವಾಸನಿಂ |
ಪಿನಕಥೆ ಮನ್ಮಥಕ್ಷಿತಿಪನಾಪ್ಪುರ್ ಮನೋಜನ ಮಂಗಳೋತ್ಸವಂ || ೭೯

ವ|| ಮತ್ತಮಲ್ಲಿ

ವೃ|| ನಗೆವೆಳ್ಪಿಂಬೆಳಜೊನ್ನಮಂ ಪರಪಿ ಕಾಂತಾಸ್ಯಾಂಬುಜಾತಂಗಳಂ |
ನಗಿಪಭೂರ್ಷಣರೋಚಿರಾತಪಮನಾಗಳ್ಬೀರಿ ಕೂರ್ತ್ತೀಕ್ಷಪರ ||
ಕ್ಷಿಗಳೆಂಬುತ್ಪಳಮಂ ಮರಲ್ಚುವರಜಸ್ರಂ ತಮ್ಮ ಮೂಗೆಂಬಸಂ |
ಪಗೆಯಿಂ ಮುಚ್ಚಿರ್ಪರಾಣ್ಮದುಂಬಿಗಳನೇನಂ ಮಾಡರಬ್ಜಾಕ್ಷಿಯರ್ || ೮೦

ವೃ|| ನಗೆಗಣ್ಣೋ ನವನೀಲಸೀರರುಹವೋ ರಾಕಾನಿಶಾಕಾಂತನೋ |
ಮೊಗವೋ ಜೆಂದುಟಿಯೋ ರಸಾಲದಳವೋ ಧಂಮಿಲ್ಲವೋ ಕಾರಕ |
ಮ್ಮುಗಿಲೋಪೊಂಗಳಸಂಗಳೋ ಮೊಲೆಗಳೋ ಕುಂಭೀಂದ್ರಕುಂಭಂಗಳೋ|
ಬಗೆಗೊಳ್ವೀಜಘನಂಗಳೋ ಎನೆ ವಿಟವ್ರಿರ್ಭ್ರಾಜಿಕುಂ ವೇಶ್ಯೆಯರ್ || ೮೧

ಕೊರಲೊಳ್ಕೊಂಕಿನ ಮಾತು ಮುದ್ದುಮೊಗದೊಳ್ಮಂದಸ್ಮಿತಂ ನೋಡದಂ|
ತಿರೆ ನೋಳ್ಪೊಂದುವಿಡಾಯಮಕ್ಷಿಯೊಳೆ ಪುಬ್ಬೊಳ್ಜಬ್ಬು ಸೌಗಂಧಬಂ||
ಧುರಮುಂಡಶ್ವಸಿತಂ ಸುನಾಸಿಕೆಯೊಳೆಂಡುಂ ಯೌವನಶ್ರೀವಿಳಾ |
ಸರುಚಿಸ್ಫೂರ್ತಿ ನಿಜಾಂಗದೊಳ್ಮೆರೆಯೆ ಕಣ್ಗಿಂಬಾದರಬ್ಜಾಕ್ಷಿಯರ್ || ೮೨

ನಗೆನೋಟಂ ಪೊಸಮಾತು ರೀತಿ ಗಮಕಂ ಗಾಂಭೀರ್ಯಮೌದಾರ್ಯಮು|
ಜ್ಜಿಗಮುತ್ಸಾಹಮಲಂಪು ಸೊಂಪು ಸೊಗಸೊಯ್ಯಾರಂ ಬೆಡಂಗಳ್ಕರ ||
ಪ್ಪುಗೆಜೆಲ್ಲಂ ಜೆದುರೋಜೆ ಚಾಟುತನಮುಂದಂ ಬಂದವೊಳ್ವೇಟಮಿ |
ಜ್ಜಿಗೆಸಂದೊಂದುವ ಕೂಟಮೆಲ್ಲಮುವರ್ಗೆ*ಂ ಮೈಸಂದು ಮುಚ್ಚಿರ್ದ್ದುದೋ||

ವ|| ಮತ್ತಮಿಂತೊಪ್ಪುವಸಿಂಗರದ ಸೀಮೆಯೆನಿಪಭಾಮಿನಿಯರೊಳೊ ರ್ವ್ವಕಾಮಿಸಿಯೊತ್ತಿಗೊಳಲೆಂದು ನಿಜಗೃಹದ್ವಾರದ ಮಣಿಮಯಸ್ತಂಭಮಂ ನೆಮ್ಮಿ

ವೃ|| ನಗೆಮೊಗಮಿಟ್ಟಕುಂಕುಮದಬೊಟ್ಟು ತುರುಂಬಿದಜಾದಿ ದೋರೆವ |
ಲ್ಮೃಗಮದದಣ್ಪು ತೊಟ್ಟನವಕಂಚುಕಮುಟ್ಟಸಿತಾಂಬರಂ ಕರಂ ||
ಝಗಝಗಿಪಜ್ಜರಸ್ನದೊಡಪೊಪ್ಪುವಮಾಣಿಕಗೊಪ್ಪುಜೊಲ್ಲೆಯುಂ |
ಬಗೆಗೊಳಿಸಿಪ್ಪು ಸೋಮ್ಮುಡಿ ಘನಸ್ತನಮೊಪ್ಪಿರೆ ಸೀರೆ ತೋರಿದಳ್ || ೮೪

ವ|| ಮತ್ತಮೊರ್ವ್ವಳಗಣ್ಯಲಾವಣ್ಯ ತಾರುಣ್ಯವತಿ

ವೃ|| ಬಡನಡು ಬಟ್ಟಬಲ್ಮೊಲೆ ಬಳಲ್ಮುಡಿ ನಲ್ನುಡಿ ನೀಳ್ದಕಣ್ಮರ |
ಲ್ನಿಡುವೆರಲಿಂಪು ಸೊಂಪಿಡಿದಚಂದುಟಿ ನುಣ್ಗೊದಡೆ ಜೆಲ್ವುದಾಳ್ದಮೆ ||
ಲ್ಲಡಿ ಕಡುಪಣ್ಪುವೆತ್ತ ಪೊರವಾತ್ತುರುಗಿರ್ದ್ದವೆ ಸಣ್ಣಪುರ್ಬ್ಬತೆ |
ಳ್ತೊಡೆ ಸುಲಿಪಲ್ಗಳಂದದಕದಂಪಿರದೊಪ್ಪಿರೆ ಕಣ್ಗೆ ತೋರಿದಳ್ || ೮೫

ವ|| ಮತ್ತಮೊರ್ವ್ವಳಪೂರ್ವಸೌಂದರ್ಯ ಸೌಭಾಗ್ಯವತಿ

ವೃ|| ತೊಡೆದಜವಾದಿಯಿಂ ಮುಡಿದಕಮ್ಮರಲಂ ಪಿಡಿದಂಬುಜಾತದಿಂ |
ಜಡಿವನಿತಂಬದಿಂ ಸುಡಿವಕೈಗಿಳಿಯಿಂ ಕೊಡದಂದವಾಗಿ ಪೆಂ ||
ಪಡರ್ದಕುಚಂಗಳಿಂ ಕುಡಿತೆಗಂಗಳಿನಿಂಪಿಡಿದಾಸ್ಯಬಿಂಬದಿಂ |
ಬಡನಡುವಿಂದೆ ಜೆಲ್ವಿಡಿದಪೆಣ್ಮಣಿಯುಂ ನಡೆನೋಡಿದಂ ನೃಪಂ || ೮೬

ವ|| ಮತ್ತಮೊರ್ವ್ವಳ್ನೃತ್ತಸ್ತನೆ ಚಿತ್ತಜನಮತ್ತಕಾಶಿನಿಯಂತೆ ಮುತ್ತಿನ ಮತ್ತವಾರಣಮಂ ತ್ರಿಭಂಗಿಯಿಂ ನೆಮ್ಮಿನಿಂದು

ವೃ|| ಮೇಳಂಗೈದುವ್ವಿಸುತೆಸುತಿಯುಂ ವೀಣೆಯುಂವಕ್ಷದೊಳ್ಮೇ |
ಣ್ಮಾತ್ಯುತ್ತುಂ ಪೇವೆರ್ಮ್ಮಲೆಗೆ ಮೊಲೆ ತಾಂಪುಟ್ಟಿತೆಂಬಂತೆ ತೋರಲ್ ||
ಕೇಳಲ್ಕೆಂದ್ಯೆತರೆ ವಿಟಮೃಗಂ ಬಾಜಿಸುತ್ತಿರ್ದ್ದಳೊರ್ವ್ವ |
ಳ್ಪೇಳಾವಳ್ಯಾದ್ಯಖಿಳವಿಳಸದ್ರಾಗಮಂ ರಕ್ತಿಯಿಂದಂ || ೮೭

ವ|| ಅಲ್ಲಿ ಪೆರಳೊರ್ವ್ವಳ್ಪಾಣೆ ವೀಣೆಯುಂಶ್ರುತಿಗೈದು ಸೋರೆಯಂ ಸ್ತನಾಗ್ರದೊಳಾಂಕಿ ಸರಳತರಕರಾಂಗುಲಿಯುನಿಟ್ಟು

ಕಂ|| ಸುಲಲಿತೆ ವರಾಳಿಕುಂತಳೆ |
ವಿಲಸತ್ಕಲ್ಯಾಣಿ ಶಂಕರಾಭರಣಸಮು ||
ಜ್ಜ್ವಲವೇಣಿ ರಾಗರಂಜಿತೆ |
ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ || ೮೮

ವ|| ಅದಂ ಕೇಳ್ದು ಮಚ್ಚುತ್ತುಂ ಸಂಗೀತಸರ್ವಜ್ಞಂ ಮುಂವಗ್ಗೆ ನಡೆತರುತ್ತುಮಿರೆಯಿರೆ ನಿಜಗೃಹದ ಮುಂದಣಮಣಿಯಾಂಕಣ ದೊಳ್ನಿವಗ್ಗೆಯನ್ನೆ

ರೆದೆಳವೆಣ್ಗಳೊಡಗೂಡಿ ಗಾಡಿಯಿಂ ನಿಂದು ಶಶಿಕಾಂತದೊರಲೊಳ್ಕೆಂಬರಲ್ಕೇಸಕ್ಕಿಯುಂ ಪೊಯ್ದಿಂದ್ರನೀಲದೊನಕೆಯುಂ ನಿಡುದೋಳ್ಗಳಿಂನೆಗಪಿ

ತ್ರಿಪದಿ|| ಮದನಂಗೆ ಜಯಮಕ್ಕೆಮಧುಗೆ ಸಂಪದಮಕ್ಕೆ |
ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂ |
ಮದಮೆಂದು ತೊಲಗದಿರುತಿರ್ಕೆ ||

ಮನದಿಚ್ಛೆಯಿಂ ಮುಂಚಿ ತಸುವಿತ್ತು ನಲ್ಲರೊಂ |
ದನುವರಿದೊಂದಿ ಸವಿದೋರ್ಪ್ಪಸೂಳೆಯರಾ |
ಮನೆಯ ಮುಂದಿರದೆ ಸುರಧೇನು || ೯೦

ಸುರತಕ್ಕಿಚ್ಛೈಸಿ ಮೇಲ್ವರಿವಕಾಂತನ ಕಂಡು |
ಕರಗಿ ಕಾತರಿಸಿ ನೆರೆವನೀರೆಯ ಮನೆ |
ಸಿರಿಗಂಬುಜಾತಮೆನಿಸದೇ || ೯೧

ಪೊರಮಿಂಚುಗೈವನಂ ಒರುವಾತುಗಾರನಂ |
ಕರುಬನಂ ಕಪಟಹೃದಯನಂ ಧೂರ್ತನಂ |
ತೊರೆಯುದುದೆಗ್ಗತನವಲ್ತೆ || ೯೨

ಒರ್ವ್ವನೊಳ್ವಂಚಿಸಿ ಕೊರ್ವ್ವಿದಬೇಟಮ |
ನೊರ್ವ್ವನೊಳಿಲ್ಲದಿರ್ದೊಡಂ ತನಿವೇಟ |
ಮುರ್ವ್ವಿಸಿ ಪಣವಂ ಪಡೆವುದು || ೯೩

ತಾನೇ ಮೇಲಿಕ್ಕದೆ ಮಾನವಂ ಬಲಿದು ಕಾ |
ಮಾನುರಾಗತೆಯ ಮನಕಿತ್ತು ಮೇಲಿಕ್ಕ |
ಲಾನೇಮವರಿದು ನೆರೆವುದು || ೯೪

ಸಗೆಸೋಟಸುಡಿಗಳಿಂ ತೆಗೆದು ಭುಜಂಗರ |
ಬಗೆಯ ಒಂದವರೊಳೊಡಗೂಡಿ ಮೋಹಿಪ |
ಳ್ಮುಗುಳಂಬನರಸಿಗೆಣೆಯಲ್ತೆ || ೯೫

ಸ್ತನದ ಜವ್ವನೆ ನೋಡಿ ಮನಮಿಕ್ಕುವರ್ವ್ವಿಟ |
ರ್ಕ್ಕನಕಪಂಕಜದ ಜಿರಿಮುಗುಳನೆ ನೋಡಿ |
ಮನಮಿಕ್ಕುವಂತೆ ಮರಿದುಂಬಿ || ೯೬

ಚದುರಂಗನೆತ್ತಮಿಂಪೊದವಿದಪಾಡು ಸ |
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪದಿ ||
ಳ್ಳದಸೂಳೆವನೆಯೆ ಬರುವನೆ || ೯೭

ವ|| ಎಂದು ಸುವ್ವಿವಾಡನೆವದಿಂ ವೇಶ್ಯಾನೀತಿಯನೆಳವೆಣ್ಗಳ್ಗುಪದೇಶಿಪ ವಿದಗ್ಧೆಯರ ವಿಳಾಸಮನಿಳಾಪತಿತಿಳಕಂ ನಿರೀಕ್ಷಿಸುತ್ತುಂ ಬರುತ್ತಿರೆ ಮುಂದೊಂದೆಡೆಯಲ್ಲಿ

ವೃ|| ಮೊಳೆವೆಳಲಜ್ಜೆಮೋಹಿಪಮುಗುಳ್ಮೊಲೆ ಮುದ್ದಿನಿವಾತು ಮಿಂಚನು |
ಜ್ಜ್ವಳಿಸುವಚೆಲ್ಲೆನೋಟಮಳಿಕುಂತಳಮುಜ್ಜ್ವಳಕಾಯಕಾಂತಿ ಮಂ ||
ಜುಳಮಧುರಾಧರಂ ಮಿಸುಪನುಣ್ಗದಪುಣ್ಮುವಬಾಸೆ ಜೇಟಮುಂ |
ಬಳೆಯಿಸಿ ನೋಳ್ಪರೊಳ್ಮೆರೆವಮುಗ್ಧೆಯನೀಕ್ಷಿಸಿದಂ ನರೇಶ್ವರಂ || ೯೮

ವ|| ಆಗಳ್ವಿಟನಿಂತೆಂದಂ

ವೃ|| ನೋಡಿದೊಡಾಗಳಂತೆ ತಲೆವಾಗುವನೋಡದೊಡೊಲ್ದು ನೋಳ್ಪಮಾ |
ತಾಡಿಸೆ ಸುಮ್ಮನಿರ್ಪನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಛೆಯಿಂ ||
ಕೂಡಲೊಡಜ್ಜೆ ಮೈದೆಗೆವಗಲ್ದಿರಲೊಯ್ಯನೆ ಸಾರ್ವಮುಗ್ಧೆಯೇಂ |
ಮಾಡಳೆ ಮಜ್ಜಿದೋಪನ ಮನಕ್ಕೆ ಮನೋಜಮಹೋತ್ಸವಂಗಳಂ || ೯೯

ವ|| ಎಂಬನುಡಿಗೇಳ್ದವಂ ತನ್ನನುಭವಮಂ ಪ್ರಕಟಿಸಿದಪನೆಂದು ನಸುನಗುತ್ತಲ್ಲಿಂ ತಳರುತ್ತಿರೆ ಮತ್ತೊಂದೆಡೆಯೊಳೊರ್ವಮುಗ್ಧೆಯೊಳಗೊಳಗೆ ಬಳೆವಳವಿಗಳಿದವಿರಹಾನಳನಿಂದಳವಳಿದು ಕಳವಳಿಸಿ ಕಳೆಗುಂದಿದಂದಮಂ ನೆವಮಿಟ್ಟು ಮರಸಿ ಧೈರ್ಯಂಗುಂದದಿರೆ ಕೆಳದಿ ತಿಳಿದಿಂತೆಂದಳ್

ವೃ|| ಜೆಳಗೆರ್ಂಪಂ ತಳೆದಿರ್ದ್ದಜಂತುಟಿದಳಿರ್ನ್ನಿಸ್ಸಾರಮಾದತ್ತು ಮೈ |
ಗಳೆ ಕಂಪಂ ಪಡೆಯಲ್ಕೆಬಂದು ಪೆರ್ಚುಂಗುತ್ತಿರ್ಪ್ಪುದೀಸಿನ್ನ ಸು ||
ಯ್ಯಳೆ ತಾಗುತ್ತಿರೆ ಕೈಯೊಳಾಂತಕಮಳಂ ಕಂಪಿತ್ತಿದೇಂ ಕಾಂತೆ ನಿ |
ನ್ನಳವಂ ಪೇಳ್ವನೆ ನೀಳ್ದಕಣ್ಮಲರ್ಗಳಿಂ ಬಾಷ್ಪಾಂಬುವಂ ತುಂಬಿದಳ್ || ೧೦೦

ವ॥ ಅಂತು ಕಣ್ಣೀರ್ಗಳಂ ತುಂಬಿ ತನ್ನೊಳಗನರಿದಾಪ್ರಿಯವಯಸ್ಯೆಯೊ
ಳ್ಮರಸಲಾಗದೆಂದಿಂತೆಂದಳ್

ವೃ॥ ಎನಗಿನ್ನಾರ್ಹಿತೆಯುಸ್ಸರೋಜಮುಖಿ ಕೇಳ್ನಿನ್ನಿಂದೆ ನೀಂ ಪೋಗಿ ಕಾಂ।
ತನೊಳೋರಂತಿಸಿವಾತನಾಡಿ ಮುನಿಸಂ ಬೇಕ್ಕೆರ್ದು ನೇಹಂ ಮನ॥
ಕ್ಕನುವಪ್ಪಂತಿರೆ ಮಾಡಿ ತಳ್ವದೊಡಗೊಂಡೈತಪ್ಪುದೆಂದಂದು ಕಾ।
ಮಿನಿ ಚೆನ್ನೈದಿಲಮಾಲೆಗೂಡಿ ಮಣಿಹಾರಂಗೊಟ್ಟು ತಳ್ತಪ್ಪಿದಳ್॥ ೧೦೧

ವ॥ ಅಲ್ಲಿಂ ಬಳಿಯಿನವಳ್ನಿಜಸಖಿ ಸಖನಿರ್ದ್ದೆಡೆಗೆ ಬಂದು

ಕಂ॥ ಮುಗ್ಧೆ ಭವದ್ವಿರಹದೊಳೆ ವಿ।
ದಗ್ಧೆಯೆ ತಾನಾದಳಿಂದು ನೀಂ ನೆರೆದೊಡೆ ಕೇ॥
ಳ್ಸ್ನಿಗ್ಧತೆಯಿಂದೆ ವಿದಗ್ಧೆಯೆ।
ಮುಗ್ಧೆಯೆನಿಪ್ಪಳ್ಬಳಿಕ್ಕಿದೇನಚ್ಚರಿಯೋ॥ ೧೦೨

ವೃ॥ ಇದುಚಿತ್ರಂನಿನ್ನಶೈತ್ಯಾಸ್ಪದಹೃದಯದೊಳೊಮ್ಮೆರ್ಮೆತಾನಿರ್ದ್ದುಬೆಂದಂ।
ದದೆ ಕಂದಿರ್ದ್ದಳ್ಭವದ್ವಲ್ಲಭೆಯುವಳ ವಿಯೋಗಾಗ್ನಿಸಂತಪ್ತಚಿತ್ತಾ॥
ಗ್ರದೊಳಿರ್ದ್ದುಂ ನೀನಜಸ್ರಂ ಕೊರಗಿದುದಿಸಿತಿಲ್ಲಂಗಜಂ ಪಕ್ಷಪಾತಾ।
ಭ್ಯುದಯಕ್ಕಿಂಬಾದನೆಂದೆಂಬಳಪೊಸನುಡಿಗೇಳ್ದೈದಿದಂ ಕಾಂತನಾಗಳ್ ೧೦೩

ವ॥ ಅನಂತರಂ

ವೃ॥ ಬರೆತೆಗೆದಪ್ಪಿ ಬಾಯ್ದೆರೆಯುನೊಯ್ಯನೆ ಚುಂಬಿಸಿ ಮುದ್ದುಗೈದು ಮೋ।
ಹರಸಮನಂತರಂಗದೊಳಮುಚ್ಚಿ ನಿಮಿರ್ಚ್ಚಿ ನಖಕ್ಷತಂಗಳಂ॥
ಗುರುಕುಚದಲ್ಲಿ ಸತ್ಕಳಿಗಳುಣ್ಮುವತಾಣಮನಂಟಿ ಸಾದ್ದ್ರ ಸಾ।
ದರಮುಚಿತೋಕ್ತಿಯಂ ನುಡಿದು ಪೊಂಪುಳಿಯಿಂ ಪೊದಿಸುತ್ತೆನಲ್ಲಳಾ ೧೦೪

ನುಡಿನುಡಿಗೊಮ್ಮೆಮುದ್ದಿಸಿಮುಖಾಂಬುಜಮಂ ನಡೆನೋಡಿಚುಂಬಿಸು।
ತ್ತೊಡನೊಡನಪ್ಪಿ ನುಣ್ಗುರುಳನೊಯ್ಯನೆ ತಿರ್ದ್ದಿಪೊದಳ್ದಲಜ್ಜೆ ಜೇ॥
ರ್ಪಡೆ ಪಡೆದಲ್ಲಿ ಕಾತರಮನಂದವಲೊಳ್ಕಳೆವೆತ್ತು ಕಾಣ್ಕೆಯಿಂ।
ದಡಿಗಡಿಗುರ್ವೆ ಮನ್ಮಥರಸಂ ನೆರೆದಂ ಮನದನ್ನನೊಲ್ಮೆಯಿಂ॥ ೧೦೫

ವ|| ಇಂತು ನೆರೆದನಂತರಂ ರತಾಂತಶ್ರಾಂತಿಯಂ ತೀರ್ಚ್ಚಲೆಂದು ನೆಲೆವಾ
ಡದೊಳ್ನಿಂದೆಳಗಾಳಿಗೆರ್ದೆಗೊಟ್ಟು ನಿಂದಮುಗ್ಧೆಯರಂ ನಾಗರಿಕನರಸಂಗೆ ತೋ
ರುತ್ತುಮಿರೆ ಮುಂದೊಂದೆಡೆಯೊಳೊರ್ವಳೆಳವರೆಯದನಳಿನಾಕ್ಷಿ

ವೃ|| ಕನಕಸರೋಜಕೋರಕಸಮಸ್ತನಮಂಡಳಮಧ್ಯದಲ್ಲಿ ಮಾ |
ಣಿನಿ ಮನದನ್ನನಿತ್ತನಖಖರೇಖೆಯನೊಯ್ಯನೆ ನೋಡುವಾಗಳಾ ||
ತನೆ ಬರುತಲ್ಲಿ ಬಿಂಬಿಸೆ ನಿರೀಕ್ಷಿಸಿ ಬಿಂಬಮನಪ್ಪಿಕೊಂಡು ಚುಂ |
ಬನೆ ಪುಳಕಂಗಳೇಳೆ ರತಿಗೆಯ್ಯಲೊಡರ್ಚ್ಚಿದಳೇಂ ಪ್ರಮುಗ್ಧೆಯೋ || ೧೦

ವ|| ಅವಳನರಸಂಗೆ ಕರಸಂಜ್ಞೆಯಿಂ ನಾಗರಿಕಂ ತೋರುತ್ತುಮಿರೆಯಿ
ಪೆರತೊಂದೆಡೆಯೊಳೊರ್ವ್ವಿರ್ಚ್ಚೆಗಾತ್ರೆ ಮಗಳ ಮೊಗಮಂ ಕಿಸುಗಣ್ಣಿ ನೋಡಿ
ದಾಕ್ಷಿಣ್ಯಮನುಳಿದಿಂತೆಂದಳ್

ವೃ|| ಮೊಗಮಂ ನೋಳ್ಪುದುಮಾಗಳಂತೆ ತಲೆವಾಗುತ್ತಿರ್ಪೆ ಸಂಪ್ರೀತಿಯಿಂ |
ಮಿಗೆ ಮಾತಾಡಿಸೆ ಸುಮ್ಮನಿರ್ಪೆ ನಗಿಸಲ್ಕೆಂದಲ್ಲಿ ಸಾರ್ತಂದು ಮೆ ||
ಲ್ಲನೆವಾತಂ ಜಿಡದಾಡೆ ನೋಡೆ ಕುಚಭಾರಪ್ರಸ್ತಚೇಲಾಂಚಲಂ |
ದೆಗೆಯಲ್ಕೋಪಿಪೆ ಕೂರ್ಪ್ಪರೇ ಪರವಿಟರ್ನ್ನಿನ್ನಾಟವಂ ಕಂಡವರ್ || ೧೦

ಮತ್ತಮದಲ್ಲದಿತ್ತಲೊಂದುಮಣಿಮಂದಿರದೊಳ್ಮಾಣಿಕ್ಯದ ನಲ್ಲನೊಳ್
ರೆದುಮಾಗಳ್ಪೊರಮಟ್ಟು ಬಪ್ಪುದುಮರಿದಿರ್ದ್ದಬರ್ದ್ದೆ ಬಳಿಕಿಂತೆಂದಳ್

ವೃ|| ಸೂಳೆತನಕ್ಕಿದೇಂ ಸೊಗಸೆ ಲಜ್ಜೆ ನಿಜಾಲಯದಿಂದಿದೋಪರೊ |
ಳ್ಮೇಳಕೆ ಮೆಯ್ಯನೀಯದೆ ಕರಾಗ್ರದೆ ಪೊಯ್ಯದೆ ತಕ್ಕೆಗೈಯದು ||
ಬ್ಬೆಳದೆ ತಳ್ತು ನೀಳದೆ ನಖಾಗ್ರದೆ ತಾಳದೆ ಚುಂಬನಂಗಳಂ |
ಪೇಳದೆ ಮಾರಮಂತ್ರಮನಿದೇಂ ರತಿವಿದ್ಯೆಗೆ ಮುಯ್ಯನಾಂಪುದೇ || ೧೦

ವ|| ಮತ್ತಮೊರ್ವ್ವಳ್ಪಿದಗ್ಧೆ ಮಗಳ್ಗೆ ಬುದ್ಧಿವೇಳ್ವದಿಂತೆಂದೊಡೆ

ವೃ|| ಗರ್ವಂಗುಂದದಿರಿಂದುವಕ್ತ್ರೆ ಘನಗರ್ವಂದಾಳದಿಪ್ರೀತಿವ |
ಟ್ಟೊರ್ವಂಗಂ ಮನಮಿಕ್ಕದಿರ್ಸ್ಸವಣೆಂದುಂ ಮಾಡದಿರ್ಕೂಟಮೋ ||
ಪರ್ವ್ವಿರ್ದ್ದಗ್ಗಳದಾಸೆಯುಂ ಬಳಸದಿರ್ಕೂಟದ್ದಿನೊಲ್ವಪ್ಪದಿ |
ಸ್ಸರ್ವತ್ರಾತಿಶಯಂ ತ್ಯಜೇದಿಸಿಪುದಂ ನೀಂ ಮಾರದಿಮ್ಮಾನಿನೀ || ೧೦

ನೋಡಿದೊಡಿನ್ನುಮೊರ್ಮ್ಮೆ ನಡೆ ನೋಡಳೆಯೆಂದೆನೆ ನೋಡು ಸಾರ್ದ್ದುಮಾ
ತಾಡಿದೊಡಿನ್ನುಮೊರ್ಮ್ಮೆ ನುಡಿಯುಳ್ಗಡಯೆಂದೆನೆ ಮಾತನಾಡು ಜಾ ||
ಣ್ಗೂಡಿ ವಿಳಾಸದಿಂ ಸುಳಿದೊಡಿನ್ನುಮಿವಳ್ಸುಳಿದೆಯ್ದುಳೇಯೆನು |
ತ್ತಾಡೆ ಭುಜಂಗರಲ್ಲಿ ಸುಳಿದಗ್ಗಳಬೇಟಮನುಂಟುಮಾಡು ನೀಂ || ೧೧೦

ವ|| ಮತ್ತಮೊರ್ವ್ವಳ್ತನ್ನ ತನೂಭವೆಯ ಸೌಕುಮಾರ್ಯಮಾಧುರ್ಯಂ
ಗಳಂ ಪೊಗಳ್ದು ತನ್ನ ಕೆಳದಿಗಿಂತೆಂದಳ್

ವೃ|| ಮುಡಿ ಕಡು ಬಿಣ್ಪೆದೆಂದು ಸೆಡೆವಳ್ಮುಡಿದಪ್ಪಳೆ ಪುಷ್ಪಮಾಲೆಯಂ |
ಜಡಿವಘನಸ್ತನಕ್ಕೆ ಮಣಿವಳ್ಮಣಿಹಾರಮನಾಂಪಳೇ ಕರಂ ||
ಪೊಡರ್ವ*ನಿತಂಬಭಾರಕಲಸುತ್ತಡಿ ಯಿಕ್ಕುವಕಾಂತೆ ಕಾಂಚಿಯಂ |
ತುಡುವಳೆ ಸಿಂಗರಂಬಡೆಯುದೆನ್ನ ಮಗಳ್ಪಿಟರಂ ಮರಳ್ಚುವಳ್ || ೧೧೧

ಕಂ|| ಕೂರದ ಕಡೆಗಣ್ಣೋಟದೆ |
ಕೂರದನಂ ಕೂರಿಸುವಳುರೋಜಂಗಳ ಬ ||
ಲ್ಭಾರದ ಬಗೆಯಂ ಕಾಣಿಸಿ |
ಬಾರದನಂ ಬರಿಪಳೆನ್ನಸುತೆ ಮನೆಗಾಗಳ್ || ೧೧೨

ವ|| ಅದಲ್ಲದೆ ಪೆರತೊಂದೆಡೆಯೊಳೊರ್ವ್ವಳ್

ಕಂ|| ಎಳೆಯುಳಿಕಟಾಕ್ಷಪಾಶದಿ |
ನೆಳೆಯೆಱಯುವ ಮೃಗಮನಂದದೊಳ್ಕಶಿಕಳೆವೋಲ್ ||
ಪೊಳೆಯುಳೆ ಶೃಂಗಾರರಸದ |
ಪೊಳೆಯೆಳೆಯುದರಾರೊ ಪೊನ್ನನಿವಳ್ಗ*ತಿಧನಿಕರ್ || ೧೧೩

ಪಿಡಿನಡೆ ಪಿಡಿನಡು ಪೊಸಕ್ಕೈ |
ಪಿಡಿಮೊಗಮುಡುಪತಿಯ ಕದಿರನಾಳ್ದಲರ್ಗಣ್ಕಿಂ ||
ಪಿಡಿದಧರದಳಂ ಕಡುವಿ |
ಣ್ಪಿಡಿಕಿಱದಸಿತಂಬಮೆನ್ನ ತನುಭವೆಗೆಸೆಗುಂ || ೧೧೪

ವೃ|| ನೋಡದೆ ಪೋದೊಡೊಂದರಿಯೆನೆನ್ನ ತನೂಜೆಯುನೊರ್ಮೆ ಕೂರ್ಮೆಯಿಂ|
ನೋಡಿದೊಡಾಗಳಂಗಜಮಹಾಶಿಖಿ ಮೂಡದೆ ಬಲ್ಪು ಬಾಡದ ||
ಳ್ಳಾಡದೆ ಚಿತ್ತವೋಡದೆ ಮದಂ ಪಿಕಿ ಕೋಡದೆ ಕೂಗಿ ಮೂರ್ಛೆಯಂ |
ಮಾಡವೆಕಾಯ್ಪುಗೂಡದೆ ಸುಧಾರುಚಿ ಕಾಡದೆ ಕಂತು ಮಾಣ್ಗುವೇ|| ೧೧೫

ವ|| ಎಂಬನೇಕವಿಧವಿದಗ್ಧಾಲಾಪಂಗಳಂ ಕೇಳುತ್ತುಂ ಬರುತ್ತಿರೆ ಮುಂ
ದೊಂದು ಮಣಿಮಯದ್ವಾರದೊಳಂದಂಬಡೆದು ನಿಂದಸುಂದರಿಯ ಮುಂಗಯ್ಯೊ
ಳ್ಸಿಂಗರವೆನೆ ಕುಳ್ಳಿರ್ದ್ದ

ವೃ|| ಜಡೆಯು ಬೆಡಂಗಿ ನುಣ್ಣೊಸಲನಾಯಕಿ ಚೆಂದುಟಿಯಂದಗಾತ್ರಿ ಮೆ|
ಲ್ನುಡಿಯುನ್ಮೃಗಾಕ್ಷಿ ತೆಳ್ಗದಪಿನಂಗನೆ ಬಲ್ಮೊಲೆಯಬ್ಜಗಂಧಿ ನು ||
ಣ್ಣೊಡೆಯಲತಾಂಗಿ ಮೆಲ್ಲಡಿಯ ಮುಗ್ಧೆ ನಿತಂಬದನೀರೆ ನಿನ್ನೊಳೋ |
ತೊಡವೆರೆದಿರ್ಪ್ಪನಾವನವನಂಗಜಪಟ್ಟಮನಾಳ್ದನಾಗನೇ || ೧೧೬

ವ|| ಎಂದು ಸರಸವಚನದಿಂ ಬಣ್ಣಿಪರಗಿಳಿಗೆ ನರುದಂಬುಲಗುಟುಂಕು
ಗುಡುವವಳ ಬಾಯ್ದೆರೆಯಂ ಕಂಡೆನಗಂ ಬಾಯೊರೆತಪುದೆಂಬವಿದೂಷಕನ ನುಡಿ
ಗೆ ಮುಗುಳ್ನಗೆನಗುತ್ತರಸನಿರ್ಪ್ಪನಿತರೊಳೊರ್ವ್ವ ತುಂಬುಜವ್ವನದ ಬಿಂಬಾಧರೆ
ನಿಜವಿರಹವೀತಿಹೋತ್ರವಿಧುರಿತೆ ವೀಧಿಯೊಳ್ಬರ್ಪುದಂ ಕಂಡನ್ನಭಂಗಿಯಂ ತಳೆದ
ವಳ ಮನದನ್ನಂ ದನಿವಳಿದಪ್ಪಿ ನುಡಿಯಿಸುವಲ್ಲಿ

ವೃ|| ಏನೆಲೆ ಬಾಲೆ ಯೇಕಲೆಭುಜಂಗ ಇದೆಲ್ಲಿಗೆ ಪೋಪೆ ಪೞ್ಪದು |
ದ್ವ್ಯಾನಕದೇಕೆ ನೀಮ್ಮ್‌ಗಳುಗಲೀಪೊಸಜೊನ್ನದೊಳುಂಟೆ ಉಂಟು ಕಾ ||
ಮಾನಲದಗ್ಧೆಯೇ ನುಡಿಯೆಲೇನೊಡವರ್ಪ್ಪನೆ ಬೇಡನೊರ್ವ್ವಳೇ |
ನೀನೆಲೆಯಾದೊಡೇನಗಿವೆಯಿಲ್ಲೆನೆ ಕೈವಿಡಿದಪ್ಪಿದಂ ವಿಟಂ || ೧೧೭

ಕಂ|| ಕಂಡಿನಿಯನೆಂದು ತಿಳಿದಾ |
ಖಂಡಲಸಂಪದಮೆ ಸಾರ್ದ್ದಪ್ಪೋಲ್ಸಂಭ್ರಮದಿಂ ||
ಪಿಂಡೇಳ್ವಪುಳಕದೊಡನೊಡ |
ಗೊಂಡೊಯ್ದು ತನ್ನಾತ್ಮಗೃಹದೊಳವನೊಡವೆರೆದಳ್|| ೧೧೮

ವ|| ಮತ್ತೊಂದುಚಂದನರಸಧವಳಿತಕೇಳೀನಿಳಯಮಧ್ಯಮಂಡಿತಮಣಿಮಯಮಂಚಾಗ್ರದ ಮರಿಯಂಚೆದುಪ್ಪಳ ಮೇಲೊಂದಿದತಳ್ಪದೊಳೊರ್ವ್ವ ಬೇಟಗಾತ್ತಿರ್ತೋಟಗಾತ್ತಿರ್ಯಂತೆ

ವೃ|| ಮುಗುಳಂಬಂಗೆಣೆಯಾಡನಂ ಬರಿಸಿ ತದ್ಬಾಹಾಲಸತ್ಕಲ್ಪವ |
ಲ್ಲಿಗಡರ್ಪ್ಪಂ ಕುಡುವಂತೆ ಕೊಟ್ಟು ತನುವಂ ನೀರ್ವ್ವೋಯ್ವವೋಲ್ಘರ್ಮವಾ ||
ರಿಗಳಿಂ ತೋಯ್ದುದರಲ್ಲಿ ಚಂದಳಿರ್ಗಳಂ ತಾನಾಗಿಪಂತೊತ್ತಿ ಕೂ |
ರುಗುರಿಂ ಪೂಗುಡಿ ಮೂಡಿಪಂತೆ ಮೊಲೆಯಂ ಕೈದೀವಿ ಕಣ್ಗೊಪ್ಪಿದಳ್||೧೧೯

ಕಂ|| ತನುರುಹಮುಗೆವೊಯ್ದುವೊಲಿರೆ |
ತನು ತಳ್ತಿರೆ ಲಜ್ಜೆಯೊಂದೆ ತನುತೆಯನೊಲ್ದಾಂ ||
ತನುನಯಮನತನುಸುಖದ ಸು |
ತನುವಿಂತನುಭವಿಸುತಿರ್ದ್ದಳಿನಿಯನೊಳೊರ್ವ್ವಳ್ || ೧೨೦

ವೃ|| ನೊಸಲ ಲಲಾಮಮುಂ ಸ್ತನದ ಚಂದನಮುಂ ತೊಡೆದಂತೆ ಪೋಗೆ ರಂ |
ಜಿಸುವಲತಾಂಗಮುಂ ಜಘನಮುಂ ಪದವೆತ್ತಿರೆ ಕರ್ಣಪೂರಮುಂ ||
ಪೊಸಮುಡಿವೂಗಳುಂ ಜಗುಳೆ ನುಣ್ಗೊಡೆಯುಂ ನಡುವುಂ ಕಡಂಗಿ ಕಂ ||
ಪಿಸೆ ಗಳನಾದಮುಂ ಶ್ವಸಿತಮುಂ ನೆಗಳುತ್ತಿರೆ ತಳ್ತು ಕೂಡಿದಳ್ || ೧೨೧

ವ|| ಅದಲ್ಲದೆ ಬೇರೊಂದೆಡೆಯೊಳೊರ್ವ್ವಳ್ನೆರೆದು ಸೆದೆವಟ್ಟು ಬೆಮರಾರಿಸಲ್ಕೆಂದು ಮಂದಿರದ ಮುಂದಣ ಮತ್ತವಾರಣಮಂ ನೆಮ್ಮಿ ನಿಂದಿರ್ಪ್ಪುದುಮವಳವೊಗದ ಕಳೆಯಂ ಕಂಡೊರ್ವ್ವಸೊಬಗಬೊಜಗನೊತ್ತೆಗುಡಲೊಡನೆ ಪಿಡಿದುದಂ ಕಂಡು ಪೊರ್ದ್ದಿ ತಿಳಿದಿಂತೆಂದಂ

ವೃ|| ಎಲೆಕಿರುಸೂಳೆ ಸೀಂ ನೆರೆದಸೇದೆಯನಾರಿಸದೊತ್ತೆಯಾಂತೆಯಾ |
ಕಲೆಗಳೆ ಸೂಚಿಕುಂ ಸುಖಮದೇಂದೊರಕೊಳ್ವುದೆ ನಿನ್ನೊಳೀಗಳೆಂ ||
ದುಳಿಪವಿಟಂಗೆ ಮಾನ್ನುಡಿದಳೊಂದಳಿಪೀದೊರ್ಡೆ ಪೋಪುದೇ ನವಾ |
ಬ್ಜಲಲಿತಸೌರಭಂ ಬಳಿಕಮೊಂದಳಿ ಸಾರ್ದೊಡೆ ಸೌಖ್ಯಮಾಯುದೇ || ೧೨೨

ವ|| ಎಂಬಗಣಿಕೆಯ ಚಾಟುಬಣಿತಿಯಂ ಕೇಳ್ದರಸನೊಳ್ಸೀತಮರ್ದಕನಿಂತೆಂದಂ

ಕಂ|| ಸ್ಮರನೆರವಿಲ್ಲದೆ ತೋಳ |
ಲ್ಲಿರುತಿರ್ದೊಡಮಧಿಕವಿತ್ತಮಿತ್ತಪೆನೆಂದೆಂ ||
ಬರೊಳೊಡವೆರೆವುದು ವೇಶ್ಯಾ |
ಚರಿತಮಿದಲ್ಲದೊಡದೆಂತು ಸಿರಿವಡೆದಪರೋ || ೧೨೩

ವ|| ಎಂಬವಮಾತಂ ಕೇಳ್ದು ನಿಜಮೆಂದಲ್ಲಿಂ ಮುಂದಣ್ಗೆ ಬಪ್ಪಾಗಳೊ ರ್ವಳ್ಕುಸುಮಕೋಮಳೆ ತನ್ನ ಕೆಳದಿಗಿಂತೆಂದಳ್

ಕಂ|| ಕುಡುವೊಡವೆಗಾಗಿ ಪೋಗೆಂ |
ದೊಡನೊಡನೆಮ್ಮಬ್ಬೆ ನೂಂಕುವಳ್ತನ್ನವೊಲೆಂ ||
ದಡದರ್ಬ್ಬ ಬಳೆದವೊಡೆ ಪೇ |
ರೊಡಲೀಜಟ್ಟಿಗನೊಳೆಂತು ನೆರೆವೆಂ ಕೆಳದೀ || ೧೨೪

ವ|| ಆದಂ ಕೇಳ್ದು ವಿದೂಷಕಂ ಪರಿದು ಪೋಗಿ ನಿಂದು ನಿರೀಕ್ಷಿಸಿ ಕ ಯ್ಯಂ ನೀಡಿ ನಿಮ್ಮಬ್ಬೆಯನೆ ನೆವಮಿಟ್ಟು ಕಳಿಪಲ್ವೇಳ್ಕುಮೆಂದು ನರೇಂದ್ರನ ಮೊಗಕ್ಕೆ ಮುಗುಳ್ನಗೆಯಂ ನೂಸುತ್ತಿರೆ ಮತ್ತೊಂದುನೆಲೆವಾಡದೊಳ್ಮದನ್ನನಗಲೆ ಮರುಗುವಚಪಲಚಿತ್ತೆಗೆ ಸಖಿಯಿಂತೆಂದಳ್

ವೃ|| ಬಂದೊಡೆ ನೋಡೆ ಜಾರದೊಡೆ ದೂದವಿಯಟ್ಟುವೆ ಚೀಡ ಕೋಪಮಿಂ |
ನ್ನೆಂದಡಿಗಾತನೊಲ್ದೆರಗೆ ಗರ್ವಿಪೆ ನೈತಿರೆ ನುಕ್ಕಿ ನುಪ್ಪೆ ವ್ಯೆ ||
ಸಂದಮದರ್ಪ್ಪಲಾತುರಿಸೆ ಮೃಗುಡೆ ಮಾಣ್ದೊಡೆ ಕಾಮವಹ್ನಿಯಿಂ |
ಜೆಂದಪೆ ಪೋಪಪೋಲ್ಜಡಿಪೆ ಪೋದೊಡೆ ನೈನಸೆ ನೀನಿದೇಂಸಪೇ || ೧೨೫

ವ|| ಇವಳ್ಕಲಹಾಂತರಿತೆಯಪ್ಪಳೆಂದು ನಾಗರಿಕಂ ನುಡಿಯುತ್ತಿರೆ ಮತ್ತೊಂ ದುಪಜ್ಜಳಿಪಬಜ್ಜರದ ಸೆಜ್ಜೆವಸೆಯ ಸಿರಿಮಂಚದ ಶಿರೀಷಮೃದುಳತಳ್ಪಸ್ಥಳದಲ್ಲಿ

ವೃ|| ಬಿರಿಮುಗುಳಾದಜಾದಿಯುರಲಂ ಮುಡಿಯೊಳ್ಮುಡಿದಿಟ್ಟು ಮುತ್ತಿನಾ |
ಭರಣಮನುಟ್ಟು ಚೀನಲಲಿತಾಂಬರಮಂ ತೊಡೆದಂಗದಲ್ಲಿ ಕ ||
ಸ್ತುರಿಯನುಲೇಪಮಂ ಗೃಹಮನಾಮಣಿಮಂಚಮನೊಯ್ಯನೊಲ್ದು ಸಿಂ |
ಗರಿಸಿ ನಿಜೇಶನಾಗಮನಮಂ ಮನದೊಳ್ಬಯಸುತ್ತೆ ಬಾಡಿದಳ್ || ೧೨೬

ವ|| ಅವಳಂ ನಿರೀಕ್ಷಿಸುತ್ತಿವಳ್ವಾಸಕಸಜ್ಜಿಕೆಯೆಂದು ನುಡಿವಮಾತನಾ
ಕರ್ಣಿಸುತ್ತುಂ ನರೇಶ್ವರನಿರ್ಪವಸರದೊಳೊರ್ವ್ವಭುಜಂಗಂ ನಿಜಸಖಂಗಿಂತೆಂದಂ

ವೃ|| ಮಾನಮಿದೇಕೆ ಮಾನಿನಿ ಮನೋಭವನಾಣೆ ಬಿಡೆಂದೊಡಾಂಕರಂ |
ಜಾನಿಸಿ ಬಾಷ್ಪವಾರಿಗರೆವಳ್ಮೊಗನೋಡಿದೊಡಂತೆ ನಾಣ್ಚುವಳ್ ||
ಟೀನಕುಚಾಂಚಲಂದೆಗೆಯೆ ಕೋಪಿಪಳಪ್ಪಿದೊಡೊಲ್ದು ನಕ್ಕಪ |
ಳ್ತಾನದರಿಂದೆ ಸಂದಕಿಲಕಿಂಚಿತಮಂಚಿತಮೆನ್ನ ನಲ್ಲಳಾ || ೧೨೮

ವ|| ಎನೆ ಕೇಳ್ದವಂ ಮುಂ ಪೇಳ್ದನೊಡನ ತನ್ನಿನಿಯಳ ವೃತಾಂತಮಂ
ಮಗುಳ್ದು ಪೇಳ್ದನದೆಂತೆಂದೊಡೆ

ವೃ|| ಮುಳಿದೆನ್ನೊಳ್ಮನದ ನ್ನಳೊಯ್ಯನೊರಗಿರ್ದ್ದಳ್ನಿದ್ರೆಗೈದಂದದಿಂ |
ತಿಳಿದಾನೆಬ್ಬಿಸಲಲ್ಲಿ ಕೋರಮುಡಿಯೊಳ್ಪೂಮಾಲೆಯುಂ ಸೂಡಿ ಮಂ ||
ಜುಳಕಾಶ್ಮೀರವಿಲೇಪಮಂ ಮೊಲೆಗೆ ಲೇಪಂಗೈವುದುಂ ಪೊರ್ದ್ದಿ ಪೊಂ |
ಪುಳಿವೋದಪ್ಪುಟಮೇಳ್ದು ಪೊಯ್ದಳೊಪೆದಳ್ಬಾಯ್ದಪ್ಪಿದಳ್ನಕ್ಕಪಳ್ || ೧೨೮

ವ|| ಎಂಬಮಾತುಗೇಳ್ದಿವಳುಂ ಕಿಲಕಿಂಚಿತೆಯಕ್ಕುಮೆಂದು ವಿಟಂ ನುಡಿ
ಯುತ್ತಿರೆ ಕೇಳ್ದಲ್ಲಿಂ ಮೆಲ್ಲನಿಳಾಧಿಪನಡಿಯಿಡುತ್ತಿರೆ ಮುಂದೊಂದುಮಂದಿರದಲ್ಲಿ
ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯಖಂಡಿತೇರ್ಷ್ಯೆಯಿಂ ನೋಡಿ

ವೃ|| ಜೇಡವಿದೇಕೆ ನಿರ್ನ್ನೆರನೆ ನಾಡೆ ನಯೋಕ್ತಿಯನಾಡುತಿರ್ಪೆ ನೀಂ |
ನೋಡಿದೊಡಿಂತುಟಪ್ಪರೊಳರೇ ಯೆನಿಪಂತಿರೆ ನಿನ್ನಮೆಯ್ಯೊಳೀ ||
ಜಾಡದಜಾಸುಳೀಯಧರದೊಳ್ಗಲೆಯಿಾಕರಜಕ್ಷತಂಗಳೀ |
ಪಾಡಳಿದಂಗಪೀಯಿರವಿವೆಲ್ಲವನೀಕ್ಷಿಸಿ ಸಂಬಲಕ್ಕುಮೇ || ೧೨೯

ವ|| ಎಂಬಳ ನುಡಿಗೇಳುತ್ತಿರ್ಪ್ಪನಂ ಪೆರತೊಂದು ಮಣಿಮಯನಿಳಯಾಂ
ತರಾಳದಲ್ಲಿ

ವೃ|| ಚುಂಬಿಸುತಿತ್ತ ತಂಬುಲಪನಲ್ಲದೆ ಮೆಲ್ಲದ ನಲ್ಲಳಂಗಗಂ |
ಧಂಬಗೆಗೊಂಡದೂವಟಮನಲ್ಲದೆ ತಾಳದ ತತ್ಕಚವ್ರಜಾ ||
ಲಂಚತಪುಷ್ಪಮಾಲೆಗಳನಲ್ಲದೆ ಸೂಡದ ತತ್ಕುಚಂಗಳೋ |
ಳ್ತುಂಜದಯಕ್ಷಕರ್ದಮಪನಲ್ಲದೆ ಪೂಸದ ಕಾಂತನೊಪ್ಪಿದಂ || ೧೩೦

ವ|| ಮತ್ತಮವನ ಮನದನ್ನಳ್ಮನೆಗೆ ಬಂದನಿಜ ಸಖಿಗಾತನಂ ತೋಱಿ

ವೃ|| ನುಡಿಯೆಮಗೊಂದೆ ನೋಟಮೆಮಗೊಂದೆ ವಿಳಾಸಮದೊಂದೆ ಜಲ್ಪಸಿ |
ರ್ಮ್ಡಿಸುವಸಾರಯೌವನಮುಮೊಂದೆ ಗುಣೋನ್ನತಿಯೊಂದೆ ಕೂರ್ಪ್ಪು ಜೇ||
ರ್ಪ್ಡಿಸದ ಬೇಟವೊಂದೆ ರತಿಯೊಂದೆ ಮನಸ್ಸ್ಥಿತಿಯೊಂದೆ ಸೌಖ್ಯಮಂ |
ಪಡೆದಪೆವಾವಗಂ ಕೆಳದಿ ಕೇಳದರಿಂದೆಮಗಾರ್ಸ್ಸಮಾನರೇ || ೧೩೧

ವ|| ಎಂದು ತಮ್ಮಿರ್ವ್ವರ ಸಮಾನುರಾಗಸೌಭಾಗ್ಯವಿಭ್ರಮಮಂ ಸಂಭ್ರಮಂ ಮಿಗೆ ಸಮುದಸರಸೋಕ್ತಿಗಳಿಂ ಬಣ್ಣಿಸುತಿರ್ಪ್ಪನ ಮಿವಳ್ಸ್ವಾಧೀನ ಪತಿಕೆಯಕ್ಕುಮೆಂದು ನುಡಿವನಾಗರಿಕನ ನುಡಿಯುಂ ಬಗೆಗೊಂಡರಸನಲ್ಲಿಂ ಬರುತಿರ್ಪ್ಪಲ್ಲಿ ಮುಂದೊಂದು ಮಣಿಮಾಗಿಳೊಳೊರ್ವ್ವಸರಸಸ್ತ್ಯದಯಂ ತರುಣಿಯುನಗಲ್ದು ಮುಂದುಗೆಟ್ಟವಳಿರವಂ ನೆನೆನೆನೆದು ಸುಯ್ದು ಕೆಳೆಯನೊಡನಿಂತೆಂದಂ

ವೃ|| ಪರಕಾಂತಾಕರಜಾತದಂತಹತಿಯಂ ತಾಳ್ದಿರ್ದಲಾನನ್ನನೌಂ |
ದರಿಯಾನೋಡುವ ನೋಟಮಾಭ್ರುಕುಟಿಯಾನಿಂದಂದಮಾಕಂಪಿಪೊಂ ||
ದಿರವಾಚೆಜ್ಜನೆ ಪಾಯ್ವಸುಯ್ಗಳೊದವಾಕಣ್ಣೀಗರ್ಗಳಾಕೋಪನಿ |
ರ್ಭರವಾಕೆತ್ತುವಪಲ್ಲ ಪಾಧರಮದೇಂ ಮಜ್ಚಿತ್ತದೊಳ್ನಿಂದುದೋ || ೧೩೨

ವ|| ಅದಲ್ಲದೆಯುಂ

ಕಂ|| ಪಳಿವುದು ಕೆಂದಾವರೆಯುಂ |
ಮುಳಿದೊಡೆ ತಿಳಿದೊಡೆ ಪೊದಳ್ದಪೊಂದಾವರೆಯುಂ ||
ಕಳಿವೆತ್ತುನಕ್ಕೊಡೆನ್ನಿನಿ |
ಯುಳತೊಳಗುವವದನಮಲರ್ದಜೇಕ್ಷ್ವಾವರೆಯುಂ || ೧೩೩

ವ|| ಎಂದು ಪಳಯಿಸುತ್ತಿರ್ದ್ದನಿತ್ತಲ್ಮತ್ತೊಂದು ಮಣಿಭವನದಲ್ಲಿ

ವೃ|| ಮನದನ್ನಳ್ಮದನ್ನಸಂದಗಲೆ ಜಿಂತಾಕ್ರಾಂತೆಯಾಗಿರ್ದ್ದ ಕಾಂ |
ಚನಮಂಚಾಗ್ರದೆ ಮಗ್ಗುಲಿಕ್ಕಿ ಮಗುೞ್ದಾತಂ ಬಂದು ಕೂಡಿರ್ದ್ದನ ||
ಲ್ಗನಸಂ ಕಂಡಪಿರಾಂಗಮುಂ ಪುಳಕಮುಂ ತಾಳ್ದಿಪ್ಪಲೆಚ್ಚತ್ತು ಕಾಂ |
ತನ ರೂಪಂ ಬರೆದಿರ್ದ್ದ ಚಿತ್ರಪಟಮಂ ತಳ್ಕೈಪಳೇಂ ನೋಡಮೋ || ೧೩೪

ವ|| ಮತ್ತಮೊರ್ವ್ವಳ್ಮೃಚ್ಚಗಾತ್ರಿ ಕಡುಕೂರ್ತ್ತುದಂ ಕಂಡು ಕಾಡು
ವಕಪಟವಿಟನಿರ್ದ್ದೆಡೆಗೆ ತಾನೇ ಬಂದು

ವೃ|| ನಿನಗಾಂ ಕೂರ್ತ್ತುದೆ ಕುಂದೆ ನೋಡವೆ ಕರಂ ಮಾತಾಡದಾಳೀಜನಂ |
ಮನೆಗೇಳ್ತಂದೊಡೆ ಮಾತುಗೇಳದವರೊಳ್ನೀಂ ಪೇಳದೇನೊಂದನಿಂ ||
ದನಿಮಿತ್ತಂ ಮುನಿದಿರ್ಪ್ಪುದೇನುಚಿಮೇ ಪೇಳೆಂದು ಕಣ್ಣೀರ ಪೇ |
ರ್ವ್ವೊನಲಿಂ ನಂದಿಸಿದಳ್ಪ್ರಕೋಪಶಿಖಿಯುಂ ಪಾಯ್ದಪ್ಪಿದಳ್ನಲ್ಲನಂ || ೧೩೫

ವ|| ಅಂತಪ್ಪಿ ನಿಜನಿಕೇತನಕೆಯ್ಕೊಡಗೊಂಡು ಪೋಗಿ ಪೊಸಸುಸಿಲ್ಗೆ ಮನ
ಮಿತ್ತು ಮಣಿಮಂಚದೊಳಿರ್ವ್ವರುಂ ಕುಳ್ಳಿರ್ದ್ದು ಬಳ್ಳಿವರಿವನಿಡುನೇಹದಿಂ
ದಡರೆ ನೋಡಿ

ವೃ|| ತೋಳ್ತೊಡೆವಕ್ಷಮುಂ ಜಘನಮುಂ ಮನಮುಂ ಮೊಗಮುಂ ಪರಸ್ಪರಂ |
ತಳ್ತಿರೆ ಕಂಪಸಂಬಡೆದ ಕೈದಳದಿಂ ಪೊಡೆದೀಳ್ದು ಸೀಳ್ದು ಮೇ ||
ಲೇಳ್ತರೆ ಸುಣ್ಗೊರಲ್ದನಿ ಸುಧಾಧರಮುಂ ಸವಿದುರ್ಕ್ಕಿ ಸೊರ್ಕ್ಕಿ ಸೂ |
ಳ್ಗೆತ್ತಡವಾಗದಂತೆ ನೆರೆದಸ್ಸುರತಾಬ್ಧಿಯೊಳಾಳುತೇಳ್ವವೋಲ್ || ೧೩೬

ವ|| ಇಂತಪ್ಪ ಮಧ್ಯಮನಾಯಿಕೆಯರ ವಿವಿಧವಿಳಾಸಮಂ ನಾಗರಿಕನ
ರಿಪುತ್ತುಂ ಬರೆವರೆ ಭೂಲೋಕಮುಕರಪತಾಕಂ ಮುಂದಣ್ಗೆ ನಡೆನಡೆಯೆ ಮತ್ತೊಂ
ದೆಡೆಯೊಳೊರ್ವ್ವವಿದಗ್ಧೆ ವಿರಹತಾಪಮಂ ಸೈರಿಸಲಾರದಾಳಿಯ ಮೊಗಮಂ ನೋಡಿ

ವೃ|| ಮದನಂ ತಾಂ ಮಧುಮತ್ತನೀಶಶಿ ಕರಂ ದೋಷಾಕರಂ ಚಂದನಂ |
ಮದಸರ್ಪಪ್ರಕರೋಪಸೇವಿ ಶಿಖಿಮಿತ್ರಂ ಮಾರುತಂ ತಾಪಮಿಾ ||
ವುದು ಯುಕ್ತಂ ಸುಧೆಗೊಂಬಹಂಸೆ ಗುಣಿ ಪದ್ಮಂ ಕ್ಷೀರಪೂರ್ಣಂ ಸರಂ |
ಸುದತೀ ಕೇಳ್ಸುಮನಃಪ್ರಿಯಂ ಮಧುಕರಂ ಪೇಳ್ಕಾಯ್ವುದೇಂ ತಕ್ಕುದೇ ||

ವ|| ಅದಲ್ಲದೆಯುಂ

ವೃ|| ಕಳಿವೆನದೆಂತೊ ಕಾಮಿನಿ ದಿನಂಗಳ ತಿಂಗಳ ಪೆಂಗಳಂಗಮುಂ |
ತಿಳಿಯದೆ ಸಲ್ಲಸೈದೆ ಬಗೆ ಸಿಲ್ಲದು ಸಲ್ಲದಿದೊಲ್ಲದೇನುವಂ ||
ಮುಳಿದಿಸುವಂಗಜಾತನ ವಿಘಾತನ ಶಾತಸಮಾಸ್ತ್ರಪಾತದಿಂ |
ದಳಿದಪೆನಾತನಂ ಕರೆಯಲಾಗದೆ ಬೇಗದೆ ರಾಗತಿಂ ಸಖೀ || ೧೩೮

ವ|| ಎಂದು ನುಡಿದನಿಜಸಖಿಯ ನಿರ್ವೇದೋಕ್ತಿಯಂ ಕೇಳಲಾರದವಳಿನಿಯನಿರ್ದ್ದೆಡೆಗೆ ಪರಿತಂದು ವಿನಯದಿನಿಂತೆಂದಳ್

ವೃ|| ಸಸಿಗೆ ಸಮಾನಮಾದುದವಳಾಸ್ಯಮದುಂ ಕಡುವೆಳ್ಪುತಳ್ತು ರಂ |
ಜಿಸಿ ಬಿಸಕಾಂಡಕಂಗಲತೆ ತಾಂ ಸಮದಾಕೃತಿವೆತ್ತುದಂತದುಂ ||
ಲಸದರುಣಾಬ್ಜಪತ್ರದೆ ತದಕ್ಷಿ ಸುಹೃತ್ತ್ವಮನಾಂತುದಂತದುಂ |
ಕುಸುಮಕಳಂಬನಂಬು ಬಗೆಗುಂದಿಸಿದತ್ತದುಮಬ್ಜಗಂಧಿಯಾ || ೧೪೯

ಅಸುಗೊಳಲೆಂದು ತಾಂ ಬೆಸಸಿಯುಂ ಸಸಿಯುಂಸಸಿಯುಂ ಸಮಂತು ರಂ|
ಜಿಸುವಬಸಂತನಂ ಸಮದನಂ ಮದನಂ ಮದನಂತಶೌರ್ಯಮಂ ||
ಪಸರಿಪೆನೆಂದು ಗರ್ಜಿಸರಲಂ ಸರಲಂ ಸರಲಾಂಗುಲಿದ್ವಯಂ |
ಮಿಸುಗಿರಲೆಜ್ಜು ಕೂಡೆ ತವಿಪಂ ತವೆ ಪಂತವೆ ಪಂಕಜಾಕ್ಷಿಯೊಳ್ || ೧೫೦

ವ|| ಎಂದು ಚತುರೋಕ್ತಿಜಳಮಸೆರೆದು ಮುಳಿಸಂ ಕಳೆದೆಗೆವಂತೆ ತೆಗೆದು ಬಗೆನೆಲದೊಳ್ಬೇಟವೆಂಬ ಸಸಿಯಂ ಬೇರ್ವ್ವರಿಯಿಸಿ ವಿನಯದಿಂದೊಡಗೊಂಡು ಬಂದು ನಿಧುವನನಿಕೇತನಮಂ ಪುಗಿಸಲೊಡನೆ ವಸಂತರಾಜನಂ ಕಂಡವನಲಕ್ಷ್ಮಿಯಂತೆ ಸೊಂಪೇರಿ ಕಮಳಕಾಮುಕನಂ ಕಂಡಕಮಳಿನಿಯಂತೆ ಮೊಗಮಲರ್ದಲರಂ ಕಂಡಳಿಯಂತೆ ಜಳಿಸಾರ್ದ್ದುಮುಗಿಲಂ ಕಂಡಮಯೂರಿಯಂತೆ ಮೆಯ್ಯುಬ್ಬಿ ಮಾವಂ ಸಾರ್ದ್ದಮಲ್ಲಿಗೆಯಂತಮರ್ದಪ್ಪಿ ಸಸಿಗಳರಸನ ಸರಸಕರಂ ಸೋಂಕಿದಸಸಿಗಲ್ಲ ಪುತ್ಥಳಿಯಂತೆ ಕರಗಿ ಬಿಂಬಫಳಮಂ ಕಂಡರಾಜಶುಕಿಯಂತೆ ಬಿಂಬಾಧರಮಂ ಕರ್ದಂಕಿ ಕಾತರಂ ಕೈಮಿಗೆ ಕಡುಸೊಬಗಿಂ ಕಾಂತನೊಡನೆ ಕಾಂಚನಮಂಚದ ಕಮಳದಳಧವಳಮೃದುಳತರವಿಪುಳಮರಾಳತೂಳಕಲ್ಪಿತಾನಲ್ಪತಲ್ಪದೊಳ್ಪೊಣ್ಮಿ ಕುಳ್ಳಿರ್ದ್ದು ಕಳಾವಿಳಾಸಂಬಡೆದು ಕಾಮಕೇಳಿಗುಜ್ಜುಗಿಸಿ ಸಜ್ಜುಗೈವಾಗಳ್

ವೃ|| ಜಿಮರ್ದಂಗಂ ಪತ್ರಿದತ್ತೀರವಕೆಯುಸುಗಿ ಸೀಸೆಂದು ಪವ್ಮಾಸ್ತ್ರೆ ತಾಂ ಪೇ|
ಳೆ ಮಹೋತ್ಸಾಹಾನ್ವಿತಂ ವಲ್ಲಭಸಿತೆ ಕುಚಮಧ್ಯಕ್ಕೆ ಪಸ್ಮಾಬ್ಜಮುಂ ಮ ||
ತ್ತೆ ಮನೋಜ್ಞಾಂಗಂಪೊದಳ್ದು ಬ್ಬದೊಡೊಡೆದದು ಜಾರಿತ್ತು ಜಾಹಾಚಿತನ್ನೀ|
ಹಮುಪಾತ್ರೀಖಂಡಶಾಖಾಗ್ರದೆಹೆರೆಗಳೆಯುತ್ತಿ ಪುರ್ಬ್ಬದಿಂಬಂದಬಿಂದಂ|| ೧೫೧

ಕೊರಲೊಳ್ತಳ್ತಿರೆ ಬಾಹುವಲ್ಲರಿಯುರೋಜದ್ವಂದ್ವದಿಂದೊತ್ತಿ ಪೇ |
ರುರಮಂ ಸಾರ್ದ್ರಮರ್ದಪ್ಪಿ ನೋಡಿ ಕಡೆಗಣ್ಣಿಂದಳ್ಕರಿಂ ಪಲ್ಲವಾ ||
ಧರಮಂ ಚುಂಬಿಸಿ ನೀವಿ ಜಾರೆ ಜಘನಾಭೋಗಂ ಪೊದಳ್ದುರ್ವೆ ಸೌಂ |
ದರಿ ನಾನಾಕಳೆವೆತ್ತು ಸೋಂಕಿ ನೆರೆದಳ್ಕ್ಕಾದಲ್ಮೆಯಿಂ ಕಾಂತನೊಳ್ || ೧೪೨

ಕಂ|| ನೆರೆವೆರೆಯನುಳಿದು ಚೆಂದುಟಿ |
ವೆರೆವಿಡಿದಮರ್ದೀಂಟೆ ಪಟುಭುಜಂಗಂ ಶಂಖಂ ||
ಮೊರೆಯಿಟ್ಟಪುದೆನೆ ಮದನಂ |
ಗುರೆ ಮೆರೆದುದು ಗಳನಿನಾದಮದು ಕಳರವೆಯಾ || ೧೪೩

ವ|| ಇಂತು ಕಂತುಕೇಳಿಸುಖಾಸ್ವಾದನೋನ್ಮತ್ತಚಿತ್ತರೊಪ್ಪುತ್ತಿರೆ ಮತ್ತೊಂದುಮುತ್ತಿನ ನೆಲೆವಾಡದೊಳವಳಯದೊಳಗಣ ತಳತಳಿಪಮನೋಜ್ಞ ಮಣಿಮಯಮಂಚಾಗ್ರದಲ್ಲಿ

ವೃ|| ಇಂದೆನಗೆಸ್ನ ನಲ್ಲನೊಡಗೂಟಮದಪ್ಪುದೆಯೆಂದಗಲ್ದಪೂ |
ರ್ಣೇಂದುನಿಭಾಸ್ಯೆ ಚಿಂತಿಸುವವೇಳೆಯೊಳೊಪ್ಪುವ ವಾಮಬಾಹು ವಿ ||
ಸ್ಪಂದಮನಾನೆ ಬಂದೊಡವನಾಗಳೆ ಭಾಪೆನುತೇಳ್ದು ರೋಮಹ |
ರ್ಷಂದಳೆದಪ್ಪಿದಳ್ಪತಿಯನಾಭುಜದಿಂದಮೆ ಪೂರ್ಣರಾಗದಿಂ || ೧೪೪

ಪುಳಕದ ಮೆಯ್ಯೊಳಪ್ಪುತೆ ಬೆಮರ್ತ್ತ ಘನಮಸ್ತನಮಂಡಳಂಗಳಂ |
ಕೆಳೆಗೊಳಿಸುತ್ತೆ ವಕ್ಷದೊಳೆ ಕಂಪಿಪಕೈದಳದಿಂದೆ ಪೊಯ್ದು ಪಾ ||
ಝ್ಗಿಳಿವಸುಖಾಶ್ರುವಿಂ ನನೆದಕಣ್ಮಲರಿಂ ನಡೆನೋಡಿ ಮುಂಬದಂ |
ಗಳಿಯಿಸೆ ಕೂಡಿಗದ್ಗದದ ಕಂಠದೆ ಕೂಜಿತಮಂ ನೆಗಳ್ಚಿದಳ್ || ೧೪೫

ವ|| ಇಂತು ಸಮಾನುರಾಗದಿಂ ನೆರೆದಗಲದಿರ್ದಾದ್ರ್ಪತನಂ ನೋಡಿ ನಾಗರಿಕನಿಂತೆಂದಂ

ಕಂ|| ಅಸಿಯೊಳುಸಿರೆಲರನಾಸ್ವಾ |
ದಿಸುತಧರಾಮೃತವನೀಂಟಿ ಭೋಗಿತ್ವಮನಾಂ ||
ತಸಮಕುಚಕಲಶನಿಧಿಗಾ |
ದೆಸೆವಂಗೆ ಭುಜಂಗನಾಮಮೇಂ ಜಗೆವುಗದೇ || ೧೪೬

ವ|| ಎಂಬಮಾತಂ ಮನಮೊಸೆದಾಕರ್ಣಿಸುತ್ತಿರೆ ಮತ್ತಮೊರ್ವ್ವಳ್ಮೃಜ್ಞ ಗಾತ್ರಿ ಮಾನದನ್ನನ ಮಾತಾಗಿ ಕೆಳದಿಗಿಂತೆಂದಳ್

ವೃ|| ಮೊಗದೊಳ್ನೋಳ್ಪೆನೆ ಮುಗ್ಧಭಾವಮವನೈತರ್ಪ್ಪಂದದೊಳ್ನೋಳ್ಪೆನೇ |
ಮಿಗೆ ಸೌಜನ್ಯಕಳಾಪ್ರಕಾಶತೆಯಿವಂ ನೋಳ್ಪಂದದೊಳ್ನೋಳ್ಪೆನೇ ||
ನೆಗಳ್ದ*ಳ್ಕರ್ಸ್ಸವಿಮಾತನಾಡಿ ನೆರೆವಾಗಳ್ನೋಳ್ಪೆನೇ ಕಾಂತೆ ಕೇ |
ಳ್ಮಗುಳಂಬಂಗೆಣೆಯೀತನಿರ್ಕ್ಕೆನಗೆ ತೋಳೊಳ್ಜನ್ಮಜನ್ಮಂಗಳೊಳ್ || ೧೪೭

ವ|| ಅಲ್ಲಿ ಮತ್ತಮೊರ್ವ್ವಳ್

ವೃ|| ಕಡೆಗಣ್ಣಲ್ಲಮನಿತ್ತೊಡಲ್ಲದೆಳಸಂ ಮೈಸಾರ್ದ್ದು ನಿಂದಲ್ಲದೊ |
ಳ್ನುಡಿಯಾಡಂ ನಿಜವಕ್ಷದೊಳ್ಕುರುಕುಚಂ ತಳ್ತಲ್ಲದಾಲಿಂಗಿಸಂ ||
ತೊಡೆ ಕಂಪಂಬಡೆದಲ್ಲದೊಂದಿ ಬೆರಸಂ ಕಾಮಾಂಬು ಕಯ್ಮಾರಿ ಮೆ |
ಲ್ಲುಡೆ ತಾನೇ ಸರಿದಲ್ಲದೊಲ್ದು ನೆರೆಯಂ ಮತ್ಪ್ರಾಣಕಾಂತಂ ಸಖೀ || ೧೪೮

ವ|| ಮತ್ತಮೊರ್ವ್ವಳ್ಚಲ್ಲಗಾತಿ ದೂದವಿಯೊಡನೆ ನಗೆ ಮಿಸುಗೆ ಮೊಗಮಂ ನೋಡಿ

ವೃ|| ಸುರಿಯೆ ಸುಖಾಶ್ರುವಳ್ವಳಿವಳೆಂದತಿದೈನ್ಯಮನಾಡಿ ಕಂಪಸಂ |
ನೆರೆಯೆ ಭಯಾರ್ತೆಗೆತ್ತಗಿದು ನೋಡಿ ಕರಾಗ್ರದೆ ಪೊಯ್ಯೆ ಕೋಪನಿ ||
ರ್ಭರಯುತೆಯೆಂದು ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪ |
ಟ್ಟಿರೆ ಪರಮಾಯು ತೀವಿತಿವಳ್ಗೆ*ಂದಿರದೋಡಿದನೊರ್ವ್ವನೂರಿಜಂ || ೧೪೯

ವ|| ಎಂದುಸಿರ್ದ್ದನಿಜಸಖಿಯ ಬಗೆಗೆ ನಗೆಯುಂ ಪಡೆದಿರ್ದ್ದಳಿತ್ತಲ್ಮತ್ತೊರ್ವ್ವ ವಿದಗ್ಧಾಂಗನೆ ಪಬ್ಬಿದ ಜೆಳ್ದಿಂಗಳೊಳ್ನಿಜಸ್ಮರದಾಸ್ವಾರದ ಪ್ರೇಂಖಗಳಿ ಯೊಳ್ಬಳಸಿದಜೆಲಿವೆಣ್ಗಳ ನಡುವೆ ಗಾಡಿಯಿಂ ಕುಳ್ಳಿರ್ದ್ದಿಂತೆಂದಳ್

ವೃ|| ನಯಸಂಪನ್ನನತೀವಯೌವನಯುತಂ ರೂಪಾನ್ವಿತಂ ನರ್ಮಗೋ |
ಷ್ಠಿಯನಾಳ್ಪಂ ಕಡುನೀರಸೋರ್ಜಿತಮುಕಂ ಪಂಚಾಸ್ತ್ರಶಾಸ್ತ್ರಾರ್ಥನಿ ||
ಶ್ಚಯಚಿತ್ತಂ ಸುಭಗಂ ಪ್ರಸನ್ನಮುಚಿತಜ್ಞಂ ತಾನಾಗಿ ಸಂಭೋಗಸಂ |
ಸ್ಥಿಯನುತನ್ನಾಳಿಯಿಸಿಪ್ಪನೊಳ್ಕಿರೆವ ಪೆಣ್ಗಾರಂಭೆಯುಂ ಸಾಟಿಯೇ || ೧೫೦

ಖಲನೊಳ್ಕಾತರನೊಳ್ಕಳಾರಹಿತನೊಳ್ಕಾಪಟ್ಯಮಂ ಮಾೞ್ಪುದು ।
ರ್ಬಲನೊಳ್ದ ಮೂರ್ಖನೊಳ್ದುರುಕ್ತಿಪರನೊಳ್ದುರ್ಮಾರ್ಗದೊಳ್ಕೂರ್ಪನಾ ॥
ಣಿಲಿಯೊಳ್ನಿಷ್ಠುರನೊಳ್ನಿತಾಂತಶಠನೊಳ್ನಿಸ್ನೇಹಮಂ ತೋರ್ಪಸಂ ।
ಜಲನೊಳ್ಸದ್ಗುಣಹೀನನೊಳ್ನೆರೆವಕೂಟಂನಂಜಿನೂಟಂಸಖೀ ॥ ೧೫೧

ವ॥ ಅದಂ ಕೇಳುತ್ತಿರ್ಪನಿತರೊಳಲ್ಲಿ ಪೆರತೊಂದುತಾಣದೊಳ್ಕುಳ್ಳಿರ್ದ್ದ ವಿಜನಿರವಂ ನೋಡಿ ನೀನೀತನೊಳ್ಕೂರ್ಪುದುಂಟೇ ಸಖಿಯೆಂದು ಬೆಸಗೊಂಡಾಳಿಯೊಡನೊರ್ವಳ್ಸುಭಗೆ

ವೃ॥ ಬಿರ್ಪುದುಮಾಗಳೆಳ್ದು ಪಿಡಿದುಟ್ಟುದನುರ್ಚುವನೊತ್ತಿ ಪಾಯ್ವನು ।
ಳ್ಕಾರ್ಪ ಮಿಗಲ್ಕಡಂಗಿ ಕಡುಕಾತರಮುಣ್ಮಿರೆ ಕಾಯಜೀವಮಂ ॥
ಬೇರ್ಪಡಿಪಂತೆ ಕೂಡುವನಿದೇಂ ಸಖಿ ಕೂಟಮೊ ಬೇಟದೋಟಮೋ ।
ಕೂರ್ಪದನೀತನಂ ಕುಡುವಪೊಂಗಳನಾಸಿರದೊಟ್ಟಿ ಸುಟ್ಟಪೆಂ ॥ ೧೫೨

ವ॥ ಎಂಬನುಡಿಗೇಳ್ದವನಿಪಂಗೆ ವಿಟನಿಂತೆಂದಂ

ವೃ॥ ನಗೆಯುರಿಪ್ಪೈದಿ ನಾಣರಿದು ಮುದ್ದಿಸಿ ಪೊಂಪುಳಿವೆತ್ತ ಮೆಯ್ಯ ಪೊ ।
ರ್ದುಗೆಯುರಿದಂಟಿ ಸೋಲವರಿದೀಕ್ಷಿಸಿ ಕಾತರಮುಣ್ಮೆ ಮುಂಚುವಾ ॥
ಬಗೆಯುರಿದಪ್ಪಿ ಭಾವವರಿದೋತೊಡಗೂಡಿ ನಿತಾಂತಸೌಖ್ಯಮಂ ।
ನೆಗಳದಗಾಂಪನೇಸೊಲಿಸಲಾರ್ಪನೆ ಸೂಳೆಯರಂ ಧರಿತ್ರಿಯೊಳ್ ॥ ೧೫೩

ವ॥ ಎಂದರಸನ ಚಿತ್ತಕ್ಕೆಸರಿವೋದನಲ್ಲದೆ ಮತ್ತೊಂದು ಮರಕತ ರತ್ನದಮೊಗಸಾಲೆಯೊಳ್ಕುಳ್ಳಿರ್ದ್ದ ಸೂಳೆ ವಾತಾಗಿವಿಟಂ ವಿಟನೊಡನೆ ನುಡಿದನವದೆಂತೆನೆ

ವೃ॥ ಎಳಸುತ್ತಪ್ಪಿದೊಡಕ್ಷಿಯೊಳ್ಸುಖಜಳಂ ಮೆಯ್ದೋರದಾಸ್ಯಾಬ್ಜದೊ ।
ಳ್ಕಳೆ ಕೈಮೀರದೆ ನೀವಿ ಜಾರದೆ ಸುಸಿಲ್ಗೈವಲ್ಲಿ ನಾಣ್ಗೊಂಡೊಡುಂ ॥
ತ್ಪುಳಕಂ ಮೂಡದೆ ದೈನ್ಯಮಡದೆ ನಿತಂಬಂ ಮುಂಬದಂಗೂಡದಿ ।
ರ್ಪಳ ಕೂಟಂಪಿಡದೇಳ ರಾಟಮುದನಾವಂ ನಚ್ಚುವಂ ಮಚ್ಚುವಂ ॥ ೧೫೪

ವ॥ ಮತ್ತಮೊರ್ವನಿದಿರೊಳೈತರ್ಪಟಕ್ಕುಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ ತೋರಿ ಮೆಲ್ಲನಿಂತೆಂದಂ

೧ ವೃ॥ ಮಿಸುಗುವಬಟ್ಟಬಲ್ಮೊಲೆಯನೀವಧು ಮೇಲುದನಿಕ್ಕುವಂತೆ ಕಾ।
ಣಿಸಿ ಕಚಗಂಧಕಾದ್ದೆರಗುವಾರಡಿಯಾನಡೆ ನೋಡುವಂತೆ ಕಾ॥
ಣಿಸಿ ಸವಿನೋಟವಂ ಜಗುಳ್ವಕಾಂಚಿಯ ನೆತ್ತುವಪಾಂಗಿ ಸಿಂದೆಕಾ।
ಣಿಸಿ ಸುಳಿನಾಭಿಯಂ ಬೊಜಗರಂಗದೆ ಕಾಣಿಪಳಂಗಜಾಗ್ನಿಯಂ॥ ೧೨೨೪

ವ॥ ಅಂತುಮಲ್ಲದೆಯುಂ

೧ ವೃ॥ ಮೊದಲೊಳ್ನೋಟದೆಬೇಟವಂ ಪಡೆದು ಕೂರ್ತೈತಂದ ಕಾಂತಗ್ಗೆಸಂ।
ಪದವಂ ಕಾಣಿಸಿ ಕೊಟ್ಟುದೊಲ್ಲದೆ ಕುಲಸ್ತ್ರೀಯಂತೆ ಕೂರ್ತಪ್ಪಿ ಸಂ॥
ಮದಮಂ ಪುಟ್ಟಿಸಿ ಮತ್ತೆಮತ್ತೆ ಬಗೆಯೆಂತಿರ್ದಂತೆ ಕೂಡುತ್ತೆ ನೋ।
ಲ್ಪುದನೊಲ್ದೀಕ್ಷಿಸಿ ಚಿಕ್ಕದೊಂದುಮುಳಿಸಿಂ ಸರ್ವಸ್ವಮಂ ಕೊಂಡಪಳ್॥

ವ॥ ಎನಲಾಸುಮಿವಳಬಗೆಯಂ ಮುಂಬಲ್ಲೆನೆಂದು ಕೇಳ್ದವಂ ಮಗುಳು ತ್ತರಂಗುಡುತಿರ್ದನಲ್ಲಿ ಮತ್ತೊಂದುತಾಣದೊಳೊರ್ವನೊರ್ವಳೊಳ್ಸರ್ವವಲ್ಲಭೆ ಯಾದ ನಿನ್ನೊಲ್ಮೆಯನೆಂತು ನಂಬಲಕ್ಕುಮೆಂದು ನುಡಿಯಲೊಡನವಳಿಂತೆಂದಳ್

॥ ವೃ॥ ಸೂಳೆಯುಗರ್ವನಾದೊಡೆಸೆದೊತ್ತೆಯನಿತ್ತನ ತೋಳೊಳಿರ್ದು ಮೆ।
ಯ್ಮೇಳಕೆ ಮೆಯ್ಯನೀವುದುಚಿತಂ ಮನಮಿತ್ತೊಡೆ ಸಾಲದೇ ಮನಂ॥
ಮೇಳಿಸಿನಿಂದುದಕ್ಕೆ ಕುರುಪಲ್ತೆ ಸದಾದರಮುಂ ನಿರಾಶೆಯುಂ।
ಕೇಳಿಗೆ ಮುಂಚುವಿಂದ್ರಿಯಮುಮಂಗದೊಳುಬ್ಬುವ ಸಾತ್ವಿಕಂಗಳುಂ॥

ಇದುಮಂನಂಬದೊಡೆ ಕುರುಲಂ ಬೆರಲಂ ಜೇಡಿತ್ತಪೆಂತೊದಳಿಲ್ಲೆಂದು ನುಡಿದನಲೆಗಾತ್ರಿಯ ಸುಹ್ರುತಂ ಕೇಳ್ದು ಸಂತಸಂದಾಳ್ದು

೧ ವೃ॥ ಬೆರಲಂಕೊಟ್ಟೊಡೆಬೇಟಮೇಂಕುರುಳುಮಂಕೊಯ್ದಿತ್ತೊಡೇಂಕೂರ್ಮೆಕೇ।
ಳರವಿಂದಾನನೆ ಮನ್ಮನಃಪ್ರಿಯಮದಲ್ತೀದೇಹಮುಂ ನಲ್ಮೆಯುಂ॥
ಬರಯುತ್ತಿತ್ತೊಡಿವೆಲ್ಲಮೇಂ ಪೊರಗೆ ಪೇರಂ ತೆತ್ತವಸ್ಸೂಕಮೀ।
ವರೆ ಶೀರ್ಷಂಗುಡೆ ಕಣ್ಗಳೇಂ ಪೊರಗೆ ಕೂರ್ಪಂವಿದೋರ್ಪೊಂದಕ್ಷಿಯಂ॥

ವ॥ ಎಂದು ವೆಸ್ಸಮಪ್ರೇಮದಿಂ ನೆರೆದಿರ್ದಿತ್ತಲೊರ್ವಬಷ್ಟಬಹು ಧನ ಸಂಪನ್ನರಾದಚೆಲ್ವ ಬೊಜಗರೆಳವೆಣ್ಗಳಾಲಯಕ್ಕೆ ಪೋಪುದಂ ಕಂಡು ಸ್ಮರಿಸಲಾ ರದಸೂಯೆಯಿಂದವಕ್ಕೆಳ್ವಂತೆ

ವೃ|| ಹರೆಯುಮದಿರ್ದೊಡೇನೊ ನೆರೆವುಜ್ಜುಗಮುಂಟೆ ವಿಳಾಸಮುಂಟೆ ಕಂ|
ಠರವಮುದುಂಟೆ ಸತ್ಕರಣಮುಂಟೆ ಕಳಾಜ್ಞತೆಯುಂಟೆ ಕಾಲಮಂ ||
ಪರಿಕಿಪುದುಂಟೆ ನಲ್ನುಡಿಗಳುಂಟೆ ರತೇಚ್ಛೆಯನಂತೆ ಪೆರ್ಚಿಪಾ |
ಪರಿಕರಮುಂಟೆ ಲಜ್ಜೆವೆರೆದೀಕೆಯರೊಳ್ರತಿ ಲಜ್ಜೆಯಲ್ಲವೇ || ೧೫೯

ವ|| ಎಂಬನಿತರೋಳ್ಪಿಟಂಕೇಳ್ದವಳಿದಿರ್ಗೆವಂದು

ವೃ|| ಎನೆಮುರೆಯಾದೊಡೊಂದಿನಿತು ಸೈರಿಸಲಾರದ ಕೂರ್ಮೆ ಪೆರ್ಮೆವೆ |
ತ್ತವಿಭವಮಂ ವಿಚಾರಿಸದ ಪೊರ್ದುಗೆ ವಂಚನೆಗೆಯ್ಯದಂಗವೊ ||
ಪ್ಪುವವಿವಿಧೋಪಚಾರವಚನಕ್ಕೆರ್ದೆಯಿಕ್ಕದಮರ್ಚುವಿತ್ತವೀ |
ವವನಿವನಲ್ಲವೆಂಬಬಗೆ ಪೊರ್ದದನಲ್ಮೆ ವಿದಗ್ಧೆಗುಂಟೆಪೇಳ್ || ೧೬೦

ವ|| ಎಂದವಳಂ ನಾಣ್ಚಿಸಿದನದಲ್ಲದೆ ಮತ್ತವೊಂದೆಡೆಯೊಳೊರ್ವಳ್ಮೊದಲೆ ವಾತಾತಿ ನುಡಿಯೆ ಮುಳಿದ ಮಗಳ ಮೊಗಮಂ ನೋಡಿ

ವೃ|| ಪೋದೊಡೆ ಬಾರದೀಸೊಗಸುಜವ್ವನಮೀಗಳೆ ವಿತ್ತಮುಳ್ಳರಾ |
ರಾದೊಡಮೇನೊ ಮೇಣ್ಬರಿಸಿ ಮೆಲ್ಲೆರ್ದೆಯಂ ಮೊದಲೊತ್ತೆಗೊಂಡು ಮ ||
ತ್ತಾದರಿಸುತ್ತೆ ಮನ್ಮಥಸುಖಾಬ್ಧಿಯೊಳಾಳಿಸಿ ತಂಗಿ ದೇಹಮಂ |
ತೇದು ರತಂಗಳೊಳ್ಪಣಮನಾಂ ಪಡೆಯೆಂದೊಡಿದೊಂದದೋಷಮೇ || ೧೬೧

ವ|| ಎಂದುನಿಜಾಭಿಪ್ರಾಯಮಂತಮರಸಿ ನುಡಿಯೆ ಕೇಳ್ದಮಮಗಳ್ಮಗುಳ್ದಿಂತೆಂದಳ್

ವೃ|| ಮೊಲೆಮುಗುಳೊತ್ತುವಂದುಮೊದಲಿಂದುವರಂ ಬಗೆದಂತಿರಿಚ್ಛೆಯಂ |
ಸಲಿಸಿ ಸರೂಪದೊಳ್ನಿಲಸಿ ಮುಗ್ಗುಲೊಳೊಗ್ಗಿಸಿ ಬೇಟಕೂಟಮಂ ||
ಕಲಿಸಿ ಕಲಾಳಿಯಿಂದೊಲಿಸಿ ಕೊರ್ತ್ತಮನಃಪ್ರಿಯನಂ ಬಿಡೆಂದು ನೀ |
ನೆಲೆಮುದುಪಾರಿದೊಳ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ || ೧೬೨

ವ|| ಪೆರಳೊರ್ವಳ್ಪೆರತೊಂದೆಡೆಯೊಳ್ಕುಂಟಣಿವಾತಾಗಿ ಕಸಲ್ದು ತನ್ನ ಕೆಳದಿಗಿಂತೆಂದಳ್

ವೃ|| ಮಸಗಿದ ಮಾರಿಯಂತೆ ಮುಳಿವಳ್ಪುಲಿಯಂತಿರೆ ಪೊಣರ್ದು ಗರ್ಜಿಪ |
ಳ್ಪಸಿದಪಿಯಂತೆ ಪಲ್ಮೊರೆವಳಗ್ಗದ ರಕ್ಕಸಿಯಂತೆ ರಂಜಿಪಳ್ ||
ಮುಸುವೆನೆ ತನ್ನಮುತ್ತ ಮುಸುಡಿಂದಿರದೇಡಿಪಳೆನ್ನನಲ್ಲಸೊ |
ಳ್ಪಸುಗೆಯ ಬಿರ್ಚ್ಚಲಾಟಿಪಳಿವಳ್ಮದಿಗುಂಟಣಿ ಸಾಯಳೇವೆಸಾಂ || ೧೬೩

ವ|| ಮತ್ತಮೊರ್ವಳ್ತನ್ನ ಕೆಳದಿ ವಿಟರೊಳ್ಮಾಳ್ಪ ಕೇಣಮಂ ಕಂಡಿಂತೆಂದಳ್

ವೃ|| ವಿವಿಧವಿಳಾಸಮಂ ಮೆರೆದು ವಕ್ತ್ರಸುಧಾರುಚಿಯಿಂದೆ ಪೊಣ್ಮವೀ |
ಸವಿನಗೆಯೆಂಬ ಸಾರಸುಧೆಯಂ ಸಲೆ ತೋರಿ ಭುಜಂಗವರ್ಗಮಂ ||
ಸವಿನಯಮೊಲ್ದು ಮರ್ಚ್ಚಿಪುದಿದಲ್ಲದೆ ಸೋರ್ಮ್ಮಡಿಯೆಂಬ ಕೇಕಿಯಂ |
ತವೆ ಮುಳಿದಾಳಿ ಪಿಂದಿರಿಗಿ ಕಾಣಿಸಿ ಪೋಗಿಪುದೇಂ ಸುಬುದ್ಧಿಯೇ || ೧೬೪

ವ|| ಮತ್ತಮೊರ್ವಳ್ಕೈತವಂ ಕೈಮಿಕ್ಕ ಕಾಳ್ಬೊಜಗನ ಮಾತಾಗಿ ಕಡು
ಕನಲ್ದು ಕೆಳದಿಯೊಡನಿಂತೆಂದಳ್

ವೃ|| ದಿನದಿನದಲ್ಲಿ ತಾಳ್ದಿರವಿಸೊಳ್ದೊಡವಂ ಪೊರಮಿಂಚುಗೈದು ಒಂ |
ದೆನಗಿನಿವಾತನಾಡಿ ಧನಮಂ ಪಿರಿದಿತ್ತಪನೆಂಬ ಮಾಳ್ಕೆಯಂ ||
ಮನದೊಳಮರ್ಚ್ಚಿ ಮರ್ಚ್ಚಿ ನೆರೆದಿರ್ದ್ದನಿತುಂದಿನ ಮೇಳ್ಪು ಪೋದನಾ |
ತನ ಬಲಿಗಟ್ಟಿ ಮನ್ಮಥಬಳಾರಿಗೆ ಪೇರ್ಗ್ಗರಿಮಾಡಿ ಪೊಯ್ವಪೇಂ || ೧೬೫

ವ|| ಮತ್ತಮೊರ್ವಳ್

ವೃ|| ಬಳಿವಳಿಯಲ್ಲಿ ಬರ್ಪ್ಪಸುಪಚಾರವನಾಡುವ ನೊಯ್ಯನಿರ್ಪ್ಪಪಾ |
ಗಳೆಬಳಿಕೇಳ್ದು ಕಾಲ್ವಿಡಿದು ನಂಬಿಪನಿತ್ತಪೆನೀಗಳೆಂದು ತ ||
ನ್ನೊಳೆ ಸಲೆ ತಾನೆಸೂರುಳಿಸಿ ತಪ್ಪುವನೇಕೆನೆ ಬಾಯ್ಗೆ ಬಂದಪ್ಪೋ |
ಲ್ಗಳಪುವನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ || ೧೬೬

ವ|| ಮತ್ತಮೊಂದೆಡೆಯೊಳ್

ವೃ|| ಇಲ್ಲದದೋಷಮಂ ಬರಿದೆ ಕಲ್ಪಿಪನಲ್ಪಮೆನಿಪ್ಪ ತಪ್ಪನೊ |
ಯ್ದೆಲ್ಲರೊಳಾಡುವಂ ಪುರುಡಿಪಂ ಪುರುಳುಳ್ಳೊಡೆ ಮುಟ್ಟನಿತ್ತುದಂ ||
ಸೊಲ್ಲಿಪನುಬ್ಬಸಂಬಡಿಪನೇಕೆನೆ ಲೆಕ್ಕಿಸನೆಯ್ದೆ ಸೂರುಳಿ |
ಟ್ಟಲ್ಲದೆ ನಂಬನೀದುರುಳನಂ ನೆರೆ ನೀಗುವೆನೆಂತು ಪೇಳ್ಗಡೀ || ೧೬೭

ವ|| ಇಂತನೇಕರಸಭರಿತಮಾದಚತುರೋಕ್ತಿಗಳನಾಕರ್ಣಿಸುತ್ತುಂ ರಸಿಕ ಸಖಸಿಕರವನವಸಂತಂ ಸಂತಸಂ ಪುಗ ಮುಂದಣ್ಗೆ ಪೋಗೆವೋಗೆ ಮತ್ತೊವರ್ ಳ್ತನ್ನಮುಗಳ್ದರಿದ್ರುಪಟನಂ ಮಜ್ಜೆರ್ಪುರ್ದಂ ಕಂಡು

ಕಂ|| ನಾಗಿಣಿವೊಲೀಭುಜಂಗನ |
ಭೋಗಕೆ ತಸುವಿತ್ತೆ ಸಂಪದಂಬಡೆದಪೆಯೆಂ ||
ತಾಗಳ್ತನಗಿಲ್ಲದುದೀ |
ವಾಗರಿಮೆಯುದೇಂತೊ ವಕ್ರಗತಿ ನಿನಗಕ್ಕುಂ || ೧೬೮

ವ|| ಎನುತ್ತಿರೆ ಮತ್ತೊಂದುಕೇಳೀನಿಳಯದೊಳ್ಮಳಿವಿದ್ದರ್ ಮನದನ್ನಳಂ ತಿಳಿಪಲೆಂದು ವಿಟಂ ನುಡಿಯಿಸುವಲ್ಲಿ

ವೃ|| ಎಲೆ ಕಾಯ್ಪೇರಿದೆ ಚೈತ್ರವಲ್ಲರಿಯ ಗಂಧಂಗುಂದದಿದ್ದರ್ಪ್ಪೆ ಕಂ |
ಮಲರೇ ಸೇರೆಯುಸೊತ್ತಿ ಪತ್ತಿರ್ಸುವೆ ಸಂವರ್ತಾಬ್ಧಿಯೇ ಬಂದುದೇ ||
ಕಲಿ ಮತ್ತೇಂ ಕೃತಮೇ ಕೃಪಾನ್ವಿತಮೆ ಚಿತ್ತಂ ಕೌರವಕ್ಷೋಣಿಭೃ |
ದ್ಬಲಮೇ ಕರ್ಣಕಠೋರ ಮಾನುಡಿಯಿದೇಂ ಪಾರ್ಥಾಸ್ತ್ರಮೇ ಮಟ್ಟಮಿರ್ ||

ವ|| ಎಂಬಮುಹಾಪ್ರೌಢೆಯರ ಜಾಣ್ನುಡಿತಂ ಕೇಳ್ದು ಮಜ್ಜೆರ್ತ್ತಿರ್ಪ್ಪನ್ನೆಗ ಮೊಂದುಮುತ್ತಿನ ಮೊಗಸಾಲೆಯ ಮುಂದಣ ಕನಕಮಯಕಮನೀಯವೇದಿ ಕಾಗ್ರದ ಕುಸುಮತಳ್ಪದೊಳ್ಕುಳ್ಳಿದ್ದರ್ ವಲ್ಲಭೆ ನಲ್ಲನಂ ನೆಮ್ಮಿ ಚಲ್ಲದಿಂ ಮೆಲ್ಲನಿಂತೆಂದಳ್

ಕಂ|| ವಾದಿಸಮನಾಂತನಾಮಮ |
ನಾದಂ ತಳೆದಾತನಳೆದುದೇಂ ಭೋಗಿಜನಾ ||
ಹ್ಲಾದಕನಾವಂ ತಾರಕ |
ಭೇದಕನಾವಂ ಕುಮಾರನಲ್ತೆ ಮೃಗಾಕ್ಷೀ || ೧೭೦

ವ|| ಎನೆ ಮುಗುಳ್ದವಳೊಡನವನಿಂತೆಂದಂ

ಕಂ|| ವಸದ ಸಮಧ್ಯದ ಪರ್ಯಾ |
ಯನಾಮದೊಳ್ಗಮಿಪುದೇಂ ತದಾಶ್ರಯಮೇಂ ಜೇ ||
ವನಕೆ ಮುಸಿವವನದಾವಂ |
ವನನಿಧಿಯೆಂತಪ್ಪುದೆನಗೆ ಪೇಳ್ಕಮಳಾಕ್ಷೀ || ೧೭೧

||ವಿದ್ರುಮಮಹಿತಂ||

||ವಿದ್ರುಮಮಹಿತಂ||

ವ|| ಮತ್ತಮೊಂದು ಸೆಜ್ಜೆವನೆಯೊಳೊರ್ವ್ವ ಕ್ಕರಿಗಜೊಜಗಂ ಸೊಕ್ಕ್ರ
ಜೌವನೆಗೆ ಸಕ್ಕದದ ಬಹಿಲರ್ಾಪಿಯಂ ಪೇಳ್ದಪದಂತೆನೆ

ವೃ|| ಬ್ರಹ್ಮಾಣೀ ಕಾ ಜನೇಷ್ಟಂ ದದತಿ ಝುಡಿತಿಕೇ ತಾಪಸಾಂಗಂಜ ಕೀದೃ |
ಕ್ಪ್ರೀತಾ ಕಾ ಕುತ್ರ ವಿಶ್ವಂ ನಿವಸತಿ ವಿಬುಧಾಬೋಧನಂ ಕಿಂ ನೃಪಾಲಃ |
ಕಸ್ಯೈ ಸಂನದ್ಧ ಈಶಃ ಪತಿರಿತಿ ವಿದಿತಃ ಕಸ್ಯ ವಂದ್ಯಾಜ ಕೌ ಕಿಂ |
ವಕ್ತ್ರೀಶಂ ಕೌ ಜಗತ್ಸಂಹರಣಭರಣಕೌ ಮಂಗಳೋಕ್ತಿಃ ಕವೇಃ ಕಾ ||೧೬

ವ|| ಎನೆ ಕೇಳ್ದವಳ್ಕ್ಕಾಳಿದಾಸಕವಿರಚಿತಕಾವ್ಯಾದಿಮಾಂತಲರ್ಾಪಿಯಿಸುತ್ತ
ರಂಜೇಳ್ದವನ ಚಿತ್ತಂಬಡೆದಿರ್ದ್ದಳಿತ್ತಲ್ಮತ್ತೊಂದೆಡೆಯೊಳೊರ್ವ್ವಮತ್ತಕಾಶಿನಿ ಕಾ
ತನೊಳ್ಪ್ರಹೇಳಿಕೆಯಂ ಸೂಲ್ಲಿಸಿದಳದೆಂತೆನೆ

ಶ್ಲೋ|| ರಣೇನ ಸಾಧ್ಯತೇ ಸರ್ವಂ |
ಮತೇನ ಧ್ರಿಯತೇ ಮಹೀ ||
ಅಸಾರೆ ಕ್ರೀಡತೇ ಹಂಸಃ |
ಕವಿಶೇಷೇ ಕಿಮದ್ಭುತಂ ||

ವ|| ಇಂತಪ್ಪನೇಕವಿಧಚತುರಗ್ರಂಥಂಗಳಂ ಕೇಳ್ದು ಮೆಚ್ಚುತ್ತುಂ ಜತ
ರಜನಮನಶ್ಚಕೋರಚಂದ್ರಂ ನಾಗರಿಕನೊಳ್ಪೊಗಳುತ್ತಿರೆ ಮತ್ತೊಂದುಮನೆ
ವನದಂಗಣದೊಳ್ಮಾತೆಯೊಡನೆ ಮುಳಿದು ಮಗಳ್ನಿಂದಿಪ್ಪುದುಮವಳ್ದಿ
ತೆಂದಳ್

ವೃ|| ಮಗಳೆ ಮನೋಜ್ಞಮಾತೆ ಮಿಗಿಲಿತ್ತೊಡೆ ಪಿರಿದಿರಾತನಾಜ್ಞೆಯಂ |
ಮುಗುಪೆ ಕಳಲ್ಚು ಮೂಢತೆಯ ಮೋಹದ ವೃತ್ತಿಯಂತೆ ಮಿಮ್ಮನಿ ||
ತ್ತಗಲಿಪೆ ಕೂಡಿ ಪೋಟಿಸಿ ಧನಂಬಡೆ ಮಾನಮಿನೇಕೆ ಮುಂದಿರಂ |
ಬಗು ನಡೆ ಮಸ್ತಕಂದೊನೆಮಪಕ್ಕ್ರತುಮೂರ್ಖತೆಯೇಡ ಕಾಮಿನೀ ||೧೭

ಮತ್ತೊಂದು ಗೃಹಾಂತರಾಳದೊಳ್ಕುಳ್ಳಿರ್ದ್ದ ಜಘನ್ಯಭುಜಂಗನಂ ತೋ
ಕೆಳದಿಯೊಡನೆ ಪದಿರಿಂದಿಂತೆಂದಳ್

ವೃ|| ಪರಮಶ್ಲಾಘ್ಯಗುಣಂ ಸದಾಮುದಪಿತಂ ಶೌರ್ಯೋತ್ತರಂ ಗಂಧಬಂ |
ಧುರನೆಂದುಂ ನರಸಾರಮೇಯನಬಳಾಪ್ರೇಮಾಸ್ಪದೋದ್ಯದ್ವನೇ ||
ಚರನೇತ್ರಾಸ್ಯನನಂಗರೂಪನ ತನು ಕ್ರೀಡಾವಿನೋದಂ ಮನೋ |
ಹರನೀತಂ ನಮಗಿಂಗೆ ಬಕ್ಕುರ್ಮೆನಗೀಗಳಾಸ್ವರಪಶ್ಯಂ ಸಖೀ || ೧೭೫

ವ|| ಎನೆ ತನ್ನಂ ಪೊಗಳ್ದಪಳೆಂದು ಮುದಂಬಡೆದಿರ್ದನಲ್ಲಿ ಮತ್ತೊಂದೆಡೆ ಯೊಳ್ ಶಿಕಾಂತಕಾಂತಕೇಳಿನಿಕೇತನದೊಳ್ ಚಂಚತ್ಕಾಂಚನಮಂಚದ ಮೃದುಳಧವ ಳಶಯ್ಯಾತಳದೊಳೊಯ್ಯನೆ ರಯ್ಯಮೆನೆ ಕಯ್ಯಂ ಪಿಡಿದು ಮೆಯ್ಯಂ ಸೋಂಕಿ ಮನದನ್ನಳೊಡನೆ ಮದನಕೇಳಿಗೆಳಸಿ ಮಹೋತ್ಸವದಿಂ ಮನೋರಮಣಂ ಕುಳ್ಳಿ ರ್ದುದಂ ನೇಹಂ ಮಿಗೆ ನಿರೀಕ್ಷಿಸಿ

ವೃ|| ಅಂದುಗೆಯುಂ ಕಳಲ್ಚಿ ಪೊಸಮೂಕುತಿಯುಂ ಬಿಡದೇರನೂಂಕಿ ತ |
ಳ್ತಂದದ ಹಾರಮುಂ ಕೊರಲ ಹತ್ತಸರಕ್ಕೆ ತೊಡರ್ಚಿ ಸಾರ್ಚಿ ಜೆ || ·
ಲ್ವೊಂದಿದಕೇಶಮುಂ ಬಿಗಿದು ಬಂಧಿಸಿ ನೋಲ್ಪನಿಜೇಶನಿಚ್ಛೆಯುಂ |
ಸುಂದರಿ ನೋಡಿ ಕಯ್ಗಡಗಮುಂ ತೆಗೆದಾತನ ಕೈಗಮರ್ಚಿದಳ್ || ೧೭೬

ಹಸನರಸಂ ಮುಖಾಂಬುಜರಸಂ ಜಿನುಗುತ್ತಿರೆ ಕುಂಡಲಂಗಳುಂ |
ಮಿಸುಪಕುಚಂಗಳುಂ ಕುಣಿಯೆ ಸುಣ್ಣೊಡೆಯುಂ ನಡುವುಂ ಕಡಂಗಿ ಕಂ ||
ಪಿಸೆ ನರುಸುಯ್ಗಳುಂ ಭ್ರಮರಕಂ ಪರೆದೊಪ್ಪಿರೆ ಘರ್ಮವಾರಿಗ |
ಳ್ಮಸಿಲ ರಸಂಗಳುಂ ಸುರಿಯೆ ಜಾಣೆ ಜವಂಗಡದೊತ್ತಿ ಕೂಡಿದಳ್ || ೧೭೭

ಪ್ರಿಯಕರಜಕ್ಷತೇಂದು ಕಳೆಯೊಂದೆ ಭಯಂಬಡೆದಂತುರೋಜಚ |
ಕ್ರಯುಗಳಮುಂ ಕಡಕ್ಕಡಿಸೆ ಸಂಪಗೆಗಂಪನಮರ್ಚತೇಳ್ವಸುಯ್ ||
ರಯದೊಳೆ ತಾಗೆ ತಲ್ಲಣಿಪವೋಲ್ ಲಿಸುತ್ತಿರೆ ಕುಂತಳಾಳಿ ಕಾಂ |
ತೆಯ ಜಪಾವು ಪೊಯ್ದೊಡಗಿದಂತೆ ಬೆಮರ್ತುದು ವಕ್ತ್ರಚಂದ್ರಮುಂ || ೧೭೮

ವ|| ಇಂತು ಸವಿಸುಸಿಲ ಸೊಗಮನನುಭವಿಸಿದನಂತರಂ

ವೃ|| ಮುಗಿದಲರ್ಗಂಗಳಿಂ ಪರೆದಕುಂತಳದಿಂ ಜಡವೇಳ್ವಸುಯ್ಗಳಿಂ |
ತೆಗೆಬಗೆಗೊಂಡು ಮೆಯ್ಮರೆವಚಿತ್ತದಿನುಣ್ಮುವ ಘರ್ಮವಾರಿಯಿಂ ||
ಮಿಗೆ ರಸವಾರಿದಿಂದುಟಿಯಿನಾರತಿಮೂರ್ಛಿತೆ ಜೋಲ್ವದೇಹದಿಂ |
ಸೊಗಯಿಸಿದಳ್ಭುಜಂಗಪರಿದಷ್ಟತೆಯುಂ ತನೆಸೂಚಿಪಂದದಿಂ || ೧೭೯

ವ॥ ಅವಳಂ ನಾಗರಿಕಂ ನೋಡಿ ಪೊಗಳ್ವನಿತರೊಳೊರ್ವ್ವ ವೃದ್ಧನೊತ್ತೆ
ಗುಡಲೆಂದು ಬಂದಿರೆ ಮತ್ತೊರ್ವ್ವಳ್ಚಪಲೆ ಮೆಲ್ಲನೆ ಪೊರ್ದ್ದಿ ನಗುತಿಂತೆಂದಳ್

ವೃ॥ ತರಳನಿದಾವನೊತ್ತೆಗುಡಬಂಡಪನಕ್ಕಟ ಕಾಣನೇಕೆ ಕ |
ಣ್ಗುರುಡನೊ ದಂಡಮುಂ ಪಿಡಿದನಲ್ಲವೆನುತ್ತಿದೆ ಶೀರ್ಷಕಂಪನಂ ||
ತೆರೆಯಿದು ನೋಳ್ಪೊಡಾಸ್ಯರಸದಿಂ ನೆಗೆದಿರ್ದ್ದುದೊ ಗಡ್ಡವಿಾಸೆಯೊ |
ಳ್ವರೆದಿಡೆ ಬೆಳ್ಪು ನಿರ್ಗತರದದ್ಯುತಿಗೆಂಡುದೊ ತಾನಿದದ್ಭುತಂ || ೧೮೦

ವ॥ ಮತ್ತಮದಲ್ಲದೊರ್ವ್ವ ವೃದ್ಧಾಂಗನೆ ತಲೆವಾಗಿಲೊಳ್ನಿಂದು ಬೆಲೆವೆ
ಣ್ಗಳಂಗಸಂಗದಿಂಗಿತಮಂ ಬಲ್ಲ ಬರ್ಬ್ಬರನ ಬೊಜಗರಂ ಮರುಳ್ಮಾಳ್ಪಬಲ್ಮೆಗೊಲ್ದೆ
ಗಾನೇ ನೋಂತೆನೆಂದುಸಿರ್ವ್ವನಿತರೊಳಾಕರ್ಣಿಸಿ ವಿದೂಷಕನವಳಿರ್ದ್ದೆಡೆಗೆ ಸರಸ
ರನೆ ಪೋಗಿ

ಕಂ॥ ಉದರದ ವಳಿಗಳ್ನಿನ್ನಯ |
ವದನಮನೈದಿದುವು ಕುಚದ ಬಿಣ್ಪುದರಮನೈ ||
ದಿದುದಳಕಮೈದಿದುದು ಕ |
ಣ್ಗದಿರಿದು ಮುದಿಪಾರಿ ಪೇಳಿದೇನಜ್ಜಿಯೋ || ೧೮೧

ವ॥ ಪೆರತೊಂದೆಡೆಯೊಳೊರ್ವ್ವಂ ಪರಿಹಾಸರಸಪ್ರಕಾಶಕಂ

ವೃ॥ ನೆಗೆದಪಯೋಧರದ್ವಯುವಿದೇಕೆಲೆ ಬಿಳ್ದುದು ಬರ್ದ್ದೆ ಪೇಳ್ವುದೆಂ |
ದಗಿಯದೆ ಕೇಳೆ ಪೇಳ್ದಳವನೊಳ್ವಿಟನೀಂ ರತಿಕಾಲದಲ್ಲಿ ಕೆಂ ||
ಮಗೆ ಕರಮಿಟ್ಟು ಮರ್ದಿಸುತೆ ಹೂಂಕೃತಿಗೆಯ್ದೊಡನರ್ಧಚಂದ್ರನಂ |
ಮಿಗೆ ಕುಡೆ ಕಾಮಗೇಹಕದನಾಮದನಂಗಿದು ಪೇಳಲ್ಕೈದುಗುಂ || ೧೮೨

ವ॥ ಮತ್ತಂ

ಕಂ॥ ಎಳೆಯಳೆ ನೀನಲ್ಲಳೆ ಪೇ |
ಳೆಳೆಯಳೆನಿನ್ನಳಕಕಾಂತಿಯೆಲ್ಲಿದೆ ಪೇಳೆ ||
ನ್ನೊಳೆ ನೀನಬಳೆಯೆ ಪೆರತೇಂ |
ತಿಳಿವೊಡೆ ನೀನಬಳೆಯೆಂಬುದರಿಯದೆ ಲೋಕಂ || ೧೮೩

ವ|| ಎಂಬಪನಾತಂ ಕೇಳ್ದು ಏಸೋದಮಕರಂದ ಮಧುವ್ರತಂ ನಸುನಗು
ತ್ತುಂ ಬರೆವರೆ ಮುಂದೊಂದುಚಂದ್ರಮಣಿರಮಣೀಯಕುಟ್ಟಿಮಸ್ಥಳದೊಳುನ್ಮ
ತ್ತಯೌವನಾಂಗಿ ಯೊರ್ವ್ವಳ್ಸವ್ಪಲ್ಲಭಾಜನಮಧ್ಯದಲ್ಲಿ

ವೃ|| ಬಿಡುಮುಡಿ ಬೆನ್ನೊಳಾಡೆ ಕುರುಳುಂ ಪಣೆಯೊಳ್ಕುಣಿದಾಡೆ ಪೊಣ್ಮೆ ಪೊಂ
ಗೊಡವೊಲೆಯಲ್ಲಿ ಹಾರಮೊಲೆದಾಡೆ ನಿಜಶ್ವಸಿತೋರುಸೌರಭ ||
ಕ್ಕೊಡನೆಡೆಯಾಡೆ ತುಂಬಿ ಮಿಳಿರ್ದಾಡೆ ಕಟಾಕ್ಷಮರೀಚಿ ಕುಂಡಲಂ |
ಬಿಡದಮರ್ದಾಡೆ ಗಂಡದೊಡನಾಡಿದಳಂಗನೆ ಚಂಡನಕ್ತಿಯಿಂ || ೧೮೪

ಜಡಿಯುತ್ತಿರೆ ನುಣ್ಮೊಲೆಯುಂ ಮುಡಿಯುಂ |
ಪೊಡರುತ್ತಿರೆ ಪೂರ್ಣಘನಂ ಜಘನಂ ||
ಸಡೆಯುತ್ತಿರೆ ತೆಳ್ನಡುವುಂ ತೊಡೆಯುಂ |
ಪೊಡೆದಳ್ಪಿಡಿದಳ್ಪುಟಚೆಂಡನವಳ್ || ೧೮೫

ವ|| ಮತ್ತಂ

ವೃ|| ಸಿರಿಗಾಸಾವಾಸಮಾದಂ ಹರಿಗೆ ನಯನಮಾದೊಮ್ಮೆನೆನ್ನಾತ್ಮಜಂ ಭಾ |
ಸ್ಕರನಾಪ್ತಂ ನೋಡದೆನ್ನೊಂದಳವಸಿಲೆ ಕಲಂಕಾಶ್ರಯಂ ರಾಹುದಷ್ಟಂ ||
ಚಿರದೋಷಾವಿಷ್ಟನಾದಂ ಕ್ಷಯಿ ಪಗೆತನಗೊಂಡಂಗಡಾ ಯೆನ್ನೊಳೀಚಂ |
ದಿರನೆಂದಂಭೋರುಹಂ ಪೊಯ್ದುಪುದಿದನೆನೆ ತತ್ಪಾಣಿ ಪೊಯ್ದತ್ತು ಚೆಂಡಂ ||

ವ|| ಅಂತವಳಂದವಂ ಕಂಡಿದು ನೋಟಕಬೊಜಗರೆರ್ದೆಯೊಳ್ಕಂತುಕಾ
ರಾಗ್ನಿಯಂ ಪೊಯ್ವಂದಮಲ್ಲದೆ ಕಂತುಕಮಂ ಪೊಯ್ವಂದಮಲ್ಲೆಂದು ನಾಗ
ಕಂ ಸೊಲ್ಲಿಸುತ್ತುಂ ಬರೆವರೆ ಮತ್ತಮೊಂದುಬಿತ್ತರಂಬಡೆದಬಜ್ಜರದ ಸೌಧಾಂಕ
ದೊಳ್ಕೈಗೆಯ್ದಪದ್ಮರಾಗರುಚಿನಿಚಯ ಕವಚಿತಸಮುತ್ತುಂಗ ಶಾತಕುಂಭ
ಸ್ತಂಭಂಗಳಿಂ ಸಮುಚಿತಸ್ಥಾನದೊಳಿರಿಸಿ ನಿರ್ಮಿಸಿದಮರಕತಾದಿ ಮಣಿಮಯ
ಮಯೂರ ಮಂಡಿತಮಧ್ಯಸ್ಥಳತುಳಾದಂಡದಿನೆಡೆಯೊಳ್ತೊಡರ್ಚಿದ ಮಳರಮ
ಣೀಯಮಣಿಮುಕುರಘನ ಕಳಶಘಂಟಿಕಾ ಝಣಝಣಿತ ಕಿಂಕಿಣೀಜಾಲಮಾ
ಲಿಕಾಪಙ್ಕ್ತಿಯಿಂ ತುದಿಪಳಸಿನೊಳೆಳಲೆವಿಟ್ಟಳವಡಿಸಿದ ರುಚಿರಚಾಮರಹೇಮ

# ದ್ವಾದಶಾಶ್ವಾಸಂ.



ಕಂ|| ಶ್ರೀಕಾಳೀ ನವಯೌವನ |
ಮಾಕಂದಶುಕಂ ಶುಕಾದಿಮುನಿಜನಹೃದಯಾ ||
ಬ್ಜಾಕರಮರಾಳನಮಳಗು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಮತ್ತಮಾಗಳ್ ಬ್ರಾಹ್ಮೀಮುಹೂರ್ತಮೆಂಬ ಪೂಜಾಮುಹೂರ್ತದಲ್ಲಿ

ವೃ|| ಹಿಮಸಂಮಿಶ್ರಾಂಬುವಿಂ ಮಜ್ಜನಮನೊಲವಿನಿಂ ಮಾಡಿ ದೇವಾಂಗಮಂ ತಾ
ಳ್ದಮಳಾಂಗಂ ಭೂತಿರುದ್ರಾಕ್ಷಮನಮರೆ ನಿಜಾಂಗಂಗಳೊಳ್ಧಾರಣಂಗೆ ||
ಯ್ದು ಮಹಾಮಂತ್ರಾಂತರಂಗಂ ಸಮುಚಿತವಿಧಿಯಿಂ ಪೂಜಿಸುತ್ತಿರ್ದ್ದನಾಸಂ|
ದಮಸಾದಂ ಪೊರ್ದ್ದಿ ಗೌರೀರಮಣನಡಿಗಳಂ ಶೈವವಿದ್ಯಾಸಮುದ್ರಂ || ೨

ವ|| ಅಂತಾಮಹೀಕಾಂತನೇಕಾಂತದೊಳುಮಾಕಾಂತನನರ್ಚಿಸುತ್ತು
ಮಿರೆಯಿರೆ

ವೃ|| ಒದೆದುದ್ಯದ್ಗೇಹಪಾರಾವತದ ನಿನದಮಂ ತಾಮ್ರಚೂಡಪ್ರಜೋನ್ನಾ |
ದದ ಪೆರ್ಚ್ಚಂ ಪೊಯ್ದುಳಿದ್ಧ್ವಾನಮನೆ ತುಳಿದು ಗಾಣಿಕ್ಯಹರ್ಮ್ಯಾಗ್ರಗಾಯ ||
ತ್ಸುದತೀಸಂಗೀತ ತಾರಸ್ವರಮನಳಿದು ದಿಕ್ಪ್ರಾರಮಂ ಪರ್ಬ್ಬಿ ರೋದೋಂ
ತದೊಳೆತ್ತಂ ಸುತ್ತುತಿರ್ದ್ದತ್ತು ಭವಭವನಸಂಪೂರಿತಂ ಶಂಖನಾದಂ || ೩

ಕಂ|| ನೆರೆದಿರುಳಿರುಳೆರೆಯನೊಳುರೆ |
ಸುರತಾಂತದ ಮೂರ್ಛೆದಳೆಯೆ ಕೆದರ್ದ*ವಳಕೋ ||
ಸ್ಮರನೊಸೆ ಮುಗುಳ್*ದ್ವಂ ಮುಚ್ಚ್ಟಿ |
ಪರಿಸಿದುದೆಲ್ಲೆಡೆಯೊಳಸತಿಯುನ್ನಲಿಯುಲೊಸಂ || ೪

ವೃ॥ ಪೊದೆಯುತ್ತುಂ ಮೇಲುದಂ ಮೆಲ್ಲಡಿಯಿಡುತಿಳೆಯೊಳ್ಮೆಲ್ಲಸಲ್ಲಲ್ಲಿ ನಿಂದಿ |
ರ್ದ್ದಿದಿರಂ ಕಣ್ಮಿಂಚಡಂತೀಕ್ಷಿಸುತೆಡಬಲದೊಳ್ಪೊಪ್ಪುಳಾರ್ರೈವುತುಂ ಬಿ ||
ಚ್ಚಿದಸೀವೀಬಂಧಮಂ ಬಂಧಿಸುತಳಿದಳಕಶ್ರೇಣಿಯಂ ತಿದ್ದುತುಂ ನು |
ಣ್ಗದಪಂ ಪತ್ತಿರ್ದ್ದ ತಾಂಬೂಲರಸಮನೊರಸುತ್ತೈದಿದಳ್ಪಾಣ್ಬೆಯೊರ್ವ್ವಳ್ ||

ವ॥ ಪೆರತೊಂದುತಾಣದಲ್ಲಿ

ಕಂ॥ ಅಸವಸದಿಂ ಸುಸಿಲೆಸಗು |
ತ್ತಸತಿ ಮೊದಲಾಱಿದಸಿತವಸನಮಿದೆಂದಾ ||
ಪೊಸಮುಬ್ಬನುಡಲ್ತೆಗೆದತಿ |
ಹಸನರಸಂಬಡೆದಳೊಸೆದಪಾಣ್ಬನ ಮೊಗದೊಳ್ || ೬

ವ॥ ಮತ್ತಮೊರ್ವ್ವಳ್

ವೃ॥ ವಿಲುಲಿತಘರ್ಮವಾರಿಕಣದಿಂ ಕೆಸರೇಳ್ದಿಳಿತಪ್ಪಗಂಡಮಂ |
ಡಳಕೃತಪತ್ರಭಂಗಮೃಗನಾಭಿಜಮಂ ಬಳಿದಿಟ್ಟುರೋಜಮಂ ||
ಡಳದ ನಖಕ್ಷತಕ್ಕಧರದೊಳ್ತಲೆದೋಱಿದಕ್ಷತಕ್ಕುರ |
ಸ್ಥಳದ ರಸಾದ್ರಕುಂಕುಮಮನಂಕಿಸಿ ಜಾಣ್ಮೆಗೆ ಪಾಣ್ಬೆಯೈದಿದಳ್ || ೭

ವ॥ ಆಸಿತಗೆಯಲ್ಲದೆಯುಮನ್ಯಪ್ರದೇಶದಲ್ಲಿ

ವೃ॥ ನೋಡಿದನಿಂತು ನೋಡಿರಸದಂಬುಲಮಂ ಸವಿದಿತ್ತು ಚುಂಬನಂ |
ಮಾಡಿದನಿಂತುರೋಜಯುಗಳಂ ನಿಜವಕ್ಷದೊಳೊಪ್ಪಲಪ್ಪಿ ಮುಂ ||
ಪಾಡಿದನಿಂತು ತಳ್ತು ತನು ಜೋಂಪಿಸಿ ಜುಂಮಿಡೆ ನೋಂಕಿ ನೊಕ್ಕಿ ಮೈ |
ಗೂಡಿದನಿಂತುಟೆಂದಸತಿ ತನ್ನವನಂ ನೆನೆಯುತ್ತುಮೈದಿದಳ್ || ೮

ಕಂ॥ ಜಾರೆ ಸಿರಿ ಜಾರೆ ಸೋಮ್ಮುಡಿ |
ಜಾರೆ ಜೆಮುಜ್ಜಾರೆ ಮೇಲುದದು ಮುಡಿಲಗ್ಗ ||
ಳ್ಜಾರೆ ಮುದಂ ಜಾರೆ ಮದಂ |
ಜಾರೆ ಪದಂ ಜಾರೆ ಜಾರೆ ಜಾರಿದಳೊರ್ವ್ವಳ್ || ೯

ವ॥ ಪೆರತೊಂದುತಾಣದೊಳ್

ವೃ|| ಮನೆಯಾಣ್ಮಂಗೂಡಿ ಮಂಚಾಗ್ರದೊಳೊರಗಿರೆ ಸುತ್ರಾತಿಳಿಯಂಸಂತಪಿಟ್ಟಾ
ಮನದಾಣ್ಮಂಗೂಡಿ ರತ್ಯಂತದ ಸುಖವಡೆದೈತಪ್ಪುದುಂ ಪಾರ್ಶ್ವ ತತ್ರಾಂ ||
ತನೊಳತ್ತಲ್ಕೂಡಿ ಸೌಖ್ಯಂಬಡೆದಿದಿರ್ವರೆ ತದ್ಭೂತಿಯೋರೊರ್ವರ್ಪೊತ್ತ |
ಮ್ಮಸಿತುಂವೃತ್ತಾಂತಮಂ ಕೇಳ್ದಹಹಯೆನುತೆ ಕೈವೊಯ್ದುನಕ್ಕಾಡುತಿರ್ದರ್||

ವ|| ಮತ್ತಮೊಂದು ಸಂಕೇತಸಿಲಯದಲ್ಲಿ

ವೃ|| ಬಿಡುಬಿಡು ಕೋಳಿಕೂಗಿದಪುದೆಮ್ಮವರೇಳ್ವರೆನುತ್ತೆ ಬಲ್ಪಿನಿಂ |
ಬಿಡಿಸಿಕೊಳುತ್ತೆ ಸಂವರಿಸಿ ನೀವಿಯನೊಳ್ಳುಡೆಯುಟ್ಟು ಬೀದಿಯೊಳ್ ||
ನಡೆವೆಳಜೋಡೆ ಮೂಡಗಡೆಗೆಂಪನಭೀಕ್ಷಿಸಿ ಭೀತಿವಟ್ಟು ಕ |
ಣ್ಗೆಡುತೆ ದವಾಗ್ನಿಗಂಡೆರಲೆಯಂತೆರ್ದೆ* ಪವ್ವನೆ ಪಾರೆ ಪಾರಿದಳ್ || ೧೧

ಕಂ|| ಜವದಿನುಷಃಕಾಲವೃಷಂ |
ತವೆ ಕದಡಿದುದೆನಿಸಿ ಮಬ್ಬುವೆಳಗಂ ತಿಳಿದೊ ||
ಪ್ಪುವಬಾಂಗೆರೆಯೊಳ್ಮೀಂಗ |
ಳ್ತಪಕದೊಳೆ ಮುಳುಂಗುವಂತಡಂಗಿದುವಾಗಳ್ || ೧೨

ಬೆಳ್ವೆಳಗಿನ ಬಾಳ್ವೆಳೆಯಂ |
ತಳ್ಪದೆ ಬಾಂಜೊಲದೊಳರುಣಕರಶಿಖಿಶಿಖಿ ಪಾ ||
ಳೀಳ್ವಿನಮುಳುರ್ದಿರೆ ಚಿಂತೆಯ |
ನಾಳ್ವಂತೆವೊಲೋಷಧೀಶ್ವರಂ ಕಳೆಗೆಟ್ಟಂ || ೧೩

ರಾಜಬಲಂ ಕುಂದಿದುದೆನ |
ಗೀಜಲಜಿನಿ ರಾಜಹಂಸಯುತೆ ಮಧುಪರವ ||
ವ್ಯಾಜದೆ ನಕ್ಕಪಳೆಂದಾ |
ರಾಜಿತಕುಮುದಿನಿ ವಿಷಾದದಿಂ ಕೊರಗಿರ್ದಳ್ || ೧೪

ವ|| ಅಂತುಮಲ್ಲದೆಯುಂ

ಕಂ|| ಮೊದಲೆನ್ನಸಿರಿಯನಿದು ಸೋ |
ಡದೆ ಕಣ್ಮುಚ್ಚಿದುದುಗಣ ಸರೋಜಿನಿ ಸಿರಿವೆ ||
ತ್ತಿದನಿಂದು ನೋಡೆನಾನೆನು |
ತದು ಕಣ್ಮುಚ್ಚಿದವೊಲಲ್ಲಿ ಮುಗಿದುದು ಕುಮುದಂ || ೧೫

ವಿಧುವಿರಹಿಣಿ ನವಕುಮುದಿನಿ |
ಮಧುಮಿತ್ರನಿರೂಪಣಾತಿಭೀಕರವಿಜರ ||
ನ್ಮಧುಕರಮರಾಳದರ್ಶನ |
ವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ || ೧೬

ವೃ|| ಪರಿಪರಿದೊಂದನೊಂದರಸಿ ಕಂಡತಿಕಾತರಮುಣ್ಮೆ ಪೊಣ್ಮೆ ಬಂ |
ದೆರವಿನಿತಿಲ್ಲದಪ್ಪಿ ಗರಿ ನೆಟ್ಟನೆ ತಳ್ತಿರೆ ಕಣ್ಣಸುಖಾಶ್ರುವಂ ||
ಸುರಿಯೆ ಕಡಂಗಿ ಕಂಜದಳತಳ್ಪದೊಳೊಂದುವಚಕ್ರಚಕ್ರದ |
ಬ್ಬರದ ರತಕ್ಕೆ ನಾಚ್ಚುತಲರ್ಗಣ್ಮುಗಿದಂದದಿನೈದಿಲೊಪ್ಪುಗುಂ || ೧೭

ಕಂ|| ಇರುಳತನುಧನುರ್ಲತೆಗೊ |
ಳ್ದಿರುವಾಗಿ ಬಳಲ್ದು ಪಸಿದಳಿವ್ರಜಕನಿಲಂ ||
ಪರಿಮಳದುಣಿಸಾಗಿಸಲಾ |
ದರಿಸಿ ಕರಂ ಬಿಚ್ಚಿರ್ದಂತಿರಲರ್ದುದು ನಳಿನಂ || ೧೮

ವ|| ಅಂತುಮಲ್ಲದೆಯುಂ

ಕಂ ಎನಗಾಗದವನರುಹಮಂ |
ಮನೆಮಾಡಿದಳೆಂದು ಕಂಡು ಮುಳಿವಂ ಶಶಿಯೆಂ ||
ದೆನುತಿರುಳೆ ಮುಚ್ಚಿ ಸಿರಿಯಾ |
ತನಭಾವದೆ ಬಿಚ್ಚಿರ್ದಂತಿರಲರ್ದುದು ಕಮಳಂ || ೧೯

ಇರುಳಜಿತೇಂದೀವರದ |
ಲ್ಲಿರುತದು ಮುನಿದೊಡೆ ಮಧುವ್ರತಂ ಬರೆ ಮೊದಲಃ ||
ತಿರೆಕಂಡುದುಗಡ ಕಮಳಂ |
ಪರೀಕ್ಷಿಸಗ್ಗುಣಿಗಳಾಶ್ರಿತರೊಳವಗುಣವಂ || ೨೦

ಕನಕಕರಂಡಕದಿಂದಂ |
ದಿನಲಕ್ಷ್ಮಿ ಸರಾಗಮಿಂದ್ರನೀಲದ ಸರಮಂ ||
ದಿನಪಂಗೀಯಲ್ತೆಗೆದಪ |
ಳೆನೆ ಮಧುಕರಮಾಲೆ ನಳಿನದಿಂ ನೆಗೆದೆಸೆಗುಂ || ೨೧

ಜಳಕಣಕಲಿತದಳಂ ನೀ |
ರ್ದಳೆದಿಟ್ಟಲೆಯಾಗೆ ನಳಿನಿ ಕೆಲದಟ್ಟಿಗಳಿ ||
ಟ್ಟಳೆನಿಸೆ ವಿಕಚಾಬ್ಜಂಗ |
ಳ್ಕೊಳನೆಸೆದುದು ರಾಜಹಂಸನೌತಣದೆಡೆವೋಲ್ || ೨೨

ಪಾಡುವಪರಮೆಗಳಿಂದೊ |
ಲ್ದಾಡುವಮುದ್ದಂಜಿವಂಗಳಿಂ ನರುಗಂಪಿಂ ||
ತೀಡುವೆಳಗಾಳಿಯಿಂ ಸಿರಿ |
ಗೂಡಿದಗೃಹದಂತಿರಿರ್ದುದಲರ್ದಂಭೋಜಂ || ೨೩

ತೀರದೊಳಿರೆವಿದ್ರುಮತತಿ |
ವಾರಿಯೊಳಿರೆ ಪದ್ಮರಾಗಮಬ್ಜಾಕರಮಾ ||
ನೀರಾಕರಮೆನಿಸೆಕಣ್ಗೆಂ |
ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ || ೨೪

ಸುರವರಕರಿ ಮುರಿದೊಟ್ಟಿದ |
ಸುರುಚಿರನಂದನರಸಾಲಪಲ್ಲವತತಿಯಂ ||
ತಿರೆ ಕರಮೆಸೆದುದು ಮೂಡಣ |
ಗಿರಿಯೆಡೆಯೊಳ್ಮೂಡಿ ತೋರ್ಪ್ಪಸಂಧ್ಯಾರಾಗಂ || ೨೫

ವ|| ಮತ್ತಂ

ಕಂ|| ಸುರವರನಂದನವನಮಂ |
ಸುರವರನಂದನನ ಬಾಣದುರಿ ಪರ್ವಿದುದೀ ||
ಪರಿಯೆಂದರಿಪುವತೆರದಿಂ |
ಪರಿರಂಜಿಸುತಿರ್ದುದುದಯಸಂಧ್ಯಾರಾಗಂ || ೨೬

ಹರಿದಿಕ್ಪಣವಧು ಬರೆ ಹಿಮ |
ಕರಖರಕರರೊಂದೆತೆರದೊಳನುರಕ್ತತೆಯಿಂ ||
ನೆರೆವಳ್ಗಡ ವಸುವಿತ್ತೊಡೆ |
ಸರಿವ್ಯದುಕಳಿಸಕ್ಕಳಿರ್ವ್ವರುಂ ಗಣಿಕೆಯವೊಲ್ || ೨೭

ಹರಿಗೆ ಮಣಿಪಸ್ತರನಿಕರದ |
ಕಿರೀಟನೊರಸಿದೊಡೆ ಸುರಿವಕನಕದ ರಜಮಂ ||
ಸುರಕರಿ ಕರದಿಂ ಕೆದರ್ದ* |
ತಿರೆ ಪಸರಿಸುತಿರ್ದುದುದಿತಖರಕರಕಿರಣಂ || ೨೮

ವೃ|| ಬಿರಿಯೆ ಮೃದುಸರೋಜಂ ಬಿಂಕಮಂ ಬಿಟ್ಟು ರಾಜಂ |
ಜರಿಯೆ ತಿಮಿರಪೂಗಂ ಜಾರೆ ಜಾರಾನುರಾಗಂ ||
ಸರಿಯೆ ಕುಮುದಬೃಂದಂ ಸಮುದಂಗುಂದೆ ಬಂದಂ |
ನೆರೆಯೆ ಪಟುರಥಾಂಗಂ ನಿರ್ಮಳಾಂಗಂ ಪತಂಗಂ || ೨೯

ವ|| ಮತ್ತಮಾಗಳ್

ಕಂ|| ಪರಿಕಲಿತಾರುಣಕರಭಾ |
ಸ್ಕರಬಿಂಬಂ ಕಣ್ಗೆವಂದುದೈಂದ್ರೀವಧು ಸು ||
ಣ್ಗೊರಲೊಳ್ಕಟ್ಟಿದಮಾಣಿಕ |
ವರಲೊಂದಿರ್ದ್ದೆರೆದಾಳಿಯೆನೆ ರಶ್ಮಿಯುತಂ || ೩೦

ವ|| ಮತ್ತಂ

ಕಂ|| ಪರಿರಕ್ತದಿವಾಕರಭಾ |
ಸುರಬಿಂಬಮುದಿಂಬುವಡೆದುದಖಿಳದಿಶಾವಿ ||
ಸ್ಫುರಿತಸುಧಾಕರಕರಸಾ |
ಗರಮಂ ಕುಡಿದಡರ್ವ* ಬಡಬಶಿಖಿಪಿಂಡದವೋಲ್ || ೩೧

ಕೆಂಬೆಳಗೆಸೆದುದು ಕೌಸುಂ |
ಭಾಂಬರಕೃತತಳ್ಪದಂತೆ ಖರರುಚಿಬಿಂಬಂ ||
ಕೆಂಬಟ್ಟೆಯ ಪೊಸಕೌಳುಡೆ |
ಯೆಂಬಂತಿರೆ ತಳ್ತು ಮೆರೆದುದೈಂದ್ರೀವಧುವಾ || ೩೨

ವ|| ಅನಂತರಂ

ಕಂ॥ ಕೆಂಬಟ್ಟೆಯ ಗವಸಣಿಗೆಯ |
ನಂಬರರಮೆ ನೋಡಲುಗಿದನುಣೆಗನ್ನಡಿಯೆಂ ||
ದೆಂಬಂತೆ ಸಂಜೆ ತೊಲಗಿ |
ದ್ದಂಬರಮಣಿಬಿಂಬಮೇಂ ಮನಂಗೊಳಿಸಿದುದೋ || ೩೩

ವೃ॥ ಇದು ಜಂಜಪದ್ಮೋಪಮಲಕ್ಷ್ಮೀಕರಕಲಿತಸುವರ್ಣಾಬ್ಜಮೋನೋಡುನೋಡಿಂ
ತಿದು ಪೂರ್ವಾಶಾಂಗನಾ ಮಂಗಳಮಧುರಿಮಸೀಮಂತಮಾಣಿಕ್ಯಮೋಪೇ||
ಳಿದು ಶಕ್ರಾಶಾದ್ರಿಹಸ್ತೋಜ್ಜ್ವಳ ಕಳಶವೊ ತಾನೆಂಬಿನಂ ಕಣ್ಗೆ ಚೆಲ್ವಾ |
ದುದು ಜಂಜದ್ಯಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶಬಿಂಬಂ || ೩೪

ವ॥ ಅಗಳ್

ವೃ॥ ಪನಸಿಧಿವಾರಿಯೊಳ್ಬೆರಸಿ ತೀವಿದಚಂದ್ರಿಕೆಯೆಂಬಪಾಲನೀ |
ಕನಕಸರೋಜರಾಜಿತರಜಃಪರಿಪಿಂಜರವರ್ಣಹಂಸನೊ ||
ಯ್ಯನೆ ಬರೆಪೇದ್ದುದಾಜಲಮನೊಲ್ಲದೆ ಬೇರ್ಪಡಿಸಿತ್ತು ನೋಡಿನೆಂ |
ಜನಮಿಳೆ ಮನ್ನಜೊನ್ನಮದು ಪಿಂಗಿರೆ ತಗ್ಗಿತು ಪಾರಿ ಪಾರ್ಥಯಾ || ೩೫

ಮನದನುರಾಗಮಂ ನೆರೆದು ನಲ್ಲಳೊಳುಣ್ಮುವಘರ್ಮವಾರಿಯೆಂ |
ಬೆನೆ ಪಸಿ ತೋರೆ ತೊಟ್ಟನಲರ್ದಂಬುಜಮೊಳ್ನೆಲೆಗೊಂಡು ಮೂಡಿ ಬ ||
ರ್ಪಿನನ ಕರಂಗಳಂಗದೊಳೆ ಕುಂಕುಮದಂತಿರೆ ತೊಪ್ಪಚಕ್ರಮೇಂ |
ನೆನೆಯಿಸಿದತ್ತೊ ಕಾಮಿಸಿಯ ಬಳ್ಮೊಲೆ ಕಾಂತನ ಕಯ್ಯೋಳ್ಪ್ಪದಂ || ೩೬

ಎರಲಿರದೆತ್ತ್ರಸೂಸೆ ಕನಕಾಬ್ಜರಜಂ ನಯದಿಂದೆ ಬರ್ಪನೀ |
ಳ್ವರೆಗರೆಗೊಂಡು ನಿಂದು ಸರಮೆಂಬಕಷೋಪಲದಲ್ಲಿ ಪಾಸದೇ ||
ರ್ಕ್ಕರಕರಮೆಂಬ ಪೊನ್ನೊರೆಪ್ರೊಳೊಪ್ಪುತೆ ಸೌರಭಕಲ್ಲಿ ಸಾಧ್ವಪ |
ಟ್ಟರಣಮೆ ಕಾಲಕಾರುಕನಮುಟ್ಟದ ಮೇಣದಪ್ರೋಲ್ಲ್ವರಾಜಿಕುಂ || ೩೭

ಮೃಗಧರಬಿಂಬಮೆಂಬ ಪೊಸಬೆಳ್ಳುಗಿಲುರ್ಪ್ಪರೆಯಲ್ಲಿ ಸೂಸೆ ಸೋ |
ಚಿಗಮೆನೆ ಚಂದ್ರಿಕಾಮೃತದ ಬಲ್ಲಿಯುಂ ಕಮಳಾಕರಾಬ್ಜಕು ||
ತ್ತಿಗಳದರಬ್ಜ ಬಿಂದುಗಳನಾಂತೊಳಗಾಗಳೆ ಮುಚ್ಚಿಕೊಂಡೊಡ |
ಲ್ಕೊಗೆದುರುಮೌಕ್ತಿಕಂಗಳನೆ ಕಂಗೊಳಿಸಿರ್ಪ್ಪವಮಂದಪತ್ರಿಗಳ್ || ೩೮

ಖರಕರಸಿದ್ಧನೆಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ |
ದುರುತಿಮಿರಾಭಿಭೂತಭುವನೋನ್ನತಲೋಹಕೆ ತನ್ನವಿದ್ಯೆಯುಂ ||
ಧರೆಗರಿಪಲ್ಕೆ ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ |
ಪಿರಿದದು ಚಿನ್ನಮಾದುವೆನೆ ಪೊಂಬಿಸಿಲೊಂದಿರೆ ಕಣ್ಗೆ ರಂಜಿಕುಂ || ೩೯

ವ || ಮತ್ತಮದಲ್ಲದೆಯುಮತಿವಿಶದಶಶಿಮಣಿಮಯಶಿವಗೃಹೋಪರಿಮಶಿಖರಾಗ್ರದೊಳ್ತೆತ್ತಿಸಿದಮುತ್ತುಗಳೆಂಬಂತೆ ಸಿಲುಂಬಿನಿಂದಹಿಮಕರಕರಪಾತಜನಿತ ಹಿಮಕಣೋತ್ಕರಮಂಪೊಸಜಿಸನದಿಂನಸೆಮಸಗೆಸುಸಿಲೆಸಗಿಬಳಲ್ದ ಬಾಯಾರಿ ಒಳಸಿ ನಿಂದು ಕದುರ್ಗಂಕುವತರುಣಪಾರಾವತಂಗಳರತೆಯುಂ ಬರಿಕ್ಕೈಪಂತೆ ತೊಡೆದು ಕಳೆದು ಗವಾಕ್ಷವಿವರದೊಳೊಳಪೊಕ್ಕು ಪೊಜ್ಜಪೊಸಪೊಂದಗಡನಮಚ್ಚಿರ್ದಂತೊಳವಳಯದ ಭಿತ್ತಿಯಂ ಸಮ್ಮಿರ್ಗ ಬೆಳಗಿಯುಂ | ಕಳೆಗುಂದಿದ ಕಳಾಧರನಂ ಕಂಡು ನಸುನಗುವಂತಲರ್ದಕೆಸಮ್ಮಲ್ಲಿಗೆಯ ಕಿತ್ತಿಸಳ ಕೇಸರದ ಕುಸುಂಕರೊಳ್ಮಸುಂಕಿ ಮುಸುಂಬನಿಟ್ಟು ಪಸಿವಡಂಗೆ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ನಿಂದಪೆಣ್ದುಂಬಿಗಳಂ ಪೊಂದುಂಬಿಗಳೆಂಬಂದಮನೊಂದೆನಿಮಿಚ್ಚಿರ್ಯುಂಕಂದರ್ಪಕಲಹಕ್ಕೆ ಕಟಾಕ್ಷಳ್ನಂಬೆತ್ತುಗಳಿಲಸಿವಿಚ್ಚಿರ್ ನಿಂದು ನಳಿನದಳಮೆಂಬಕಳದೊಳ್ರತಿಕಲಹಕ್ಕಳಿಕೆಕ್ಕೈಮಿರಿಪಳಂಚಿಕಂಡಂಗಿ ಕಾದಿ ಕಡುಗಲಿತನಂಮಿಕ್ಕಜಕ್ಕವಕ್ಕಿಗಳ್ಗೆ ಮಚ್ಚಿ ಪಚ್ಚಿಎಲ್ಲಂ ಪೂವಿಸಿದಪೊಂಬಟ್ಟೆಯೆಂಬ ಪಾಂಗನೊಡನಳುಕ್ಕಿರ್ಗೊಂಡೊಡಚ್ಚಿರ್ಯುಂಕಡುಬೆಳೆದು ತಳಿತ್ತಿರ್ ತರುಣತಮಾಲದೆಳದಳಿರನಳುದುರ್ದಿಸಿಕಸಿಕರಕೆಮಾಂದಳಿರೆಂಬಸಂದೆಗಮಂ ಮಾಡಿ ಕದುರ್ಂಕಿಸಿಯುಂ ತೋಡಿಲ್ಲದಫಲಿತರಸಾಳಮೂಲದಾಳವಾಲದೊಳಿರ್ಲೆಯಿಂ ರತಿಯುಮತಿಸುರಿದಕುಂಡಣದಕುಂಭದಕುಂಕುಮಾಂಬುವೆಂಬಶಂಕೆಯಂಘೋಂಕನೊಡಜ್ಜಿರ್ತೆಲೆದುರುಗಲ ಪೊದರ ಪೊರೆಯೊಳ್ಮೃಗರೆದಕಡುಗಲ್ತಲೆಯುನೆಪೆಸುಸುಳ್ದಿಪಿಡಿ ದೊರಸುತ್ತಲ್ಲಿ ಪರೆದು ಪಸರಿಸಿಯುಂ ಮಸುಪಕರಪೀರದ ಕಡುಗೊಪ್ಪಿರ್ದಜಿರಮುಗುಳ್ಗಳಂ ಮುಸುಕಿ ಮುತ್ತಿಮುಸುರಲೆಂದುಮುಂಕೊಂಡು ಘೋಂಕರಿಸುತ್ತೆ ದುರುದುಂಬಿತನದಿಂಬಂದಮರಿದುಂಬಿಗೆ ಚಂಪಕ ಕೋರಕ ಭ್ರಾಂತಿ

ಗೊಟ್ಟು|ತೊಟ್ಟನೆ ಮುಗುಳ್ಚಿಯುಂ|ನಿಧುವನ ನಿಕೇತನದ ವಾತಾಯನಂಗಳೊಳ್ನು
ಸುಳ್ದು ಸುಸಿಲ್ಗಡೆಯೊಳೊರಗಿರ್ದ್ದಸೊರ್ಕ್ಕುಂಜವ್ವನೆಯರ ಕರ್ಕಶಸ್ತನಮೆಂಬಮ
ದನಮದಗಜಕುಂಭಯುಗಳದಪಾರ್ಶ್ವದ್ವಯದೆ ತಳ್ತಿಳಿವಮದಕರ್ದಮದಂತೆ ಕಣ್ಗ
ವಂದಕಕ್ಷಭವಘರ್ಮಜಲಲವಲುಳಿತಮೃಗಮದಕರ್ದಮಮನಾವರಿಸಿ ಕಾಶ್ಮೀ
ರಕರ್ದಮಮೆನಿಸಿರಂಜಿಸಿಯುಂರಾಜಮಂದಿರದಮುಂದೆನಿಂದಗಂಧಸಿಂಧುರಂ ಗಳಂ
ಗಕ್ಕೆಸಂದಸಿಂದೂರಶ್ರೀಯನೋಲಗಿಸಿಯುಂ| ಬಜ್ಜ ಒರಿಯುಬಯಲೊಳ್ಮೊಕ್ಕಳಮೆ
ನೆ ತೆಕ್ಕನೆ ತೀವಿ ಕಡಲುಡಿಗೆಗೊಂಡಪೊಡವಿವೆಣ್ಗಂಬರಾಂಬುಜನೇತ್ರನಿತ್ತಪೀತಾಂ
ಬರಡಜಳಂಬಮೆಂಬಬೆಡಂಗನಮುಜ್ಜಿರ್ಯುಂ| ಪರಿವಪೆರ್ದೊರೆಗಳೊಳ್ಪರಿದುಪಸರಿ
ಸಿ ನಿಲುಂಬಿನೀರಾಟಮನಾಡಿ ಪೋದವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿ
ಸಿರ್ದರಜನೀರಜಂಗಳಿಂ ಕದಡೇಳ್ದು ಪರಿದಪುದೆಂಬ ಪಿರಿಯಸಿರಿಯನೊಳಗುಗೊಳಿಸಿ
ಜಂಬೂನದೀಭ್ರಾಂತಿಯಂ ರತ್ನಾಕರಂಗೊದವಿಸಿಯುಂ| ನಿದ್ರೆ ನೆಲೆಗೆಟ್ಟು ತೊಲಗೆ
ನಿಜಾಲಯದಿಂ| ಪೊರಮಟ್ಟು |ಮತ್ತವಾರಣದೊಳ್ನಿಂದು| ನಿರೀಕ್ಷಿಪಕಮಳದಳ
ಧವಳಲೋಚನೆಯರ| ಕಟಾಕ್ಷಛವಿಗಳೊಳ್ತೊಡರ್ದ್ದು| ತದ್ವದನವಿಧುಮಂಡಳ
ಪ್ರಸಾರಿತಚಂದ್ರಿಕೆಯೊಳ್ಮಲ್ಲಗಾಳೆಗಮನೊಡರ್ಚುವಂತೆ ಕಮನೀಯತೆಯನಾಲಿಂ
ಗಿಸಿಯುಮತಿಸಾಂದ್ರತೆಯನಪ್ಪುಕೈದೆಳನೇಸರಳಪಗಳೆದಕನಕರುಚಿರುಚಿರತರಕರ
ನಿಕರಂ ಪರಿರಂಜಿಸಿ ಪರ್ಬ್ಬಿಕಣ್ಗೊಪ್ಪುತ್ತುಮಿರ್ದ್ದುದಾಪ್ರಸ್ತಾವದೊಳ್

ವೃ|| ವಿಮಳಿನಚಂದ್ರಕಾಂತಿತನುತಂತುಗಳಂ ಮಿಗೆ ಸುಂಗಿ ಪಿಂಗದಾ |
ಕ್ರಮಿಪಪತಂಗದಿಂದಗಿದು ಪೊಕ್ಕ ಸಲಂದಿವೊಲೊಪ್ಪೆ ಲಾಂಛನಂ||
ಕಮಳಜಶಿಲ್ಪಿಕಲ್ಪಿತಜಗದ್ಗೃಹದಗ್ರದೊಳೊಪ್ಪಿದತ್ತು ಜಂ|
ದ್ರಮನದರೊಂದುಗೂಡೆನೆ ನಿರೀಕ್ಷಣೆಗೀಕ್ಷಿಪಭೂಜನೌಘದಾ || ೪೦

ವ|| ಅಗಳ್

ವೃ|| ನವಪಥನವ್ಯಭಕ್ತಿ ಮಿಗೆ ಶಂಭುಸಮರ್ಚನೆಗೈದು ದಿವ್ಯಶಾಂ|
ಭವಪರಮಂತ್ರಮಂ ಜಪಿಸಿ ತಾಳ್ದು ತದಂಘ್ರಿಪಯಃ ಪ್ರಸಾದಮಂ||
ಸವಿನಯಮಾಂತಲಂಕರಣಸಂಕುಳಮಂ ವರವಂದಿಮಾಗಧ |
ಸ್ತವರವಮುಣ್ಮೆ ಬಂದನೆಸೆವೋಲಗಶಾಲೆಗಿಳಾಧಿನಾಯಕಂ|| ೪೧

ವ|| ಅಂತೆೞ್ತಂದು ಮಣಿಗಣಾಗಣಿತರುಚಿನಿಚಯನಿಚಿತಸಮುತ್ತುಂಗ ಮಂಗಳಮೃಗೇಂದ್ರವಿಷ್ಟರೋಪವಿಷ್ಟನಾಗಿ ಸಲ್ಲೀಲೆಯಿಂ ಮೆಲ್ಲನೆ ಕುಳ್ಳಿರ್ದ್ದು

ಕಂ|| ಉದಯಾಚಳಾಗ್ರದೊಳ್ಮೂ |
ಡಿದಪೂರ್ಣ್ಣಸುಧಾಕರಂಗೆ ದೊರೆಯಾದಂ ತಾ ||
ಳ್ದಿದಮಣಿದೊಡವಿನ ಕೆಂಬೆಳ |
ಗೊಡವಿಂ ರಾಜಂ ಸಭಾನಭಸ್ಥಳದೆಡೆಯೊಳ್ || ೪೨

ವೃ|| ನೆರೆದೆೞ್ತಂದಿರ್ದ್ದರಾಸ್ಥಾನದೊಳಮಮಮಹಾಮಾತ್ಯಸಂದೋಹಮುರ್ವ್ವೀ|
ಶ್ವರವೃಂದಂ ಸತ್ಕವೀಂದ್ರಪ್ರತತಿ ವಿಬುಧಸಂತಾನಮುದ್ಗಾಯಕಪ್ರೋ ||
ತ್ಕರಮುದ್ಯದ್ವಾವದೂಕಾವಳಿ ಭರತಕಳಾವಿತ್ಕುಳಂ ವೇದವಿದ್ರಾ|
ಜಿ ರಸಜ್ಞಶ್ರೇಣಿ ವಂದಿವ್ರಜಮತಸುಕಳಾಕಾಂತಕಾಂತಾಕದಂಬಂ || ೪೩

ಸುಲಲಿತದೋರ್ಲ್ಲತಾಕುಸುಮಮಂಜರಿಯಂತಿರೆ ಚಾಮರಂಸಮು |
ಜ್ಜ್ವಳಮುಖಚಂದ್ರಚಂದ್ರಿಕೆಯಿದೆಂಬಿನಮುಣ್ಮಿರೆ ಲೋಚನಾಂಶು ಮಂ ||
ಜುಲತರಮಂದಗಂಧವಹನಂತಿರೆ ಸುಯ್ಯೆಲರುರ್ವ್ವಿನಿಂದು ಕೋ |
ಮಲೆಯರೊಡರ್ಚ್ಚಿದರ್ಸ್ಸಿರಿಯುಮೈಸಿರಿಯುಂ ನವಚೈತ್ರರಾಜನಾ || ೪೪

ಮುರಿಪೆಳಮೀಸೆ ನೀಳ್ದನಗೆಗಣ್ಪೊಗರಾಂತಮೊಗಂ ಪೊದಳ್ದಪೇ |
ರುರಮುರುಬಾಹು ಭಾಸುರಕಿರೀಟಮುದಗ್ರಸುವರ್ಣ್ಣಭೂಷಣಂ ||
ಕರದ ಶಿತಾಸಿ ಕತ್ತುರಿಯಬೊಟ್ಟೆಡಗಾಲತೊಡರ್ಪ್ಪುರಾಜಿಸು |
ತ್ತಿರೆ ಪೊಸದೇಸಿವೆತ್ತೆಸೆದುದಲ್ಲಿ ನರೇಂದ್ರಕುಮಾರಸಂಕುಳಂ || ೪೫

ಕಂ|| ಅಹಮಹಮಿಕಾಭಿನತನುತ |
ಮಹೀಶ್ವರಸ್ವರ್ಣ್ಣಮಕುಟಘರ್ಷಣನಿಪತ ||
ದ್ಬಹುಕನಕರಜೋಗಣಮು |
ದ್ವಹಿಸಿದುದು ತದಂಘ್ರಿಪದ್ಮರೇಣುಸ್ಥಿತಿಯಂ || ೪೬

ವೃ|| ನಸುನೋಟಂ ಪೊಸಜೇಟಮಂ ಯುವ ನೃಪಾಲಸ್ವಾಂತದೊಳ್ಪೊಕ್ಕುಪು |
ಟ್ಟಿಸೆ ಮಂದಸ್ಮಿತಚಂದ್ರಸಾಂದ್ರರುಚಿ ತನ್ನೇತ್ರೋತ್ಪಳಕ್ಕಿಂಪನು ||
ರ್ಬ್ಬಿಸೆ ಜಾಣ್ಮಾತುಧನುರ್ಗ್ಗುಣಕ್ವಣಿತಮಂ ಪುಷ್ಪಾಸ್ತ್ರಸಿಂಜಾಗಳಾ |
ಗಿಸೆ ಪಣ್ಯಾಜನಮಿರ್ದ್ದುದೋಲಗದೊಳುರ್ವ್ವೀಕಾಮಿನೀಕಾಂತನಾ || ೪೭

ತೋಳಪೊಗರ್ಮನೋಭವನ ಬಾಳಪೊಗರ್ನಯನಾಂಚಳಪ್ರಭಾ |
ಜಾಳಮನಂಗಜಾಳಮಮಳಸ್ಮಿತಸಾರಮರೀಚಿ ಮಾರರು ||
ಜ್ಮಾಳಿಮರೀಚಿ ಮಂಜುಮಣಿಭೂಷಣತೇಜಮೆ ದರ್ಪಕಕ್ಷಿತೀ |
ಪಾಳಕತೇಜಮೆಂಬಿನ ಮದೇನೆಸೆದಿರ್ದುದೊತದ್ವಧೂಜನಂ || ೪೮

ವ|| ಮತ್ತಂ

ವೃ|| ತೊಳಗುವತೊಂಡೆವಾಯ್ದೆರೆಯ ನೀಳ್ದಲರ್ಗಂಗಳ ತೆಳ್ಗದಂಪಿನಿ |
ಟ್ಟಳಮೆಡೆಗೊಂಡಪೆರ್ಮೊಲೆಯ ಪೊಂಜಳೆಮೆಯ್ಯ ಪೊಗರ್ಪ್ಪೊದಳ್ಪತೋ ||
ಳ್ಗಳ ಕಡುಬಿಣ್ಪನಾಳ್ದಪೊರವಾರ್ಗಳ ತೆಳ್ವಸಿರಜ್ಜಜೌವನಂ |
ದಳೆದಬೆಡಂಗುವೆಣ್ಗಳೊಸೆದೊಪ್ಪಿದರೋಲಗದೊಳ್ನರೇಂದ್ರನಾ || ೪೯

ಒರೆದುರುಂಬು ತುಂಬುವೆರೆಯಂದದಪುದ್ದುವೊಗಂ ಪೊದಳ್ದಕ |
ಲ್ಹಾರದಜೊಲ್ಲೆಯಂ ತೊಳಪಮೂಕುತಿ ಕತ್ತುರಿಬೊಟ್ಟು ಮುತ್ತಿನೊ ||
ಳ್ಳಾರಮುರೋಜಮಂಡಳದಮಾಣಿಕದೈಸರಮುಣ್ಪುಗೈದಕಾ |
ಶ್ಮೀರವಲಂಪನೀಯೆ ಮೆರೆದಿರ್ದುದು ಮುಗ್ಧವಧೂಕದಂಬಕಂ || ೫೦

ಮಲ್ಲಿಗೆ ಮಾಮರಂ ಮಧುಮಧುವ್ರತಮೌರ್ವಿಮನೋಜ್ಞಮಾದರ |
ಲ್ಪಿಲ್ಲಲರಂಬು ತೆಂಬೆಲರರಲ್ದಸವಾಂಬುಜಮಂಜೆ ಕೊಂಜೆ ಕಂ |
ಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪಿಪರಂಗದಪಂಗದೇಕೆಸು |
ತ್ತಲ್ಲಿ ಜಗಜ್ಜಯಾರ್ಥಮವರಂ ಮನಂಗಜನೊಲ್ದು ಸೇವಿಪಂ || ೫೧

ಹಾರಮಯೂಖನಿರ್ಝರಪಯೋಧರಕೇಶಿನಗೇಂದ್ರಯೌವನೋ |
ದ್ಧಾರವನಸ್ಥನಾಭಿಸರದೊಳ್ರತಿಗಂಗಜನೊತ್ತಲೆಂದು ಕ ||
ಯ್ಯಾರೆ ಕಡಂಗಿ ಸಾಜ್ಜಿದುರುಸೀಲಮಯೋದಕಮಂತ್ರದಂಡದಿಂ |
ತಾರಮಣೀಜನಪ್ರಜದ ಬಾಸೆಮದೇಂ ಕಡುಚೆಲ್ವನಾಳ್ದುದೋ || ೫೨

ಪಾಡದರಾಗವೋದದಿಸಿಗಬ್ಬದೊಡಜ್ಜದಸಂಗಿರಂ ದೇ |
ವರ್ಮಡಗಲ್ಪರಾಸನಸುಳಾಂಬುನಸಾನದಶ್ರೆ ಬಾಣ್ಮಯಂ ||
ದಾಡದನಾತು ಮಜ್ಜದಲಕ್ಷ್ಮಿ ಮನ್ನಿಸದೊಳ್ಪ ನೋಳ್ಪರೊ |
ಕ್ಕೂಡದಬೇಟಮಾಕೆಯುದೋಕಲ್ಲಿ ಕಸಜ್ಜರದೇಂ ಕೃತಾರ್ಥರೋ || ೫೩

ಕಂ|| ಅತನುತ್ವಂ ಜಘನದೊಳು |
ನ್ನತಕುಚದೊಳನಲ್ಪದರ್ಪಕತ್ವಂ ಮಧುಮಿ ||
ತ್ರತೆ ವಚನದೊಳಿರೆ ಕಾಂತಾ |
ತತಿ ಪಡೆಯದೆ ಕಾಮಿಸೀಸಮಾಖ್ಯೆಯನಿಳೆಯೊಳ್ || ೫೪

ವ|| ಎನಿಸಿ ರಂಜಿಸಿ

ವೃ|| ಎಮೆದುರುಗಲ್ಕವಲ್ತುಕುಡಿಗೊಂಡವೊಲಾಗಿರೆ ಸೋಗೆ ಸೋಗೆಯಂ |
ತೆಮರ್ವೊಲೊಪ್ಪೆ ಸೋರ್ಮುಡಿ ಸಮಸ್ತನಮಸ್ತನಗೇಂದ್ರದಂತಿ ಜೆ ||
ಲ್ವಮರೆ ನಖಾಂಕಚಂದ್ರಕಳೆಯಿಂಕಳೆಯಂ ತಳೆದಾನನಾಬ್ಜಮ |
ಬ್ಜಮನಿಳಿಕ್ಕೆಯೆ ಕಂಗೆಸೆದುದಗ್ಗದಪೂರ್ವವಿಳಾಸಿನೀಜನಂ || ೫೫

ಅಳಿಕುಳಮಂ ಪ್ರಸೂನವಿಳಸತ್ಕಬರೀಭರಮುನ್ಮರಾಳಮಂ |
ಡಳಿಯನುದಾತ್ತಮಂದಗತಿ ಗಂಧಸಮೀರಣನಂ ಸಗಂಧಮುಂ |
ದಿಳಿವೆಳೆಸುಯ್ಸಮಂತು ಸೆರೆಗೆಯ್ಯದೆ ತಾಂ ಸೆರೆಗೈದುಸೇ ನಿಜೋ |
ಜ್ಜ್ವಳರುಚಿರೂಪಮೊಂನೆ ಯುವನೇತ್ರಮನಾಯುವತಿಪ್ರತಾನದಾ || ೫೬

ವ|| ಮತ್ತಮಿಂತು ನಿರತಿಶಯಸೌಂದರ್ಯಮಾಧುರ್ಯಲಾವಣ್ಯನೈಪುಣ್ಯ ಸಾರಸರ್ವಸ್ವಮಂಗಂಬಡೆದೇಳ್ತಂದಂತಿರ್ದೈತಂದುನಿಂದನಿತಂಬಿನೀಜನದ ಮಿರುಪಪೆ ರೆನೊಸಲೊಳ್ಸಸಿಲ್ಗಡೆಯೊಳ್ಪಸರಿಸಿ ಪರೆದಸುಳಿಗುರುಳ್ಗಳಂ ತಳವಿನಿಯಸನುಗೊಳಿಸಿ ಸೇರ್ಪಡಿಸಿ ಕೂರುಗುರಿಂತಿದ್ದಿ ಕೊನ್ಮೆಯಿಂದಿಟ್ಟಕತ್ತುರಿಯಬಟ್ಟಬೊಟ್ಟ ರಮಣಕರಗ್ರಹಣಪೀಡನದಿಂ ಜಡೆವಾವುಗುಳ್ದಗರಳರಸಕಲಿಕೆಯೆನೆ ಕಂಗೊಳಿಸೆ ಯುಂ, ಸರಸತರಸುರತಸಮಯದೊಳಮರ್ದಪ್ಪಿ ಮನೋರಮಣಂ ನೊಸೆವಲ್ಲಕೊ ನೆಯಿಂ ಕರ್ದುಂಕಲೊಡಸೊಸರ್ದಧರದಳದಮೃತರಸಂ ಪಸರಿಸಿದ್ದುದೆನಿಸಿ ದಶನವ ಸನಕ್ಷತಿಸಲ್ಲಯದೊಳ್ಳಸರಸಂ ಮಿಸುಗೆಯುಂ, ಸಮದಮದನಗಜಕುಂಭಸ್ವರೂಪವಾದ ವದನಕಮಳದೊಳ್ಸಿರಿ ನೆಲೆಗೊಂಡಳೆಂಬನಣ್ಪಿಂ ಬಂದು ಕೇಳಿಯಿಂ ಕೆಳೆಗೊಳಲೆಳಸಿ ಕಿಲಂಪಿಡಿದುಸಿಂದಚಂದ್ರಬಿಂಬಮೆಂಬಬಗೆಗಡಪ್ಪರ್ಗಿ ಥಳಥಳಿಸಿಪೊಳೆವಮೌಕ್ತಿಕ ಮಣಿಖಚಿತಕರ್ಣಪತ್ರಂ ನೇತ್ರಶೋಭಾವಹಮಾಗೆಯುಂ, ದರ್ಪಣದೊಳಾಗಸದ

ನೆಳಲ್ವೊಳೆವಂತೆ ಕಪೋಲದರ್ಪಣದೊಳ್ನೋಳ್ಪಮೆಯ್ಯಿಲ್ಲದಮದನನ ಪಡಿನೆಳಲ್ತೋ
ರ್ಪುದೆನೆ ಮೃಗಮದರಸರಚಿತಮಕರಿಕಾಪತ್ರಮತಿವಿಚಿತ್ರಮನೊದವೆಯುಂ,
ದಾಂಗುಡಿವಿಡುವಪಾಂಗರುಚಿಲತೆ ಮುಗುಳಂಪಡೆದಂತೆ ಕೊನೆಗೊಡಂಕೆಯೊಳ್ಪೊ
ಳೆವಜಾವುಲಿಯಬಟ್ಟಮುತ್ತು ಬಗೆಗೊಳಿಸೆಯುಂ, ಸಿಡುಜಡೆಯೆಂಬಕಾಳಾಹಿಗಳ್ಕಿ
ನೆಲೆನೂಲೆವೆಟ್ಟಿನೆಡೆವೊಕ್ಕಡಂಗಿದಸಖಕ್ಷತೇಂದುಕಳೆಯನಾರಯಲ್ಬಂದು ಪೆಳ
ರ್ದ್ದು ತಳರದೆ ಕಾದು ಬಳಸಿ ನಿಂದನಕ್ಷತ್ರಮಾಲೆಯೆಂಬಂತೆ ನಕ್ಷತ್ರಮಾಲೆ ಮನೋ
ಜ್ಞತೆಯನಾಲಿಂಗಿಸೆಯುಂ, ಮದನಮದಗಜದ ಮದರಸಂ ಪತ್ತಿದಶುಂಡಾದಂಡಾ
ಗ್ರಮನದರ ಕಂಪಿಂಗೆಳಸಿ ಬಳಸಿದಳಿಮಾಲೆಯ ಲೀಲೆಯಂ ತಳೆದು ನಳಿತೋಳ ತುದಿ
ಗೊಂಡಮುದ್ದುನಿಂದಹರಿನೀಲಮಣಿವಲಯಂ ತೊಳಗೆಯುಂ, ವೃತ್ತಂಬೆತ್ತು
ಕೊರ್ವ್ವಿಬಳೆದಸಿತಂಬಬಿಂಬಮೆಂಬಶಂಬರಾರಿಕುಂಭಿಕುಂಭಕ್ಕೆ ಬಸಂತನೊಸಗೆಮಿಗೆ
ಸುತ್ತಿದಕನಕಚಂಪಕದಾಮದಂತೆ ಕನಕಕಾಂಚೀದಾಮಮಭಿರಾಮತೆಯನೊಳ
ಕೈದು ತೆರಂಬೊಳೆಯೆಯುಂ, ಮಿಸುಪಮಿಸುನಿವೆಸದಪೊಸತೊಡವುಗಳ ಪೊಂಬೆಳೆ
ಗೆಂಬಬಿಸುವಿಸಿಲ್ಮಸುಂಕೆ ನುಣ್ದೊಡೆಗಳೆಂಬಪೊಂಬಾಳೆಗಂಬಂಗಳ್ಕಂದಿದಪುವೆಂದು
ಕಂದರ್ಪಂ ಬೆಳ್ದಿಂಗಳಿಂ ಬಾಸಣಿಸಿದಂತೆ ನಿರಿವಿಡಿದುಟ್ಟಧವಳಾಂಬರಮಿಂಬುವ
ಡೆಯೆಯುಂ, ತರುಣರವಿಕಿರಣದಿಂ ಪೊಂಬಣ್ಣಮೇರಿ ಸುಸಿಲಬಿಸರುಹದ ನಾಳಮಂ
ಬಳಸಿ ನಿಂದು ಜಿನುಂಗುವೆಳದುಂಬಿಗಳ ಮಾಲೆಯಂ ಪೋಲ್ತು ಪದಾಗ್ರದೊಳಂ
ದಂಬಡೆದು ಸಲ್ಲೀಲೆಯಿಂ ಮೆಲ್ಲುಲಿಗುಡುವಮಿಸುನಿಯಂದುಗೆ ರಂಜಿಸೆಯುಮಿಂತ
ತಿಶಯತದೀಯಕಮನೀಯಶೃಂಗಾರಸಾರಸಹಜಸೌಂದರ್ಯಸೌಕುಮಾರ್ಯಮಾ
ಧುರ್ಯಸಿಧಿವಿದಿತಕೋಶಾಗಾರದಂತೆ ರಾಜೇಂದ್ರನೊಡ್ಡೋಲಗಮಾಲೋಕನಾ
ಲೋಕನಕ್ಕೆಕೌತುಕಾವಹಮೆನಿಸಿ ಪರಿರಂಜಿಸಿದುದಂತುಮಲ್ಲದೆಯುಂ

ವೃ|| ಮಣಿಗಣದಂತೆ ಮೌಳಿಮಣಿಸಂಕುಳವೊಪ್ಪಿರೆ ಪೊಕ್ಕಗವ್ರಜ |
ಕ್ಕೆಣೆವರೆ ಭೂಭುಜವ್ರಜಮೆ ನೀರಮಪಾಗಿರೆ ಹಾರರೋಚಿ ಸಂ ||
ದಣಿಸಿರೆ ಚಾರುಚಾಮರಮರಾಳಕುಳಂ ಘನಪಾದ್ಯಮಪ್ಪಿಘೋ |
ಷಣಮೆನೆ ರಾಜರಾಜಪರಿವರ್ಧಿತಮಾಸಭೆ ವಾರ್ಧಿಯಂತೆವೋಲ್ || ೨೮

ವಿತತಸದಾನವಾರಿವಿಭವಂ ಪ್ರಮದಾಳಿಮನೋಜ್ಞವರ್ಣಸಂ |
ಗತಹರಿಧಾಮಮುಜ್ಜ್ವಳಕರಾಂಚಿತಪುಷ್ಕರಕಾಂತಮುದ್ರಸಾ ||
ಶ್ರಿತಘನವಿಗ್ರಹಾಂಚಿತಮುದಾತ್ತಬಲಸ್ಥಿತಿ ಪೋಲ್ದುದಿಂದಿರಾ |
ಪತಿಪುರಮಂ ಮಹೇಂದ್ರಪುರಮಂ ಗಜಮಂ ಸಭೆ ತನ್ಮಹೀಶನಾ || ೫೮

ವ|| ಅಂತೊಪ್ಪುವವಿತತಮಹಾಸ್ಥಾನದಲ್ಲಿ

ಕಂ|| ಮದನಧರಾಧೀಶನ ಪ |
ಕ್ಕದೊಳೊಪ್ಪುವ ಚೈತ್ರನಂತೆ ಶೃಂಗಾರರಸಾ ||
ಸ್ಪದಯುವರಾಜನ ಕೆಲದೊ |
ಳ್ಪದೆದೊಪ್ಪಿದನತುಳಗುಣಯುತಂ ವಿತವಚನಂ || ೫೬

ವ|| ಆಪ್ರಸ್ತಾವದೊಳ್

ಕಂ|| ತುಂಗಮೃದಂಗದುಪಾಂಗದ |
ಜೆಂಗಿನ ದಂಡಿಗೆಯ ತಾಳದಾವುಜದ ಲಸ ||
ತ್ಸಂಗೀತದ ವಾಸದ ನಿನ |
ದಂಗಳ್ಬೆರೆದಳುರ್ದು* ಸವಿಯನೇಂ ಸೂಸಿದುವೋ || ೬೦

ಅಲರ್*ಕ್ಕಿಗಳುಲಿಯಂ ರತಿ |
ಕಲಹದ ಕಾದಲೆಯ ಪೈನ್ಯರಸರವಮಂ ಮಂ ||
ಜುಳಕಳಮರಾಳರಾವಮ |
ನಲೆದುದು ಸಂಗೀತನಿನದಮದುಮಧುರತೆಯಿಂ || ೬೧

ವ|| ಆಗಳೊರ್ವ್ವಳಭಿನವರಂಭೆಯೆಂಬ ಚತುರನರ್ತಕಿ

ವೃ|| ತೊಳಪೆಳಮುತ್ತುತೆತ್ತಿಸಿದ ಬಳ್ಳೊಲೆಕಟ್ಟು ನಿತಂಬಬಿಂಬಮಂ|
ಜುಳಮಣಿಕಾಂಚಿ ಪೊನ್ನಪೊಸಕಾಸೆ ಸುವರ್ಣದಗುಜ್ಜುಗೆಜ್ಜೆ ಪ ||
ಜ್ಜಳಿಸುವರನ್ನವಜ್ಜಮಳಿಕಾಗ್ರದ ಕತ್ತುರಿಬೊಟ್ಟು ಕಾಂತಿಮಂ |
ಡಳಿಸುವವಜ್ರದೋಲೆ ತನಗೊಪ್ಪಿರೆ ಬಂದಳದೊಂದುಲೀಲೆಯಿಂ || ೬೨

ವ|| ಅಂತೈತಂದು ತತ್ಸಭಾಜಳಧಿಮಧ್ಯದೊಳೊಗೆದ ಕನಕಪಂಕಜಪರಾಗಪರಿಮಿಳಿತಮಾದನುಣ್ದೆರೆಯೆನೆ ಮಿಸುಪಪೊಂದೆರೆಯ ಮರೆಯೊಳ್ಸಿರಿಯನೊಳಕೈದಂದಂಬಡೆದು ನಿಂದಿರ್ಪುದುಮನಂತರಮರಸನಿದಿರ್ಗೆವಂದು ಸೂತ್ರಧಾರಕಂಮೆಯ್ಯಿಕ್ಕಿಕಯ್ಯಂ ಮುಗಿದು

ಕಂ|| ಭರತಾದಿವಿವಿಧವಿದ್ಯಾ |
ಪರಿಣತಜನವನವಸಂತ ವಿತರಣಜಿತನಿ ||
ರ್ಜರಭೂಜ ರಾಜಶೇಖರ |
ಧರಣೀಶ ನಿರೀಕ್ಷಿಸೆಂಬಸಮನಂತರದೊಳ್ || ೬೩

ತೆರೆ ತೊಲಗೆ ಮೆಯ್ವೆಳಗು ಮಾ |
ರ್ದ್ದೆರೆಯುಂ ಸರಿದಂತೆ ಪೊಳೆಯೆ ಕೆದರ್ದ*ಳ್ವೊಳೆದಿರೊ ||
ಪ್ಪಿರೆ ಮಿಂಚಿ ಮಿಂಚು ಕರಕೋ |
ತ್ಕರಮಂ ಕೆದರ್ವ*ಂತೆ ಕಾಂತೆ ಕುಸುಮಾಂಜಲಿಯಂ || ೬೪

ವೃ|| ತೊಳಗುವತೋಳ ಡಾಳಮಿರೆ ಮೈಸಿರಿಗೈಸಿರಿಯಾಗಿ ಸೊಂಪು ನು |
ಣ್ಪಾಳವಡೆ ದೇಸಿವಾಸಿ ಮಿಗೆ ಕೊಂಕದ ಬಿಂಕದ ಜಾಣ್ಮೆ ಪೊಣ್ಮೆ ಸಂ ||
ಗಳಿಸಿರೆ ತಾಳಮೇಳದರವಂ ಜವದಿಂ ಜತಿದಪ್ಪದೊಪ್ಪಮಂ |
ಗಳಿಲನೆ ತೋರಿ ಮಾರಿ ಮೆರೆದಳ್ನವನರ್ತಕಿ ನೃತ್ಯಲೀಲೆಯಂ || ೬೫

ಕಂ|| ನೊಸಲೆಂಬ ಪೆರೆಯನಾಲಿಂ |
ಗಿಸಿ ರಂಜಿಸತಾರೆ ಪುರ್ಬ್ಬುವಳ್ಳಿಯ ಮುಗುಳಂ ||
ಬೆಸಕಮನಮರ್ಚ್ಚಿ ಮೆರೆದುದು |
ಪೊಸ ಮುತ್ತಿನ ಬೊಟ್ಟು ನಾಟ್ಯವಿದ್ಯಾಧರಿಯಾ || ೬೬

ಜಳಕಣಮಳುರ್ದಂಬುಜಕು |
ಟ್ಮಳಮುಡುತತಿ ಬಳಸಿದಮರಗಿರಿಯೆಂಬಿರವಂ ||
ತಳೆದೆಳಮುತ್ತಿನಮೊಲೆಕ |
ಟ್ಪಳವಟ್ಟಿರೆ ಬಟ್ಟಮೊಲೆಯದೆಸೆದುದು ನಟಿಯಾ || ೬೭

ಅವಳ ಜಘನಾದ್ರಿತಟದೊಳ್ |
ಯುವದೃಙ್ಮೃಗಜಾಲಕತನುಜಾಲಕಸೊಸೆದೊ ||
ಪ್ಪುವಘಂಟಾಜಾಲಮನಿ |
ಟ್ಟವೊಲೆಸೆದುದು ಕಾಂಚಿ ಘಂಟಿಕಾರವಮಿಳಿತಂ || ೧೮

ತಳಿರ್ವಟ್ಟೆಯ ಪೊಸಜಲ್ಲಣ |
ಮಳವಟ್ಟನಿತಂಬಬಿಂಬಮರುಣೋಪಳಮುಂ ||
ಜುಳಗಿರಿಗೆ ಸರಿಗೆವರುತುಂ |
ತಳೆದುದು ಸಿಂದೂರಲಿಪ್ತಕರಿಶಿರದಿರವಂ || ೧೯

ಪೊಸಮಿಸುನಿವೆಸದ ತೊಡೆಗು |
ಪ್ಪಸಮೆಸೆದುದು ಪೊಣರಲೆಂದು ಪೊಂಬಾಳೆಯೊಳಂ ||
ದಸಿಯಳ ನುಣ್ದೊಡೆ ತಾಳ್ದವೊ |
ಲಸದೃಶರುಚಿಕನಕಕವಚಮಂ ಕಡುಪಿಂದಂ || ೨೦

ವೃ|| ರತಿದೇವೀಕುಚಕುಂಭಕುಂಕುಮಕರಂ ಕಾಮಂ ಕರಂ ನೀವೆ ತ |
ದ್ಗತ ರಾಗಂಬೊರೆದಲ್ಲಿ ತುಂಬಿವೆದೆ ಪೊಂಬಣ್ಣಕ್ಕೆ ಪಕ್ಕಾಗುತ್ತೈ ||
ದಿ ತದೀಯಾಂಘ್ರಿಸರೋಜಮಂ ಬಳಸಿ ನಿಂದತ್ತೆಂಬವೋಲ್ಕಣ್ಗೆರಂ |
ಜಿತಮಾಗಿರ್ದ್ದುದು ಕಾನಕಂ ಕಳನಿನಾದಂ ಕಿಂಕಿಣೀಸಂಕುಳಂ || ೨೧

ಕ್ಷಣರುಕ್ಕಾಂಚಿರವಂ ಝುಣಂಝುಣರಣತ್ಸ್ವರ್ಣಸ್ಫುರತ್ಕಿಂಕಿಣೀ |
ರಣಿತಂ ಕೂಡಿ ಬೆಡಂಗುವೀರೆ ಮೃದುಪಾದನ್ಯಾಸಮಿಂಬಾಗೆ ಕಂ ||
ಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ ನೇತ್ರಾಂತವೀ |
ಕ್ಷಣದಂದಂ ಪೊಸತಾಗೆ ನೀರೆ ಮೆರೆದಳ್ಲೀಲಾಲಸಲ್ಲಾಸ್ಯಮಂ || ೨೨

ಕಂ|| ವಿತತಾಂಗಿಕಮಾಹಾರ್ಯ್ಯಕ |
ಮತಿಶಯಸಾತ್ವಿಕಮುಮುರ್ದವಾಚಿಕಮೆನಿಪೀ ||
ಚತುರಭಿನಯಮುಮಂ ಚತುರ |
ಸ್ಥಿತಿಯಿಂ ಸೆರೆಗೊರಿ ಬೀರಿದಳ್ನರ್ತನಮಂ || ೨೩

ದಳಿತತರುಣಾಂಬುರುಹಮು |
ಜ್ಜ್ವಳಿತತರಂಗಪ್ರಪಾತದಿಂ ಜಲಿಯಿಪಪಾಂ |
ಗಳವಡೆ ಲಾವಣ್ಯರಸಾ |
ವಿಳಮಾಂದೋಳಿತದಿಸೆಸೆದುದಾಸ್ಯಂ ನಟಿಯಾ || ೭೪

ಮುಗುಳ್ವ*ಲರ್ವ ನಗುವ ಚಲ್ಲಮ |
ನುಗುವ ಮರಲ್ದೊಗೆವ ಬಳಸುವಲಸುಪಲಂಪಂ ||
ತೆಗೆವ ಪೊಳೆವಗಿವ ಮಿಗೆ ಬೆಂ |
ಡೊಗೆವಲಸದ್ದೃಷ್ಟಿ ಮೆರೆದುದಾನರ್ತಕಿಯಾ || ೭೫

ತಿಳಿವೆಳ್ದಿಂಗಳ ಬೆಳಗಂ |
ತಳೆದೆಳಮಿಂಚೆಳಸಿ ನಳಿನದಳದೊಳ್ತೊಳೆದು ||
ಜ್ಜ್ವಳಿಸಿದಪುದೆಂಬ ಬಿಂಕಮ |
ನೊಳಕೊಂಡಲಗರ್ಣ್ಣ ಬೆಳಗದೇಂ ಪಸರಿಸಿತೋ || ೭೬

ಸಮನೆನಿಸಿ ನಿಮಿ*ರ್ವ ಕುಂಚಿತ |
ಮಮರ್ವ ಪಳಂಚುವ ಸಮಂಚಿತ ಭ್ರೂಲತೆ ತ ||
ಳ್ತಿಮೆದುರುಗಲ ನೆಳಲೊಳ್ಮುಖ |
ಕಮಳಮಯೂಖಾಂಬುವೀಚಿ ಚಲಿಪನ್ತೊಲೆಸೆಗುಂ || ೭೭

ಚಳದಮಳವಜ್ರಮಣಿಕುಂ |
ಡಳಮಂಡಳಕಾಂತಿ ಕಾಂತಗಂಡಸ್ಥಳಮಂ ||
ಜುಳಮಣಿಮುಕುರದ್ಯುತಿಯೊ |
ಳ್ಪಳಂಚಿ ಥಳಥಳಿಸಿ ಪೊಳೆದು ನರ್ತಿಸಿತಾಗಳ್ || ೭೮

ಇದುಚಿತ್ರಂ ಚಂಪಕಮುಕು |
ಲದೊಳೊಗೆದೊಲೆದಪುದು ಕುಜಮಿದೆನೆ ತನ್ನಾಸಾ ||
ಗ್ರದ ಮುತ್ತಿನಮಣಿ ರದನ |
ಚ್ಛದದೀಧಿತಿ ಪುದಿಯೆ ಕೆಂಪನಾಳ್ದೊಲೆದೆಸೆಗುಂ || ೭೯

ಅಮರ್ದಿನೊಳಳ್ದಿದಬಿಂಬಮು |
ನಮೃತಾಬ್ಧಿಯೊಳೊಗೆದಪವಳಮುಂ ಪಳಿದಿಸೆದ ||
ತ್ತ್ರಮುಳತರರದನರುಚಿಸಂ |
ಕ್ರಮುಧವಳಿಮಮಧರವಿದ್ರುಮುಂ ನರ್ತಕಿಯಾ || ೮೦

ಸ್ಮರನರುಣತರುಣಪಲ್ಲವ |
ಶರಮನಸಂಖ್ಯಾತಮುಕ್ಕೆನುತ್ತಿಸೆ ಪಾಯ್ದು ||
ಪ್ಪರಿಸಿ ಬಹುಮುಖದಿ ಪರಿದೊ |
ತ್ತ್ರರಿಸುವಪರಿಯೆನಿಸಿತವಳಕರತಳಚಳನಂ || ೮೧

ಎನಗೆ ಪಗೆಯಾದಚಂದ್ರನ |
ನನಿಶಂ ಕೆಳೆಗೊಂಡುದೆಂದು ಕರ್ಣೋತ್ಪಲಮುಂ ||
ಮುನಿದಲೆವವನರುಹಮನಂ |
ದನುಕರಿಸಿದುದರರೆ ಕರಿಕರಂ ನರ್ತಕಿಯಾ || ೮೨

ತರುಣಾಸಿತಾಹಿ ಸಂಗೀ |
ತರವಂಗೇಳ್ದೆಳಸಿ ನಾಭಿವಲ್ಮೀಕದಿನೆ ||
ಳ್ದಿರದೊಲೆದೊಲ್ದಾಡುವುದೆನೆ |
ಕರಮೆಸೆದುದು ಬಾಸೆ ವಿಚಳಿತಂ ನಚ್ಚಣಿಯಾ || ೮೩

ಅವಳವಯುವನವಲಾವ |
ಣ್ಯವನೇಜಾಕರದೊಳಾಳ್ದ ಮದನದ್ವಿಪದೊ ||
ಪ್ಪುವಚಳಕುಂಭಸ್ಥಳಮೆಂ |
ಬವ್ರೊಲೆಸೆದುದು ಲಾಸ್ಯಕಂಪಿತಂ ಘನಜಘನಂ || ೮೪

ತೊಡೆ ರಂಭಾಮದಮಂ ಮಿಗೆ |
ತೊಡೆದುದು ಸುಣ್ಪಿಂದಮೆಂಬಪುರುಡಿಂದಡಿ ತಾ ||
ನಡಿಮಾಡಿದುದುರುರಂಭಾ |
ವಿಡಂಬಮುಂ ವಿತತನೃತ್ಯದೊಳ್ನರ್ತಕಿಯಾ || ೮೫

ಮಂದರಗಿರಿ ತಿರ್ರನೆ ತಿರು |
ಪಂದೊಡನೊಗೆದಂಬುಧಿಯೊಳೆ ತಿರುಗುವಸಿರಿಯೊಂ ||
ದಂದವನಭಿನಯಿಸುವಳಿವ |
ಳೆಂದೆನೆ ಕಾಣಿಸಿದಳದ್ಭುತಭ್ರಮರಿಗಳಿಂ ||

ಒಸೆದಷ್ಟರಸಮನಿದು ನವ |
ರಸಮೆನಿಸಿಪೊದಳ್ದಪತ್ತುಮಂಡಳಮಂ ರಂ ||
ಜಿಸಿ ಪಂಚಮೆನಿಸಿ ಲಾಸ್ಯಮ |
ನೆಸಗಿದಳಾನಟಿ ವಿಚಿತ್ರಮೆನೆ ತತ್ಸಭೆಯೊಳ್ ||

ಮಂಡಳಮಂ ಮೆರೆದಳ್ಮುಖ |
ಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂ ||
ಮಂಡಳದಿಂ ನೆಗೆದು ನಭೋ |
ಮಂಡಳದೊಳ್ನಿಂದು ನೀರೆ ಮೋಣ್ದಶವಿಧಮಂ ||

ಚಾರಿಗಳಂ ಕೊಳುತುಂ ಸಂ |
ಚಾರಿಗಳಂ ತಳೆದು ರಸಿಕಜನದಕ್ಷಿಗಳಂ ||
ಚಾರಿವರಿಬಾಡಿಸಿದಳೆ |
ಚ್ಚಾರಿ ತದಂಗಮನನಂಗನಿರೆ ಪಿಂಗಡೆಯೊಳ್ ||

ಕರತಳದೊಳಭಿನಯಮನಮ |
*ರ್ದಿರೆ ಚರಣದೊಳತುಳತಾಳಮಂಸೇತ್ರದೆ ಭಾ ||
ಸುರರಸಮನಸಮಗಾನಮ |
ನರರೆ ಶರೀರದೊಳೆ ಪಿಡಿದವಳ್ನರ್ತಿಸಿದಳ್ ||

ವೃ|| ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದಕ |
ಣ್ಗೊನೆಯವಿಳಾಸವಾಸ್ಯದ ವಿಕಾಸತೆ ಪಾದದಸಂಭ್ರಮಂ ಪಳ ||
ಚ್ಚನೆ ಪೊಳೆವಂಗದಂದಮರುಣಾಧರದಿಂಪು ಕಪೋಲಕಾಂತಿಯೆಂ |
ಬಿನಿತನಲರ್ಚ್ಚಿ ಬಿಚ್ಚಳಿಸಿ ನಚ್ಚಣಿ ಪೆರ್ಚ್ಚಿಸಿದಳ್ಮನೋಜನಂ ||

ಕಂ॥ ತೀವಿದಲಾವಣ್ಯಾಮೃತ।
ಸೇವನೆಗೀವಂತೆ ಸಮಯಮಂ ಯುವಜನನೇ॥
ತ್ರಾವಳಿಗಮರ್ದಂಗದಿನಂ।
ದಾವಧು ಸಮಪಾದಚಾರಿಯುಂ ತಳೆದೆಸೆದಳ್॥ ೯೨

ತರುಣಚರಣಾಂಶು ಬಂದುಗೆ।
ಯರಲಂ ಬಲಿಗೆದರೆ ಕಾಲ್ಗಳೊಳ್ತೊಡರ್ದನರೇ॥
ಶ್ವರರ ಬಗೆವಲೆದೊಡಂಕಂ।
ಪರಿಹರಿಪವೊಲಾಂತಳಬಲೆ ಹರಿಣಪ್ಲುತಮಂ॥ ೯೩

ಶೃಂಗಾರಸಾರರಸಮನ।
ಪಾಂಗದ್ಯುತಿ ಬೀರೆ ವಿಾರ ಲಾವಣ್ಯರಸಂ।
ತುಂಗಕುಚೆ ಚಾಪಗತಿಯುಂ॥
ಸಂಗಳಿಸು ತನಂಗಚಾಪಲತೆಯೆನೆ ಮೆರೆದಳ್॥ ೯೪

ವ॥ ಮತ್ತಂ

ವೃ॥ ಕಂತುಕರಾಗ್ರಕಂತುಕದವೋಲ್ನೆಗೆಯುತ್ತೆ ಮನೋಜಚಕ್ರಿಚ।
ಕ್ರಂ ತಿರುಪಂತೆ ತಿರ್ರನೆ ಕರಂ ತಿರುಗುತ್ತೆ ರತೀಶಶಸ್ತ್ರಿಶ॥
ಸ್ತ್ರಂ ತಳದಿಂ ಕುರುಳ್ಚಿ ಚಲಿಪಂತಲುಗುತ್ತೆ ಸುಮೇಷುಸೂತ್ರಧಾ।
ರಂ ತಳೆದಾಡಿಪೊಂದುಪೊಸಸೂತ್ರದಪುತ್ರಿಕೆಯಂತಿರಾಡಿದಳ್॥ ೯೫

ಕಂ॥ ಜತಿವೆತ್ತೊಪ್ಪುವಮೃದುಪದ।
ಗತಿಯುಂ ರಸವೊಸರ್ವಭಾವಮುಂ ವೃತ್ತಿವಿಳಾ॥
ಸತೆಯುಂ ತಳ್ತಿರೆ ವಿಳಸ।
ತ್ಕೃತಿಯಂ ಪೋಲ್ತುಬಳೆ ರಸಿಕರಂ ಮೆಚ್ಚಿಸಿದಳ್॥ ೯೬

ಅಚ್ಚರಿಯುರೊಳುರಗಿಣಿಯರೊ।
ಳಚ್ಚಿಮುಗುಳ್ಚುವವಿಳಾಸಮುಂ ವಿಭ್ರಮಮುಂ॥
ನಚ್ಚಿರದೆನೆ ನರನಾರಿಯು।
ನಚ್ಚಣಕೆಣೆವಪ್ಪನಚ್ಚಣಂ ಪೆರತುಂಟೇ॥ ೯೭

ಆರಮಣಿ ನೋಳ್ಪವಿಬುಧರ |
ಸಾರತರಾಪಾಂಗಧವಳರುಚಿ ಕವಿಯೆ ಲಸ ||
ದ್ಭಾರತಿ ಲೀಲಾಲಾಸ್ಯಮ |
ನೋರಂತಿರೆ ತಾನೆ ತೋರ್ಪ್ಪಳೆನೆ ಕರಮೆಸೆದಳ್ || ೯೮

ಅವಳ ನವನರ್ತನಮನಂ |
ದವನೀಧವನೆಯ್ದೆ ಮೆಚ್ಚಿ ಪೊಗಳ್ದುತ್ಸವದಿಂ ||
ದಿವಿಜಕುಜದೇಳ್ಗೆ ಕೀಳ್ಪಡೆ |
ಸುವಸ್ತ್ರಮಣಿಭೂಷಣಂಗಳಂ ಪದೆದಿತ್ತಂ || ೯೯

ವ|| ಅಪ್ರಸ್ತಾವದೊಳ್

ವೃ|| ನಿಡುದೊಳ್ನೀಳ್ದತರಂಗಮಾನನಮರಲ್ದಂಭೋರುಹಂ ತಳ್ತಚಿಂ |
ಗುಡಿ ದೀರ್ಘಾರುಣಪಾಣಿಶಾಖೆ ದಶನಂ ನುಣ್ಮುತ್ತು ಮೀಂಗಳ್ಚಡಂ ||
ಗಿಡಿವೆತ್ತಂ ಪೊಳೆವಕ್ಷಿಗಳ್ಸಲಿಲಮಂಗದ್ಯೋತಮಿಂತಾಗೆ ಪಾ |
ಲ್ಗಡಲೆಂಬಂತಿರೆ ಸಿಂಧುರಾಜನೊಸೆದೇಳ್ತಂದಂ ಗಭೀರಾನ್ವಿತಂ || ೧೦೦

ವ|| ಅಂತೇಳ್ತಂದಾರಾಜಶೇಖರಂಗೆ ನಖರುಚಿಕುಸುಮಂಬೆರಸು ರತ್ನಾಂ
ಜಲಿಯಂ ಕೆದರ್ದು ಪೊಡಮಟ್ಟು ಮದನಂಗೆ ಮಲ್ಲಿಗೆಮುಗುಳಮಾಲೆಯುಸೀವವ
ಸಂತನಂತೆ ತಾಂ ತಂದಾಣಿಮುತ್ತಿನಕಂಠಮಾಲೆಯುಂ ಕಾಣ್ಕೆಗೈದು ಮತ್ತಮಿರದ

ವೃ|| ಸಮದಂತಂ ಚಾರುವಕ್ತ್ರಂ ಕಿರುಗಿವಿ ಘನಘಂಟಾಖುರಂ ನೀಲರತ್ನೋ
ಪಮನೇತ್ರಂ ಶ್ವೇತವರ್ಣಂ ವಿತತಲಸದುರಂ ದೀರ್ಘವಾಲಂ ಪೃಥುಸ್ಕಂ ||
ಧಮುದಗ್ರಗ್ರೀವಮುದ್ಯಜ್ಜಘನಮುರುಲಲಾಟಂ ವಿಮಾಂಸಾಂಘ್ರಿ ಗಂಭೀ
ರಮಹಾಸಾದಂ ಸುನಾಸಾಪುಟಮಮರ್ದತುರಂಗಂಗಳಂ ಕಾಣ್ಕೆಗೈದಂ|| ೧೦೧

ಅದು ಧಾರಾಧರಮಬ್ಧದಂತೆ ಪೊಳೆಯುಂತಾವರ್ತಯುಕ್ತಂ ಕುದಂ |
ಗದವೋಲ್ಪೂರ್ಣಗತಿಪ್ರಯುಕ್ತಮುಳಿಯಂತಾವೇದಚಿತ್ರಂ ಕಳಂ ||
ಬದವೋಲ್ಪ್ರೋಲಸದ್ಗುಣಾಂಚಿತಮುದಂಚಜ್ಜಂದ್ರಬಿಂಬಂಬೊಲ |
ಭ್ಯುದಯಶ್ರೀಕರಲಕ್ಷಣಾಂಕಮೆಸೆಗಿತ್ತಾರಾಜವಾಜಿವ್ರಯಂ || ೧೦೨

ವ|| ಅಂತುಮಲ್ಲದೆಯುಂ

ವೃ|| ಗತಿವೇಗಂ ಪುಲ್ಲೆಯಾಪುಲ್ಲೆಯಿನತಿಜವಲಂ ಮಾರುತಂ ಪುಲ್ಲೆಯಿಂ ಮಾ |
ರುತನಿಂದಂ ಬಾಣಮೆಂತು ತ್ವರಿತಗಮನಸಂಯುಕ್ತಮಾಪುಲ್ಲೆಯಿಂ ಮಾ ||
ರುತನಿಂದಂ ಬಾಣದಿಂ ದೃಷ್ಟಿಯೆ ರಯಗತಿ ನೋಳ್ಪಾಗಳಾಪುಲ್ಲೆಯಿಂ ಮಾ |
ರುತನಿಂದಂ ಬಾಣದಿಂ ದೃಷ್ಟಿಯಿನತಿಜವಗಂ ರಾಜಿಪಾವಾಜಿಯುಗ್ಮಂ|| ೧೦೩

ವ|| ಅಂತೆಸೆವಪೂರ್ವಗಂಧರ್ವಯುಗಮಂ ಕಾಣ್ಕೆವಿಡಿದನಂತರಮರಸನ ಪಾಂಗಪ್ರಸನ್ನತೆಯಂ ಪಡೆದು ಮೆಯ್ಯುರ್ವೆ ಪೊಡಮಟ್ಟು ಸಿಂಧುರಾಜಂ ಸಿಂಧುರಾರೂಢನಾಗಿ ಸಿಂಧುರಾಜ್ಯಕ್ಕೆ ತಳರ್ದನಾಗಳಾಜಾತ್ಯಶ್ವಂಗಳನಶ್ವಪರೀಕ್ಷಕರಿಂ ಪರೀಕ್ಷಿಸಿ ತಪಕ್ಷೀಣಲಕ್ಷಣಾಕೃತಿಗಳಂ ಲಕ್ಷಿಸಿ ಮಂತ್ರಿಲಕ್ಷನಭೀಕ್ಷಿಸಿ

ಕಂ ಆವಾಜಿಗಳಂಗಾಕೃತಿ |
ಭಾವಮನಸ್ಸ್ಥಿತಿಸುಲಕ್ಷಣಸ್ವರಗತಿಜಾ||
ತ್ಯಾವಳಿಯೆಂಬಿವನರಸಂ |
ಭಾವಿಸಿ ಪೊಸತೆಂದು ಪೊಗಳ್ದು ಮಗುಳ್ದಿಂತೆಂದಂ || ೧೦೪

ದೇವಮಣಿಗೂಡಿ ಜಳಧಿಯೊ |
ಳಾವಿಬುಧವರಾಶ್ವಮೊಗೆದಗಲ್ದಿರ್ಪುದದಂ ||
ದೇವಮಣಿಗೂಡಿರಾಜಿಸು |
ಏೀವಿಪುಳತರಾಶ್ವಯುಗಕದೇಂ ಪಾಸಟಿಯೇ || ೧೦೫

ವ|| ಎಂದನರೇಂದ್ರನ ಜಾಣ್ಣಾತಿಂಗೆ ಪೊಗಳ್ದು ಮಿತವಚನನಿಂತೆಂದಂ

ವೃ|| ಹರಿಯಿಂತಪ್ಪಶ್ವಮುಂಟಾಗಿರೆ ಭರದಿನವಂ ಪರ್ದೆನೇರಿರ್ಪನೇ ಶಂ |
ಬರದರ್ಪಧ್ವಂಸಿ ತಾನುಂ ಗಿಳಿಯನಡರ್ವನೇ ಮೇಘಮುಂ ಸಾರ್ವನೇ ಭೂ ||
ಧರಪಕ್ಷಚ್ಛೇದಿ ಜೆಳ್ಳಂಜೆಯೊಳೆ ತಳರ್ವನೇ ಬೊಮ್ಮನೀಶಾತ್ಮಜಂ ಕೇ |
ಕಿರಥಂ ತಾನಪ್ಪನೇ ಕಾಳ್ಕಿಗದೆ ಗಮಿಪನೇ ಸಂತತಂ ಗಂಧವಾಹಂ || ೧೦೬

ವ|| ಎಂದಮಾತಿಗೆ ಸೂಕ್ತಿಸುಧಾರಸರಾಜಹಂಸಂ ಮಚ್ಚುರ್ತ್ತಿರ್ಪನ್ನೆಗಂ ಮಾಮುದ್ರಯುಧೀಂಪ್ರಣಾದಂ ನೆಗಳಲೊಡನರಸನಭವಪದಪೂಜೋತ್ಸುಕತೆಯುಂ

ಮನದೆಗೊಂಡೋಲಗಮಂ ಪರೆಯಲ್ವೇಳ್ವುದುಮಾಗಳ್ಗಳಿಲನೆಳ್ದು ತಲೆವಾಗಿ ತತ್ಕ
ಟಾಕ್ಷರುಚಿಸುಧಾರಸಮಂ ಪಾರ್ದುರ್ದ ಸಾರ್ದುರ್ದ ನಿಂದರಾಜಹಂಸವೃಂದದಿಂ, ಜ
ಯರವಮುಖರಮುಖವಂದಿಸಂದೋಹದಳವಿಗಳಿದಕಳಕಳಮನೊಳಕೊಂಡು ಮೊ
ಳಗವೆಪಟುಪಟಹಶಂಖತಾಳಕಹಳಾಬಹಳನಾದದೇಳ್ಗೆಯಿಂ ಬಿರುದನುಗ್ಗಡಿಸಿ
ಸರವೆತ್ತಿ ಪೊಗಳ್ವಮಾಗಧಸಂತಾನದಿಂ, ನಿಜರಾಜಸಮಭಿಪ್ರೇಷಿತವಿಪುಳತರಕಾ
ರ್ಯವಿಜ್ಞಾಪನಂಗೆಯ್ಯಲ್ಸಮಯಂಬಡೆಯದೆ ಸಿಡಿಮಿಡಿಗೊಂಡೊಳಗೊಳಗೆ ಗು
ಜುಗುಜುಂಗೊಂಡು ನಿಲುಂಬಿನಿಂದನಿಯೋಗಿನಿವಹದಿಂ, ನೆಗಪಿದಪೊನ್ನೊರೆಯು
ಸುರಗಿವೆರಸು ಕರಾಬ್ಜಮಂ ಮುಗಿದು ಕರುಣಂಬಡೆದು ನಿಜದೇಶಕ್ಕೆ ಬೀಳ್ಕೊಳ
ಲೆಳಸಿ ನಿಂದಂಗವಂಗಕಳಿಂಗತ್ರಿಲಿಂಗಾದಿದೇಶಾಧೀಶ್ವರರಿಂ ದೊಟ್ಟಜೆಯಿಂಮುಂ
ಬರಿದಿಟ್ಟಣಿಸಿ ಪೋಪಾಗಳೆಡೆಯೊಳ್ಪೊಡೆವ ಚಂಡದೌವಾರಿಕರ ದಂಡಪಾತದಿಂ
ದಿಂಡುಗೆಡೆದೊಯ್ಯನೆ ತಳರ್ವ ಸಾಮಂತಭೂಮೀಶ್ವರರಿಂ ದೊತ್ತರಿಸಿನಡೆವಾಗಳ್ಬ
ಜಂಗಳ್ಪಳಂಚಿ ಕಿಸುಗಣ್ಣಿ ನೋಳ್ಪಮಾಮಸಕದ ವೀರಭಟವರ್ಗದಿಂದರಸಿತ್ತಧ
ನಕನಕವಸನಮಣಿಭೂಷಣಂಗಳ ಬಲ್ಸೊರೆಯಂ ಕೊರಲ್ಸುಸಿವಿನಂ ತಲೆಯೊಳ್ಪೊ
ತ್ತು ಪೊರಲಾರದೆ ದಡದಡಿಸುತ್ತುಮೆಡವೆಗಲ್ಗಂ ಬಲವೆಗಲ್ಗಂ ಪಜ್ಜೆ ಪಲ್ಲಟಿಸಿ
ತಳೆದು ಮೆಲ್ಲಮೆಲ್ಲನಡಿಯಿಡುವರ್ಥಿಜನದಿನಭಿನವನರ್ತನರಸಾನುಭವಸಮಾಸ್ವಾ
ದಸಂಜನಿತಸುಖಮಂ ನೆನೆನೆನೆದು ಹಾರೈಸಿ ಮುಗುಳ್ದುಮುಗುಳ್ದೋರೊರ್ವರೊ
ಗ್ಗೊಗಳ್ದು ತಳರ್ವ ರಸಿಕಜನನಿಸರದಿಂ, ಮತ್ತಂ, ಪೆರನೊಸಲೊಳಿಕ್ಕಿತಪ್ಪ ಜೆಮುರಂ
ಜೆರಲಿಂ ಬಳಿದೀಡಾಡಿ ಕೆದರ್ದಳಿಕದಳಕಮನುಗುರ್ಗೊನೆಯಿಂ ತಿರ್ದ್ದಿ ಸಡಿಲ್ದ
ಕಾಂಚಿಯಂ ಸೈತುಮಾಡಿ ಕರ್ಣಪಾಳಿಕೆಯಿಂ ಕರಗಿ ಕೆನೆಗೊಂಡಿರ್ದತಪ್ಪ ಜವಾ
ದಿಯ ಕೋಳ್ಗೆಸರಂ ಮಿಸುನಿಗಾಸೆಯ ಮುಂಜೆರಂಗಿನೊಳೊರಸಿ ತೊಡೆದೆಡಗಯ್ಯಿಂ
ತನ್ನ ನಚ್ಚಿನ ಮುದ್ದುಳಿಗನ ಪೆಗಲೊಳಿಳಿಪಿ ಜನದಿಸುತ್ತುಂ ಬಿಂಬಾಧರದ ಕೆಂಬೊಳಪ್ಪ
ಕೆಂಬಟ್ಟೆಯ ಪಸಾಯಮುಸಿರಿಯೆ ತಾಳವೇರದ ಕಳೆಯುರ ಮೇಳಾಪದೊಳ್ಪೊಲು
ತ್ತರಂಗುಡುತ್ತುಂ ಪದಾಗ್ರದೊಳ್ಪಜ್ಜೆಯಿಪ ಕಿರುಗೆಜ್ಜೆಗಳ ಘಣಘಣತ್ಕಾರಂ
ಯುವಜನದ ಕಿವಿಯಂ ಬಿಕ್ಕಲಿಸಿ ಪಳಂಚಿ ಪಜ್ಜೆಯಿಡುವ ಪಜ್ಜೋದಾಮರಂ

ಪಳಿವಜ್ಜರಿಯ ಸಜ್ಜಣಿಯರಿಂ, ತುರುಗಿ ನಡೆವಾಗಳ್ಸೀರೆಪೊಡೆದಪುದೆಂಬಭೀತಿಯಿಂ
ಪೆಗಲಿಂ ತೆಗೆದು ವೀಣೆಯಂ ಧೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಒಯಕಾ
ರರ ತೆರಳ್ಕೆಯಿಂ, ಹರಿಮಣಿಕುಟ್ಟಿಮಸ್ಥಳದ ತಿಳಿಗದಿರಂ ಜಳಂಗೆತ್ತುವಾಮುಕರದಿಂ
ಚೀನಾಂಬರದ ನಿರಿಯಮುಂಜೆರಗಂ ನಸುನೆಗಪಿ ಕಣ್ದೊಳಲಿ ಕಾಲಿಕ್ಕುವ ಮುಗ್ಧ
ಯರ ಮುಗ್ಧತೆಗೆ ನಸುನಗುತೆ ನಡೆವನಾಗರಿಕರೊತ್ತೊತ್ತೆಯಿಂ, ಬಳಲ್ಮುಡಿಯೊ
ಳ್ತುರುಂಬಿದರಲ ನರುಗಂಪಿಂಗೆರಗಿದೆಳದುಂಬಿಗಳ ಬಂಬಲ ಗರಿಯುಗಾಳಿಯ ಕೋ
ಳಿಂದೇಳ್ದ ಧೂಳಿಮಸಗುವ ಪುಡಿಗತ್ತುರಿಯ ಪತ್ತರದ ರಜಮೆಂಬ ಮಬ್ಬಿನೊ
ಳುಬ್ಬಿ ಕಾಳಿಗಂಗೆಯ್ಯಲೆಳಸಿ ನೆಗೆವತಂಗದಿರಂತೆ ತುಂಗತರನೀರಂಧ್ರಕುಚಯು
ಗಳಘರ್ಷಣಪರಿಪತತ್ಪಟೀರಪರಾಗಪಟಲಂ ನೆಗೆತರೆಯುಂ, ಕರಾರವಿಂದದೊತ್ತಿ
ರುಂಪುವರವಿಂದದರಲ ಸರಸಪರಿಮಳಮನಿರ್ಮ್ಮಡಿಪ ಸುಯ್ಯೆಲರ ಸುರಭಿಗೆಳಸಿ
ಮುಯ್ಯ್ಯುರ್ವ್ವಿ ನೆಗೆವಳಿಕುಳದಂತೆ ಚೂರ್ಣಾಳಕಂ ಕೆದರೆಯುಂ, ಜಡೆವಾವಿಂಗಗಿ
ದು ಬೆಮರ್ತ್ತನೊಸಲ್ವೆರೆಯಮೃತರಸಬಿಂದು ಜಗುಳ್ದಿಳಿದುಸೇಲ್ದಪುದೆಂಬಂತಿಂಬುವ
ಡೆದಲುಗುವ ನಾಸಾಗ್ರಮೌಕ್ತಿಕದ ಪೊಳಪನೊಪ್ಪವಿಡುವ ಮಂದಸ್ಮಿತಕಾಂತಿಪೀ
ಯೂಷರಸವಿಸರಂ ತೆರೆಮಸಗೆ ಸಿಡಿಲ್ದು ನಿಂದತೋರಪನಿವಾಳಿಯೆನೆ ಮನಂಗೊಂಡ
ಕಟ್ಟೆಸಕದಬಟ್ಟಮುತ್ತಿನ ಕಂಠಮಾಲೆಯ ನೆಲೆವೊಲೆಗಳ್ಕದಕ್ಕದಿಸೆಯುಂ, ದುಸ್ಸ್ಪ
ರ್ಶಮಪ್ಪಮಾತಂಗಕುಂಭಮಂ ಪಡಿಗೈವ ಕವಿಜನದದುರುಕ್ತಿಯುಂ ಶುಕ್ತಿಜಜಘ
ನಸೂತ್ರಕಾಕಲಿತಕಲಕಿಂಕಿಣೀರಣಿತಮಿಷದಿಂ ನಗುವಂತೆಸೆವಘನತರನಿತಂಬ
ಬಿಂಬಂ ನಿಜವಿಲೋಕನಕುತೂಹಲಯುವಜನಮನೋರಾಜ್ಯಕ್ಷೋಭಮಂ ಸೂಚಿ
ಪಕುಲಶ್ಶೈಲದಂತಡಿಗಡಿಗದಿರುತ್ತಿರೆಯುಂ, ನಿಬಿಡಕುಚಮಂಡಳಮಂಡಳೇಶ್ವರರ
ಪರಸ್ಪರಸ್ಪರ್ಧೆಯಿನಳದುರ್ ಮಧ್ಯದೇಶಂ ಕಂಪಿಪಂತೆ ಬಡನಡು ಬಳುಂಕೆಯುಂ,
ಮಿಡಿವರೆಗಮೆಳಲ್ವನಿಡುಜಡೆಯ ಸುಧೆಯುಂ ಸೂಸುವ ಮುಗುಳ್ನಗೆಯ ಸವಿಯುಂ
ಸ್ಸೈಗರೆವ ಮೆಲ್ನುಡಿಯ ಮಡುಗಟ್ಟಿದ ಮುಖರಸದ ಕಡೆಗೋಡಿವರಿವಕಟಾಕ್ಷ
ರುಚಿಯ ಪೊಗರುಗುವಸುಣ್ಣದಂಪಿನ ಬಿಂಕಂಬೆತ್ತು ಕೊಂಕಿದಕುಡುವುರ್ಬ್ಬಿನ
ಘಳಘಳಿಸಿ ಪೊಳೆವಸುಲಿಪಲ್ಗಳ ಕೆಂಬೆಳಗನುಗುಳ್ವಬಿಂಬಾಧರದ ಕಕ್ಷಪುಟಮನೊ

ತ್ತರಿಸಿ ಬಳೆದಿಟ್ಟೆಡೆಗೊಂಬ ಬಟ್ಟಬಲ್ಮೊಲೆಯುಂ ಕಾವಸಕೊರಲ ಕನಕಚಂಪಕದ ಕುಸುಮದ ತೋಳ್ಮಾಲೆಯುಂ ಪಳಿವನಳಿತೋಳ್ಗಳ ತಳಿರಸಿಳಿಕ್ಕೈವ ಕೈದಳಿರ ಪರಮಧ್ಯಮಂ ಪಳಿವಸೆಳೆನಡುವಿನ ಮದನನ ಮಾಡುವೆಟ್ಟಸುಂ ಮಸ್ಣಗೆಗೆಡಿಸಿ ಕೊಬ್ಬಿದನ್ನತ್ತೋತ್ತುಂಗಜಘನಸ್ಥಳದ ಪೊಂಬಾಳೆಗಂಬವುಂ ರೋಡಾಡುವಸುಗ್ಗೊಡೆಯು ಪೂಗಣೆಯುನ ಜೂಣೆಯುನಣಕಿಪಕಣೆಕಾಲ್ಗಳ ಕೆಂದಾವರೆಯುನಂದಂಗೆಡಿಪಪದತಳದ ಜೆಲ್ವು ನಡೆಸೋಳ್ಪರಾಜಸುತರಂ ನಡೆಗೆಡಿಸಿಯುಂ, ಸೊಕ್ಕುಜವ್ವನದ ಸೊಬಗಿನ ಸೌಂದರ್ಯಮಾಧುರ್ಯಸೌಕುಮಾರ್ಯಂಗಳೊಬ್ಬುಳಿಸಿದಂತೆಸೆದೋರಣಂಜೆತ್ತು ಸಾಲ್ವಿಡಿದು ಪರಿಸರದೊಳ್ಸರಿಸಮಾಗಿ ನಡೆವಗಣ್ಯಪಣ್ಯಾಂಗನಾಪ್ರತಾನದಿಂ ರಾಜವೀಧಿ ರಂಜಿಸೆಯುಮಿಂತುವಿಜೃಂಭಿಸಿ ತನ್ಮಹಾಸಾಸ್ಥಾನಮಾಗಲ್ಪರಯುಲೊಡನೆ

ವೃ|| ಪಡಪಿಂದೇಳ್ತಂದು ಶುದ್ಧಾಂತದೊಳೆ ನೆಲಸಿ ಶುದ್ಧಾಂತರಂಗಂ ವಿಳಾಸಾ|
ಸ್ಪದಪೂಜಾಗಾರದೊಳ್ಪೂಜಿಸಿದನಮಮ ಸದ್ಭಕ್ತಿಯಿಂ ಭರ್ಗನಂ ಭಾ||
ವದೊಳಿತ್ತಂ ತೀವೆ ತನ್ಮೂರ್ತಿಯು ಕಳೆ ಕಳೆವೆತ್ತಾತ್ಮನೈವೇದ್ಯಮಂ ಮಾ|
ಡಿದನಾಲಿಂಗಕ್ಕೆ ತಾನೇಂ ಸುಕೃತಿಯೊ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ||೧೦೭

ವೃ|| ತರುಣಾರುಣಭಾಸುರಕಾಂತಿಯುತೇ |
ಚರಣಾರುಣಪದ್ಮನತಾರ್ಯಶತೇ ||
ಶರಣಾವರಣಾನ್ವಿತೆ ದೇವನುತೇ |
ಕರುಣಾಭರಣೇ ಜಯಶೈಲಸುತೇ || ೧೦೮

ಗದ್ಯ|| ಇದು ವಿನಮದಮರವರಮುಕುಟತಟಘಟಿತಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖ ಚಂದ್ರಸಾಂದ್ರರುಚಿರುಂದ್ರಚಂದ್ರಿಕಾ ಚಂಚಚ್ಚಕೋರಾಯಮಾನಸರಸಜನ ಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂಧದೊಳ್ ರಾಜಶೇಖರ ಸಭಾವರ್ಣನಂ ದ್ವಾದಶಾಶ್ವಾಸಂ ಪರಿಸಮಾಪ್ತಂ.

# ,, ತ್ರಯೋದಶಾಶ್ವಾಸಂ ,,

ಕಂ|| ಶ್ರೀಕಲ್ಯಾಣೀವದನಸು |
ಧಾಕರವರ್ಧಿತಸುಖಾಮೃತಾಂಬುಧಿಯುಭವಂ ||
ಲೋಕತ್ರಯಾಧಿಪತಿ ಕರು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಅನಂತರಮಾಮಹಾನುಭಾವಂ ಮಿತವಚನಸಮೇತಂ ಶಿವಪ್ರಸಾದಸು ಧಾಸ್ವಾದನಂಗೈದು ಸಕರ್ಪೂರ ತಾಂಬೂಲಮುಖಾಂತರ್ವಿಳಯವಿಳಸಿಸಿತನಲ್ಲಿಂ ದೇಳ್ತಂದು ಮುತ್ತಿನಕರುಮಾಡದ ಮುಂದಣ ಮೊಗಸಾಲೆಯ ಪಜ್ಜಳಿಪಬಜ್ಜರದ ವೇದಿಕಾಗ್ರದ ಮಣಿಮಯಮೃಗೇಂದ್ರಪೀಠದೊಳ್ಸಲ್ಲೀಲೆಯಿಂ ಕುಳ್ಳಿರ್ದು ಕಟ್ಟಿದಿ ರೊಳ್ಕಟ್ಟಿರ್ದವಾಜಿಗಳಂ ನೋಡಿ

ಕಂ|| ಈನವ್ಯವಾಜಿಗಳನಿಂ |
ದಾನುಂ ನೀನುಂ ವಿಳಾಸದಿಂದೇರಿ ಮಹಾ ||
ಸೇನೆಯೊಡಗೂಡಿ ವಿಹರಿಪ |
ಮೀನಗರದ ರಾಜವೀಧಿಯೊಳ್ಸಂಭ್ರಮದಿಂ || ೨

ಎಂದತಿ ಪ್ರೀತಿಯಿಂ ನುಡಿಯೆ ಚತುರಮತಿ ಮಿತವಚನನುಚಿತವಚನಜ್ಞ ನನುಚಿತಮಿದೆಂದು ತನ್ನೊಳ್ಭಾವಿಸಿ ಕಾರ್ಯಮಂ ಬಗೆದಿಂತೆಂದಂ

ಕಂ|| ಸರಸಗುಣಹಾರ ವಿನಯಾ |
ಭರಣ ವಿವೇಕೈಕನಿಧಿ ಕಳಾನಿಳಯ ದಯಾ ||
ಕರ ಸತ್ಯಶಾಲಿ ಸುಯಶೋ |
ಭರಿತಾಶಾವಳಯ ಶೈವಶರಧಿಶಶಾಂಕಾ || ೩

ವೃ॥ ಜೆಸಸಿದಕಜ್ಜಮಂ ನೆಗಳದುತ್ತರಮಿತ್ತಪನೆಂದು ನಿನ್ನಮಾ ।
ನಸದೊಳಧೀಶ ನೀಂ ಬಗೆಯದಿರ್ಶಿವಭಕ್ತಜನವ್ರಜಂ ವಿಜೃಂ ॥
ಭಿಸಿ ನೆಲಸಿರ್ದ್ದ ಪಟ್ಟಣಮಿದಿಂತಿದರೊಳ್ಬಲಗೂಡಿ ಗಾಡಿ ರಂ ।
ಜಿಸೆ ಪೊಸವಾಜಿಯೇರ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ ॥

ವ॥ ಅಂತುಮಲ್ಲದೆಯುಂ

ಕಂ॥ ಮೊದಲೊಳಭಿನವತುರಂಗಮ ।
ನೊದವಿದಸಹಣಿಗಳಿನ್ನೈದೆ ತಿರ್ದ್ದಿಸಿ ಬಸಮಾ ॥
ದುದನರಿದೇರುವುದರಸ ।
ಗ್ಗಿರ್ದುಚಿತಂ ವಿಶ್ವವಿಬುಧಜನಮಂದಾರಾ ॥

ಏನಾನುಮೆಮ್ಮದೆಸೆಯಿಂ ।
ದೀನಗಿರದ ಭಕ್ತಜನಕೆಡರ್ಬ್ಬಂದೊಡೆ ಮ ॥
ದ್ಭೂನಾಥಂ ಚೋಳನೃಪಂ ।
ತಾನೇಂ ಸೈರಿಪನೆ ಶಾರದಾಮಣಿಮುಕುರಾ ॥

ವೃ॥ ಸಾಂದ್ರಬಳಾನ್ವಿತಂ ರಥಮನೇರಿ ವಿಳಾಸದೆ ಬರ್ಪ್ಪಪೊಳ್ತು ಧ ।
ರ್ಮೇಂದ್ರತನೂಭವಂ ಮಡಿಯೆ ತದ್ರಥಚಕ್ರಕೆ ಸಿಲ್ಕಿ ವತ್ಸಮೊಂ ॥
ದಿಂದ್ರಸಮಾನನಾನ್ನೃಪತಿ ತತ್ಸುತನಂ ಪಿಡಿದಂತೆ ಕೊಂದನಾ ।
ಚಂದ್ರಧರಾರ್ಚಕಸ್ಸುತಸಹೋದರರೆಂಬರೆ ಸಾಪರಾಧರಂ ॥

ಎನಗತ್ಯಂತಪ್ರತಾಪಂಗತುಳಗಜಹಯಾರೋಹಣಾರೂಢಸುಪ್ರೌ ।
ಢಿನಿಯುಕ್ತಂಗೀಹಯಾರೋಹಣದೊಳಿವನಿದೇಂ ಭೀತಿಯುಂ ಪೇಳ್ವನೆಂಬೀ ॥
ಮನಮಂ ನೀಂ ಮಾಡದಿರ್ವ್ಯಗ್ರತೆಯ ನುಳಿದು ಸಂದಿಗ್ಧಕಾರ್ಯಂಗಳಂ ವೆ
ಳ್ಲನೆ ಮಾಳ್ಪೊಂದಂಗಮೆನ್ನೀಜಗೆಗಭಿಮತಮಾಗಿರ್ಪ್ಪುದೈ ರಾಜಪುತ್ರಾ ॥

ಕಂ॥ ಕೇಳದತಿಹಿತರ ವಚನಮ ।
ನಾಳೋಚಿಸದಗ್ರಕಾರ್ಯಮಂ ವ್ಯಗ್ರತೆಯಿಂ ॥
ತಾಳಿ ಕಡುಗಜ್ಜಮೆಸಪುದ ।
ನೇಳಿಪುದುರ್ವೀಜನಂ ಜಗನ್ನುತಚರಿತಾ ॥

ಸಿರಿಯೊಳ್ಪರಹಿತಮನವು |
ತ್ಸರಮತಿಯುಂ ವಿದ್ಯೆಯೊಳ್ವಿಭುತ್ವದೊಳೆ ನಯಾ ||
ಚರಣಮನತಿಶೌರ್ಯ್ಯದೊಳೊ |
ಪ್ಪಿರೆ ವಿನಯುಮನಾಳ್ದು ಬಾಳ್ದವಂಗೆಣೆಯುಂಟೇ || ೧೦

ಭಾವಿಯೆನಿಸಿದ್ರ್ದದದು ಪರಿ |
ಭಾವಿಸಿ ಕಳೆಯಲ್ಕೆ ಸಾಧ್ಯಮಾಗದು ಜಗದೊಳ್ ||
ದೇವಂಗಾದೊಡಮೆಂದೆಲೆದೇವ |
ಬುಧಂ ನೆಗಳಲಕ್ಕುಮೇ ಪೊಲ್ಲದುದಂ || ೧೧

ತುದಿಗೈದದುದಂ ಫಲಮಿ |
ಲ್ಲದುದಂ ಪಳಿಗೀಡುಮಾಳ್ಪುದಂ ಪರಸಂತಾ ||
ಪದಮಂ ಪರಗತಿವಿಲಯಾ |
ಸ್ಪದಮಂ ಕಾರ್ಯ್ಯಮನುದಾರಮತಿ ನೆಗಳ್ದಪನೇ || ೧೨

ಕರಣೀಯಮಿಷ್ಟಕರಣಮ |
ಕರಣೀಯಮನಿಷ್ಟಕರಣಮೆಂಬೀನಯಮಾ ||
ದರಣೀಯಮಲ್ಲದುದುಪರಿ |
ಹರಣೀಯಂ ಭೂಮಿಪಂಗಿಳಾಧಿಪತಿಳಕಾ || ೧೩

ಬಿಡದೆಸಪಕಜ್ಜಮಾವುದ |
ನಡಿಗಡಿಗಾಪ್ತರ್ಕ್ಕಳೊಳ್ವಿಚಾರಿಸಿ ಮಾಳ್ಪಂ ||
ಗೆಡರುಂಟೆ ಕಾರ್ಯಸಿದ್ಧಿಗೆ |
ತೊಡಂಕು ತೋರ್ಪ್ಪುದೆ ವಿದಗ್ಧಜನವನ ಚೈತ್ರಾ || ೧೪

ನೆರಪಲ್ಸಿರಿಯಂ ದುರಿತಮ |
ನುರಿಪಲ್ದಶದಿಶೆಯೊಳಿಂದುಕರರುಚಿಯುಶಮಂ |
ಪರೆಪಲ್ಪರನೃಪರುಮನೊ |
ತ್ತರಿಪಲ್ಕಾಲ್ಪುದು ನಯಜ್ಞಹಿತಮಿತವಚನಂ || ೧೫

ಭ್ರಮರಹಿತಾಮೋದಪ್ರದ |
ಸುಮನೋಗಣಹೃದ್ಯಮವಿಕಲಸ್ಪಷ್ಟಮುದ ||
ಗ್ರಮನೋಜ್ಞಫಲದಮಖಿಲಾ |
ಗಮವಿನುತಂ ನೀತಿಸುರಮಹಿರುಹಮರಸಾ ||

ತನುಭೃದ್ಗಣದೊಳ್ತೋರ್ಪ್ಪೀ |
ತನುಧನಲೋಭಂಗಳೆಂತುಮೇಂ ತೋರ್ಕ್ಕುವೆ ಪೇಳ್ ||
ನಿನಗೆ ಭುವನಾಕ್ಷಿಗಡಸುವ |
ಘನತಿಮಿರಂ ಭುವನದಕ್ಷಿಯಂ ಮುಸುಕುಗುಮೇ ||

ಅದುಕಾರಣದಿಂ ನಿಜಧೈರ್ಯ |
ದೆ ಗಣಿಸದೆ ಮುಂಪೆ ಬರ್ಪ್ಪುದಂ ಬುಧರಲ್ತೆಂ ||
ಬುದನೆಸಗದೆ ಬೆಳ್ಪಸವಾ |
ಳ್ವುದು ಕಜ್ಜಂ ಸಜ್ಜನಾಬ್ಜವನದಿನನಾಥಾ ||

ವ|| ಎಂದವಂ ನುಡಿಯೆ ಮೊಗದೊಳ್ಮಂದಸ್ಮಿತಂ ಪೊಳೆಯೆ ನರೇಂ
ತನಯನಿಂತೆಂದಂ

ವೃ|| ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ |
ಸಾರಮರಾಳನೇನುಳಿದುದೇ ನವಚಂಪಕಗಂಧಭೀತಿಯಿಂ ||
ಸಾರದೆ ಮಾಣ್ದುದೇ ವನವಿಹಾರಮನಾರಡಿ ಮುಳ್ಗಳಂಘ್ರಿಯಂ |
ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನ ಪ್ರಚಾರಮಂ ||

ವ|| ಅದುಕಾರಣದಿಂ

ಕಂ|| ಮುಂದೇಂ ಬರ್ಪ್ಪುದೊ ಹಾನಿಯು |
ದೆಂದಕ್ಕಿ ವಿನೋದಕೇಳಿಯಂ ತೊರೆವಾತಂ ||
ಪಂದೆಯಿವನೆಂಬನಿಂದೆಯ |
ನೊಂದುವನಿದು ರಾಜಧರ್ಮಮೇ ಜಗವಾಗಳ್ ||

ವ|| ಎಂದು ತಾನೆಂದುದನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆಪ
ತಿವೋಹಿನಂದನನಿಂತೆಂದಂ

ವೃ|| ಧರ್ಮಜನಂಬರಧ್ವನಿಯನಾಲಿಸಿ ತಾನುಳಿದಂಬುಪಾನಮಂ |
ನಿರ್ಮಳಬುದ್ಧಿ ತನ್ನನುಜರಾಯುಮನಾಗಳೆ ಸತ್ತ್ರಸಂಗದಿಂ ||
ಕೂರ್ಮೆಯೊಳಲ್ಲಿ ಮೇಣ್ಪಡೆದನಾಪ್ತನಯೋಕ್ತಿಯನೊರ್ಮೆ ಕೇಳ್ದೊಡೇಂ |
ಪೆರ್ಮೆಗೆ ಹಾನಿ ಬರ್ಪುದೆ ವಿಚಾರಿಪುದಾತ್ಮಹಿತಾಹಿತಂಗಳಂ || ೨೧

ಕಂ|| ವಿತತಾಭಿಮಾನನೀತಿ |
ಕ್ಷಿತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿ ||
ಚ್ಯುತಿಗಧನನಪ್ಪೊಡಂ ಭೂ |
ಪತಿಯುಳ್ಕಲ್ವೇಳ್ಕುಮಮಳಗುಣಗಣನಿಳಯಾ || ೨೨

ವಿದಿತನಿಜರೂಪಮಂ ಮುಕು |
ರದೊಳೀಕ್ಷಿಪವೋಲ್ತ್ವದೀಯನಯಕೌಶಲಮಂ ||
ಪದಮನಿದನೆನ್ನೊಳೀಕ್ಷಿಪು |
ದಿದುಯುಕ್ತಂ ನಿನಗೆ ನೀತಿವಿದ್ಯಾಭರಣಾ || ೨೩

ವ|| ಎಂದತಿಹಿತಕರ ಪ್ರಸನ್ನತರ ಸದರ್ಥಸಮರ್ಥನಪ್ರಸಂಗಮನವಂ ನುಡಿ
ವುಲೊಡನೆ

ವೃ|| ಪುರಹರನಿಟ್ಟಪುಲ್ಲ ಮುರಿಯಂ ಮುರವೈರಿವಿರಿಂಚಿಮುಖ್ಯನಿ |
ರ್ಜರರದನೆತ್ತಲಾರದೆ ವಲಂ ಧೃತಿಗುಂದಿದರೆಂದೊಡಾವನಾ ||
ಪರಮಮಹೇಶಶಾಸನಮನುರ್ವರೆಯೊಳ್ಮಿಗೆ ಮೀರ್ವನಣ್ಣನೈ |
ತಿರೆ ಪೆರಪಿಂಗಿ ಪೋದಪುದೆ ಒರ್ಪ್ಪ ಶುಭಾಶುಭಮಾರ್ಗಮಾದೊಡಂ || ೨೪

ವ|| ಅದಲ್ಲದೆಯುಂ

ವೃ|| ಪೊಸತುದ್ವೇಗಾಶ್ವಮೆಂದೇರದೊಡೆ ಸಮನಿಕುಂ ವಾಹಕತ್ವಕ್ಕೆ ಭಂಗಂ |
ನಿಸದಂ ವೈಹಾಳಿಯೊಳ್ಶಂಕರಶರಣಜನಂ ಸೋಯೆ ಕಾಯ್ದಪ್ಪನೆಮ್ಮೀ ||
ವಸುಧೇಶಂ ಮಾಣಪೆಂದಳ್ಕುವುದನುಚಿತಮೀಶಾಜ್ಞೆಯಂ ಬಲ್ಲನಾಮ್ಮಂ |
ದೆ ಸಮಂತಂತಾಗೆಕೋಪ್ಪಿಂವಿಪುಲಮಹಿಮೆಯಂಮುಕ್ತಿಯಂಸೂರೆಗೊಂಬೆಂ||

ಬಗೆಗೊಗೆದಳ್ತಿಯುಂ ಸಲಿಸವೇಳ್ಪುದು ಬೇಡೆನವೇಡ ತಂಪೆ ನೆ |
ಟ್ಟಗೆ ಮುಳಿದಪ್ಪನೆಂದೆಣಿಸದಿರ್ನಿನಗಾದಪರಾಧಮೆನ್ನದೆಂ ||
ದಗಣಿತಸಂಭ್ರಮಂ ಮಿಗೆ ತುರಂಗಮಯುಗ್ಮಮನೇರಿ ನೋಳ್ಪರೊ |
ಳ್ಳೆಗಳೆ ಮಹೋತ್ಸವಂ ವಿಹರಿಪಂ ಪುರದೊಳ್ಪರಮಾನುರಾಗದಿಂ || ೨

ವ|| ಎಂದರಾಜೇಂದ್ರನುಕ್ತಿಯನೆಂತಾನುಂ ಮನದೆಗೊಂಡು ನಿಜಮುಹ
ದರ್ಶನಾರ್ಥಮಿದು ಶಿವಕೃತಮಕ್ಕುಮೆಂದು ನಿರ್ಧರಂಗೈದು

ವೃ|| ಇನಿತೊಂದಾಗ್ರಹಮಂ ಮದೀಯನಯವಾಕ್ಯೋಲ್ಲಂಘನಂಗೈದು ಮಾ
ಳ್ಪನಿವಂ ನೀತಿವಿದಂ ನವಾಶ್ವಗತಿಯಿಂದೇನಾನುಮೊಂದಕ್ಕುಮ ||
ಲ್ತೆ ನವೀನಂ ಕಡುಗಜ್ಜಮೆಂದೆಣಿಸಿಯುಂ ತಾನಪ್ಪುಕೈದಿರ್ದನಾ |
ತನ ಮಾತಂ ಪುಮವಾಳ್ತನಂಗಡ ನಖಿಗ್ಗೆಂತಾದೊಡಂ ಮಿತ್ರರೊಳ್ || ೨

ವ|| ಅಂತಿರ್ಪನ್ನೆಗಂ

ವೃ|| ತನುವೆರಡೊಂದುಗೂಡಿ ನಿಜಪಕ್ಷದೊಳಪ್ಪಿ ಮನೋನುರಾಗದಿಂ |
ಮನಸಿಜಸೌಖ್ಯಮಂ ಸವಿದು ಸಾರಸತಳ್ಪದೊಳಿರ್ಪವೇಳೆಯೊಳ್ ||
ವನರುಹಮಿತ್ರನಸ್ತಗಿರಿಮಸ್ತಕದಲ್ಲಿರೆ ನೋಡಿ ಬಾಡಿ ಜೆ |
ಜ್ಜನೆ ಬಿಸುಸುಯ್ದು ಬೇವಸದೆ ಬಿಚ್ಚಿದುವಕ್ಕಟಚಕ್ಕವಕ್ಕಿಗಳ್ || ೨

ಕಂ|| ಇಟ್ಟಣಿಸುತಲರ್ದನ್ನೈದಿಲ |
ನಿಟ್ಟಿಸಳ್ಗಳ್ತಾಗೆ ತಾಳ್ದು ಸಂಕೋಚತೆಯಂ ||
ನೆಟ್ಟನೆ ನಿಂದವೊಲೆಸೆಗುಂ |
ದಿಟ್ಟಿಗೆ ಕೊಳದೊಳಗೆ ಮುಗಿವಕಮಳಕದಂಬಂ || ೨

ತಲೆವಾಗಿದಸರಸಿಜದಿಂ |
ದಲರ್ವಂಡೊಕ್ಕುದು ನಿಜೇಶನಗಲುತ್ತಿರೆ ತ ||
ನ್ನಳಿನಿ ಮನಸ್ತಾಪದೆ ತಂ |
ಬುಲವಂ ಕೆಲಕುಗುಳ್ವೆಳೆಂಬುದಂ ಪ್ರಕಟಿಸವೋಲ್ || ೩

ಅಪರಗಿರಿಕರಿಯ ಕುಂಭದ |
ಲಪಸದ ಸಿಂದುರದೊಳರುಣಮಣಿಮುಕುರದೊಳೇ ||
ನುಪಮೆಗೆ ಬಂದುದೊ ಸಂಧ್ಯಾ |
ವಿಪುಳಾರುಣರುಚಿಯುಮಹಿಮಕರಮಂಡಳಮುಂ || ೩೧

ವೃ|| ಕೊಳದೊಳ್ನಿಂದು ತರತ್ತರಂಗಜಳಮಂ ಮಿಂದಲ್ಲಿ ನಗ್ನಾಂಗಿ ಪೊ |
ಕ್ಕಳಿನಾದಚ್ಛಲದಿಂ ಕುಮಂತ್ರಜಪಮಂ ತದ್ದ್ವೇಷದಿಂ ಮಾಡೆ ಕೋ ||
ಮಳೆ ಶೂನ್ಯಾಧ್ವಮನ್ನೈದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬೀ |
ಳ್ದಳಿದಂ ದ್ರಾವಿತಚಂದ್ರಸಾಂದ್ರತರರುಗ್ಭಾಸ್ವತ್ಕರಂ ಭಾಸ್ಕರಂ || ೩೨

ಕಂ|| ಮೃಡನ ಕಿರುಜಡೆಯ ಕೆಂಗದಿ |
ರಡರ್ದೆಳವೆರೆ ಬಳೆದು ನಿಜಕಳಾವಿಭವಮನೀ ||
ಪೊಡವಿಗರಿಪಲ್ಕೆ ಬಂದವೊ |
ಲುಡುಪತಿಬಿಂಬಂ ಸರಾಗಮುದಯಿಸಿತಾಗಳ್ || ೩೩

ವೃ|| ಎನಗಾತ್ಮೇಶ್ವರನೀದಿನೇಶ್ವರನಗಲ್ದೋವೋಪೊ ತಾಂ ಪೋಗಿ ಕೆಂ |
ಮನೆ ರಾಗಾನ್ವಿತನಪ್ಪಿದಂ ವರುಣದಿಗ್ಯೋಷಾಂಗಮಂ ನೋಡಲಾ ||
ರೆನಿದಂ ಕಣ್ಗಳೆಂದು ಪಿಂದಿರುಗಿ ನಿಂದಿಂದ್ರಾಶೆಯೆಂಬೆಂಬಕಾ |
ಮಿನಿಯುದ್ವೇಣಿಯ ಸೂರ್ಯಕಾಂತಿಯೆನಿಸಿತ್ತಿಂದ್ರಾದ್ರಿಯೊಳ್ಚಂದ್ರಮಂ || ೩೪

ಅಂಬುಜಮುಂ ವಿಯೋಗಿವದನಾಂಬುಜಮುಂ ಕಳೆಗುಂದೆ ಕೂಡೆ ದು |
ಗ್ಧಾಂಬುಧಿಯುಂ ಜನೋತ್ಸವ ಸುಧಾಂಬುಧಿಯುಂ ನಲವೇರ್ಚೆ ಕಾಂತಕಾಂ ||
ತಾಂಬಕಕೈರವಂ ಧವಳಕೈರವಮುಂ ನಗೆಯೊಂದೆ ಬಂದುದಾ |
ಲಂಬಿತರಾತ್ರಿ ರಮ್ಯರಮಣೀಮಣಿಕುಂಡಳಮಿಂದುಮಂಡಲಂ || ೩೫

ಕಂ|| ಸಕಳಂಕಕಳಂಕಲಸ |
ನ್ಮಕರಾಂಕನನೊಳಗೆ ತಾಳ್ದನೆಂದಂಧಕಮ ||
ರ್ದಕನ ನೊಸಲಗ್ನಿ ಹಿಮಕರ |
ನ ಕರಂ ಮುತ್ತಿದವೊಲೆಸೆದುದುದಯದರಾಗಂ || ೩೬

ಮದನನ ಘನಪ್ರತಾಪಮ |
ನುದಿತಯಶಶ್ರೀಯನರಿಪುವಂತೆಸೆದುದು ಮು ||
ನ್ನೊದವಿದಕೆಂಪುಂ ಕಡೆಯೊ |
ಳ್ಪುದಿದೆಳವೆಳಗುಂ ವಿಳಾಸದಿಂ ಶಶಧರನಾ || ೩೭

ನಿಜಪಾದದಿಂದೆ ತುಳಿದಂ |
ತ್ರಿಜಗದ್ಬಾಧಕನನಂಧಕಾರಾಂಧಕನಂ ||
ರಜನೀಶ್ವರೇಶ್ವರಂ ಶು |
ಕ್ರಿಜಗೌರಂ ಕುವಲಯಾಧಿಪಂ ಹರಿಣಧರಂ || ೩೮

ಶಂಬರಹರಸಂಬುಜರಿಪು |
ಬಿಂಬಮೆನಿಪ್ಪೊಂದುಸಾಣೆಯೊಳ್ಮಸೆಯಲ್ತ ||
ನ್ನಂಬಂ ಪತ್ತಿತ್ತದರ ಕಿ |
ಲುಂಬೆನೆ ತನ್ಮಧ್ಯದಂಕಮೇಂ ಸೊಗಯಿಸಿತೋ || ೩೯

ದ್ವಿಜರಾಜಂ ನಿಜಕರದಿಂ |
ರಜನಿಯ ತಲೆಯಲ್ಲಿ ತಳಿದತತದೀಧಿತಿಶು ||
ತ್ರಿಜದಕ್ಷತೆಯೆನೆ ಚೆಲ್ವಂ |
ಭಜಿಸಿದುದಾಸುಭಗಭಗಣಮಾನಭದೆಡೆಯೊಳ್ || ೪೦

ವೃ|| ಪರವಧುವೆಂದು ನೋಡದಿನನಿಲ್ಲದಿರುಳ್ಪರಿತಂದು ಪದ್ಮಿನೀ |
ತರುಣಿಯ ಕೋರಕಸ್ತನಮನಂಟಿ ಕರಾಗ್ರದೊಳಿಂದುವಲ್ಲಿ ಕಂ ||
ಡರಜನಿಗಳ್ಕಿ ರಾಗಮುಳಿದಾಸ್ಯಕೆ ಜೆಳ್ಪಿರಡೇರೆ ಲಂಚವಿ |
ತ್ತುರುತರಮೌಕ್ತಿಕಂಗಳೆನೆ ಕಂಗೊಳಿಸಿರ್ದುವಲ್ತೆ ತಾರೆಗಳ್ || ೪೧

ವ|| ಅನಂತರಂ

ವೃ|| ಅಮರೇಭೇಂದ್ರಪ್ರಕಾಶಂ ಶಿಬಿಪುರವರ ಸೌಧಾಗ್ರಮುಕ್ತಾಘತೇಜಂ |
ಯಮಹಾಸಜ್ಯೋತಿ ರಾತ್ರಿಂಚರಪತಿಸಿತದಂಷ್ಟ್ರಾಂಕುರಂ ಪಾತಿಹಾತೋ||
ರುಮಯೂಖಂ ವಾಯುಸಕ್ಕೀತುರುಚಿ ಹರಸುಹೃನ್ಮೌಳಿಪೀರಾಂಶುವೀಶಾ |
ನಮಹಾದೇಹದ್ಯುತಿಶ್ರೀ ಬಳೆದುಬಳಸಿದಂತಾಯ್ತು ಬೆಳ್ದಿಂಗಳೆತ್ತಂ || ೪೨

ವ|| ಅಂತುಮಲ್ಲದೆಯುಂ

ವೃ|| ಶರಸಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾ |
ಕರದೆಡೆಯಲ್ಲಿ ತಳ್ತತಿಳಿಜೊನ್ನಮನಂಜೆಗಳುನ್ಮದಾಳಿಗಳ್ ||
ಸುರಮುನಿಗಳ್ಗಜಂಗಳೊಸೆದೀಂಟಲು ಮಾರ್ದ್ದರಗಲ್ಕುಳುಂಗಲಾ |
ತುರಿಸಿ ಕರಾಗ್ರದಿಂದುಡಿಯಲಾಟಿಪುವೆಂದೊಡದೆಂತು ಬಣ್ಣಿಪೆಂ || ೪೩

ಇದುದಲ್ಚಂದ್ರಮನಲ್ತು ನರ್ತಿಪಮುನೀದ್ರಂ ನಾರದಂ ನೋಳ್ಪೊಡಿಂ|
ತಿದು ತಾಂ ಲಾಂಛನಮಲ್ತು ತತ್ಕರವಿರಾಜದ್ವೀಣೆ ತಾರಾಳಿಯ ||
ಲ್ತಿದು ತತ್ಸುಸ್ಫಟಿಕಾಕ್ಷಮಾಲೆ ನಿಬಿಡೋದ್ಯಚ್ಚಂದ್ರಿಕಾಶೋಭೆಯ |
ಲ್ತಿದು ತತ್ಕಂಠವಿಲಂಬಿದೇವಕುಜಪುಷ್ಪಸ್ರಗ್ರಜೋವಿಭ್ರಮಂ || ೪೪

ವ|| ಇಂತೊಗೆತಂದಚಂದ್ರಚಂದ್ರಿಕೆಯಿಂ ಸಮನ್ವಿತಮಾದಯಾಮಿನೀಪ್ರಥಮಯಾಮದೊಳ್ಭುಮಿಪಲಲಾಮಂ ಸೋಮಧರನಂ ಪ್ರೇಮದಿಂದರ್ಚಿಸಿ ತತ್ಪ್ರಸಾದಸುಧಾಸ್ವಾದನಾನಂತರಂ ಸಕರ್ಪೂರತಾಂಬೂಲಪ್ರದಾನಪುರಸ್ಸರಂ ಪ್ರಧಾನತನೂಜನಂ ತದ್ಗೃಹಕ್ಕೆ ಬೀಳ್ಕೊಟ್ಟು ಸರ್ವಮಂಗಳಾಸಮನ್ವಿತನಮಳಕನಕಪರ್ಯಂಕಮೃದುಳತಲ್ಪಸ್ಥಳದೊಳ್ತದ್ರತಾಂತಸಂಜಾತಪರವಶಪ್ರಭೂತಪರಮಸುಖನಿದ್ರಾನುಭವದೊಳಿರ್ಪ್ಪನ್ನೆಗಂ

ವೃ|| ಇದೆ ಪದ್ಮಾಮೋದಮಂತಾಳ್ದೊಲೆದುಸುಳಿವಮಂದಾನಿಲಂಕಾಂತಿಗುಂದು
ತ್ತಿದೆ ನಕ್ಷತ್ರಾಳಿ ಶಂಖಧ್ವನಿಯಿಡೆ ಶಿವಗೇಹಂಗಳೊಳ್ಕೆಂಪು ಮೂಡು ||
ತ್ತಿದೆ ಪೂರ್ವಾದ್ರೀಂದ್ರದೊಳ್ಚಂದ್ರಿಕೆ ಕಳೆಗಳೆದೀಗಳ್ಪಿಡಂಮೆಟ್ಟಿಪೋಗು |
ತ್ತಿದೆ ತಳ್ಪೇಕೀಗಳೊಲ್ದುಪ್ಪವಡಿಸು ಜಗತೀಮಾನಿನೀಜೀವಿತೇಶಾ || ೪೫

ವ|| ಎಂದುಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೀರೆದಪ್ಪಿ ಪೇಲ್ವರಿಯೆ ಮೆಲ್ಲನೇಳ್ವಂತೆ ಹರಸ್ಮರಣಪೂರ್ವಕಂ ಕನತ್ಕನಕಪರ್ಯಂಕಮೃದುಳಶಯ್ಯಾತಳದಿನರಸಿವೆರಸೇಳ್ದು ತತ್ಪ್ರದರ್ಶಿತಾದರ್ಶದೊಳ್ನಿಜಮುಖಾವಲೋಕನಂಗೈದನಂತರಂ ಮರಂದದೊಳ್ಕುಳುಂಗುವ ಮಧುಕರನಂತೆ ಪರಿಮಳೋದಕದಿಂ ಜಳಕಂಜೊಕ್ಕು ಶಾರದಾಭ್ರಂ ತಳ್ತಶಶಾಂಕನೆನಿಸಿ ಬೆಳ್ಪಟ್ಟೆಯಂ ಪೊದೆ

ದುಟ್ಟು ಶಶಿಕಳೆಯುಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುವಾವುಗೆಯುಂ ಮೆಟ್ಟಿ ಪಾಲ್ಗಡಲ ಪೆರ್ದೆರೆಯೊಳ್ಪುಗುವಮರಾಳನಂತೆ ಶಶಿಕಾಂತರಚಿತಮಾದ ಪೂಜಾಗಾರಮಂ ಪೊಕ್ಕು ಸಿಂದು ನಿರೀಕ್ಷಿಪಾಗಳ್ಕಣ್ಗೆ ಕೌತುಕಮನಮುರ್ಚೆ ಥಳಥಳಿಸಿ ಪೊಳೆದು ಬಳಸಿ ಬಳೆದು ಬಳ್ಳಿವೆಳಗಂ ಕರೆವೆಳಮುತ್ತಿನಮೇಲ್ಕಟ್ಟಿನ ಕೆಳಗಳವಡಿಸಿದ ಮಿಸುನಿವೆಸದೆಸಕದ ಪೊಂದಾವರೆಯ ಸಾಲ್ಗಳ ಪರಿಸರದೊಳೆಳಲೆವಿಟ್ಟ ಮಣಿಮಂಜರಿಯಚ್ಚುಕುಚ್ಚುಗಳ ಬಳಸಿ ತೊನೆವ ಪಸುರ್ವರಲ ಲಂಬಣಮಾಲೆಯ ಕೆಲಗೆಲದೊಳ್ಕಟ್ಟಿ ಬಿಟ್ಟ ಕುಸುಮಮಾಲಿಕೆಯ ಪಜ್ಜಳಿಪ ಬಜ್ಜರದ ಕುಟ್ಟಿಮಸ್ಥಳದ ಕರ್ಪೂರರಜದವೇದಿಕೆಯುರಲ ಪರಾಗದ ಚಳೆಯುದ ಮೃಗಮದದ ಸಾರಣೆಯೊಳ್ಕೈಗೈದ ಮುತ್ತಿನರಂಗವಲ್ಲಿಯ ಚೌಕದೊಳಪ್ಪಸಣಿಸಿ ಮಡಗಿದ ಸರಸಸುರಭಿಸಲಿಲಸಂಭೃತಸ್ವರ್ಣಕುಂಭಂಗಳ ಪೊಂಬರಿಯಣಾಣದೊಳಿಳಿಪಿದ ಮಿಸುನಿವಟ್ಟಲ್ಗಳ ತರಂಬಿಡಿದೊಪ್ಪುವ ಪೊನ್ನಗಿಂಡಿಲ್ಗಳ ಘುಸೃಣರಸಂ ಮಿಸುಪಶುಕ್ತಿಗಳ ಚಂದನರಸಂದೀಪಿದ ಶಂಖಪಾತ್ರಂಗಳ ಥಳಥಳಿಪ ಮಣಿದೀಪಂಗಳ ಪೊರಗೆಚೆಲ್ಲಿದ ಕಸ್ತೂರಿಯುರಜಕ್ಕೆ ಪರಿಮುರಿಗೊಂಬಮುದಾಳಿಮಾಳಿಕೆ ಒಳಗೆ ಪುಗದಂತೆ ನೇಮಿಸಿದ ಚಂಪಕ ಮುಕುಲದಾಮದ ಬಾಗಿಲಾಪ್ತಡದ ಬಗೆಗೊಳಿಪ ಧೂಪಾಮೋದದೊಳ್ಪೊರೆದ ದವನದ ಸೀಗುರಿಯುಂ ಪೊಂಬಾಳೆಯ ಚಾಮರಮುಂ ಪುಂಡರೀಕಾತಪತ್ರಮುಂ ತಳಿರ ತಾಲವೃಂತಮುನರಲಕರಂಡಕಂಗಳಂ ಕೆಲಕೆಲ ದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡವಿಯರ ಪಿಂಯ ಸಿರಿ ಕಮನೀಯುಮಾಗೆ ಮನದೊಳುತ್ಸವಿಸಿನಡೆತಂದರ್ಚನೋಚಿತಾಸನದೊಳುತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದು

ವೃ॥ ಘನಸದ್ಯೋಜಾತಮುಖ್ಯಪ್ರಭವಮುಪಿಮುಖೋತ್ಪನ್ನಸಂಪನ್ನಿವೃತ್ತ್ಯಾ ।
ದಿಸಿಯುಕ್ತ್ಯೋತ್ಪತ್ತಿ ಭಾಸ್ವದ್ಗಣಯುತಕಪಿಲಾದ್ಯಪ್ರಭೂತಾಪಸೀಪಾ ॥
ವನರೂಪಶ್ರೀವಿಭೂತಿ ಪ್ರಭೃತಿಯನುರೆ ಪತ್ಪೂರ್ವಕಂ ಲೇಪಸಂಗೈ ।
ದು ನಿತಾಂತಂ ತತ್ತ್ರಿಪುಂಡ್ರಂ ತೊಳಗೆ ತಳೆದು ವಿಧ್ಯುಕ್ತಮಂತ್ರಂಗಳಿಂದಂ ॥

ಶಿವನೇತ್ರಾಂಭೋಜಮಂಪೂಜಿಸಿ ಸದಮಳರುದ್ರಾಕ್ಷಮಂ ಭಕ್ತಿಯಿಂದು|
ಕ್ತವಿಧಾನಂದಪ್ಪದಾತಾಣದೊಳೆ ಗಣನೆಯಂ ಮಾರದೋರಂತೆ ತಾಳ್ದೋ ||
ಪ್ಪುವಹೃತ್ಪಂಕೇಜದೊಳ್ಪ್ರಾನಿಸಿದನಿನಘನದ್ಯೋತಿಯಂ ಸಾಂಬನಂ ಶಂ |
ಭುವನಿಂದ್ರಪ್ರರ್ಫಾಂಕಕೋಟೀರನನನಘನನಾನಂದದಿಂ ತನ್ನೃಪಾಲಂ || ೪೭

ವ|| ಅಂತುಜಾನಿಸಿ ಜಲಕ್ಕನೆ ತೊಳಪಮೂರ್ತಿಯನೊಳಗೆ ಕಂಡು ಕರಣಂ
ಗಳ್ಕಳೆಯೇರೆ ಮಾನವೇಶ್ವರಂ ಮಾನಸಪೂಜೆಯಂರಚಿಸಿ ಬಾಹ್ಯಪೂಜೆಗೆ ಮನಂದಂದು
ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಹೃದಯದೊಳೆ ಜಾನಿಸಿದಪರಿ |
ಜದು ನಿಜಲಿಂಗದೊಳಭಿನ್ನಮೆನಿಸಿರೆಕಂಡೇಂ ||
ಮುದವಾಂತನೊ ನರಪತಿ ಬಗೆ |
ಗೊಡವಿದುದದುತೋರೆ ಪೊರಗೆ ಸುಖಿಸದರೊಳರೇ || ೪೮

ಇದುಮುನಿಗಳ ಮನದೊಳಬೆಳ|
ಗಿದುವಿಧಿವಿಷ್ಣುಗಳ ವಾದಮಂ ಮಾಣಿಸಿದ ||
ಗ್ಗದಪರಬೊಮ್ಮಂತಾನಿಂ |
ತಿದು ಮೋಕ್ಷಾಮಳಫಳಪ್ರದಂ ಸುರಭೂಜಂ || ೪೯

ವ|| ಎಂದು ಕಣ್ದೀವಿ ನೋಡಿ ಮನಂದೀವಿ ನೆನೆದು ಭಾವಂದೀವಿ ಭಾವಿಸಿ
ಮತ್ತೆಮತ್ತೆ ಮಾಣದೆ

ಕಂ|| ಸುರಿವಮುದಶ್ರುವೆ ಜಳೆಯಂ|
ಶರೀರದೊಳ್ಮೊಳೆವಪುಳಕಮೇ ಗುಡಿ ಲಾಸ್ಯಂ ||
ಕರಕಂಪಂ ಗದ್ಗದರುತಿ |
ವರವಾದ್ಯಮದಾಗೆ ಶಿವನನವನಿದಿಗೊರ್ಂಡಂ || ೫೦

ವ|| ಅಂತಿದಿಗೊರ್ಂಡು

ಕಂ|| ಶ್ರುತಿಸತಿಯ ಶಿರೋಮಣಿ ಯತಿ |
ಪತಿಗಳ ಹೃದಯಾಬ್ಜದಿವ್ಯದಿನಮಣಿ ನತಸಂ ||
ತತಿಚಿಂತಾಮಣಿ ಭುವನ |
ಸ್ತುತಲಿಂಗಂ ತಾನಿದೆಂದುಪೊಗಳ್ದಂಭೂಪಂ || ೫೧

ವ|| ನಿರ್ವ್ಯಾಜಭಕ್ತಿಯಿನಂತು ಪೊಗಳ್ದನಂತರಂ ||

ಲಲಿತರಗಳೆ || ಸುಧೆದಧಿಘೃತಂಮಧುಸದೈಕ್ಷವರಸಂಗಳಿಂ | ಮಧುರತರ ಭಸಿತವಿಶ್ರಿತಸಿತಜಳಂಗಳಿಂ | ಹಿಮವಿಮಳಮಳಯಜಸುಗಂಧಾನುಲೇಪದಿಂ | ಕಮಳರಿಪುಧವಳಕಳಮಾಕ್ಷತಕಳಾಪದಿಂ | ಪರಿಮಳಮಿಳಿತದಳಿತನಳಿನಕುಮುದಂಗಳಿಂ | ಸರಸಚಂಪಕವಕುಳತಿಳಕಕುಸುಮಂಗಳಿಂ | ದಮನಮರುವಕಬಿಲ್ವಪಲ್ಲವಸ್ತೋಮದಿಂ | ಕಮನಘೃತಸಹಿತಗುಗ್ಗುಳಧೂಪಧೂಮದಿಂ | ಪ್ರಚುರಶುಚಿರುಚಿರರುಚಿಮಣಿದೀಪಮಾಲೆಯಿಂ | ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ| ನವನಾರಿಕೇಳಕದಳೀಫಳಪ್ರಸರದಿಂ | ವಿವಿಧತರಸುರಭಿರಸವೀಟಿಕಾವಿಸರದಿಂ | ಮದನಮದಮರ್ದಿಯಂ ಸದಮಳಕಪರ್ದಿಯಂ| ಕರಿದನುಜಭಂಗನಂ ಕರುಣಾಂತರಂಗನಂ| ಶ್ರುತಿನುತಚರಿತ್ರನಂ ವಿತತಶುಭಗಾತ್ರನಂ | ಗಿರಿಸುತಾಕಾಂತನಂ ಪರಿಹೃತಕೃತಾಂತನಂ| ಸಾರಮಹಿಮಾಕರಂ ವೈರಿಜನಭೀಕರಂ| ಭ್ರಾಜಿತದಿನಾಧಿಪಂ ರಾಜಿತಜನಾಧಿಪಂ | ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ ||

ವ|| ಅನಂತರಂ ಸುತಿಸಲೆಂದು ಮನಂದಂದು

ವೃ|| ಜಯಜಯ ದೇವದೇವ ಪುರಶಾಸನಶಾಸನಶಾಸನೈಕಚಿ |
ನ್ಮಯ ಮಯಸುತ್ಯ ಸಂಪದಸಮಾನಸಮಾನಸಮಾನತಾಂಘ್ರಿಸ ||
ನ್ಮಯ ನಯನತ್ರಯಾಂಚಿತವಪುಷ್ಕರಪುಷ್ಕರಪುಷ್ಕರಾಂಕನಿ |
ರ್ಭಯ ಲಯಕಾಲಸಾಯುಧಕರಾಲಕರಾಲಕರಾಲಸದ್ಭುಜಾ || ೫೨

ಪುರಹರ ದಿವ್ಯಭವ್ಯಜನಪೂಜಿತರಾಜಿತಪಾದ ವೇದಭಾ |
ಸುರತುರಗಾಂಗಸಂಗತವಿಚಿತ್ರಚರಿತ್ರ ಪವಿತ್ರಗಾತ್ರ ನಿ ||
ರ್ಜರಪರಭಂಗ ತುಂಗಮಹಿಮಾಕರ ಭೀಕರಮಿತ್ರಪುತ್ರಸಂ |
ಹರ ಸುರನುತ್ಯ ನಿತ್ಯಜಯ ಕಿಂಕರಶಂಕರ ಚಂದ್ರಶೇಖರಾ || ೫೩

ಜಂಬರಶಿರೋರುಹದಿಗಂಬರರಮಾವರಕಳಂಬರವಿಜಾತಹರತುಂಬುರಸುಗೀತಾ|
ಡಂಬರಗಣವ್ರಜಕುಟುಂಬಜಲಜಾತಸಖಿಬಿಂಬಗಸುಧಾಮಯಕದಂಬಕರಜಾಲಾ||
ಲಂಬನಸಿಜಾಂಗಧೃತಕಂಬಲಧನಂಜಯುವದಂಬಕಮುಹಾಘನಸಿತಂಬ ಗಿರಿಜಾತಾ|
ಚುಂಬನರಸಜ್ಞ ಜಯ ಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರದಿನೇಶಾ||

ಗದ್ಯ|| ಸಕಲಗಣಸಂದೋಹನಂದಿತನಂದೀಶ್ವರಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವಶೃಂಗಾರರಸತರಂಗಿತಸುರಾಂಗನಾಸಂಗೀತ ಸಂಗತರಂಗಸ್ಥಳಕೃತವಿತತಪಟುನಟನವಿಘಟಿತಜಟಾಪಟಲಗಳಿತಗಂಗಾತರಂಗ ಶೀಕರನಿಕರಸಿಮಿಸಿಮಿತನಿಟಿಲತಟಪಟುನಯನಶಿಖಿಶಿಖೋದ್ದಾಮ ಧೂಮರೇಖಾರಚಿತವಿಧುಂತುದಭ್ರಾಂತಿಪರಿಸ್ವಿನ್ನಶಶಿಶಕಲಗಳದಮೃತರಸವಿಸರಕಣಗಣಭಾಸುರವದನವಿಧುಮಂಡಲಮಂಡಿತರದನರುಚಿನಿಜಯಸಾಂದ್ರಚಂದ್ರಿಕಾ ದರದಳಿತಕರ್ಣಪೂರಕಲ್ಹಾರಕುಸುಮಸಮುದಂಚಚ್ಚಂಚರೀಕಮೃದುಳರವಮಿಳಿತಕರ್ಣಧೃತಕಂಬಳಾಶ್ವತಸರಸಸಂಗೀತಾಕರ್ಣನಕೌತುಕಾಂತರಂಗಕರಕುರಂಗತುಂಗಶೃಂಗಾಗ್ರಘರ್ಷಣಚಕಿತನಿಜಕರಕಟಕೋತ್ಫಣಿತಫಣಿಫಣಾಮಣಿಘೃಣಿಗಣಾರುಣಿತ ನಿಜಭುಜಾಲಂಬಿತಗಜದನುಜಾಜಿನಾಂಬರವಿಕಟತಾಂಡವಾಡಂಬರ ದೇವ ಜಯಜಯ

ವ|| ಇಂತುಸಾಹಿತ್ಯಸರ್ವಜ್ಞಂ ಸರ್ವಜ್ಞನಂ ನುತಿಯಿಸಿ ಯಂತ್ರವಾಹಕಂಗೆ ಮಂತ್ರಪುಷ್ಪಮನಿತ್ತು ನಿರ್ವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು ಸಂದಣಿಪ ಸಾತ್ವಿಕಂಗಳಿಂ ಕಂಗೊಳಿಸಿ ಪುರುಷಪುಂಗವಂ ಪುಂಗವಧ್ವಜಂಗಾತ್ಮಾರ್ಪಣಂಗೆಯ್ದುನಿಸಾಸುಂಪೊಳ್ತುನಿಮಿಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಪಳಿಕುಗೊಡದೊಳಗೆ ಪೊರಗು |
ಜ್ಜ್ವಳಿಪಂತಜ್ಯೋತಿಯಂತಿರೊಳಗಂಪೊರಗಂ ||
ಬೆಳಪಮನೋಮಧ್ಯಸಮು |
ಜ್ಜ್ವಳಲಿಂಗಮನರಸನಕ್ಕರಿಂ ಜಾಸಿಸಿದಂ || ೫೫

ಅಣಿಯರಮಭವನ ಸುಗುಣಮ |
ನೆಣಿಪಂತಿರೆ ನಚ್ಚಿಮಚ್ಚಿ ತನ್ಮಹಿಮೆಗಳಂ ||
ಗುಣಿಪಂತಿರೆ ಜನಪಾಲಾ |
ಗ್ರಣಿ ಪಂಚಾಕ್ಷರಮನನುಮ ಜಪಿಸಿದನಾಗಳ್ || ೫೬

ವ|| ಇಂತು ಪೂಜಾಜಪಾದಿಗಳಂ ಸಾಂಗಮೆನೆ ರಚಿಸಿ ಮತ್ತಮಿರದೆ ||

ಚಾಮರವೃತ್ತಂ ||

ವೃ|| ಷಡಕ್ಷರಾತ್ಮಕಂ ಷಡೂರ್ಮಿವರ್ಜಿತಂ ಷಡಂಗಗಂ |
ಷಡಕ್ಷರಪ್ರಭಾವಸದ್ಗುಣಂ ಷಡಧ್ವವಲ್ಲಭಂ ||
ಷಡಕ್ಷರಾಗಸಾಕ್ಷಿಣಂ ಷಡಬ್ಜಕರ್ಣಿಕಾಸನಂ |
ಷಡಕ್ಷರಪ್ರಭುಂ ಶಿವಂ ಭವಂತಮನ್ವಹಂ ಭಜೇ || ೫೭

ನಿತ್ಯಾನಂದಂ ನಿಯತವರದಂ ನಿಷ್ಕಳಂ ನೀಲಕಂಠಂ |
ಸತ್ಯಾರಾಮಂ ಸರಸಹೃದಯಂ ಸದ್ಘನಜ್ಯೋತಿರಂಗಂ ||
ಶ್ರುತ್ಯಾರೂಢಂ ಶುಭಗುಣಯುತಂ ಶುದ್ಧಸಿದ್ಧಾಂತಸಾರಂ |
ಭೃತ್ಯಾಧಾರಂ ಭುವನಶರಣಂ ತ್ವಾಂ ಶರಣ್ಯಂ ಪ್ರಪದ್ಯೇ || ೫೮



ಶ್ಲೋ|| ಮನೋಜಯಮಹಾಯೋಗೋ |
ರಾಜಾಂಕೋಮದಸುಪ್ರಿಯಃ ||
ಮನೋಜಯಮಹಾಯೋಗೋ |
ರಾಜಾಂಕೋಮದಸುಪ್ರಿಯಃ ||

ವ|| ಎಂದುಪೊಗಳ್ದು ಶರಣ್ಬೊಕ್ಕು ತತ್ಪಾದಾಂಬುಪ್ರಸಾದಸೇವನಂಗೈದು ಸಕಲಮಾಹೇಶ್ವರರಂ ಧನಕನಕಸುವಸನಮಣಿಭೂಷಣಾದಿಗಳಿಂ ತುಷ್ಟಿವಡಿಸಿ ಪೂಜಿಸಿ ತತ್ಪ್ರಸನ್ನತೆಯುಂ ಪಡೆದನಂತರಂ ನೈಪಥ್ಯನಿಕೇತನಕ್ಕೆ ನಡೆತಂದಿಕ್ಕಿದಕನಕಪರ್ಯಂಕಧವಳತಳ್ಪಮನಳಂಕರಿಸಿ ಸುಗುಣಾಲಂಕಾರನಲಂಕಾರಮಂ ತಳೆಯಲುಜ್ಜುಗಿಸಿರ್ಪಿನಮೊರ್ವನಲಂಕರಣಚತುರಂ ಬಂದು ಮುಕುಳಮಳಕ್ಕೆಳವೆಣ್ಗಳ ದಿಟ್ಟಿ ತಾಗದಂತೆ ರಕ್ಕೆಗಿಡುವವೋಲ್ವಜ್ರಮಯಮಕುಟಮನಮರ್ಚಿಯುಂ, ನೊಗಸಿರಿಯ ನಾಲಿಂಗಿಸಿದೆಳವೆರೆಯೆನಿಸಿ ಸಿತಭಸಿತತಿಳಕಮಂ ಪಣೆಯೊಳಳವಡಿಸಿಯುಂ, ಕಟಾಕ್ಷರುಚಿಲತೆಗೆ ಮುಗುಳಮಂಜರಿಯಂ ಪಡೆದಂತೆ ಮೌಕ್ತಿಕ ಚತುಷ್ಕಮಂಡಿತಕರ್ಣಾಭರಣಮಂ ಧರಿಸಿಯುಂ, ಹೃದಯಮಧ್ಯನೊಳಿರ್ಪ ಮದನಹರನಂ ಮಲ್ಲಿಗೆಯಮಾಲೆಯಿಂದರ್ಚಿಪಂತೆ ಪೇರುರದೊಳ್ಮುತ್ತಿನಹಾರಮಂ ಕಳೆಗೊಳಿಸಿಯುಂ, ಮಂದಾಕಿನಿಯ ಡಿಂಡೀರಪಿಂಡಂಗಳ್ಬಳಸಿದೈರಾವತಕರಿಕರಾಗ್ರದಸಿರಿಯಂ ಕೈಗೊಳಿಸಿ ಮುಂಗೈಯೊಳ್ಮುತ್ತಿನ ಕಂಕಣಮನಿಕ್ಕಿಯುಂ, ಪಲ್ಲ

ಶರನ ಪಲ್ಲವಶರಕ್ಕೆ ಕೆಂಗರಿಗಟ್ಟಿದಂತೆ ಕೆಂಬೆಳಗಂ ಕರೆವಕೆಂಬೆರಲುಂಗುರಮನಂ ಗುಲಿಯೊಳ್ತೊಡರ್ಚಿಯುಂ, ತನುರುಚಿಯಂ ಪಡೆಯಲೆಳಸಿ ತರಣಿಕಿರಣಮುಪ್ಪಿದಂದಮಂ ನಿರವಿಸಿ ಕನಕಕವಚಮಂ ತುಡಿಯಿಸಿಯುಂ, ನಳಿನನಾಳಮಂ ಬಳಸಿ ತಳ್ತಳಿಮಾಲೆಯ ಲೀಲೆಯನೊಳಕೈಸಿ ನೀಲರತ್ನದ ಕಡೆಯಮಂ ಪದಾಗ್ರದೊಳಂದಂಗೊಳಿಸಿಯುಮತಿಸಂತಸದಿಸಿಂತು ಕಂತುವಂ ಪಸವನಂಗೊಳಿಪ ವಸಂತನಂತವಂಪಸದನಂಗೊಳಿಸಲೊಡನೆ

ವೃ|| ತೊಳಗಿದನಿಂದ್ರನಂದನನ ಮೈಸಿರಿಯಂ ಜರೆದಾಮೃಗಾಂಕನು |
ಜ್ಜ್ವಳಮನಿಳಿಂಕೆಗೆಯ್ದು ನಳಕೂಬರನಗ್ಗದಗಂಡಗಾಡಿಯಂ ||
ಪಳಿದು ಮನೋಜನೋಜೆಯವಿಳಾಸಮನೇಳಿಸಿ ಕಾಯಕಾಂತಿಮಂ |
ಜುಳವದನಾಂಶುವಿಭ್ರಮವಿಳಾಸವಿರಾಜಿತರಾಜಶೇಖರಂ || ೬೦

ವ|| ಆಗಳ್ಮಿತವಚನಕುಮಾರನಂತೆ ತಾನುಮನೂನಾಳಂಕಾರಾಲಂಕೃತನಾಗಿ

ವೃ|| ನುಣ್ಗದಪಂ ಪಳಂಚಲೆಯೆ ಕುಂಡಳಮಂಡಳವಾನನಾಂಬುಜಂ |
ತಣ್ಗದಿರಂಗೆ ಸೋಲಮನಮರ್ಚೆ ವಿಭೂಷಣಕಾಂತಿ ಭಾನುಪಂ ||
ನಾಣ್ಗೆಡಿಪಂತೆ ಪರ್ಬಿರೆ ಕನತ್ಕವಚಾಂಶುಸಮೇತವೊಪ್ಪಮಂ |
ಕಣ್ಗೆರದೀಯೆ ರತ್ನಮಕುಟದ್ಯುತಿ ಬಂದನಮಾತ್ಯನಂದನಂ || ೬೧

ವ|| ಅನಂತರಮನಂಬೆರಸಲ್ಲಿಂ ಸಲ್ಲೀಲೆಯಿಂದೇಳ್ತಂದು ಭದ್ರಮಂಟಪದ ಮುಂದಣಮುತ್ತಿನ ಮೊಗಸಾಲೆಯೊಳ್ಕತಿಪಯಭಟಪಟಲಪರಿವೃತನೋಲಗಂಗೊಟ್ಟು ಮಿತವಚವದನಮಂ ನಿರೀಕ್ಷಿಸಿ ರಾಜಾಲಯದೊಳೋಜೆಮಿಗೆ ರಾಜಿಪರಾಜವಾಜಿಗಳಂ ಬರಿಸೆಂಬುದುಮವಂ ಬೆಸಸಲೊಡನೆ ಕಡುವೇಗದಿಂ ಕೈಗೈದುಪಲ್ಲಣಿಸಿ ಪಟ್ಟಸಹಣಿಗಳಿಕ್ಕೆಲದೊಳ್ಪಿಡಿದು ತಡೆಯದೆ ತಪರ್ಪ್ಪಗಳ್

ವೃ|| ಮಿಸುನಿಯಪಕ್ಕರಕ್ಕೆ ಪೊಸಮಾಣಿಕಪಲ್ಲಣಮಚ್ಚಮುತ್ತುತ |
ಳ್ತೆಸೆವಮುಖಪ್ರಸಾಧನಮುರಸ್ಸ್ಥಿತಕಿಂಕಿಣಿಕಾಳಿ ಪಕ್ಕದೊಳ್ ||
ಮಿಸುಗುವಜಲ್ಲಿ ಬೆಳ್ಗರಿ ಕೊಡಂಕೆಯಚಾಮರವೊಪ್ಪೆ ಬಂದುವಂ |
ದಸದೃಶವಾಜಿಗಳ್ಸುಗುಣ ರಾಜಿಗಳುತ್ತಮಸತ್ವಭಾಜಿಗಳ್ || ೬೨

ಕಂ|| ನೊಸಲೊಳ್ಮಿಸುಗುವಮಿಸುನಿಯ |
ಪೊಸಕನ್ನಡಿ ಕಣ್ಗೆವಂದುದಿನಬಿಂಬಂ ಬಂ ||
ದೆಸೆವಂತೆ ನಿಜಸಮನ್ವಯ |
ವಸುಧೇಶ್ವರವಿಹರಣೇಕ್ಷಣಾಪೇಕ್ಷತೆಯಿಂ ||

ವ|| ಅಂತುಮಲ್ಲದೆಯುಂ

ಕಂ|| ಜವದಿಂ ಗಮಿಪುದನೆನ್ನೊ |
ಳ್ತವೆಕಲ್ತಂ ಪವನಸವನನಪಿ ನುಂಗುಗುಮೆಂ ||
ದವಧರಿಸಿ ಕರ್ಚಿದಂತಿರೆ |
ನವಾಶ್ವಮಾಸ್ಯದ ಖಲೀನದಿಂ ಕಣ್ಗೊಳಿಕುಂ ||

ವ|| ಅಂತೆಸೆದು ಬಂದಾಸಗರ್ವಗಂಧರ್ವಂಗಳಂ ಸಸಂಭ್ರಮಂ ನಿರೀಕ್ಷ್ಷಿ
ಸಂತಸಂಬಟ್ಟು ವಿಹರಣಪ್ರಸ್ಥಾನಭೇರಿಯಂ ಪೊಯ್ಸೆಂದು ದಂಡನಾಥಂಗೆ ಧರ
ಧಿಪಂ ಬೆಸಸೆ ತನ್ನಿರೂಪದಿಂ ಮೇಘನಾದಂ ಬಂದು ಭೇರಿಯುಂ ಭೂರಿಸ್ವನಂ ನೆಗ
ಕನಕಕೋಣಮುನಡಸಿ ಪಿಡಿದು ಪೊಡೆಯಲೊಡನೆ

ವೃ|| ಬಿಡುಗಣ್ಣುರ್ಕಡುಬೆರ್ಚೆ ಒಳ್ಕೆ ದಿಗಿಭಂಗಳ್ಕೂಗಿಪಂ ಬಾಗಿ ಕುಂ |
ಬಿಡೆ ಭಾಸ್ವದ್ರಥದಶ್ವಮಳ್ಕೆ ಕದಡೇಳ್ದಂಬೋಧಿಯುಂ ತುಳ್ಕೆ ಕ ||
ಣ್ಗಿಡೆ ವಿದ್ವಿಟ್ತತಿಯುರ್ಬ್ಬೆ ಪರ್ಬ್ಬೆ ವಿಪುಳ ಬ್ರಹ್ಮಾಂಡಮಂ ತುಂಬಿ ತ |
ಳ್ತಿಡೆಗೊಂಡತ್ತು ಧಳಂಧಳಂಧಳನದದ್ಗಂಭೀರಭೇರೀರವಂ ||

ವ|| ಆಗಳಾವಿಹರಣವಿಳಾಸವಿಪುಳಭೇರೀರವಂಗೇಳ್ದು ಮೇಘನಾದಮ
ಕೇಳ್ದಮಯೂರಂಗಳಂತೆ ಕಡುಸಡಗರಂ ಮಿಕ್ಕು ಪೊಕ್ಕು ಗಂಧಸಿಂಧುರಂಗಳ
ಬಂಧುರಮೆನೆ ಪಿಂಗದೆ ಸಿಂಗರಿಸಿ ಗಜಾರೋಹಕರ್ಪ್ಪಸದನಂಬಡೆದೇರಿ ಮೀ
ನೆರಪಿದಾಗಳ್

ವೃ|| ಇಳಿವಿಳೆಯುಂ ಪದಂಗೊಳಿಸೆ ದಾನಜಳಂ ಜಳದಾಗಳಂತೆ ಮಂ |
ಜುಳಪೃಥುಕೂಟದಂತೆಸೆಯೆ ಕುಂಭತಟಂ ಕುಳಭೂಧರಂಗಳಂ ||
ತವಳಡೆ ದಂತಕಾಂತಿ ಸೊಡೆಯುಂತಿರೆ ಭದ್ರರವಾಗ್ರಹಂಗಳಂ |
ತಳರ್ದವಿಳಾವನೀತಳಮನೇಂ ನೆರೆದಿರ್ದ್ದುವೊ ಮತ್ತಹಸ್ತಿಗಳ್ ||

ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ ಸಂ |
ಗ್ರಥಿತೋದ್ಯಚ್ಚಾಮರಪ್ರಸ್ಫುರಿತಚಳಿತಕರ್ಣಂ ಭ್ರಮದ್ಭೃಂಗಸಂಘ ||
ಪ್ರಥಿತಪ್ರೋದ್ದಾನಧಾರಾಘಟಿತಕಟತಟಂ ಮೇಚಕೋಚ್ಚಂಡಚಂಚ |
ತ್ಪೃಥಿವೀಭೃತ್ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಲಂ||

ವ|| ಅಂತು ನೆರೆದೇಳ್ತಂದ ದಂತಿಸಂತತಿಯಲ್ಲದೆಯುಂ

ವೃ|| ಘನಘಂಟಾಖುರಮುನ್ನತಂ ಪೃಥುತರಸ್ಕಂಧಂ ಬೃಹದ್ದೀರ್ಘದೇ |
ಹನಿಯುಕ್ತಂ ಸಮದಂತಮುಜ್ಜ್ವಳಮುಖಂ ವ್ಯಾಲಂಬಿವಾಲಂ ಲಸ ||
ದ್ಧ್ವನಿ ಚೇತೋಗತಿ ಸನ್ಮಣಿವ್ರಜಸಮಾಕೀರ್ಣಸ್ಫುರತ್ಸ್ವರ್ಣಮುಂ |
ಜನಮೇಳ್ತಂದುದಭಂಗಭಂಗವಿಳಸದ್ರಂಗತ್ತುರಂಗವ್ರಜಂ || ೬೮

ವ|| ಇಂತೇಳ್ತಂದ ಪಂಚಪಲ್ಲವದವಾಜಿಗಳ ರಾಜಿಗಳ ಪಿಂದೆ ಸಂದಣಿಗೊಂಡು

ವೃ|| ಮಿಳಿರ್ದತ್ತಂ ತೋರೆ ಪೊಂಬಟ್ಟೆಯ ಪಳಯಿಗೆಗಳ್ಮೇಲೆ ಮುಕ್ತಾತಪತ್ರಾ|
ವಳಿ ಚೆಲ್ವಂ ಬೀರೆ ಚಕ್ರೋಚ್ಚಳಿತಚಟುಲಚೀತ್ಕಾರಮಾಶಾಪ್ರದೇಶಾ ||
ವಿಳಮಾಗಲ್ಮೀರೆ ಸೂತವ್ರಜದ ಬಗೆ ತುರಂಗಂಗಳಾದಂತೆ ಮುಂದು |
ಜ್ಜ್ವಳಿಸುತ್ತುಂ ಪಾರೆ ಕೂಡಿತ್ತಮುಮುಪೃಥುವರೂಥವ್ರಜಂಪೆರ್ಮೆಯಿಂದಂ ||

ವ|| ಅಂತು ನೆರೆದೇಳ್ತಂದು ನಿಂದವರೂಥವಾಜಿಗಳಲ್ಲದೆಯುಂ |

ವೃ|| ಎಡಗಾಲೊಳ್ಪೊಂದೊಡತ್ತರ್ಕಳ್ತಿರೆ ಝಣಝಣನಿಕ್ವಾಣಮುದ್ಘೋರುಕಂನೇ
ರ್ಪಡೆ ಚೆಲ್ವಂ ಬೀರೆ ಗೇಣಾಂ ತಳೆದು ಮಿಸುಗೆ ಕೆಂದಟ್ಟಿ ಪೊಂಗುಪ್ಪಸಂದೊ||
ಟ್ಟೊಡಸಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಲಾ |
ಳ್ಗಡಣಂ ಕೈಕೊಂಡು ನಾನಾಯುಧಮನಮಮ ಬಂದತ್ತದಂ ಪೇಳ್ವೆನೇನಂ||

ವ|| ಇಂತನಂತಸಂಭ್ರಮದಿಂ ನೆಲನೆಲ್ಲಮನಳುಕ್ಕೆಗೊಂಡು ಘುಳುಘುಳಿಸಿ ನೆರೆದು ತೆಕ್ಕನೆ ತೀವಿದಚತುರಂಗಬಲಮುಂ ಕಂಡು ಕಡುಸಂತಸಂಮಿಕ್ಕು

ಕಂ|| ವಂದಿಗಳುಗ್ಗಡಿಸುತ್ತಿರೆ |
ದುಂದುಭಿ ಮಿಗೆ ಮೊಳಗೆ ಬಹಳಕಹಳಾಸಾದಂ ||
ಮುಂದೆಸೆಯೊಳೆಸೆಯೆ ನೃಪನೊಲ |
ಪಿಂದಡರ್ಗಿಂ ಪವನಗಮನಸಾಮ್ಯದಹಯಮುಂ || ೭೧

ವ|| ಅಂತೇರಿದಾಗಳಾಮಿತವಜನಕುಮಾರಂ ಹರಿಣಗತಿಯೆಂಬೆರಡನೆಯ ತುರಂಗಮನಾರೋಹಿಸಿ ತನ್ನೊಡನೆ ಸಹಗರಂ ಮಿಕ್ಕು ಸುರತುರಂಗಮನಡರ್ದ ಜಯಂತನೊಡನೆ ಧನದಾಶ್ವಮನಡರ್ದುೞ್ತಳರ್ವನಳಕೂಬರನಂತೆಸೆದು ಒರೆ ನಿಜ ಮಕುಟರುಚಿರರುಚಿ ರವಿಕಿರಣಮಂ ಪಳಂಚಲೆಯೆ ತೊಡೆದಮೃಗಮದಕರ್ದ ಮದ ಕಡುಗಂಪಿಂಗೆ ಪಿಂಗದೆ ಭೃಂಗಾಳಿ ಕವಿತರೆ ಪುಷ್ಕರಪುಂಡರೀಕಮಿಲ್ಲಂ ಬಬಗೆಯನಿಲ್ಲೆನಿಪಂತೆ ಸಲ್ಲಲಿತಮುಕ್ತಾಮಯಾತಪತ್ರಂಗಳ್ಮೇಲೆ ಲೀಲೆಯಿಂ ಒರೆ ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದಚೀನಾಂಬರದ ಸೆರಂಗಿನಂತೆ ತೊಳ ತೊಳಪಪಳಯಿಗೆಯ ಪಟಂಗಳ್ಮೆರುತ್ತಿರೆ ವಿಭವರಮೆಯ ಕಟಾಕ್ಷಮೆಂಬಂತೆ ಭಾಮಿನೀಚಾಲಿತಚಾರುಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆ ದತರಂಗದಂತೆ ಸೂಸುವಸೀಗುರಿ ದೇಸಿವಡೆಯೆ ಪಿರಿದುಸಂಭ್ರಮದಿಂ ಪುರವೀಥಿ ಯೊಳ್ಬಪ್ಪಾಗಳ್

ವೃ|| ಮಣಿಮಯಭೂಷಣಾಂಶು ಮಕುಟದ್ಯುತಿ ಹಾರಮರೀಚಿ ವಜ್ರಕಂ |
ಕಣರುಚಿ ಮೆಯ್ಯ ಸುಣ್ಬೆಳಗು ಕಯ್ಯಸಿತಾಸಿಯ ಕಾಂತಿ ಪೊಸ್ನಪೀ ||
ತಣೆಯಪೊಗತ್ತಳತ್ತಳಿಸೆ ದಿವ್ಯಹಯಂಗಳನೇರಿ ಬಂದುದಂ |
ದಣಿಕೆಗಳುಂಬವಾಗಿ ವಿಭವಂ ಮಿಗೆ ರಾಜಕುಮಾರಸಂಕುಳಂ || ೭೨

ಕಂ|| ಆರಾಜಸುತರ ನಡುವೆ ಮ |
ಹಾರಾಜಸುತಂ ಸಿತಾಶ್ವದಗ್ರದೊಳೆಸೆದಂ ||
ಶಾರದನೀರದದಗ್ರದೊ |
ಳಾರಾಜಂ ಭಗಣಪರಿವೃತಂ ರಂಜಿಪವೋಲ್ || ೭೩

ಗಗನದೊಳೆ ನೋಡಲೆಂದು |
ಬ್ಬಗಿಸಿದಖಚರಿಯರ ಕಣ್ಗೆ ಬಲಧೂಳಿ ಕರಂ ||
ಪುಗವಂತೆ ಬೀಸಿದವುದೆನೆ |
ಮಿಗೆ ಮೆಳರ್ಪಟಂಗಳಿಂದೆ ಪಳಯಿಗೆ ಮೆರೆಗುಂ || ೭೪

ಯುಂ, ನೆರೆನೆರೆದು ತರಂಜಿತ್ತು ಧರ್ಮರುಮ್ಯರ್ಂಗಳೊಳ್ಕ್ಕುರ್ಮ್ಮರಿಂ ನೋಳ್ಪ
ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾ
ಸ್ಫಾಲನಂಗೈದು ಮಡಸನ್ನೆಯುಂ ಮನದೊಳ್ನೆನೆವಲ್ಲಿ ಮುನ್ನಮೆ

ವೃ|| ಕಂತುಕದಂತೆ ಪುಷ್ಕರತಳಕ್ಕೊಗೆದೂರ್ಮಿಕೆಯಂತೆ ಪಾಯ್ದು ಪಿಾ |
ನಂತಿರೆ ಮಿಾರಿಲಂಘಿಸಿ ಲಸನ್ಮೃಗದಂತಿರೆ ದಾಂಟಿ ಮಿಂಚಿನಂ ||
ಬಂತೆ ನಭೋಂತದೊಳ್ಪೊಳೆದು ಸುಟ್ಟುರೆಯಂತಿರೆ ಸುತ್ತಿ ಪತ್ತಿ ನಾ |
ಗಾಂತಕನಂತೆ ಪಾರಿದುದು ತುಂಗತುರಂಗವಿಳಾಧಿನಾಥನಾ || ೭೮

ಕಂ|| ಆವಾಜಿಯ ಹೇಷಾರವ |
ಮಾವಾಸವನಶ್ವಕರ್ಣಮಂ ಪುಗೆ ಭಯಮುತ್ತ್ರಿ ||
ತ್ತೇವೇಳ್ಪೆನಿನ್ನುಮದನೇ |
ಭಾವಿಸುತುಚ್ಚೈಶ್ರವಸ್ತ್ರವನಾಲ್ದುದು ತೋರ್ಕ್ಕರಂ || ೭೯

ವ|| ಅಂತುಮಲ್ಲದೆಯುಂ

ಕಂ|| ತುರಗಖುರಖುರಸಮುತ್ಥಿತ |
ಧರಾರಜಂ ನೆಗೆದು ತೀವೆ ನಿಜಲೋಕದೊಳಾ ||
ಸರಸಿಜಸಂಭವನದರೊ |
ಳ್ಪೊರೆದಂದಿಂದಲ್ತೆ ತಾಂ ರಜೋನ್ವಿತನಾದಂ || ೮೦

ನಗರಿಪುಗೆ ಚಿಂತೆ ಸಂತಸ |
ಮೊಗೆದುದು ರವಿ ರಾಗವಳಿದನಸುರಾರಿಯು ಸಿ ||
ದ್ರೆಗೆ ಮುಳಿದಳ್ರಮೆ ಕವಿ ಮಿಗೆ |
ನಗುತಿರ್ದ್ದಂ ಚಿಂತೆಗೆಯ್ದನಸುರಾಚಾರ್ಯಂ || ೮೧

ವ|| ಆಗಳ್

ವೃ|| ಪರಿಯಿಪ ನೆಟ್ಟನಟ್ಟುವಿದಿರ್ಚಿದು ಪಾರಿವ ಕಿಲ್ತುಪಾಂಟಿಪಿ |
ಬ್ಬರಿಯೊಳ್ ಸುತ್ತಿಪಾಯುತಿರ್ಕೆಯುಂ ಮಿಗೆ ನರ್ತಿಪ ದಿಂಡುದಾವುಲುಂ ||
ಪ್ಪರಿಪ ಜಿಹ್ಗಿನಿಂನದವುಕಂಗಮುಲುಂಗನೆ ಪಾದಧಾರೆಯೊ |
ಕ್ಕರಿಣತಿರ್ದೊದ್ಧೂತಾತಳಿತನಂ ಬಗೆಗೊಂಡುದು ಮಂತ್ರಿಪುಕ್ಕೆರಾ || ೮೨

ವ|| ಇಂತತುಳವಿಳಾಸಂಬಡೆದಶ್ವಾರೋಹಣಪರಿಣತಿಯಿಂ ಪರಿಶೋಭಿವ ಡೆದಾಮಿತವಜನಂಬೆರಸು ರಾಜಶೇಖರರಾಜೇಂದ್ರಂ ರಾಜವೀಧಿಯಂ ದಾಂಟಿ ಪುರಬಹಿರ್ದೇಶದ ವೈಹಾಳಿಯುಬಯಲ್ಗೆ ಸಸಂಭ್ರಮಂ ಬರೆ ತದಾದೇಶಮಂ ಪಡೆದು

ವೃ|| ಬಲಮೆರಡಾಗಿ ಪೆರ್ಮೆವಡೆದೊಡ್ಡಿ ಏಳಾಸಡೆ ನಿಂದು ಬೊಬ್ಬೆಗೊ |
ಟ್ಟುಲಿದು ವಿನೋದಯುದ್ಧಮನಮರ್ಚ್ಚಲೊಡರ್ಚ್ಚಿ ಹಯಂಗಳೊಳ್ಳಯಾ ||
ವಳಿ ಪೊಸತೇಗ್ಗಳೊಳ್ಮಿ ಸುಪತೇಗ್ಗಳಿಭಂಗಳೊಳೊಲ್ದಿಭಂಗಳು |
ಜ್ಜ್ವಲಭಟರಾಜಿಯೊಳ್ಸುಭಟರಾಜಿ ಪಳಂಚಿದುದೇನನೆಂದಪೆಂ || ೮೩

ವ|| ಅಂತುಭಯವಾರ್ಧಿಗಳಿದಿರ್ಚ್ಚಿ ಪಳಂಚುವಂತೆ ಪಳಂಚಿ ಮಿಸುನಿವೆಸ ದಪುಟ್ಟಿಗೋಲ್ಗಳಂ ಪಿಡಿದು ಜಡಿದೊಟ್ಟಜೆಯಿಂದಿಟ್ಟಣಿಸಿನಿಂದು

ವೃ|| ತಿವಿವ ಮುರಳ್ಚುವಬ್ಬರಿಪ ಗರ್ವಿಪ ಬೊಬ್ಬಿರಿವಾರ್ವ ಸಾರ್ವ ಮೇ |
ಣ್ಕವಿವ ಕಡಂಗುವಿಟ್ಟಣಿಪ ಸುತ್ತುವ ಪತ್ತುವ ನಿಲ್ವ ಗೆಲ್ವ ಪೊ ||
ಣ್ಮುವ ಪುಟವೇಳ್ವ ಪಾಯ್ವ ಮಿಗೆಪೊಯ್ವ ತೊಡಂಕುವ ತೋಟಿಗೈವ ಕೂಂ |
ಕುವ ನೆರೆನೂಂಕುವೇಳ್ಗೆಯುಬಲಂ ಬಗೆಗೊಂಡುದು ತತ್ಕುಮಾರರಾ || ೮೪

ವ|| ಮತ್ತಮಾಸೇನಾಚಕ್ರದೊಳಳುಕ್ಕೆವೆತ್ತು

ಕಂ|| ಸುಳಿಸುಳಿದಶ್ವಮನೇರುತೆ |
ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚ್ಚುತೆ ಪೆರಕಾ ||
ಲ್ಗೊಳಿಸಿ ಪೆಡಂಮೆಟ್ಟುತ್ತೆ |
ಪ್ಪಳಿಸುತ್ತೆ ಪಳಂಚಿದತ್ತುರಂಗಿಗಳದರೊಳ್ || ೮೫

ವ|| ಇಂತು ಪಳಂಚುವ ತುರಂಗಿಗಳಂ ಕಂಡು ಸಡಗರಂ ಮಿಕ್ಕು

ಕಂ|| ಅಣೆದಲೆದು ನೂಂಕಿ ಗರ್ಜಿಸು |
ತಣೆಯುರಮೆಣೆಗೊಂಡಿಭಂಗಳಂ ಭರಿಕೈಗ ||
ಳ್ಪೆಣೆದಿರೆ ಕಾದಿಸಿ ತಾಮುಂ ||
ಪೊಣರ್ದಿಭಾರೋಹಕರ್ಪ್ಪಿಳಾಸದಿನಾಗಳ್ || ೮೬

ವ|| ಇಂತು ಪೋಣರ್ವಿಭಾರೋಹಕರ ಕಡುಪಂ ನೋಡಿ ನೀಡುಂಕಡಂಗಿ

ಕಂ|| ಇದಿರೊಳ್ಪರಿಯಿಸಿ ರಥಮಂ |
ತುದಿಯೊಳ್ಮಿಳಿರ್ದಾಡೆ ಕೇತನಂ ಪೂಸರದಿಂ ||
ಪದೆದೆಚ್ಚಾಡಿದರದಟಿಂ |
ದದರ ಪರಾಗಂ ನಿಜಾಂಗದೊಳಪ್ಪೊರೆವಿನೆಗಂ || ೮೭

ವ|| ಆರಥಿಕಾಟೋಪಮನುಭಯಪದಾತಿ ಕಂಡು ಕೈಗಣ್ಮೆಸಿಂದು

ವೃ|| ಅಲರ್ಗಳ ಚಂಡು ಕುಂಕುಮದ ಸೀರ್ಗ್ಗಳ ಕುಪ್ಪಿಗೆ ಚಂದನಚ್ಛಟಾ |
ಕಲಿತಸರೋಜಕೋರಕಮುದಾತ್ತಮೃಗೋದ್ಭವ ಚೂರ್ಣಪೂರ್ಣಮು ||
ಜ್ಜ್ವಲಿತರಸಾಲಪಲ್ಲವದ ಪೊಟ್ಟಳಮೆಂಬಿವರಿಂದಿದಿರ್ಚ್ಚಿತ |
ದ್ಬಲಮೆರಡಿಟ್ಟು ತಳ್ತಡಸಿ ಜೊಬ್ಬರಿದಾಡಿದುದೇನನೆಂದಪೆಂ || ೮೮

ವ|| ಇಂತು ವಿನೋದಯುದ್ಧಮಂ ಚತುರತೆಯಿಂ ರಚಿಸಿ ಚಾತುರಂಗಂ ಪುರಾಭಿಮುಖಮಾಗಿ ತಿರುಗಿ ಸರಭಸಂ ಬರೆವರೆ

ವೃ|| ಕರಿದಾನಾಸಾರದಿಂ ತಳ್ತಿಳೆ ಬಳಭರದಿಂ ತಾಂ ಜೆನುತ್ತಂತೆ ತೋರು |
ತ್ತಿರೆ ವಾಜಿವ್ರಾತ ವಕ್ತ್ರಚ್ಯುತಸಿತವಿಸರತ್ಫೇನಪಿಂಡೌಘಮೊಕ್ಕಂ ||
ತಿರೆ ಭೇರೀಧ್ವಾನದಿಂದಂ ಭಗಣಮಿನನಡಂಗಿರ್ದ್ದಪೋಲ್ತೋರೆ ಕೇತೂ |
ತ್ಕರಭೀತಂ ಧೂಳಿಜಾಳಂ ಕವಿಯೆ ಜವದಿನೈತಂದುದಾರಾಜಸೈನ್ಯಂ || ೮೯

ಖರಖುರಘಾತಜಾತಧರಣೀತಳರೇಣುವಜಾಂಡಪಂಕಜಾ |
ತರಜಮಿದೆಂಬಿನಂ ನೆಗೆದು ತೀವಿರೆ ವೇಗಕೆ ಸೋಲ್ತುಗೊಂಟಿಸೊ ||
ಳ್ಮರುತನಡಂಗೆ ಮೃಗರೆಯೆ ಪುಲ್ಲೆ ವನಾಂತದೊಳಿಂದ್ರನಶ್ವಮು |
ಳ್ಕಿರೆ ಸುರಲೋಕದೊಳ್ಕಿಳಿರ್ದದೇಂ ಪಿದತ್ತೊ ತುರಂಗಮದ್ವಯಂ || ೯೦

ವ|| ಮತ್ತಂ

ವೃ|| ಸುಳಿಸುಳಿದೊತ್ತಿ ಪತ್ತಿ ತನೆ ಸುತ್ತಿ ಕಡಂಗಿ ಬೆಡಂಗುವೆತ್ತು ಸಂ |
ಚಳಿಸಿ ನಭಕ್ಕೆ ಮಾರಿ ಮಿಗೆ ಪಾರಿ ಚಮತ್ಕೃತಿವೀಲ ತೋರಿ ತ ||
ನ್ನಳವಸಿಳಾತಕ್ಕೆ ಕಿಳಿರ್ದುಪ್ಪರಿಸುತ್ತುರೆ ಮಾಂಟಿ ದಾಂಟಿ ಕಂ |
ಟಳಿಸಿ ಪೊದಳ್ಪು ಪಾಯ್ದು ಪರಿಯಿಟ್ಟುದು ವಾಯುರಯಂ ಹಯದ್ವಯಂ ||

ವ|| ಇಂತನಂತಸಂಭ್ರಮಂ ಮಿಗೆ ಜವಗಜವಮನತಿಕ್ರಮಿಸಿ ಪರಿವಾರರಾ ಜವಾಜಿಗಳನೋಜೆ ಮಿಗೆ ರಾಜವೀಥಿಯೊಳಾಕುಮಾರರಿರ್ವರ್ವಿವಿಧತರಗತಿ ಚತುರತೆಯಿನೇರುತ್ತುಂ ಬರ್ಪ್ಪರ್ಗಳ್

ವೃ|| ಕನಕಸ್ಫಾಟಿಕರತ್ನಹರ್ಮ್ಯಚಯಮಂ ಬಂದೇರಿ ನಿಂದಲ್ಲಿ ಕಾ |
ಮಿನಿಯರ್ಸ್ವಲ್ಪಿಡಿದೀಕ್ಷಿಸುತ್ತಿರೆ ತದಾಸ್ಯಶ್ರೇಣಿಯುಂ ದೀರ್ಘಲೋ ||
ಚನದಿವ್ಯದ್ದ್ಯುತಿಯುಂ ಪಳಂಚಲೆದುದುದ್ಯದ್ದರ್ಪಣೇಂದೀವರಾ |
ಳಿನಿಯುಂ ಕೊರ್ತೋನ್ನತಚಾರುತೋರಣಮನಾವೀಥೀಪುರೋಭಾಗದೊಳ್ || ೯೨

ವ|| ಆವಿಳಾಸಿನಿಯರಲ್ಲದೆಯುಮಲ್ಲಿ ಕೆಲಂಬರಾನರೇಂದ್ರನನಭೀಕ್ಷಿಸಲೆಂದು

ವೃ|| ತೊಡವೆಳಗಿಂದ್ರಚಾಪಲತೆ ಸೋರ್ಮ್ಮುಡಿ ಕಾರ್ಮ್ಮುಗಿಲುರ್ವ್ವಿ ಪಾಯ್ವ ಕಣ್ಗಡೆ ಕುಡಿಮಿಂಚು ಮಂಜುಮಣಿನೂಪುರಸಿಂಜಿತಮಬ್ದರಾವಮೊ ||
ಗ್ಗೊರ್ಗಡೆಯುಡೆ ಮೇಲೆ ಸೂಸುವಸುಲಾಜೆಗಳೊಳ್ಸರಿಯಾಗೆ ಬಂದು ಕಾ |
ರೊಡತಿಯರಿಲ್ಲಿ ನಿಂದರೆನೆ ಸೌಧನಗಾಗ್ರದೆ ಪೆಣ್ಗಳೊಪ್ಪಿದರ್ || ೯೩

ವ|| ಅಂತುಮಲ್ಲದೆಯುಂ

ವೃ|| ಎಳಲತೆ ತೋಳ್ಗಳಿಂದುಟಿಯೆ ಜೆಂದಳಿರೊಳ್ತೊಡೆ ಬಾಳೆ ನಾಭಿ ತಂ |
ಗೊಳಮುಲಘುಸ್ತನಂ ಕೃತಕಶೈಲಮಪಾಂಗಮರೀಚಿ ಪುಷ್ಪಸಂ ||
ಕುಳಮಳಕಂ ಮದಾಳಿಕಳಭಂ ಮೊಗಮಂಬುಜಮಾಗೆ ಬಂದಕೋ |
ಮಳೆಯರಿಳೇಶಚಂದ್ರಮನನಾವನಲಕ್ಷ್ಮಿಯರಂತೆ ನೋಡಿದರ್ || ೯೪

ಕ್ಷಿತಿಪತಿ ರಾಜಶೇಖರಸಿವಂ ನವಮೌಕ್ತಿಕಭೂಷಣಾಂಶುಭೂ |
ಷಿತತನು ಮುಂದೆ ಮುಂಬರಿವ ತುಂಗತುರಂಗಮನೇರಿ ಬರ್ಪ್ಪವಂ ||
ಮಿತವಚನಂ ಮೃಗಾಕ್ಷಿ ನಡೆನೋಡಿವನಲ್ತೆ ನವೀನಭೂಷಣ |
ಪ್ರತತಿಯುನಾಂತು ನರ್ತಿಪಸಿತಾಶ್ವಮನೇರುತೆ ಪಿಂದೆ ಬರ್ಪ್ಪವಂ || ೯೫

ವ|| ಎಂದಲ್ಲಿ ವಿದಗ್ಧೆಯರ್ಮುಗ್ಧೆಯರ್ಗ್ಗೆ ತೋರಿ ನುಡಿಯುತ್ತಿರೆ ಮಂತ್ರಲಕ್ಷ್ಮಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆ ಹರಪ್ರೇರಣೆಯಿಂ ತಿರುಕೊಳವಿನಾಚಿಯೆಂಬಶಿವಭಕ್ತೆಯಣುಗಂ ಶಂಕರನೆಂಬ

ಪೆಸರ ಪಂಚವರ್ಷದಕುಮಾರಂ ನಿಜಜನನಿ ನೀರ್ಗೆವೋದಪೊಳ್ತಿನೊಳಾಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀಧಿಗೆ ತಡೆಯದೆ ಬಂದು ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವಪಡೆಯ ತಡೆಗಾಲೊಪ್ಪೆಡೆಯೆ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು ತಾಯುಂ ಕರೆಕರೆದು ಬಾಯುಂ ಬಿಟ್ಟಳಲ್ದು ಕಯ್ಯೂರಿ ಮೆಲ್ಲನೇಳ್ವನಿತರಲ್ಲಿ

ವೃ|| ಶಿವಶಿವಪೇಳ್ವಿನೇನನವನೀಪತಿ ತನ್ನ ತುರಂಗಮಂ ಮಹಾ |
ಜವದೊಳೆ ಕಂಡು ದಾಂಟಿಸಿ ಕೆಲಂದೆಗೆಯೆಂಬನಿತಕ್ಕೆ ಮುಂಚಿ ಮು ||
ನ್ನವೆ ಸಚಿವಾಶ್ವಮೈದೆ ಕೊಳಗಿಂ ತಲೆ ಖಂಡಿಸಿ ಪಾರೆ ಮೆಟ್ಟಿತಂ |
ದವಿರಳರಕ್ತಧಾರೆ ಪೊರಸೂಸಿರೆ ಬಾಲನ ಕಂಠನಾಳಮಂ || ೯೩

ವ|| ಅಂತು ಪರಿದಾರಕ್ತರಸದೊಳಳ್ದು ಬಿಳ್ದಾಶಿರಃಪುಂಡರೀಕಮಂ ಕಂಡು ಸಚಿವಸುತನುಂ ತಾನುಂ ಮನಂನೊಂದು ಮತಿಯುಡುಗಿ ಮರುಗಿ ಶಿವಶಿವಾ ಶಿವಭಕ್ತಶಿಶುವಧಮಾದುದಿದಂ ಶಿವಂ ಒಲ್ಲನೆಂದುಮ್ಮಳಿಸುತಿನಿಸಾನುಂಬೇಗಮಿರ್ದ್ದು

ಕಂ|| ಇಂನಿದಕೆ ಚಿಂತೆಗೆಯ್ದೊಡೆ |
ಪಂನತಿಕೆಗೆ ಬನ್ನವಲ್ತೆ ಫಡಫಡ ಫಣಿಭೂ ||
ಷಂ ನೆಟ್ಟನೆ ಮೆಚ್ಚ್ಚರೆ ತೋ |
ರ್ಪಂನಿಜಸಾಹಸಮನಿದಕೆ ತಕ್ಕುದುಜ್ಜುಗಮಂ || ೯೭

ವ|| ಎಂದು ನಿಶ್ಚೈಸಿ ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ಸಂದೆವೊಯ್ದು ನಡೆತಂದು ರಾಜಾಲಯದ್ವಾರೋಪಾಂತದೊಳ್ವಾಜಿಗಳನಿಳಿದು ದಂಡನಾಥಮಂಡಳಿಕಾದಿಯುಂ ಯಥಾಕ್ರಮಂ ಬೀಳ್ಕೊಟ್ಟು ನಿಜಗೃಹಂಗಳಂ ಪೊಕ್ಕಿರ್ದ್ದರನ್ನೆವರಮಿತ್ತಲ್ನೆರೆದಪುರಜನಮಾರುಂಡಮಂ ಮುಂಡಮಂ ಕಂಡು

ಕಂ|| ಅಕಟಕಟಬಾರಣಾಗನೀ |
ಸುಕುಮಾರಂ ಮಡಿದನಶ್ವಖುರಹತಿಯಿಂ ಬಾ ||
ಲಕವಧಮಿದನರಿದೊಡೆ ತಾ |
ನಕುಟಿಲಮತಿ ಚೋಳನೃಪತಿಯೇಂ ಸೈರಿಸನೇ || ೯೮

ಶರಣಜನವನಜವನದಿನ |
ಕರನಾಸತ್ಯೇಂದ್ರಚೋಳಧರಣೀಶ್ವರನೀ ||
ಶ್ವರಭಕ್ತವಧವನಿದನಾ |
ದ್ದೊರ್ರಕೊಳಿಸಿದರೆಂದು ಮುಳಿಯದಿರ್ಪ್ಪನೆ ಬಳಿಯಂ || ೯೯
ಮನುಚೋಳಂ ಮನ್ನಿಸಿದನೆ |
ತನಯನನಪರಾಧಯುಕ್ತನಂ ಪಿತನೆಂದೇಂ ||
ನೆನೆದನೆ ಚಂಡೇಶಂ ತ |
ನ್ನನೆ ಬಗೆದನೆ ಬಗೆಯೊಳಾಪಗಲ್ಪೋಳನೃಪಂ || ೧೦೦
ಆದರಿಂದೇನಪ್ಪುದೊ ಬ |
ಪ್ಪುದನೀಶಂ ಬಲ್ಲನೆಂದು ಮರುಗುತ್ತಿರೆ ತ ||
ಳ್ವದೆ ಘಟವನಿಳಿಪಿ ಕಾಣದೆ |
ಸುದತಿ ನಿಜಾತ್ಮಜನನರಸಿ ತೊಳಲುತ್ತಿರ್ದ್ದಳ್ ೧೦೧

ವ|| ಅಂತುತೊಳಲ್ದು ಕಾಣದೆ ತಲ್ಲಣಿಸಿ ತಳವೆಳಗಾಗಿ

ವೃ|| ಎಲೆಸುಕುಮಾರ ಶಂಕರಕುಮಾರಕ ಬಾರ ಮದೀಯಲೋಚನೋ |
ತ್ಪಲರಜನೀಶ ನಿನ್ನಮೊಗದಾವರೆಯಂ ಮಿಗೆ ತೋರದೆತ್ತ ಪೋ ||
ದೆ ಲಲಿತಮಂದಹಾಸ ಲಲಿತಸ್ಖಲದಕ್ಷರವಾಣಿ ಗೆಜ್ಜೆ ಮೆ |
ಲ್ಲುಲಿಗುಡೆ ಬಂದು ಬಳ್ಳಿರಿಯನಪ್ಪದೆ ತಳ್ವಿದೆಯೇಕೆ ತನೂಭವಾ || ೧೦೨

ವ|| ಎಂದು ಸಿಡುಸರದಿಂ ಕೂಗಿ ಕರೆಕರೆದು ಕಾಣದೆ ಕರಕರಿಸಿ ರಾಜಪುತ್ರನ ವಿಹರಣಮಂ ನೋಡಲೆಳಸಿ ರಾಜವೀಥಿಗೆ ಬಂದನೆಂದು ಬಗೆದು ಬಗೆಗೆಟ್ಟು ಬಾಯ್ಬಿಟ್ಟು ಜನನಿ ಜವದಿನೆಳ್ತಂದಲ್ಲಿಯುಮರಸಿ ಕಾಣದೆ

ಕಂ|| ಕರಿಗಳ ಕಾಲ್ಗೊಳಗಾದನೊ |
ವರೂಥಚಕ್ರಕ್ಕೆ ಸಿಲ್ಕಿದನೊ ಹಯಚಂಚ ||
ತ್ಖುರಹತಿಯಿಂದಳಿದನೊ ಶಂ |
ಕರನಕಟಕಟೆಂದು ಬಗೆದು ಬಾಯ್ಬಿಡುತಿರ್ದ್ದಳ್ || ೧೦೩

ತನುಭವನೆಲ್ಲಿದನೆಲ್ಲಿದ |
ನಿನಿವಾತಿನ ನೀರನೆಲ್ಲಿದಂ ಮೆಲ್ಲಗೆಯಿಂ ||
ಪಿನ ಸೊಬಗನೆಲ್ಲಿದಂ ಚೆ |
ಲ್ವಿನ ಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ || ೧೦೪

ವ|| ಎಂದು ಪಲುಂಬಿ ಪಲವಾಡಿ ಬಪ್ಪಾರ್ಗಳಾಪುರಜನಂ ಕಂಡೀಮಡಿದ ಶಿಶುವಿವಳದೆಂದು ತಿಳಿದಳವಳಿದು ಪಳಯಿಸುವಳಂ ಕರೆದು ನೆರೆದಜನದೊಳಪುಗಿಸಿ ನರೇಂದ್ರತುರಗಖುರಹತಿಯಿಂ ಮಡಿದನೆಂದು ತೊಟ್ಟನೆ ತೋರಲೊಡನಾರುಂಡಮಂ ಮುಂಡಮಂ ಕಂಡಡವಿಗಿಚ್ಚುಗೊಂಡಪುಲ್ಲೆಯಂತೆ ಹರಣಂ ಹಂಮ್ಮೈಸಿ ಪದ್ದುರ ಗಿದುರಗಿಯಂತೆ ಮಿಡುಮಿಡನೆ ಮಿಡುಕಿ ಕಡಿವಡೆದೆಳವಳ್ಳಿಯಂತೆ ಕೊರಗಿ ಪೊಸೆದಿಟ್ಟ ಪೂಮಾಲೆಯಂತೆ ಕಂದಿ ಕುಂದಿ ಮಂದೈಸಿದಳಲಿಂ ಮುಂದುಗೆಟ್ಟು ಕೆಟ್ಟೆಂ ಕೆಟ್ಟೆನೆಂದು ಬಸಿರಂಪೊಸೆದು ದೆಸೆದೆಸೆಗೆ ಬಾಯುಂಬಿಟ್ಟು ಮೊರೆಯಿಟ್ಟು ಮರುಗಿ

ವೃ|| ಎಳಗಿಳಿಯಂ ಕೊರಲ್ಮುರಿದು ಮೋದಿದರಾಮ್ಮರಿಮಂಜೆಯಂ ಭಯಂ |
ಗೊಳಿಸುತೆರಂಕೆಯಂಪರಿದು ಪೊಯ್ದವರಾಪ್ಪುಗಶಾಬಮಂ ಕರಂ ||
ಮುಳಿದು ಶಿರೋಧಿಯಂ ಕೆಡೆಮಲೆಚ್ಚವರಾಬ್ಜಿಸನಾಳಕಾಂಡಕೋ |
ಮಳತರಕಂಠಮಂ ಕಡಿದುರುಳ್ಚಿದರಾಸ್ಸುಕುಮಾರಶೇಖರಾ || ೧೦೫

ವ|| ಎಂದಾಕಬಂಧಮನೆತ್ತಿ ತೊಡೆಯೊಳಿಟ್ಟಾರುಂಡಮಂ ಕರಯುಗದೊಳ್ಪಿಡಿದಶ್ರುಮಿಶ್ರಕಟಾಕ್ಷದಿನೀಕ್ಷಿಸಿ ಮೊಗದೊಳ್ಮುಸುಂಕಿದಧೂಳಿಯಂ ಮೇಲುದಿನೊಳೊಯ್ಯನೊರಸಿ ಕೆಲಸರಿದಮಾಂಗಾಮ್ಮಗಸೋಸರಿಸಿದರಳೆಲೆಯಂ ಸ್ಸೈತು ಮಾಡಿ ಗಲ್ಲಮಂ ಪಿಡಿದು ಮೆಲ್ಲಸಲುಗಿ ಮುದ್ದಿಸಿ ಮುಂಡಾಡಿ ಸೋಡಿ ಮೇರೆದಪ್ಪಿದಳಲಂ ಸೈರಿಸಲಾರದೆ

ಕಂ|| ಹಾಮಗನೆ ಹಾಮನೋಜ್ಞನೆ |
ಹಾಮುದ್ದುಗ ಹಾಮದೇಭಗತಿಮಂಜುಳ ಹಾ ||
ಹಾಮಧುರವಾಣಿ ಹಾಮ |
ತ್ಪ್ರೇಮಾಸ್ಪದ ಹಾಮದೀಯವಂಶಲಲಾಮಾ || ೧೦೬

ಎಲ್ಲಿಯುಹಯುವೆಲ್ಲಿಯನೃಪ |
ನೆಲ್ಲಿಯುವೈಹಾಳಿ ಯೆಲ್ಲಿಯತಿಕಳಕಳಮಿಂ ||
ತೆಲ್ಲಿಯುದರ್ಶನಗಮನನಿ |
ದೆಲ್ಲಿಯುವೃತಿ ನಿನಗೆ ಬಂದುದೆಲೆಸುಕುಮಾರಾ || ೧೦೭

ಮುನ್ನರುವರಳಿದಳಲನೆಲೆ |
ನಿನ್ನಂ ನೆರೆನೋಡಿ ಮಗನೆ ಮರೆದಿರ್ದ್ದೆಂ ಪೇಳ್ ||
ಇನ್ನಾರಿಂದಂ ಮರೆದಪೆ |
ನೆನ್ನೊಳುಸಿಸ್ಸುರ್ವ್ಮನಿರದಿರೆಲೆತನುಜಾತಾ || ೧೦೮

ಗಳಗಳನೆ ಬಳೆದು ಧನವಃಂ |
ಗಳಿಸಿ ಜರಾರ್ಜಯನೆಸಗಿ ಹರಕೃಪೆವಡೆದು ||
ಜ್ಜ್ವಳಸುಖಮನೀವನೆಂದಿರೆ |
ತಿಳಿವಿಲ್ಲದೆ ಮಗನೆ ತುರಗಹತಿಯಿಂ ಮಡಿದೈ || ೧೦೯

ಕೊರಲಂ ಮೆಟ್ಟುವಪದದೊ |
ಳ್ತುರಗಂ ಕಂಗೆಟ್ಟು ಜನನಿಯೆಂದೆನ್ನಂ ನೀಂ ||
ಕರೆದೆಯೊ ಮರೆದೆಯೊ ದೋಷಾ |
ಕರೆಯೆಂದೇಂ ತೊರೆದೆಯೋ ತನೂಜನೆ ಪೇಳ್ವೈ || ೧೧೦

ವ|| ಇಂತಳವಳಿದವಳ್ಪಲವಾಡಿಪಳಯಿಸುತ್ತಿರ್ಪ್ಪಾಗಳ್

ಕಂ|| ಇವಳವನಿಪಂಗೆ ಮೊರೆಯಿ |
ಕ್ಕುವಳಾನಿರೆ ಕುವರರೆಸಗಿದಪರಾಧಮನೆಂ ||
ದವಧರಿಸಿ ಪೋದನೆಂದೆನೆ |
ರವಿ ಪಶ್ಚಿಮಗಿರಿಯ ಶೃಂಗಮಂ ಮರೆಗೊಂಡಂ || ೧೧೧

ವ|| ಆಗಳ್

ವೃ|| ವರುಣಾಶಾವನಜೂತವಲ್ಲಿ ಗಗನಾಲಂಬಕ್ಕೆ ಪರ್ಬ್ಬಿರ್ದ್ದ ಭಾ |
ಸ್ಕರಜೈತ್ರಂ ಬರೆ ಸಂಜೆಗೆಂಪೆನಿಪ ಭಾಸ್ವತ್ಪಲ್ಲವಂದಾಳ್ದು ಸೈ ||
ತಿರೆ ಪೂರ್ವಾಶೆಯಿನಲ್ಲಿಗೈದುವಪಿಕಾಸೀ ಕಂಜೊಲಿಂಜಾಯ್ತು ಸೋ |
ಳ್ಪರ ಕಣ್ಗಂಧತಮಂ ತಮಾಲಕತಮುಶ್ಶ್ರೀಶಾಂಬುದಶ್ಯಾಮಳಂ || ೧೧೨

ವ|| ಅಂತು ತನ್ನಳಲುರಿಯ ಪೆರ್ಬೊರ್ಗೆ ಕವಿದಂತೆ ಕವಿದಕಡುಗಳ್ತಲೆ ಯೊಳಾತಿರುಕೊಳವಿನಾಂಚಿ ತನ್ನಣುಗನ ಕಳೇವರಮನೆತ್ತಿ ತಳ್ಕೈಸಿಕೊಂಡೆಂ ತಾನುಮಲ್ಲಿಂದೆಳ್ದು ನಿಜಗೃಹಕ್ಕೆೞ್ತಂದು ಮುಂಡಮಂ ರುಂಡಮಂ ಪತ್ತಿಸಿ ನೋಡಿ ಮತ್ತಮಿರದೆ

ಕಂ|| ಕಡವರಮುಡಂಗಿತೇ ಪೊಸ |
ಕಡಾರಮಿಂದಕಟನಾಯುಮಾದುದೆ ಮೆರೆವಿಂ ||
ಗಡಲಿಂಗಿಪೋದುದೇ ಕಡಿ |
ವಡೆದುದೆ ಕಲ್ಪಾವನೀಜಮಿದು ವಿಧಿವಶದಿಂ || ೧೧೩

ಪಸಿದೆಯೆಲೆಕಂದ ಬತ್ತಿತು |
ಬಸಿಱದು ಕಳೆಗುಂದಿತಾನನಂ ಕಣ್ಬೊಣಗರ್ಳ್ ||
ಮಸುಳ್ದುವುಣಲ್ಬಡೆಯದೆ ಮಿಗೆ |
ಬಸವಳಿದಿಂತಿರ್ಪುದುಚಿತಮೇ ಸುಕುಮಾರಾ || ೧೧೪

ಸರಿವರೆಯದ ಮಕ್ಕಳ್ಗಂ |
ಕರನೆೞ್ದನಾಡಲೆಂದು ಬೆಸಗೊಳಲೇನೆಂ ||
ದಿರದೆ ಮರುಮಾತುಗೊಟ್ಟಪೆ |
ನರಸನ ಹಯದಿಂದೆ ಮಡಿದನೆಂಬೆನೆ ಮಗನೇ || ೧೧೫

ನೀನಾಡಿದೆಡೆಗಳಂ ಸುತ |
ನೀನೊರಗಿದಪಾಸುವಂ ತನೂಭವ ಪದಪಿಂ ||
ನೀನುಂಡತಾಣಮುಮನಿ |
ನ್ನಾನೆಂತೀಕ್ಷಿಸುವೆನೆಂತು ಸೈರಿಪೆನಕಟಾ || ೧೧೬

ವೃ|| ಗಾಡಿಯೊಳಾಡಿ ಮಕ್ಕಳೊಡನಂಗಣಕ್ಕೈದಿರೆ ತಳ್ತಧೂಳಿಯುಂ |
ನಾಡೆ ಸೆರಂಗಿನಿಂದೊರಸಿ ಮೈದೊಳೆನೊಳ್ಪುಣಿಸಿಕ್ಕಿ ಮುದ್ದುಗೈ ||
ದೂಡಿ ವಿಳಾಸಮಂ ಸೆರೆದು ಸಿಂಗರಿಸುತ್ತಮದರ್ಪ್ಪೆ ಜೇಡಿತಂ |
ನೀಡಿ ನಿರೀಕ್ಷಿಪೆನ್ನನುಳಿದೊರ್ವನೆ ಪೋಪುದೆ ನೀಂ ತನೂಭವಾ || ೧೧೭

ಕಂ॥ ಅಳಲದಿರು ತಾಯೆ ದುಃಖಂ ।
ಗೊಳದಿನ್ನೇನೆಂದು ನೋಡಿ ಸಂತೈಸದೆ ಕ ॥
ಣ್ಗಳ ಜಳಮಂ ತೊಡೆಯದೆ ಕಡು ।
ಮುಳಿದರವೋಲ್ಸುಮ್ಮನಿರ್ಪುದೇ ಸುಕುಮಾರಾ ॥ ೧೧೮

ನೋಡುವಕಣ್ಣೊಡೆದುದು ಮಾ ।
ತಾಡಿಪನಾಲಿಗೆ ಮುರುಂಟಿದುದು ನಿನ್ನಂ ಮುಂ ॥
ಡಾಡುವಕಯ್ಯುಡಿದುದು ಸಲೆ ।
ಪಾಡುವಬಾಯ್ಬಂದುದಣುಗ ನೀಂ ಮಡಿಯಲೊಡಂ ॥ ೧೧೯

ಆರೊಡನುಸಿರ್ವೆಂ ದುಃಖಮ ।
ನಾರುಂಟೆನಗಕಟ ಮಗನೆ ಮಗನೆ ಮನೋಜಾ ॥
ತಾರಿಯ ಕೃಪೆ ತಪ್ಪಿದಬಳಿ ।
ಕಾರಾದೊಡಮೇನೊ ನಿನ್ನನೇಂ ಕಾಣಿಪರೇ ॥ ೧೨೦

ವ॥ ಎಂದಾಕ್ರಂದನಂಗೈದಳಲ್ದು ಬಳಲ್ದು ಬಸವಳಿದು ಬಲ್ಪುಗುಂದಿ ಬಿಸುಸುಯ್ದು ಬಸಿರಂ ಪೊಸೆದು ದೈನ್ಯಂಬಟ್ಟು ಬಾಯಂಬಿಟ್ಟು ಪೆಸಗೊಂಡು ಕರೆಕರೆದೊಳದುದ್

ತ್ರಿವುಡೆ॥ ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳೈಶಂಕರಾ । ॥
ಸುಗುಣನಿಧಿ ನೀನೆನ್ನ ಮೊರೆಗಳನೊಮ್ಮೆ ಕೇಳೈ ಶಂ ॥ ೧೨೧

ಪರಸಿ ಪಾಡಿ ಮಹೇಶನಿಂದಮೆ ಬೇಡಿ ಮುನ್ನಂ ಶಂ ।
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂ ॥ ೧೨೨

ಎಂತು ಮರೆವೆನೊ ಸವಿಯುಸಾಲಿಡುವಮುದ್ದಪಗೆಯಂ ॥ಶಂ॥
ಕಾಂತಿ ಶೋಭಿಸೆ ಮುದ್ದುವೀರುವ ಮೊಗದ ಬಗೆಯಂ ॥ಶಂ॥ ೧೨೩

ಝಣಝಣಿಸೆ ಕಿರುಗೆಜ್ಜೆ ಕರತಳತಾಳರವಕೆ ॥ಶಂ॥
ಕುಣಿವನಿನ್ನಯ ಜನದಮೊಪ್ಪುಗುಮೆನ್ನ ಮನಕೆ ॥ಶಂ॥ ೧೨೪

ಶರಣಪದಪಂಕಜರಜಂಗಳೊಳಾಳದಂತು ||ಶಂ||
ತುರಗಖುರಹತಿಜನಿತಧೂಳಿಯೊಳಳಿದೆಯಿಂತು ||ಶಂ|| ೧೨೪

ಎನ್ನನೋವುವನೆಂದು ನಂಬಿರಲಿಂತು ಮಡಿದೈ ||ಶಂ||
ಮುನ್ನಮೆನ್ನಯ ಹರ್ಷವಲ್ಲಿಯ ಕುಡಿಯನುಡಿದೈ ||ಶಂ|| ೧೨೫

ನಿನ್ನಳಿವನೀಕ್ಷಿಸಿಯುಮೆನ್ನಸು ಪೋಗದಂದು ||ಶಂ||
ನಿನ್ನೊಳೆನ್ನಯ ಕೂರ್ಮೆ ನಿಜಮೆಂತೆನಿಪುದಿಂದು ||ಶಂ|| ೧೨೬

ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ||ಶಂ||
ಶಿರವರಿದು ನಿನ್ನಂದವಾಗದೆ ಪಿಂಗಿದಪನೇ ||ಶಂ|| ೧೨೭

ವ|| ಎಂದು ನಂದನನ ಗುಣವೃಂದಮಂ ನೆನೆನೆನೆದಾಕ್ರಂದಿಸಿ ಮತ್ತಮಿರದೆ

ಕಂ|| ಪರಮಕೃಪಾಕರನೆಂಬೀ |
ಬಿರುದಂ ಬಿಸುಟಕಟ ಶಂಕರಾ ಶಂಕರನಂ ||
ಹರಿಸಿ ನಡುಗಾಡೊಳಂಧೆಯ |
ಕರದಂಡಮನೆಳೆದುಕೊಂಡವೋಲ್ಮಾಡಿದೆಯೈ || ೧೨೮

ವೃ|| ಎಲೆಗಿರಿಜಾತೆ ಮಾತೆ ಕರುಣಾಕರೆ ಶಾಂಕರಿ ದಿವ್ಯರೂಪೆ ನಿ |
ರ್ಮಲೆ ನಿಗಮಾಗಮಸ್ತುತೆ ಮಹೇಶ್ವರಿ ಮಂಗಳಮೂರ್ತಿ ಭಕ್ತವ ||
ತ್ಸಲೆ ರತಿಗಂದಳಲ್ಗಳಿದ ದೇವಿ ರಮಾನತೆ ನೊಂದೆನಿಂದು ನಿ |
ನ್ನಲಘುಕೃಪಾಕಟಾಕ್ಷದಿನಧೀಕ್ಷಿಸಿ ರಕ್ಷಿಪುದೆನ್ನ ನಂಬಿಕೇ || ೧೩೦

ವ|| ಎಂದು ಪಂಬಲಿಸಿ ಪಳಯಿಸುತ್ತುಮಿರೆಯಿರೆ

ಕಂ|| ಇಂದೆನ್ನವಂಶಭವರೊಳ |
ರಿಂದಂ ಸನ್ನುತಿಕೆಡೋರಿ ಬರಿಪಗ್ಗಡ ಬಾ ||
ಲೇಂದುಶಿರೋಮಣಿಯುಂ ನೋ |
ಳ್ಪಂ ದಿಟಮೆಂದೆಯ್ದಿದಂತೆ ಮಾಡಿದನರ್ಕಂ || ೧೩೧

ವೃ|| ನೊಡಣಟಕ್ಕು ಕೆಂಪಡರೆ ಮಾಡಿದನಿಪ್ಪ ದಿನೇಶಬಿಂಬಮಂ |
ನೋಡಿ ಶಶಾಂಕಶಂಕೆದಳೆದಂತೆವೊಲುತ್ಪಳಮುಂ ಸರೋಜಮುಂ ||
ಕೂಡಿರೆ ಸಂಜೆ ನೀಳ್ದೆಸಳನೊಂದನುಜುರ್ವವಜುರ್ವಾಟಮಂ |
ಮಾಡಿದುವಂತೆ ಸಂದೆಗಮೆ ಸತ್ಪರಕಾರ್ಯಕೆ ವಿಘ್ನಮಲ್ಲವೇ || ೧೩೨

ಕಂ|| ನೀಳಾಚಲನಿಜಯಂ ಸಲೆ |
ಸಾಲಿಟ್ಟೈದಿದುದು ಕದನಕೆಂದಂಥತಮೋ ||
ಜಾಲಮನಾಲೋಕಿಪಸುರ |
ಪಾಲನ ಮಕುಟಂಬೊಲೆಸೆದುದಾರವಿಬಿಂಬಂ || ೧೩೩

ವ|| ಆಗಳವಳ್ಗಿಜಾಲಯಮಂ ಪೊರಮಟ್ಟು ರಾಜವೀಧಿಗೇಳ್ತಂದು

ವೃ|| ನೊಂದು ಪಲುಂಬಿ ಪಂಬಲಿಸಿ ಮೇಣ್ಪಲವಾಡಿ ಬಳಲ್ದು ಬಾಡಿ ಕ |
ಣ್ಣಿಂದಿಳಿವಶ್ರು ಕಾಳ್ಪುರಮದಾಗಿರೆ ಬಾಯ್ದೆರೆ ಬತ್ತೆ ಮತ್ತೆ ಶೋ ||
ಕಂ ದಳವೇರೆ ಪೌರರಳಲುತ್ತಿರೆ ತಾನಳುತಲ್ಲಿ ತಾಳ್ದು ತ |
ನ್ನಂದನನಂಗಮಂ ಮೊರೆಯಿಡಲ್ನಡೆಗೊಂಡಳಿಳಾಧಿನಾಥನೊಳ್ || ೧೩೪

ಕಂ|| ದೆಸೆಗಳ್ಮಾರ್ದನಿಗುಡೆ ಬಿಡ |
ದಸವಸದಿಂದೊಳರ್ಪಸಿನದದಿಂ ಕಣ್ಬನಿಯಿಂ ||
ರಸೆ ಕೆಸರೆಳ್ದಿರೆ ಬಂದ |
ಳ್ಬಸವಳಿಯುತ್ತಳಲುತರಸನರಮನೆಯತ್ತಲ್ || ೧೩೫

ವ|| ಅಂತು ಬಂದು ಸತ್ಯೇಂದ್ರನಂತಃಪುರಬಹಿದ್ವಾರದೇಶದೊಳ್ನಿಂದು ಸಿಡುಸರಂದೋರಿ ಕೊರಲೆತ್ತಿ ಕರಮಂ ನೆಗಪಿ

ಕಂ|| ವಿಪುಳತರಧರ್ಮಸಾಮ್ರಾ |
ಜ್ಯಪಾಳ ಸತ್ಯಾಬ್ಧಿಚಂದ್ರ ಸತ್ಯೇಂದ್ರಧರಾ ||
ಧಿಪ ಮೊರೆಯೊ ಶಿವ ಸದಾಶಿವ |
ಕೃಪಾರಸಾಮತ್ರಪುತ್ರನಳಿದಂ ಕಳಿದಂ || ೧೩೬

ವ|| ಎಂದಿದಿಡುವಾಕ್ರಂದನಸ್ವರಮಂ ಕೇಳ್ದದು ಶಿವಭಕ್ತಗಾರ್ಗದನೋ ವಪ್ಪುದೋಯೆಂದು ಘನಸ್ವನಾದಮಂ ಕೇಳ್ದರಾಜಹಂಸನಂತೆ ರಾಜಹಂಸಂ ಸೆಡೆದು ಸಿಡಿಮಿಡಿಗೊಂಡಂತಃಪುರದಿಂ ಚಿಂತಾಭರದಿನೇಳ್ತಂದು ಸಿಂಹಾಸನಾರೂಢನಾಗಿ ರೋದನಾಲಾಪಮೆತ್ತಣದೆಂಬಸಿತರೊಳ್ಬಂದೊರ್ವವೃದ್ಧಕಂಚುಕಿ ಕೈಮುಗಿ ದಿಂತೆಂದಂ

ಕಂ|| ಕಂದನ ಪಂದಲೆಯಂ ಪಿಡಿ |
ದಿಂದೀವರನಯನೆಯೊರ್ವಳುರೆ ಮೊರೆಯಿಡುತುಂ ||
ಕಂದರ್ಪರಿಪುಗೆ ಬಾಗಿಲೊ |
ಳಂದಂಗೆಟ್ಟಳುತುಮಿರ್ಪ್ಪಳವನಿಪತಿಲಕಾ || ೧೩೭

ವ|| ಎನಲಾನೆ ವಿಚಾರಿಪೆಂ ತಳ್ವದೊಳಪುಗಿಸೆಂಬುದುಮವಂ ಮಹಾಪ್ರ
ಸಾದಮೆಂದವಳ ನೊಳಪುಗಿಸಿಕರೆದು ತಪ್ಪರ್ಗಳ್

ವೃ|| ಕರತಳದಲ್ಲಿ ತಾಳ್ದತಲೆ ಸೋಗಿಲೊಳಿಟ್ಟಕಬಂಧಮೆತ್ತಲುಂ |
ಪರೆದಳಕಾಳಿ ಧೂಳಿಪುದಿದಂಗಮುಡುಗಿದಬಲ್ಪು ನೆತ್ತರೊಳ್ ||
ಪೊರೆದಸೆರಂಗು ಪಾಯ್ದುಗುವಕಣ್ಬನಿ ಬತ್ತುವಬಾಯ್ವೊದಳ್ದಸು |
ಯ್ಯೊರಗಿದವಕ್ತ್ರಮುಜ್ಜಳಿತಹಾರವಮೊಪ್ಪಿರೆ ಬಂದಳಾರ್ತದಿಂ || ೧೩೮

ವ|| ಅಂತುಬಂದಾನರೇಂದ್ರನಿದಿರೊಳಾರುಂಡಮುಂ ಮುಂಡಮನಿಳಿಪುತಳ
ಲಿಮ್ಮಡಿಸೆ ಶೋಕೋದ್ರೇಕಗದ್ಗಗಕಂಠೆಯಾಗಿ ಗಂಟಲೊಡೆವಿನಮೊಳದುರ್ದಮೊ
ರೆಯಿಟ್ಟು ಮರುಗಿ ಮಗುಳ್ದುಮಗುಳ್ದಳುತ್ತುಮಿರೆಯಿರೆ

ಕಂ|| ಅಳದಿರೆಲೆತಾಯೆ ನೀನಾ |
ರಳಿದಣುಗನಿದಾರವಂ ಕೊರಲ್ಗೊರೆದಮಹಾ ||
ಖಳನಾವನಾತನಂ ಪೇ |
ಳ್ಬಳಿಯೊಳ್ನೆರೆಕಾಣ್ಬೆನಿದಕೆ ತಕ್ಕುಜ್ಜುಗಮಂ || ೧೩೯

ವ|| ಎನಲೆಂತಾನುಮಳಲಂ ಸಂತೈಸಿಕೊಂಡು ಕೈಮುಗಿದು ನಿಂದು ಕರು
ಣಾಂತರಂಗಂಗೆ ಸತ್ಯೇಂದ್ರಂಗೆ ಗದ್ಗದಾಂಕುರಿತಶಿಥಿಲಾಕ್ಷರಂಗಳಿಂ್ವರಮು
ಪೇಳಲ್ಮಗುಳ್ದಿಂತೆಂದಳ್

ವೃ|| ಕೇಳವನೀಶವರ್ಯ ಭವದೀಯಪುರಸ್ಥಿತನಾಗಿ ಸದ್ವಣಿ |
ಗ್ಜಾಳದೊಳೇಳ್ಗೆವೆತ್ತು ಸಿರಿಯಿಂ ಗುಣದಿಂ ಶಿವಭಕ್ತಿಯಿಂ ಕರಂ ||
ಬಾಳುತುಮಿರ್ದನೊರ್ವರವಿನಾಮವಣಿಗ್ವರನೆನ್ನವಲ್ಲಭಂ |
ಪಾಳಿಯೊಳೀಶಭಕ್ತಜನಪಾಜಸಮರ್ಜನೆಗೆಯ್ವುತಳ್ತಿಯಿಂ || ೧೪೦

ಕಂ|| ಪಿರಿದುಸಿರಿಯೆಸಕದಿಂದಾ |
ನಿರುತವನೊಡಗೂಡಿ ಪಡೆದೆನರುವರುಮಂ ಪು ||
ತ್ರರನಮಳಗಾತ್ರರಂ ಭೂ |
ವರ ಕೇಳ್ಸುಖದಿಂದವಿರ್ದ್ದೆನಿರ್ಪ್ಪನ್ನೆವರಂ || ೧೪೧

ವೃ|| ತನಗುಳ್ಳರ್ಥಮನೆಲ್ಲಮಂ ಬಿಡದೆ ಕೊಂಡುತ್ಸಾಹದಿಂದಂ ವಣಿ |
ಗ್ಜನಯುಕ್ತಂ ಕಡಲೊಳ್ಪಡಂಗಡರ್ದು* ಪೋಗುತ್ತಿರ್ದ್ದೊಡಾನಾವೆ ತ ||
ದ್ಘನವಾರಾಶಿಯೊಳಾಗಳಾಳೆ ಮುಗುಳ್ದೆನ್ನಾಳ್ದಂ ಸಮಂತಾಳ್ದು ಜೀ |
ವನದೊಳ್ಜೀವನಮಂ ವಿಸರ್ಜಿಸಿದನೇನೆಂಬೆಂ ಮಹೀಪಾಲಕಾ || ೧೪೨

ವ|| ಅಂತುಮಾವಮಾರ್ತಾಂಡನಸ್ತಮಯಮಾರ್ತಾಂಡನಂತೆ ನಿಜವಸುಸ
ಮೇತಂ ವನಧಿಮಧ್ಯದೊಳ್ಮುಳುಂಗಿ ಪೋಗಲೊಡನೆ

ಕಂ|| ಸಮನಿಸಿದುದೆನಗೆ ಚಿಂತಾ |
ತಿಮಿರಂ ಮತಿನೇತ್ರಮಳಿದುದಮಳಿನತರಹೃ ||
ತ್ಕಮಳಂ ಕೊರಗಿದುದಸುಜ |
ಕ್ರಮಿದುಬ್ಬೆಗಮೊಂತುದಾರ್ತಜನಪನಜೈತಾ || ೧೪೩

ಎನಗಿನನಿಂತಳಿವಂದಿನ |
ದಿನಕ್ಕೆ ಮೂದಿಂಗಳೆಸೆವಗರ್ಭಂ ನೆಲಸಿ ||
ತ್ತನುಗತಮಾದುದು ಕಡುಬಡ |
ತನವೊಡನೆ ಶಿವೈಕ್ಯಸೂಕ್ತಿಕರ್ಣಾಭರಣಾ || ೧೪೪

ಕಡುರುಜೆಯಡಸಿದತನುವಂ |
ಒಡತನಮೆಡೆಗೊಂಡಬಾಳ್ಕೆಯುಂ ಖಲಜನರೊಂ ||
ದೊಡನಾಟಮುಮರ್ದ*ಗಳಲಂ |
ಪಡೆಯದೆ ಮಾಣ್ದಪುದೆ ಶೈವಹಿತಶುಭಚರಿತಾ || ೧೪೫

ಪತಿ ಗತಿಯೆ ಸತಿಗೆ ಗತಿಯೆಂ |
ಬತಿಶಯಮಂ ತಾಳ್ದು ತನುವಹಿತ್ರಸಮೇತಂ ||
ತತದುಃಖಾಂಬುಧಿಯೊಳ್ಸಂ |
ಗತಿವಡೆದಾಳ್ದಂ ಶಿವಾಂಘ್ರಿಸಖಮಣಿಮುಕುರಾ || ೧೪೬

ಬಡಬಶಿಖಿಯಲ್ಲಿ ಪಬ್ಬುರ್ವ |
ಪೊಡರ್ಪ್ಪನೊಳಕೊಂಡು ಮೇಲೆಮೇಲ್ಮೈತಪ್ಪೇ ||
ನ್ನೊಡಲುರಿಯುನವಧರಿಸು ನಿ |
ನ್ನಡಿಗೆರಗಿದಪೆಂ ಪರೋಪಕೃತಿಗುಣಧಾಮಾ || ೧೪

ಆರುದಿಂಗಳೊಳಗೆ ತನುಭವ |
ರರುವಗ್ಗ್ಗಳಗಳನೆ ರುಜೆಯಿನಳಿದಪ್ಪರ್ಳಲ್ ||
ಪೆರತೇನೊ ದುಃಖಮಿಂತೆಂ |
ದರಿಪಲ್ನೆರೆದಪನೆ ಕೀರ್ತಿಧವಳಿತಭುವನಾ || ೧೪

ಉರಿದುದು ಬಗೆ ಮಿಗೆ ಜೆಂದುದು |
ಹರಣಂ ತನು ಕಂದಿ ಕುಂದಿದುದು ಕಳವಳವೊ ||
ತ್ತರಿಸಿದುದು ಮೂರ್ಛೆ ಬಿಡದಾ |
ವರಿಸಿದುದೆಸಗಾಗಳತುಳಸತ್ಯಸಿಧಾನಾ || ೧೪

ವ|| ಆಮೂರ್ಛೆಯೊಳಾಸಿಪ್ಪಾಗಳುಮಾರಣಸಮಿತಕೃಪೆಯಿಸೇಕ್ತಂದಂ

ದಿರೆಂದಭಯವಿತ್ತು

ವೃ|| ಕಯ್ದುಳಿರಿಂದೆ ಪ್ಯದಡಪಿ ಪಾಮಪಿಲೋಚನದಿಂದೆ ನೋಡಿ ಸ್ಯೆ |
ಪೆಯ್ದು ಪದಾಬ್ಜಮಂ ಪಣೆಯೊಳಿಟ್ಟಳದಿನ್ನಿನಗೊರ್ವ್ವಸೂನು ತಾ ||
ನೆಯ್ದು ಗುಣಾಂಕನುದ್ಘವಿಪಸೀಯುಳಲಂ ಪದಿಕ್ಕಿ ಮುಕ್ತಿಗೊ |
ಲ್ದೊಯ್ದಪನೆಂದುಪೇಳ್ದು ತಳರ್ದಂ ತರುಣೇಂದುಧರಂ ಧರಾಧಿಪಾ || ೧೫

ಕಂ|| ತಿಳಿದುದನಿತರೊಳೆ ಮೂರ್ಛೆ |
ಕುಳತ್ತೆ ಮನಸ್ತಾಪಮಳಿದುನೊಳಸಾದ್ರ್ರಪು ಪಿ ||
ಹ್ವಳತೆ ಶಿವನೊಲವದೇನಂ |
ಕಳಿಯುದೊ ಮನದಳಲನವಸಿಪಾಲಕತಿಲಕಾ || ೧೫

ನಂಬಿದೆನಂಬಿಕೆಯುರಸನೊ |
ಡಂಬಡೆ ಪೇಳ್ದುಮಳವಡಮನಸಿಃತರೊಳೊಗೆತಂ ||
ದಂ ಬಾಲಕನಿವನೆನ್ನಳ |
ಲಂ ಬಲಕೈದಂ ವಿಳಾಸದಿಂದೀಯುರಸಾ || ೧೫

ಹರನೊರೆದತೆರದೊಳುರೆ ಶಂ |
ಕರನೆಂದೊಳ್ಪಿಸರನಿಟ್ಟು ಗತಿಯುಂ ಮತಿಯುಂ ||
ಪರಸುಖದನೀತನೆಂದಾಂ |
ಪೊರೆದೆಂ ಪೊರೆವಂತೆ ಕಲ್ಪಭೂಜದ ಸಸಿಯಂ || ೧೫೩

ಇನನಸ್ತಮಿಸಿದೊಡೊದವಿದ |
ಘನತಿಮಿರಮನಿಂದು ಕಳೆವವೋಲ್ನೆರೆಕಳೆದಂ ||
ಇನನಸ್ತಮಿಸಿದೊಡೊದವಿದ |
ಘನದುಃಖಮನಿಂದುನಿಭನಿವಂ ಮನುಜೇಂದ್ರಾ || ೧೫೪

ಹರೆಯಂ ಕಿರಿದಾದೊಡಮೇಂ |
ಪಿರಿದೊ ವಿವೇಕಂ ಶಿವಾಂಕಮಾಲೆಯನತ್ಯಾ ||
ದರದಿಂ ಪಾಡುವನಭವನ |
ಶರಣರ್ಗೆರಗುವನವಂದಿರೊಳ್ಬೆನದಿಸುವಂ || ೧೫೫

ಶಿವಕೀರ್ತನಮಂ ಕೇಳ್ವಂ |
ಶಿವಾಂಘ್ರಿಪೂಜೆಯನೊರಲ್ದು ನೋಳ್ಪಂ ಮುದದಿಂ ||
ಶಿವನಾಮಮನುಚ್ಚರಿಪಂ |
ಶಿವಂಗೆ ಕೊಟ್ಟಲ್ಲದೇನುಮಂ ಕೊಳಲೊಲ್ಲಂ || ೧೫೬

ವ|| ಇಂತಭಿನವಾಶ್ಚರ್ಯಕರಪವಿತ್ರಚರಿತ್ರನೆನಿಸಿ ಪುತ್ರಂ ಪಂಚವರ್ಷಂಬರಂ ನೆರೆದೆಸೆದಿರ್ದ್ದಿರ್ಪನ್ನೆಗಂ

ವೃ|| ನಿನ್ನಿನ ಮುಂಬಗಲ್ಪದೆದು ನಿನ್ನಕುಮಾರನಮಾತ್ಯಪುತ್ರನುಂ |
ಚೆನ್ನೆಸೆದಿರ್ಪ್ಪನಂ ವಿಹರಿಪಲ್ಲಿ ಪುರಾಂತದೊಳೈದಿಬರ್ಪ್ಪನೇ ||
ನೋನ್ನತಿಯಂ ನಿರೀಕ್ಷಿಸಲಿವಂ ಪೊರಮಟ್ಟಿರೆ ತತ್ತುರಂಗಮೇ |
ತನ್ನಜಮಸ್ತಕಂ ಪರಿಯೆ ಮೆಟ್ಟಿದುದುತ್ಕರದಿಂ ಧರಾಧಿಪಾ || ೧೫೭

ಕಂ|| ಇವನಿಂದೆ ಮುಂದೆ ಪಡೆದಪೆ |
ನವಿರಳತರಸುಖಮನೆಂದು ನಂಬಿರ್ದ್ದೆಂ ಕೇ ||
ಳ್ಯುವರಾಜನಶ್ವಖುರಕೀ |
ಕುವರಂ ಬಲಿಯಪ್ಪನೆಂದು ಬಲ್ಲೆನೆ ನೃಪತೀ || ೧೫೮

ಎಂದಿಂತೆಲ್ಲಮನವಳ |
ಲಿಂದುಸಿರೆ ನರೇಂದ್ರವರ್ಯನಾಲಿಸಿ ಮನದೊಳ್ ||
ನೊಂದು ಶಿವಶಿವ ಶಿವಂ ಬ |
ಲ್ಲಂ ದಿಟಮಿದನೆಂದು ಮುಗುಳ್ದು ತಲೆದೂಗುತ್ತುಂ || ೧೪೯

ಬಡಬಾನಳಮಂ ಜಲಮಂ |
ಕಡಲೊಡನಾಂತಂತೆ ಕಾರ್ಪ್ಪುಮಂ ಕರುಣಮನಾಂ ||
ತೊಡನೊಪ್ಪಿದನಾತ್ಮಜನೊ |
ಳ್ಕಡುಶೋಕಂಗೈವಸುದತಿಯೊಳ್ಸತ್ಯೇಂದ್ರಂ || ೧೫೦

ವ|| ಅಂತೊಪ್ಪುತ್ತುಮಿರ್ದ್ದ ಪತಿವೋಹಿಮಂತ್ರಿಪನಂ ಬರಿಸೆಂದು ವೃದ್ಧ ಕಂಚುಕಿಗೆ ಬೆಸಸುತ್ತುಮಿರೆಯಿರೆ

ವೃ|| ಜನನಿ ಜಗತ್ತ್ರಯಾಶ್ರಿತೆ ಜನಾರ್ದನವಂದ್ಯೆ ವದಾನ್ಯೆ ಮಾನ್ಯೆ ಮಾ |
ನಿನಿ ಮಹನೀಯೆ ಮಂಗಳೆ ಮಹೇಶ್ವರಿ ಮಾನುತೆ ಮಂದಯಾನೆ ಸ ||
ಜ್ಜನಹಿತೆ ಸದ್ಗುಣಾನ್ವಿತೆ ಸದಂಚಿತೆ ಸತ್ಯನಿದಾನೆ ಸೌಖ್ಯದಾ |
ಯಿನಿ ಸವಿಳಾಸೆ ಲೇಸನೆ ಪರಾತ್ಪರೆ ಪಾಲಿಪುದೆನ್ನನಂಬಿಕೇ || ೧೫೧

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣ ಮಹಾಪ್ರ
ಭಾಪಟಲಪರಿವೃತಪರಶಿವ ಶ್ರೀಪಾದನಖಚಂದ್ರ ಸಾಂದ್ರರುಚಿ
ರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನ
ಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷ
ರದೇವ ವಿರಚಿತಮಪ್ಪ ರಾಜಶೇಖರವಿಳಾಸ
ವಿಪುಳಪ್ರಬಂಧದೊಳ್ತಿರುಕೊಳನಾಚಿ
ಪ್ರಳಾಪವರ್ಣನಂ ತ್ರಯೋದಶಾ
ಶ್ವಾಸಂ ಸಂಪೂರ್ಣಂ.

---

# ಚತುರ್ದಶಾಶ್ವಾಸಂ.

ಕಂ|| ಶ್ರೀಮದಗಜಾಭುಜಾಸುಮ |
ನೋಮಂಜುಳಮಾಲಿಕಾವೃತಶ್ರೀಕಂಠಂ ||
ಸೋಮಕಳಾಧರನೆಮ್ಮಂ |
ಪ್ರೇಮಂ ಮಿಗೆ ಪೊರಗೆ ಸಂತತಂ ಶಿವಲಿಂಗಂ || ೧

ವೃ|| ವಿಳಸದ್ರತ್ನಕಿರೀಟಕಾಂತಿ ಬಿಸಿಲಂ ತಳ್ವೊಯ್ಯೆ ವಕ್ತ್ರೇಂದುಮಂ |
ಡಳಮಂ ಚುಂಬಿಸಲಾರೆ ತಾನೆನಿಸಿ ಮುಕ್ತಾಕುಂಡಳಂ ಗಂಡಸೊಳ್ ||
ಮಿಳಿರ್ದಾಡುತ್ತಿರೆ* ತಾರಹಾರಕಿರಣಂ ಬೆಳ್ದಿಂಗಳಂ ಬೀರೆ ಕಂ |
ಗೊಳಿಸುತ್ತಂ ನಡೆತಂದು ಮಂತ್ರಿತಿಳಕಂ ಪೊಕ್ಕಂ ತದಾಸ್ಥಾನಮಂ || ೨

ವ|| ಅಂತು ಪೊಕ್ಕು ನಿಜೇಶ್ವರಾಂಘ್ರಿಗೆರಗಿ ಕೃತಾಂಜಲಿಪುಟನಾಗಿ ನಿಂದಿರ್ದ್ದನಿತರೊಳಿದಿರೊಳಾಬಾಲಶಿರಮಂ ಪಿಡಿದಳಲ್ವ ಹರಭಕ್ತೆಯಪ್ಪ ಸುದತಿಯಂ ಕಂಡಿದೇನೆಂದು ತನ್ನೊಳನುವಿಸಿ

ಕಂ|| ಇದು ನಿನ್ನಿನಶ್ವದೇರಾ |
ಟದೊಳೆನ್ನತನೂಜನಿಂ ನೃಪಾತ್ಮಜನಿಂ ಬಂ ||
ದುದುಗಡ ತಾನಲ್ಲದೊಡೇಂ |
ಸುದತಿ ಸಭಾಸ್ಥಳಕೆ ಮೊರೆಯನಿಡಲೈದುವಳೇ || ೩

ಇದಕೆ ಪರಿಹಾರಮಣವಿ |
ಲ್ಲಿದು ಶಿವಕೃತಮುಕ್ಕುಮುಭವನೊಲ್ಮೆಗೆ ನೃಪನ ||
ಗ್ಗದಮುಹಿಮೆಗೆ ಕಾರಣವಿಂ |
ತಿದು ತಾನೆಂದರಿದನವನದೇಂ ಶಿತಮತಿಯೋ || ೪

ವ|| ಇಂತಮಾತ್ಯವರೇಣ್ಯಂ ತಿಳಿದಬಗೆಯುಂ ನೊಗಮಂ ನೋಡಿದನಿತರೊಳ್ಪರೇಂಗಿತಪ್ರಜ್ಞನಾದನರೇಂದ್ರಂ ತಿಳಿದವನಭಿಜ್ಞತೆಗೆ ಮನದೊಳ್ಮೆಚ್ಚಿ ತಾನು ಮುಸಿರದೆಯುಂ

ಕಂ|| ಕರೆಕರೆ ಕೃತಾಪರಾಧಕ |
ಧರಾತಿಭಾರಕಕುಮಾರಕರನೀಗಳೆನು ||
ತ್ತ್ರರಸನುಸಿರ್ವ*ನಿತರೊಳ್ಬಂ |
ದರಿಳಾಪತಿಸೂನುಸಚಿವಸೂನುಗಳಿರ್ವರ್ || ೫೫

ವ|| ಅಂತೈತಂದು ಮಣಿಮುಕುಟಕಿರಣಮರುಣಕುಸುಮಮುಂ ಪದಪೀಠದೊಳ್ಬಲಿಗೆದರ್ದಂತಾಗೆ ಬಾಗಿ ಪೊಡಮಟ್ಟು ನಿಜಾಪರಾಧಮನರಸನರಿದಪನೆಂದು ಶಂಕಿಸುತ್ತಂತಂತೆ ಕಂಪಿಸುತ್ತುಂ ಕೆಲಸಾರ್ದು ನಿಂದಿರ್ದ ನಿಜಕುಮಾರನುಮಂ ಸಚಿವಸುತನುಮಂ ಕೆಂಪಡರ್ದಕಡೆಗಣ್ಣಿಂದಡಸಿನೋಡಿ

ಕಂ|| ಕುಡಿವಿಾಸೆ ಕುಣಿಯೆ ಪಣೆಯೆಡೆ |
ಳ್ಡಿಡದೊಗೆತರೆ ಘರ್ಮಜಳಕಣಂ ಭ್ರುಕುಟಿ ಪೊದ ||
ಳ್ದಿಡೆಗೊಂಡಿರೆ ಕೋಪಾಗ್ನಿಯು |
ಪೊಣರ್ಪ್ಪ ರೂಪಾಂತರೆರದೆ ಘುಡಿಘುಡಿಸುತ್ತುಂ || ೬

ವೃ|| ಇನಿತೊಂದೌದ್ಧತ್ಯಮೇಂ ಸಲ್ವುದೆತನುಮುದದಿಂ ಯೌವನೋದ್ರೇಕಲಕ್ಷ್ಮೀ |
ಜನಿತೋದ್ಯದ್ದರ್ಪದಿಂ ಮುಂದರಿಯುದಪಯಶಕ್ಕಳ್ಕದತ್ಯಂತದೋಷ ||
ಕ್ಕೆನಿತಾಂತಂ ಬಳ್ಕದೆನ್ನತ್ತಣೆನಿನಿತುಭಯುಂದೋರದೀಧಾತ್ರಿಯೊಳ್ಸ |
ಜ್ಜನರಲ್ತಲ್ತೆಂಬರೆಂಬುದನೆ ಬಗೆಯದೀಬಾಲನಂ ಕೊಂದಿರಲ್ತೇ || ೭

ವ|| ಎಂದು ಮತ್ತಮಿರದೆ

ವೃ|| ಶರಣಪದಂಗಳಂ ಪಡೆದು ಪೂಜಿಸಿ ಶಂಕರಪೂಜೆಗೆಯ್ದು ಸ |
ಜ್ಜನಿಕಮನಾಂತು ಶೈವಮತವರ್ತನೆಯುಂ ಬಗೆಗೊಂಡು ತಾಳ್ದು ಭಾ ||
ಸುರಗುಣವೃಂದಮಂ ವಿಮಳಕೀರ್ತಿಯನಾರ್ಜಿಸಿ ಬಾಳ್ದುನಿಮ್ಮನು |
ದ್ಧರಿಸುವನೆಂದು ನಚ್ಚಿರೆ ಕುಮಾರಕ ಲೇಸನಿದಂ ನೆಗಳ್ಚಿದೈ || ೮

ಅರಿನೃಪರಂ ಪಡಲ್ವಡಿಪಕೇಳಿಯನೊಲ್ಲದೆ ಶಂಭುಪಾದಪಂ |
ಕರುಹಮನೊಲ್ದು ಪೂಜಿಪವಿಳಾಸಕೆ ಸಲ್ಲದೆ ಶೈವಕಾವ್ಯಮಂ ||
ಸರಸತೆಯಿಂದೆ ಕೇಳ್ವಬಗೆಯೊಳ್ಮಿಗೆಸಿಲ್ಲದೆ ಭರ್ಗಭಕ್ತಭಾ |
ಸುರಶಿಶುವಂ ಕೊರಲ್ಗೊರೆವಲೀಲೆಗೆ ಸಂದುದೆ ಚಿತ್ತಮಾತ್ಮಜಾ || ೯

ಮ|| ಶಿವಭಕ್ತಂಗೊರ್ಮ್ಮೆ ಭಿಕ್ಷಾನ್ನಮನೆವಿನಯದಿಂದಿತ್ತವಂ ಕೋಟಿಯಜ್ಞೋ |
ದ್ಭವಪುಣ್ಯಾವಾಪ್ತಿಯಂ ತಾಂ ಪಡೆವನೆನೆ ತದಾಗಸ್ಕರಂ ಕೋಟಿಪಾಪೌ ||
ಘವಿಶೇಷಾವಾಪ್ತಿಯಂ ಮೇಣ್ಪಡೆಯನೆ ಸುಕೃತಕ್ಕಾದಬಲ್ಪೇನಘಕ್ಕಿ |
ಲ್ಲವೆ ಪೇಳೀದೋಷಕಿನ್ನಾವುದೊ ಪರಿಹರಣಂ ಧಾತ್ರಿಯೊಳ್ನೋಡೆ ನೋಡುಂ ||

ಕಂ|| ಶರಣರ ಮನಕ್ಕೆ ನೋವಂ |
ದೊರಕೊಳಿಸಿದಘಕ್ಕೆದೊರೆಯದೆನೆ ಪರಿಹಾರಂ ||
ಶರಣಶಿಶುಶಿರಮನರಿದೀ |
ದುರಿತಂ ನಿಜಶಿರಮನಿತ್ತೊಡಂ ಪೋದಪುದೇ || ೧೧

ಹರಪೂಜೆಯಿಂದೆ ಮಿಗಿಲೀ |
ಶ್ವರಭಕ್ತರ ಪೂಜೆಯೆಂಬುದಾಗಮಮುದರಿಂ ||
ಹರಚರಣದ್ರೋಹದಿನೀ |
ಶ್ವರಶರಣದ್ರೋಹಮುಗ್ಗಳಂ ವಸುಮತಿಯೊಳ್ || ೧೨

ವ|| ಎಂದು ಸರ್ವ್ವೇಂದ್ರಚೋಳಾಧಿಪಂ ಯುವರಾಜನುಮಂ ಮಿತವಚನನು ಮನಂತೆ ಜಡಿದು ನುಡಿದುಮೀಶಿಶುವನಿವ್ವರೊಳಾವಾತಂ ಕೊಂದನೆಂಬುದಂ ಬೇಗಂ ಬೆಸಸಿಮೆನೆ ಮಿತವಚನಂ ಮುಂದಣ್ಗೆ ವಂದು ಕರಾರವಿಂದಮಂ ಮುಗಿದು ನಿಂದು

ಸ್ರ|| ದೇವ ಮದೀಶ ಚಿನ್ನಪಮಸೂಸಹಯಂಗಳನೇರಿ ಮೀರಿ ಸೇ |
ನಾವಳಿಗೂಡಿ ಗಾಡಿಮಿಗೆ ಬರ್ಪ್ಪಿನಮೀಶಿಶು ನೋಳ್ಪೊಡೈದೆ ಕಂ ||
ಡೀವಿಭು ತನ್ನ ವಾಜಿಯನೆ ದಾಂಟಿಸಿದಂ ತಲೆ ಪಾರೆ ರಕ್ತಧಾ |
ರಾವಿಳಮಿಕ್ಕೆ ಮೆಟ್ಟಿದುದು ಮತ್ತುರಗಂ ಖುರದಿಂ ಶಿರೋಧಿಯಂ || ೧೩

ಕಂ|| ಆದರಿಂದೆ ದೇವ ತಪ್ಪೆ |
ನ್ನದು ಬಳಿಕೀಶಿರಕೆ ಪಳಿಯುನೆನ್ನಯ ಶಿರಮಂ ||
ಪಡೆದೀವುದುಚಿತಮೆಂದಾ |
ಡಿದನಾಮಿತವಚನನಚಳಸೂನೃತವಚನಂ || ೧೪

ವ|| ಆಗಳಾಸತ್ಯೇಂದ್ರನಾಮಾತ್ಯಂ ಬಗೆಗೊಂಡು ನಿಜಮಂತ್ರಿಯಂ ನಿರೀಕ್ಷಿಸುತ್ತುಮೀತನ ಶಿರಮನರಿದೀಶಿಶುಶಿರಕ್ಕೆ ಪಳಿಗುಡುವುದೆನೆ ಗಳಿಲನೆ ಪಳಿಪೊರ್ದದಮಳಚರಿತನಿದಿರ್ಗೆವಂದೆನ್ನ ಶಿರಮಿದಕ್ಕೆ ಪಳಿಯೆಂದು ತೋರ್ಪಂತೆ ಪಣೆವೆರೆಯೊಳ್ಕರಾಂಜಲಿಯನಮರ್ಚಿ ನಿಂದು ||

ಕಂ|| ವರಸತ್ಯವಾಣಿ ಗಂಭೀ |
ರರವಂ ಕೌತುಕಮನಾನೆ ಸಭೆ ನೃಪನ ಮನಂ ||
ಹರಿಸಮನಮರ್ಚೆ ಸಚಿವಂ |
ಗಿರದಳಲಿರ್ಮ್ಮಡಿಸೆ ಮಂತ್ರಲಕ್ಷ್ಮಂ ನುಡಿದಂ || ೧೫

ಅವಧರಿಪುದು ಬಿನ್ನಪಮಂ |
ಭುವನೇಶ್ವರ ತಪ್ಪಿದೆನ್ನದಂತೆನಲಾಂ ಸೈಂ ||
ಧವನಿತ್ತಸೈಂಧವಮನೇ |
ರುವಬಗೆವಿಡಿದಿರ್ದ್ದೆ ಕೇಳ್ದೊಡೀಮಿತವಚನಂ || ೧೬

ವೃ|| ಪೊಸತೀವಾಜಿಯುಗಂ ಪುರಂ ಪ್ರಬಳಶೈವವ್ರಾತದಿಂ ತೀವಿ ರಂ |
ಜಿಸುಗುಂ ಸೈನ್ಯಮಗಣ್ಯಮುನ್ನತಮದಂ ಮದೂಢವಂಭಕ್ತಮಾ ||
ನಸಸಂತಾಪಕರಾಸಪಿಷ್ಣುವದರಿಂದೀಕಜ್ಜಮಂ ಕೂರ್ತ್ತು ಯೋ |
ಜಿಸಲೇನಕ್ಕುಮೆ ಮಾಣ್ಬುದೆಂದಸಿವನೆನ್ನಂ ಮುನ್ನಮುರ್ವೀಶ್ವರಾ || ೧೭

ಕಂ|| ಎನೆ ನಿನಗೆ ಬಂದತಪ್ಪಿಂ |
ದೆನಗೆ ವಿನೋದಕ್ಕೆ ವಿಘ್ನಮಂ ಮಾಡದಿರೇ ||
ಳೆನುತಾಗ್ರಹಿಸುತೊಡಂಬಡ |
ಲಸುಗೈದಂ ದೇವ ಪಿರಿಪೊಂದುಜ್ಜುಗಮಂ || ೧೮

ಆದರಿಂದಪರಾಧಮಿದೆ |
ನ್ನದುಗಡ ನೀಮರಿಯದುದೆ ಮಹೀಶ್ವರ ಸರ್ವ ||
ಜ್ಞ ದಯಾನಿಧಿ ಪಳಿಗೀವುದು |
ಮದುತ್ತಮಾಂಗಮನುಮಾಧವಂ ಮಚ್ಚುವಿನಂ || ೧೯

ಅನಿಮಿತ್ತಮೀಶಭಕ್ತೆಯ |
ತನುಭವನಿಂತಳಿದನೆಂದು ಮರುಗಿದಪುದು ಮ ||
ನ್ಮನಮಿನಿತಲ್ಲದೆ ಮಜ್ಜೀ |
ವನಮಂ ತೊರೆವಲ್ಲಿ ಮರುಕಮೇಂ ತೋರುಗುಮೇ || ೨೦

ವ|| ಎಂದು ನುಡಿದಾರಾಜಶೇಖರಸುಕುಮಾರನ ಬಗೆಗೆ ಸಭಾಸದ ವೃದ್ಧಪ್ರಸಿದ್ಧರಾಜನ್ಯಕಂ ಬಗೆಮುಚ್ಚಿ ಮಣಿಮುಕುಟ ಮಸೊಲೆದು ತೂಗಿ

ಕಂ|| ಪುಸಿಪೊಂದದ ಪೊಸನುಡಿಯಂ |
ವಸುಮತಿಯೊಳ್ನುಡಿಯುಲಕ್ಕುಮೀನೃಪಸುತನಂ ||
ತಸುವಳಿಗುಮೇಂಬಬಗೆಯೊಳ |
ಮುಸಿರುವನನ್ನಿಗಳ ನಾಯಕರ್ಪ್ಪರರೊಳರೇ || ೨೧

ವ|| ಎಂದು ಸ್ತುತಿಸುತ್ತಿರ್ಪ್ಪನಮಾಸತ್ಯೇಂದ್ರನಾಕುವರಂಗಾದತಪ್ಪನರಿದವನೆಂದುದ ಸಪ್ಪುಕೈಟುಸಚಿವಾಸ್ಯಮಂ ನಿರೀಕ್ಷಿಸಿ

ಕಂ|| ಸಂದೆಗಮೇನಿನ್ನಿದಕೆಲೆ |
ಕೊಂದವನಿವನಾದಮಾದನೀತನ ಶಿರಮಂ ||
ತಂದೀವುದು ಪಳಿಗುಚಿತಮಿ |
ದೆಂದಂ ಶಿವಶಿವ ಸಭಾಸದಮ್ಮರುಗುವಿನಂ || ೨೨

ಎನೆ ಕಳೆಯೇರಿದನುರ್ವ್ವಿದ |
ನನುರಾಗಂದಾಳ್ದನಭವನಡಿದಾವರೆಯಂ ||
ನೆನೆದನಮುಚ್ಚಿದನಾನಿಜ |
ಜನಕನ ಕನದಂಘ್ರಿ ಕಂಜದೊಳ್ಪೆರೆಸೊಸಲಂ || ೨೩

ವ|| ಅಂತೆರಗಿ ಜನಂ ಪಡೆದೆಳ್ದು ನಿಂದು

ಕಂ|| ನಿಮ್ಮಯ ಮನಕ್ಕೆ ಮಾಡಿದೆ |
ಸುಮ್ಮಳಮಂ ಜನಕ ಗಿರಿಶಭಕ್ತಯ ಶಿಶುವಂ ||
ದಿಮ್ಮಿದರಲ್ತೆನೆ ಕಡುಪಿಂ |
ದಾಂ ಮುಡಿಪಿದೆನೆನ್ನವೋಲ್ಕೃತಘ್ನರುಮೊಳರೇ || ೨೪

ಮರೆವುದಿದನೆಂತುಮೆನ್ನಂ |
ಮರೆಯಲ್ಪಲವಾಗದೆಂದು ಬೀಳ್ಕೊಂಡಳಲಿಂ ||
ಪೊರಮಟ್ಟನಮುಮ ಪದಪಿಂ |
ಸಿರೆಗಲಿಗಳದೇವನಾಪ್ಪರ್ಮಿಗ ಯುವರಾಜಂ || ೨೫

ಒಡನೇಳ್ದು ತನ್ನಿರೂಪಂ |
ಒಡೆಯಾಸಚಿವೇಂದ್ರನಾನರೇಂದ್ರಾತ್ಮಜನೊಳ್ ||
ನಡೆತಂದಂ ಪೆರತೊಂದಂ |
ಕಡುಕಜ್ಜಮನಲ್ಲಿ ತನ್ನೊಳಾಳೋಚಿಸುತುಂ || ೨೬

ವ|| ಅಂತು ನಡೆತಂದಾಕುಮಾರನ ಸತ್ಯವಚನಕ್ಕಮಾತನಧೈರ್ಯೋನ್ನತಿಗಮಾತನುತ್ಕಟಶಿವಭಕ್ತಿಗಂ ಮನದೊಳ್ಮೆಚ್ಚಿ ಪೊಗಳ್ದು ದೇವಾ ನೀಮುಮೀಕ್ಷಣಂ ಮೃಡಪೂಜೆಗೆಯ್ದು ಬಪ್ಪುದೆಂದಂತಪುರದಂತಮನೆಯ್ದಿಸಿ ತಾನುಂ ನಿಜನಿಳಯಕೇಳ್ತಂದತೀವಭಕ್ತಿಯಿಂದೇಕಾಂತಭವನದೊಳುಮಾಕಾಂತನಂ ಪೂಜಿಸುತನಂತರಂ

ಕಂ|| ನಿತ್ಯಂ ನಿಜೇಶ್ವರಪ್ರಿಯ |
ಕೃತ್ಯಂ ಶಿವಭೃತ್ಯನಧಿಕಸತ್ಯಂ ಘನಸಾ ||
ಹಿತ್ಯಂ ಜನನುತ್ಯಂ ಸದ |
ಮಾತ್ಯಂ ಕರತಳದೊಳಲಗನಳವಡಿಸುತ್ತುಂ || ೨೭

ಸ್ರ|| ಒಡೆಯನಸಗ್ಗದಪುತ್ರನನೀಗಳಾಂ |
ಮಡಿಪುತಕ್ಕಟಬೆಂದಶರೀರಮಂ ||
ಪಿಡಿದು ಬಾಳ್ವೆನೆ ಧಾತ್ರಿಯೊಳೆಂದು ತ |
ನ್ನೊಡಲನೀಗನೊಡರ್ಚಿದನಾಕ್ಷಣಂ || ೨೮

ವ|| ಅಂತೊಡರ್ಚ್ಚಿ ಶಿವಾಂಘ್ರಿಯುಗಳಮನೆರ್ದೆಯೊಳನುಗೊಳಿಸಿ ನಮಿಸಿ

ಕಂ|| ಕಡುಗಲಿ ಚಂಡಿಕೆಯುಂ ತ |
ನ್ನೆಡಗಯ್ಯಿಂದಡಸಿ ಪಿಡಿದು ಸಾರ್ಚ್ಚಿ ಕೊರಲ್ಗಂ ||
ಕಡುಗಮನೆ ಘುರಿಘುರಿಲನೆಡೆ |
ಯುಡುಗದೆ ಕೊರೆದರರೆ ಮಡಗಿದಂ ನಿಜಶಿರಮಂ || ೨೯

ಪತಿಯಾಣತಿಯುಂ ಮೀರದೆ |
ಪತಿಯುಣುಗನನೆಯ್ದೆ ಮಡಿಪಲಾರದೆ ಮಡಿದಂ ||
ಪತಿವೋೀಹಿ ಸಚಿವಸಂಕುಳ |
ಪತಿ ಪರಿಕಿಪೊಡೀತನೊರೆಗೆ ಬರ್ಪ್ಪವರೊಳರೇ || ೩೦

ವ|| ಎಂದರಿದಖಿಳಪುರಜನಂ ಕೀರ್ತಿಸುತ್ತುಮಿರ್ಪ್ಪಿನಮಿತ್ತಲ್ರಾಜಶೇಖರ ರಾಜಂ ರಾಜಶೇಖರಪೂಜಾಗೃಹಮನೋಜೆಯಿಂ ಪೊಕ್ಕು ಮಿಕ್ಕು ನಿರ್ಮಳೀಕೃತಕರಚರಣನುಮಸಮಭಸಿತತ್ರಿಪುಂಡ್ರಲಸಿತಲಲಾಟತಟನುಮಭಿನವರುದ್ರಾಕ್ಷಮಾಲಾಕಲಿತಕಂಧರನುಮಾಗಿ

ವೃ|| ವರಪಂಚಾಮೃತಪಂಚಗವ್ಯಮೃಗಭೂಕಾಶ್ಮೀರಸಮ್ಮಿಶ್ರಭಾ |
ಸುರವಾರಿಸ್ನಪನಂಗಳಂ ರಚಿಸಿ ಬಿಲ್ವೇಂದೀವರಾಬ್ಜಾದಿಯಂ ||
ಧರಿಸುತ್ತರ್ಚಿಸಿ ಧೂಪದೀಪವಿಳಸನ್ನೈವೇದ್ಯತಾಂಬೂಲಮಂ |
ನರನಾಥಾಗ್ರಣಿ ಪೂಜೆಗೆಯ್ದನೊಲವಿಂ ಶ್ರೀಶೈಲಜಾಕಾಂತನಂ || ೩೧

ವ|| ಅಂತು ನಿರತಿಶಯಭಕ್ತಿಯಿಂದರ್ಚಿಸಿ ಕಣ್ದೀವಿನೋಡಿ ಬಗೆಗೊಂಡು ಭಾವಿಸಿ

ವೃ|| ಕಾಮಾರಾತ್ಮೆ ತ್ರಿಭುವನಪತೇ ಶರ್ವ ಭಕ್ತಾನುಕಂಪಿ |
ನ್ಸೋಮಾರ್ಧಾಂಕ ತ್ರಿಪುರಹರ ಕಾಲಾಂತಕ ತ್ರ್ಯಕ್ಷ ಶೂಲಿನ್ ||
ವ್ಯೋಮಾತೀತ ಪ್ರಣವಗ ಫಣಾಭೃದ್ಧರ ಸ್ವರ್ಗಮೋಕ್ಷ |
ಸ್ವಾಮಿನ್ದೇವ ಪ್ರಮಥಪತಿಪನ್ನಾಥ ತುಭ್ಯಂ ನಮೋಸ್ತು || ೩೨

ವ|| ಎಂದಮಂದಾನಂದದಿಂದಿಂದುಧರನಂ ನುತಿಸುತೆರಗಿ ತತ್ಪ್ರಸಾದಂ ಬಡೆದನಂತರಮಖಿಳಮಾಹೇಶ್ವರರಂ ಬರಿಸಿ

ವೃ|| ಘನತರಭಕ್ತಿ ಕೈಮಿಗೆಪದಾಬ್ಜಮನರ್ಚಿಸಿ ಪೂರ್ಣರಾಗದಿಂ |
ಧನಕನಕಾಂಬರಪ್ರಸರಸನ್ಮಣಿಭೂಷಣವೃಂದಮಂ ಮಹಾ ||
ವಿನಯದಿನಿತ್ತು ಕೈಮುಗಿದು ಕಿಂಕರಭಾವಮನಾಳ್ದು ಪೇಳ್ದು ಮು |
ನ್ನಿನ ನಿಜವೃತ್ತಮಂ ಪಡೆದವಂದಿರಸತ್ಕೃಪೆಯಂ ಕುಮಾರಕಂ || ೩೩

ಕಂ|| ತೊಡವೆಳಗುಪೊಳೆಯೆ ವದನಮು |
ಡುಡುಪತಿಯಂ ಪಳಿಯೆ ನೇತ್ರರುಚಿ ಚಂದ್ರಿಕೆಯಂ ||
ಜಡಿಯೆ ನಡೆತಂದನೊಲವಿಂ |
ಮೃಡನಂ ಜಾನಿಸುತೆ ಜನನಿಯರಮನೆಗಾಗಳ್ || ೩೪

ವ|| ಅಂತು ಬಂದು ಮಣಿಪೀಠಮನಳಂಕರಿಸಿ ವಿನಿಯೋಗದಮಡದಿಯರ ನಡುವೆ ಕುಳ್ಳಿರ್ದಮೃತಮತಿದೇವಿಯಡಿದಾವರೆಗೆರಗಲೊಡನೆ ||

ವೃ|| ಕಡಗಂ ಗಲ್ಕನೆ ತೋಳ್ಗಳಿಂ ನೆಗಪಿದಳ್ತಳ್ಕೈಸಿದಳ್ತನ್ನಕ |
ಣ್ಗಡೆಯಿಂ ತುಳ್ಕೆ ಮುದಶ್ರು ನೋಡಿ ನಲಿದಳ್ಮುಂಡಾಡಿದಳ್ಮುದ್ದಿಸು |
ತ್ತೊಡನರ್ಧಾಸನದಲ್ಲಿ ಕುಳ್ಳಿರಿಸಿದಳ್ಕೂರ್ತಪ್ಪಿದಳ್ಮತ್ತಮೆ |
ಲ್ಲಡಿಗೊಟ್ಟಳ್ಮದವಾಂತಳಾಜನನಿ ಪುತ್ರಸ್ನೇಹಮೆಂತಪ್ಪುದೋ || ೩೫

ವ|| ಅನಂತರಂ

ಕಂ|| ಮಗನೆ ಪೊಸತೊಂದುಕಜ್ಜಂ |
ನೆಗಳ್*ದಿದೆ ನಗೆಮೊಗದೊಳರಿಪನೇನೆಂಬುದನಂ ||
ದೊಗುಮಿಗೆಯಿಂ ಮುದ್ದಿಸಿ ಮಿಗೆ |
ಮೃಗಶಾಬೇಕ್ಷಣೆ ಕುಮಾರನಂ ಬೆಸಗೊಂಡಳ್ || ೩೬

ವೃ|| ಜನನಿ ತುರಂಗಮೇರಿ ಬಲಗೂಡಿ ಬರುತ್ತಿರೆ ಪೆಟ್ಟಿತೊರ್ವಭ |
ಕ್ತನ ಶಿಶುವಂ ಕೊರಲ್ಪರಿಯೆ ಮಂತ್ರಿಕುಮಾರಕನಶ್ವಮಾತನ ||
ಲ್ತಿನೆ ನಿನಗಾಂದತಪ್ಪೆನಗೆನುತ್ತುಸಿರ್ದಂ*ಮೊದಲಂತದಕ್ಕೆ ಮ |
ಜ್ಜನಕನರೇಂದ್ರನೆನ್ನ ಶಿರಮಂ ಪಳಿಗಿತ್ತನಿಂದು ನಿಚ್ಚಯಂ || ೩೭

ಕಂ|| ಅಂಬಿಕೆ ನಿಮ್ಮಡಿಗೆರಗುತೊ |
ಡಂಬಡೆ ಬೀಳ್ಕೊಂಡುಪೋಗಲ್ಕೈದಿದೆನೆನ್ನಂ ||
ಪಂಬಲಿಸದೆ ಮಿತವಚನನ |
ನಿಂಬರಿದೆನ್ನಂತೆ ಕಾಣ್ಬುದಿಂತಿದೆ ಕಜ್ಜಂ || ೩೮

ವ|| ಎಂದು ಮಗುಳ್ದಿಂತೆಂದಂ

ವೃ|| ಮೊದಲೆಳೆಯರ್ಕಳಿಲ್ಲದುರೆ ದೂರಿಸಿ ಮದ್ಗುರುವಿತ್ತಮಂತ್ರದಿಂ |
ಪದಪಿನೊಳೀತನಂ ಪಡೆದು ಬಾಲ್ಯದಲೀಲೆಯನೊಲ್ದು ನೋಡಿ ಪೆಂ ||
ಪೊದವಿದಯೌವನೋದಯವಿಳಾಸಮನೀಕ್ಷಿಪಕಾಲಕಿಂತು ಬಂ |
ದುದೆ ವ್ಯತಿಯೆಂದು ಚಿಂತಿಸದಿರಿಂತಿದನಾಂ ನೆರಗೊಡ್ಡಿ ಬೇಡಿದೆಂ || ೩೯

ವ|| ಎಂದಾಯುವರಾಜರಾಜಶೇಖರಂ ಬಿನ್ನವಿಸೆ ತಾನತ್ಯಂತ ಶಿವನಿಷ್ಠೆ ಯಪ್ಪುದರಿಂ ತಲೆದೋರ್ಪ್ಪಮನಃಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮಗುಳ್ದು ಬರಸೆಳೆದು ನೊಲೆತೊರೆಯೆ ಜಿಗಿದಪ್ಪಿ ಮೊಗಮಂ ನೋಡಿ ಮುದ್ದು ಗೆಯ್ದು ||

ಕಂ|| ಎನ್ನಾಳ್ದನ ಸತ್ಯಂ ಗೆಲೆ |
ನಿನ್ನಸುವಂ ಭಕ್ತಶಿಶುಗೆ ಕುಡು ಚಿಂತೆಯದೇ ||
ಕೆನ್ನಸುವೆ ಪಾರ್ವತೀಪತಿ |
ಪನ್ನಗಿನಭ್ರಮರಲೀಲೆದಳೆ ತಳರೆಂದಳ್ || ೪೦

ಈಸತ್ಯವಚನಮೀನಯ |
ಮೀಸದ್ಗುಣಮೀವಿವೇಕಮೀಸಕಳಕಳೋ ||
ದ್ಭಾಸತೆಯೀಘನಧೃತಿವಿ |
ನ್ಯಾಸಂ ಮತ್ತೊನುಗಲ್ಲದನ್ಯರೊಳೊಳವೇ || ೪೧

ವ|| ಎಂದು ಕೆಲದೊಳಿರ್ದ್ದಕೆಳದಿಯರೊಳ್ಪೊಗಳುತ್ತಿರ್ಪ್ಪಿನಮಲ್ಲಿಂ ಬೀಳ್ಕೊಂ ಡು ಧೃತಿಧರಾಧರಂ ರಾಜವೀಥಿಗೇಳ್ತಂದು ಸಚಿವವೃತ್ತಮಂ ದೂತವಚನದಿನರಿದು ಜನಕನಿರ್ಪ್ಪೆಡೆಗೇಳ್ತಂದೀವೃತ್ತಾಂತಮೆಲ್ಲಮಂ ಪೇಳಲೊಡನೆ ಕೇಳ್ದು ಸಕೌತು ಕಾಂತರಂಗಂ ಸಂದಾಯಿಬಿಯೆಂಬ ಹಡಪವಳನಾನನಮಂ ಪೀದಿರಿಗಿ ನಿರೀಕ್ಷಿಸಿ ||

ಕಂ|| ಹರಚರಣಭಕ್ತಿರಸಭಾ |
ಸುರಹೃದಯಾಂಬುರುಹನಾನರೇಶ್ವರಸವನಂ ||
ಕರೆದೆಲವೊ ಪೋಗು ಕುವರನ |
ಶಿರಮಂ ಮಿಗೆ ತಪ್ಪದೆಂದು ಬೆಸಸಿದನಾಗಳ್ || ೪೨

ವೃ|| ಜೀಯ ಮಹಾಪ್ರಸಾದವೆನುತಂಗೊಡನೇಳ್ತರೆ ಖಡ್ಗಮಾಂತು ಸಂ |
ದಾಯಿಯೆನಿಪ್ಪಭೃತ್ಯನವನೀಶಸಭಾಂತರದತ್ತಣಿಂ ಸರೋ ||
ಜಾಯತನೇತ್ರನೊಲ್ದು ಪೊರಮುಟ್ಟಡಟಿಂ ನಡೆಗೊಂಡನಲ್ಲಿಪು |
ಪ್ಪಾಯುಧವೈರಿಯಂಘ್ರಿಗಳನಾಂತೆರ್ದೆಯೊಳ್ಮಿಗೆ ರಾಜಶೇಖರಂ || ೪೩

ವ|| ಅಂತು ರಾಜವೀಧಿಯೊಳೈತರ್ಪನನಾಪೌರಜನಂ ನಿರೀಕ್ಷಿಸಿ

ವೃ|| ಚತುರಂಭೋನಿಧಿಮುಟ್ಟಿದುರ್ವರೆಗಧೀಶತ್ವಂಗಡಾ ವಿಶ್ವವಿ |
ಶ್ರುತಸಾಮಂತನರೇಂದ್ರಮೌಳಿಘಟಿತಾಂಘ್ರಿತ್ವಂಗಡಾ ಯೌವನಾ ||
ನ್ವಿತಸೌಂದರ್ಯತನುತ್ವಮುಂಗಡ ಬಳಿಕ್ಕಂತಾದೊಡಂ ತನ್ನ |
ಜೀವಿತಮಾವಂಗಡ ನನ್ನಿಗೀಕುವರನಂ ಪೋಲ್ವನ್ನರಾಧಾತ್ರಿಯೊಳ್ || ೪೪

ಕಂ|| ಅಕ್ಕಟ ಘಸತ್ಯೇಂದ್ರಂಗಿದು |
ತಕ್ಕುದೆ ಸುಡಿದಂಡಮೊಳವೆ ಸಚಿವಸುತಾಶ್ವಂ ||
ಚಕ್ಕನೆ ಪುಗುವಂ ಮಡಿಸಿದೊ |
ಡಿಕ್ಕಿದಪಂಗಡ ಕುಮಾರಕುಸುಮಾಯುಧನಂ || ೪೫

ವ|| ಎನುತ್ತಿರೆಯಿರೆ ಮತ್ತೆ ಕೆಲಂಬರಬಲೆಯರ್ನೆರೆದು

ವೃ|| ಬಿಸುಸುಯ್ದುಂಬಕದಂಬುವಂ ಮಿಡಿದು ಹಾಯೆಂದಳ್ತು ಕೈಸೋಂಕೆ |
ಳ್ವಸಿರಂ ಮೋಗ್ದೊಸೆದಲ್ಲಿಬಂದುದೊ ತುರಂಗಂ ಕೇಳಿಯೋಕಾಮಿನೀ ||
ಶಿಶುವಿಂತೇಕಳಿದತ್ತೊ ದೂಖವಳನೇತಕ್ಕೀಕೆ ಪೋಪೋಪೊ ಕೋ |
ಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ || ೪೬

ವ|| ಎಂದೆಂದಳಲ್ದು ಬಳಲ್ದು ಮರುಗುತ್ತಿರ್ಪನ್ನೆಗಂ

ವೃ|| ನಡೆತಂದಂ ಧೃತಿಮೇರು ಸತ್ಯನಿಧಿ ಸಾಜಿತ್ಯಾಬ್ಜಸೂರ್ಯಂ ಮಹಾ |
ಮೃಡಭಕ್ತಿಪ್ರಮದಾಮನೋರಮಣನಾಶ್ರೀಮಂತ್ರಲಕ್ಷ್ಮಾಂಕನೊ ||
ಳ್ಪಡದುರ್ದ್ಯಾನಧರಿತ್ರಿಯಲ್ಲಿಗಧಟಿಂ ಪದ್ಮಾಸನಂಗೊಂಡು ನೇ |
ರ್ಪಡೆ ಕುಳ್ಳಿರ್ದ್ದಗಜೇಶನಂ ನಿಜಮನಃಪಂಕೇಜದೊಳ್ತಾಳ್ದಿದಂ || ೪೭

ವ|| ಅಂತುತಾಳ್ದುಖರ್ವಭಕ್ತಿಯಿಂದೆರಗಿ

ವೃ|| ಪ್ರಮಥಗಣಾನ್ವಿತಂ ವಿಧಿವಿಧುಪ್ರಮುಖಾಮರಸಂಕುಳಾನ್ವಿತಂ |
ಹಿಮಗಿರಿಕನ್ಯಕಾಸಹಿತನಂ ಗಜಮರ್ದನನಂಬರಪ್ರದೇ ||
ಶಮನಡರ್ದ್ದಲ್ಲಿ* ನೋಡುತಿರೆ ರಾಜಕುಮಾರಕನೋಜೆಯಿಂದೆ ಖ |
ಡ್ಗಮನಿರದೆತ್ತಿ ಮೇಣ್ಜಡಿದು ಕಂಠಕಮರ್ಚ್ಚಲೊಡರ್ಚ್ಚುತಿರ್ಪ್ಪಿನಂ || ೪೮

ಕಂ|| ಕರಪೊಸತು ಜೀಯಪಂಚಾ |
ಕ್ಷರಮಂ ನೀಂ ಮರೆದು ಮಡಿಯಲುಜ್ಜುಗಿಪುದಿದೆಂ ||
ದಿರದನುಚರನೆನೆ ಮೊಗದೊ |
ಳ್ದರಹಸನಂ ಮೊಳೆಯೆ ಮಂತ್ರಲಕ್ಷ್ಮಂ ನುಡಿದಂ || ೪೯

ಎನಗಾಪ್ತನಲ್ತೆ ಮರೆದಿರೆ |
ನೆನೆಯಿಸಿದ್ಯೆ ಭಾಪು ನಿನಗದಾರ್ಸ್ಸರಿ ಪೇಳೆಂ ||
ದೆನೆ ಕೌತುಕವೊಗೆತರೆ ನೃಪ |
ತನಯನನಾಕಿಂಕರಂ ಕರಂ ಬೆಸಗೊಂಡಂ || ೫೦

ವೃ|| ಸರಸಮೆ ದೇವ ಕಿಂಕರನೊಳಿಂತಿದರೊಂದಿರವಿಂತುಟೆಂದು ಬಿ |
ತ್ತರಿಪುದು ಜೀವನಿಷ್ಕ್ರಮಣದೊಳ್ಶಿವಮಂತ್ರಜಪಂ ಪ್ರಶಸ್ತಮೆಂ ||
ದೊರೆವಜಿತೋಕ್ತಿಯೇ ಪುಸಿಯೊ ಪೇಳೆನೆ ನಿನ್ನಯ ಭೃತ್ಯವೃತ್ತಿ ಭೂ |
ವರನ ನಿಜಾಜ್ಞೆ ಕೆಟ್ಟಪುದೆನುತ್ತುಳಿದಂಗಡ ದಿವ್ಯಮಂತ್ರಮಂ || ೫೧

ವ|| ಎಂದಾರಾಜಕುಮಾರನ ಗಂಭೀರೋಕ್ತಿಯನಾಕಿಂಕರನಾಕರ್ಣಿಸಿ

ಕಂ|| ಇದುಚಿತ್ರಂ ನೀಂ ಜಪಿಸಿದೊ |
ಡಿದರಿಂದೆನ್ನಾಳ್ತನಂ ಜನಾಧಿಪನಾಜ್ಞಾ ||
ಪದಮುಳಿಗುಮೆಂಬಬಗೆ ಬಗೆ |
ಗೊದವಿದಸಂದೆಗಮನಿಳಿಪಿಳಾಧಿಪತಿಳಕಾ || ೫೨

ವೃ|| ಇಂತೆಂದೋರಂತೆ ಲೆಂಕಂ ಬೆಸಗೊಳೆ ಕಮಳಾಕಾಂತನುಂ ಬೊಮ್ಮನುಂ ತಾ
ಮೆಂತುಂ ವೇದಂಗಳುಂ ಕಾಣದಪರಶಿವನಂ ತೋರ್ಪ್ಪಸಾಮರ್ಥ್ಯಮಂ ತಾ ||
ಳ್ದಂತಿಂತೆಂಬೂಹೆಯುಂ ಪೊರ್ದದಿರುಪಮಸನ್ಮಂತ್ರಮಂ ಪೇಳಲಾಂ ಖ |
ಡ್ಗಂ ತಾಂ ಪೂಮಾಲೆಯಾದಪ್ಪುದು ಪರಿಯದೆಪೋದಪ್ಪುದೆಂದಂ ಕುಮಾರಂ ||

ವ|| ಆದರಿಸರಸಾಜ್ಞೆಯುಂ ಸಿನ್ನಭೃತ್ಯತೆಯುಮೊಡನೆ ಕೆಡುಗುಮೆನ
ಲೊಡಂ ಕೇಳ್ದುಕೌತುಕಂದಾಳ್ದು

ಕಂ|| ಆದೊಡಮೆನ್ನಯ ಭೃತ್ಯತೆ |
ಪೋದೊಡಮೆನ್ನರಸನಾಜ್ಞೆಯಳಿದೊಡಮೇಂ ಸೀ ||
ನೋದದೆ ಮಂತ್ರಮನಳಿದೊಡೆ |
ಮಾದೇವನೊಳೈಕ್ಯವೃತ್ತಿಯೇಂ ಸಮನಿಕುಮೇ || ೨೪೪

ವ|| ಎನೆ ಮುಗುಳ್ನಗೆನಕ್ಕು

ಕಂ|| ಒಂದಿಸಿತುಪೊಳ್ತು ಸೈರಿಸಿ |
ಸಂದಾಯಿ ಸಿರೀಕ್ಷಿಸುತ್ತುಮಿರು ತೋರ್ದ್ದಪೆನೆ ||
ನ್ನಂದಮನೆನುತ್ತೆ ಪೂಣ್ದುಸಿ |
*ದರ್ಂದರಸಂ ಖಡ್ಗಮುಂ ಕೊರಲ್ಗೊಂದಿಸಿದಂ || ೨೪೫

ವೃ|| ಎಲೆಎಲೆ ದೇವದೇವ ಕುವರಂ ಕೊರಲಂ ಕೊರೆದಪ್ಪನಯ್ಯೋ ಸಿ |
ಷ್ಪಲಕರುಣಾಸಮುದ್ರ ಶಶಿಶೇಖರ ಶಂಕರ ಕಾವುದೀವುದು ||
ಜ್ಜನಸುಖಮುಂ ಸಮಂತೆನೆ ಕೃಪಾಕರೆ ಶಾಂಕರಿ ಮುಂದೆ ಕಜ್ಜಮುಂ |
ಟಿಲೆಗಿರಿಜಾತೆ ಸೈರಿಪುದಪೇಕ್ಷಿಪುದದ್ಭುತಭಕ್ತಿಯುಕ್ತರಂ || ೨೪೬

ವ|| ಎಂದಂಬರದೊಳ್ತ್ರ್ಯಂಬಕನಂಬಿಕೆಯನೊಡಂಬಡಿಸುತ್ತುಮಿರೆ

ವೃ|| ನಡೆನೋಡುತ್ತಿರೆ ಕಿಂಕರಂ ಮುಗಿದಕಯ್ಯಂ ಪೊತ್ತು ಚಿತ್ರಾಂತದೊ |
ಳ್ಮೃಡನಂ ಭಾವಿಸಿ ಖಡ್ಗಮುಂ ಪಿಡಿದು ಸಾಜ್ಞಾರ್ತತ್ರಾತ್ಮಕಂಠಕ್ಕೆ ಕೈ ||
ಗುಡೆ ಸಾಸಂ ಘನಲಿಂಗನಂಕೊರೆದಿರ್ಕಾಂಘ್ರೀಶಂ ಮಹಾಮಂತ್ರಮುಂ |
ಪಿಡದೋರಂತೊದರುತ್ತುಮಿರ್ಪ್ಪಶಿರಮಂ ತಾಳ್ದಂ ಕರಾಂಭೋಜದಿಂ || ೨೪೭

ಕಂ|| ಪೊಸತೊಂದುತೇಜಮುದುರಂ |
ಜಿಸೆ ಥಳಥಳಿಸುತ್ತೆ ನೋಡಲಣ್ಮದೆ ಭೃತ್ಯಂ ||
ಕುಸಿದೆರಗಿ ನಿಂದು ಮಿಗೆ ಕೀ |
ರ್ತಿಸುತಿರೆ ತತ್ಕರಕೆ ನೀಡಿದಂ ನಿಜಶಿರಮಂ || ೫೮

ವೃ|| ಅರಮಗನೆಂದವೋಲ್ನೆಗಳ್ದಕಜ್ಜಮ ನೀಕ್ಷಿಸಿ ಚೋದ್ಯವಟ್ಟು ಕಿಂ |
ಕರನೆರಗುತ್ತೆ ಮತ್ತವನ ನಲ್ನುಡಿ ತಾನುಪದೇಶವಾಗೆ ತ ||
ತ್ಸುರುಚಿರಮೂರ್ತಿ ತನ್ನ ಬಗೆಯೊಳ್ನೆಲೆಗೊಂಡಿರೆ ಕೀಟಭೃಂಗದಂ |
ತಿರೆ ಶಿವಮಂತ್ರಸಿದ್ಧನೆನಿಸಿರ್ದ್ದನದಂತೊ ಮಹಾತ್ಮಸಂಗಮಂ || ೫೯

ವಿಲಸತ್ಪಂಚಾಕ್ಷರೀಸಲ್ಲಲಿತತರಲತಾಕಂದವೋ ಭಕ್ತಿವಲ್ಲೀ |
ಫಲವೋ ನಿರ್ವಾಣಲಕ್ಷ್ಮೀಕಲಿತಕಮಲವೋ ಸತ್ಯದುಗ್ಧಾಬ್ಧಿಪೂರ್ಣ ||
ಮಲಿನಪ್ರಾಲೇಯರುಙ್ಮಂಡಳವೊ ಮಹಿತಚಿದ್ಯೋಷಿದಾದರ್ಶವೋ ಮಂ |
ಜುಲ ತೇಜಃಪಿಂಡವೋ ಪೇಳೆನೆ ಮೆರೆದುದು ತದ್ರಾಜಪುತ್ರೋತ್ತಮಾಂಗಂ|| ೬೦

ವ|| ಅಂತುಮಲ್ಲದೆಯುಂ

ವೃ|| ಅದುಗಗನಂಬೊಲಬ್ಜಮಧುರಂ ಮಧುರಂಜಿತನಂದನಂಬೊಲ |
ಭ್ಯುದಿತರಸಾಲಸಸ್ಮಿತಸಮುದ್ಗಮಮುದ್ಗಮದಂತೆ ಸದ್ರವಾ ||
ಸ್ಪದಮಮೃತಾಬ್ಧಿಯಂತೆ ಸರದಚ್ಛವಿರಾಜಿ ವಿರಾಜಿವೋಲ್ನಿದಾ |
ಘದನವವಿದ್ರುಮಾಧರದಳಾಶ್ರಿತಮಾಶ್ರಿತದಂತೆ ಸಂಭೃತಂ || ೬೧

ವ|| ಅಂತೆಸೆವಶಿರೋಬ್ಜಮಂ ಕರಾಬ್ಜದೊಳ್ವಿಜಯಂಗೈಸಿಕೊಂಡು ಸೂರ್ಯವೀಥಿಯೊಳವಂ ತಳ್ವದೈತರುತ್ತುಮಿರೆಮಿ ರೆ

ಕಂ|| ಅಮರ್ದಿನೊಳಕ್ಕಿಡಕಮಳವೊ |
ವಿಮಳಸುಧಾಬ್ಧಿಯೊಳೆಪುಟ್ಟಿದಮೃತದ್ಯುತಿಬಿಂ ||
ಬಮೊ ಪೇಳೆನೆ ಮೆರೆದುದು ಹಸ |
ನಮುಯೂಖಾಸ್ಕೃತಮುಖಂ ನರೇಂದ್ರಾತ್ಮಜನಾ || ೬೨

ವೃ|| ಪುರನಾರೀಜನಮೀಕ್ಷಿಸುತ್ತೆ ಮರುಗುತ್ತಿರ್ಪನ್ನೆಗಂ ಕಾಣುತ |
ಚ್ಚರಿಯೆಂದಲ್ಲಿ ಬುಧರ್ಕಳೊಲ್ದು ಪೊಗಳುತ್ತಿರ್ಪನ್ನೆಗಂ ಕೈವಭ ||
ಕ್ತರದೆತ್ತಂ ನೆರೆದಾದ್ರ್ಜಯಯೆನುತ್ತಿರ್ಪನ್ನೆಗಂ ತಂದು ಕಿಂ |
ಕರನಾಮಸ್ತಕಮಂ ಕರಾಂಬುಜದೊಳಿತ್ತಂ ಚೋಳಭೂಪಾಲನಾ ||

ವ|| ಆಗಳ್

ವೃ|| ಕಮಳದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂ |
ಜಿಮಯುತಫಾಲಮಾಲಲಿತ ಕುಂಡಲಮಂಡಿತಗಂಡಮಂಡಳಂ ||
ವಿಮಳರದದ್ಯುತಿಸ್ಫುಟರದಚ್ಛದಮುದ್ಗತಮಂದಹಾಸವಿ |
ಭ್ರಮಮುರುಮಂತ್ರನಾದಮಹಿತಂ ಶಿರಮೊಪ್ಪಿದುದಾಕುಮಾರನಾ ||

ವ|| ಅಂತೊಪ್ಪುತ್ತುಮಿರ್ಪನಿಜತನಯನುತ್ತಮಾಂಗಮನುದಾತ್ತಚಿತ್ತ
ನಿರೀಕ್ಷಿಸುತ್ತುಂ

ಕಂ|| ಮೃಡಪಂಚವರ್ಣಮಂತ್ರಮ |
ನಡಿಗಡಿಗೆಡೆವಿಡದೆ ನುಡಿವಬಗೆಗಂಡರಸಂ ||
ಪಡೆದಚ್ಚರಿಯಂ ಶಿವಶಿವ |
ಕಡುಪೊಸತಿಳೆಗಿಂತಿದೆಂದು ವಿಸ್ಮಿತನಾದಂ ||

ನುತಸೌರಭಾಸ್ಪದಶ್ರೀ |
ಯುತಮುದಿತಗುಣಾಂಕಮಖಿಳಸಾರಂ ಭುವನೋ ||
ನ್ನತಮೆನಿಪಸುತಶಿರೋಬ್ಜದೊ |
ಳತಿರತಿವಡೆದತ್ತು ಪಂಚವರ್ಣಭ್ರಮರಂ ||

ವ|| ಎಂದು ಕೆಲದೊಳಿರ್ದವೃದ್ಧರಾಜಸ್ಯಕದೊಳ್ಪೊಗಳ್ದು ಮಗುಳ
ಶಿಬಾನುಚರನ ವದನಾರವಿಂದಮಂ ನೋಡುಂನೋಡಿ

ಕಂ|| ಎಂತು ಪರಿದಿತ್ತನೀಕುವ |
ರಂ ತಲೆಯುದೆ ಮಂತ್ರಸಹಿತಮೀಶಿರಮುನದಿಂ ||
ತಿಂತುಸಿರ್ದನೆಲವೊ ಮುಂ ನೀ |
ನ್ನಿಂ ತಳ್ಳಿಸುತ್ತೆ ಭೂಪರಂ ಜನಗೊಂಡಂ ||

ವ|| ಆಗಳಾತನಾಯುವರಾಜನೆಂದುದುಮಂ ತಾನೆಂದುದುಮನಿನಿಸುಳಿಯ
ದೆಲ್ಲಮಂ ಪೇಳ್ದನಂತರಂ

ವೃ|| ಅದನೇವೇಳ್ವುದೊ ಭೃತ್ಯಮುಖ್ಯನಳವಂ ತನ್ಮೂರ್ತಿಯಂ ಜಾನಿಸು |
ತ್ತದಱಿಂ ಯೋಗಿ ಮಹೇಶನಂ ನೆನೆದು ತಾನಾದಂತಿರಾವೇಶಮಂ ||
ಗದೊಳೆತ್ತಂ ಬಿಡೆತೀವೆ ನಿಷ್ಠೆ ಮಿಗೆ ನೋಡಿಂತೆಂದು ಖಡ್ಗಾಗ್ರದಿಂ |
ದಡಟಿಂಮೋೞ್ಕೊರೆದಿತ್ತನಾತ್ಮಶಿರಮಂ ಸನ್ಮಂತ್ರಸಂಯುಕ್ತಮಂ || ೧೮

ವ|| ಅಂತಿತ್ತಾಗಳಾಶಿರಮನಾನರೇಂದ್ರಂ ನಡೆನೋಡಿ ವಾಮಕರದೊಳ್ಪಿಡಿದು

ಕಂ|| ಸುಲಿಪಲ್ಗೆರೆ ಮಿರುಗುತ್ತಿರೆ |
ವಿಲಸನ್ಮಂತ್ರಮನೆ ಜಪಿಪತನ್ಮಸ್ತಕಮಂ ||
ನಲಿನಲಿದು ನೋಡಿ ನರಪತಿ |
ತಿಲಕಂ ನಿಜಭೃತ್ಯಕೃತ್ಯಮಿದು ಪೊಸತೆಂದಂ || ೧೯

ವ|| ಆಗಳ್

ಕಂ|| ಹರಶರಣಸಂಗಮೇನಂ |
ದೊರಕೊಳಿಸದೊ ವಿಪುಳಮಹಿಮೆಯಂ ಶಿವಶಿವ ಭೂ ||
ವರನಣುಗನ ಸಂಗತಿಯಿಂ |
ದೊರೆದುದಿವಂಗವನವೋಲ್ಮಹಾಮಂತ್ರಜಪಂ || ೨೦

ಮೊದಲಳಿದಮಂತ್ರಿಪಂಗೇ |
ಯಿದು ದೊರೆದುದೆ ಪರಮಮಂತ್ರಮೀಭೃತ್ಯಂಗಾ ||
ದುದು ಬಳಿಯಿಸಳಿದವಂಗಂ |
ತದಱಿಂ ಘನಮಂತ್ರ ಬಗೆಪೊಡೀಭಟನಲ್ತೇ || ೨೧

ವ|| ಎಂದನೇಕಸುಜನಜನಂ ನುತಿಸುತ್ತುಮಿರೆಯಿರೆ

ಕಂ|| ತಿರುಕೊಳವಿನಾಚಿ ನಿನ್ನಯ |
ವರಸುತಶಿರವೊಂದಕೆರಡುಶಿರಮಿದೆ ನೋಡೆಂ ||
ದಿರಿಸಿದನವನಿಪಕುಲಶೇ |
ಖರನುರೆ ಶಂಕರನ ಶಿರದ ಕೆಲದೊಳ್ಗಲದೊಳ್ || ೨೨

ತಳಿವಸುಧೆ ಪೊಳೆವಸುಲಿಪ |
ಲ್ವೆಳಗದು ಸಂಜೀವನಾಖ್ಯಮಂತ್ರಂ ಜಪಿಪ ||
ಗ್ಗಳಮಂತ್ರಮಾಗೆ ಶಿಶುಶಿರ |
ದೊಳೆ ಜೀವಂಬಡೆದುದಾಶಿರೋದ್ವಯಮಾಗಳ್ ||

ಎರಡುಂಕಿವಿಗಳೊಳಿರದು |
ಚ್ಚರಿಪಮಹಾಮಂತ್ರಮಾಸ್ಯವಿವರದೆ ಪೊರಪಾ ||
ಯ್ವಿರವನನುಕರಿಸಿ ತನ್ಮಂ |
ತ್ರರವಂಬಡೆದಿದ್ರ್ದದಾಶಿರಂ ಶಂಕರನಾ ||

ವ|| ಆಗಳಾತತ್ತ್ರಭಾವಮನಖಿಳರುಂ ಪೊಗಳುತ್ತುಮಿರ್ಪಿನಂ ತಿರುಕೊಳ
ವಿನಾಚಿ ಸಂದಾಯಿಯ ಕಬಂಧದ ಕರತಳದಖಡ್ಗಮಂ ಕಳೆದುಕೊಂಡು

ವೃ|| ಕೇಳಿಲೆ ಚೋಳಭೂಪತಿ ಮದೀಯತನೂಜನ ಮಸ್ತಕಕ್ಕೆ ಲೋ |
ಕಾಳಿಯನೊಲ್ದು ಪಾಲಿಪ ಕುಮಾರನ ಮಸ್ತಕಮಿತ್ತೆಯಲ್ತೆ ಸಿ ||
ನ್ನಾಳೆನಿಸಿರ್ದನೀಶಿರಕೆ ಮಚ್ಛಿರಮೀ ಪಳಿ ನೋಳ್ಪುದೆಂದವ |
ಳ್ಬಾಳನಮರ್ಚಿ ಗೋಣ್ಗೊರೆದು ಸಾರ್ಚಿದಳಾತ್ಮಸಮಂತ್ರಶೀರ್ಷಮಂ ||

ವ|| ಆಗಳ್

ಕಂ|| ತಿರುಕೊಳವಿನಾಚಿಯೆಸಗಿದ |
ಪರಿಗಚ್ಚರಿವಟ್ಟು ನೃಪತಿ ಸಚಿವನ ಶಿರಮಂ ||
ತರಿಸಿ ಬಳಿಯಿರಿಸಿ ನೋಳ್ಪಿನ |
ಮಿರದದುಮುಭವಾಂಕಮಂತ್ರಮಾಂತುದು ಪದಿಸಿಂ ||

ಪಂಚತ್ವಮನಾನದೆಯುಂ |
ಪಂಚತ್ವಮನಾಂತು ಪದನುಪಂಚಾಕ್ಷರಮಂ ||
ಪಂಚಮೆನೆ ಜಪಿಪತಲೆಗಳ |
ಪಂಚಮುಖಧ್ಯಾನಿ ಚೋಳನೃಪಸೀಕ್ಷಿಸಿದಂ ||

ವ|| ಅಂತೀಕ್ಷಿಸುತ್ತುಮಾಪಂಚಶಿರಃಪಂಚವರ್ಣಂಗಳ್ಗೆನ್ನ ಶಿರಃಪ್ರಣವದಿ
ನಳಂಕರಿಪೆನೆಂದುತ್ಸಾಹಿಸಿ ಶಿತಾಸಿಯುಂ ಕೊರಲ್ಗಮರ್ಚ್ಚಿ ಕೊರೆದು

ಕಂ|| ನರನಾಥಂ ಮಸ್ತಕಮಂ |
ಶಿರೋಧಿಯಿಂದಿಳಿಸಿ ವಾಮಕರದೊಳ್ಪಮಸಂ ||
ಹರನ ಪೆಸರೆನಿಪಪಂಚಾ |
ಕ್ಷರಮಂ ಜಪಿಪಂತೆ ಮಾಡಿ ಮಡಗಿದನಾಗಳ್ || ೭೮

ವೃ ಮರಕತಕುಂಡಳದ್ಯುತಿ ಸುವರ್ಣಕಿರೀಟಮಯೂಖಮಕ್ಷಿಭಾ |
ಸುರತರತಾರಕಾಂಶು ರದನಚ್ಛದದೀಧಿತಿ ಮಂದಹಾಸಬಂ ||
ಧುರರುಚಿ ತಳ್ತು ರಂಜಿಸೆ ತದೀಯಶಿರಂ ವರಪಂಚವರ್ಣಪಂ |
ಜರಮೆನೆ ಪಂಚವರ್ಣಶುಕವೊಪ್ಪಿದುದಲ್ಲಿ ಚಿದಂಗನಾಪ್ರಿಯಂ || ೭೯

ವ|| ಅನಂತರಮಾಮಿತವಚನನಾತಾಣಕ್ಕೇಳ್ತಂದವೆಂದಿರ ಶಿರಂಗಳಿ
ರವಂ ನೋಡಿ

ವೃ|| ಶಂಕರನಂ ಕರಂ ತುಳಿದುದೆನ್ನ ತುರಂಗಮಿಳೇಶಪುತ್ರನಂ |
ಸೋಂಕಿದುದಲ್ತೆ ನೆನ್ನರನೆ ಮಾತಿನಮಾಲೆಯು ದೂರಿದಕ್ಕಟಾ ||
ಶಂಕಿಸದೆಲ್ಲರಿಂತಳಿದರಾನಿವರಿಂ ಮೊದಲ್ವೈದದಾದೆನೆ |
ನ್ನಿಂ ಕಡುಗಾಂಪನಾವನೊ ಧರಿತ್ರಿಯೊಳೆಂದು ಕರಾಳಖಡ್ಗಮಂ || ೮೦

ಕಂ|| ಸೆಳೆದಭವನಂಘ್ರಿಗೆರಗು |
ತ್ತೊಳಗೆ ಕೊರಲ್ಗೈದೆ ಸಾರ್ಚ್ಚಿ ಘರಿಲೆನೆ ಕೊರೆದು ||
ಜ್ಜ್ವಳಪಂಚಾಕ್ಷರಜಪಮಂ |
ತಳೆವಂತಿರೆ ಮಾಡಿ ಮಡಗಿದಂ ನಿಜಶಿರಮಂ || ೮೧

ವೃ|| ಅರಸಿ ನಿಜೇಶ್ವರಾತ್ಮಜಮುಖರ್ತ್ತಲೆಗೊಟ್ಟರೆನಿಪ್ಪವಾರ್ತೆಯಂ |
ತರುಣಿಯರಿಂದೆ ಕೇಳ್ದು ತರುಣೇಂದುಧರಾಂಘ್ರಿಪಯೋಜಪೂಜೆಯಂ ||
ವಿರಚಿಸಿ ರತ್ನಭೂಷಣರುಚಿಪ್ರಸರಂ ವದನೇಂದುಕಾಂತಿ ಸೈ |
ವರಿಸೆ ಕುಮಾರಕಾಂತೆಯೊಡನೇಳ್ತರೆ ಬಂದಳುದಗ್ರವೃತ್ತಿಯಿಂ || ೮೨

ವ|| ಆಗಳ್ಶಿವಸತಿಯುಂ ಮಿತವಜನಕಾಂತೆಯುಮೊಡನೇಱಿ ಸಭಾ
ಸ್ಥಳಕ್ಕೇಱಿಂದು ನಿಂದು ನೀಡುಂನೋೞ್ಪನ್ನೆಗಂ

ವೃ|| ಹರಿನೀಲಸ್ಫಟಿಕಕುಟ್ಟಿಮಸ್ಥಳಸರಸ್ನಾನಸ್ಥಿತಂಗಳ್ಮಹೇ |
ಶ್ವರನಿಷ್ಠಾಮಿಹಿರಪ್ರಭಾವಿಕಸಿತಂಗಳ್ಕೈವಷಡ್ವರ್ಣಷ ||
ಟ್ಚರಣಧ್ಯಾನಮನೋಹರಂಗಳಮಳಶ್ರೀಮಂಜುಳಂಗಳ್ಮಹೇ |
ಶ್ವರಮುಖ್ಯಸ್ಫುರದುತ್ತಮಾಂಗಕಮಳಂಗಳ್ಕಣ್ಗದೇಂತೋಱಿದುವೋ || ೮೩

ವ|| ಅಂತೆಸೆವಾಶಿರಂಗಳಂ ನಿರೀಕ್ಷಿಸಿ

ವೃ|| ಮೃದುರನವೊಂದೆ ಶಂಕರಶಿರಂ ಸಚಿವಾಸ್ಯಮುಮಲ್ಲರೋಜಕಿಂ |
ತಿದು ಸುತಮಸ್ತಕಂ ಗುಣಯುತಂ ಚತುರಂ ಚರಶೀರ್ಷಮಾನನಂ ||
ಸುದತಿಯಪಂಚಮುರ್ವಿಪಮುಖಂ ನಿಗಮಾಂಗವಿಭಾಸಿ ಮಾತೃಕಾ |
ಸ್ಪದಮಿದು ಮಂತ್ರಿಪುತ್ರವದನಂ ಮೆರೆದಪ್ಪುದುದಾತ್ತವೃತ್ತಿಯಿಂ || ೮೪

ವ|| ಎಂದಮ್ಮತಮತಿಮಹಾದೇವಿ ಕೆಲದೊಳಿರ್ದ್ದಲಲನೆಯರೊಳುಸಿರ್ದ್ದ
ವೀರಾವೇಶಮಂ ಕೈಕೊಂಡು ಕರಾಳಕರವಾಳಮಂ ಕರತಳದಿಂದಪಸಿ ಪಿಡಿವಾಗ
ಳಾಸರ್ವಮಂಗಳಾದೇವಿಯುಂ ಸಚಿವಪತ್ನಿಯುಂ ಮಿತವಜನಸಂಗನೆಯುಮರಸಿ
ಯಡಿದಳಿಗೆರ್ದಗಿ ತಾಮುಮತಿನಿಶಿತಮಾದಖಡ್ಗಂಗಳಂ ಕರಾಗ್ರದೊಳ್ಪಿಡಿದು
ತಮ್ಮತಮ್ಮನಿಯರ ಶಿರಂಗಳಿದಿರೊಳ್ನಿಂದು ಕಳೆಯೇಱಿ ಮೀಱಿ

ವೃ|| ಹರಹರ ಬಣ್ಣಿಪಂಗರಿದು ತತ್ಸತಿಯರ್ಕ್ಕಳ ವೀರವೃತ್ತಿಯುಂ |
ಕರತಳಖಡ್ಗಮಂ ಜಡಿದು ಜಾಸಿಸಿ ಶೈಲಜೆಯಾಗ್ರಸಂ ನಿಜೇ ||
ಶ್ವರಶಿರಮುಂಬಲಿಂಗಕೆ ಮುಖಾಂಬುಜದರ್ಶನೆಗೆಯ್ಯಲೆಂದು ಃ |
ತ್ರಿಪುರಾಲಾತ್ಮಕಂಧರಕಮುಚ್ಚಿರ್ತೆ ಖಂಡಿಪತತ್ತ್ವನಾರ್ಧನೋಳ್ || ೮೫

ಇಂದುಖಂಡಮುಕುಟಕುಂಡಳಮುದ್ದ್ರಕ್ಷ್ವರ್ದಿ ಭಾಳವಿಲೋಚನಂ |
ದಂಡಶೂಕಪತಿಹಾರಮುದಾರಸ್ಮೇರಮುಖಂ ದ್ವಿರದಾಜಿನಂ ||
ಸುಂದರಾಂಗಮುಸಿತದ್ಯುತಿ ಕಂಠಂ ಕಣ್ಗೆರಮಿಪ್ಪ ಜಿತಾಂಗನಾ |
ನಂದಿವಾಹನನಘಂ ನಿಜರೂಪಂ ತೋಱಿದನಪ್ರಸುತಾಧವಂ || ೮೬

ವ|| ಅಗಳ್

ವೃ|| ಮೊಳಗುವದೇವದುಂದುಭಿರವಂ ಮೊಳಗಲ್ಲಿಳಿತರ್ಪ್ಪದೇವಸಂ |
ಕುಳದ ಕಿರೀಟರತ್ನರುಚಿ ಶಕ್ರಶರಾಸನಮಪ್ಸರೋವಧೂವಿಳಸಿತ ||
ಲೋಚನಾಂಶು ಸೆಳೆಮಿಂಚು ನಭಸ್ಸ್ಥಳಮಭ್ರಮಾಗೆ ಕಾ |
ರ್ಮ್ಮಳೆ ಸುರಿವಂತೆ ಸೂಸಿದುದು ಪೆರ್ಮ್ಮಳೆ ದಿವ್ಯತರುಪ್ರಸೂನದಾ || ೮೭

ಮಾರಜನಕಂ ವಿಪುಳಸಾರಸಭವಂದಿವಿಜವಾರವರಸುಂದಹನನಾರವಿತನೂಜಂ |
ಧೀರದಿತಿಜಂವಿನುತನೀರಸಿಲಯುಂಪೃಥುಸಮೀರನನಘಂಘನಕುಬೇರನನಲಾಕ್ಷಂ||
ವೀರಗಣಮುಂ ಪ್ರಮಥಸಾರನಿವಹಂ ಸಮುದವಾರಣಮುಖಂ ನವಮಯೂರ
(ಪತಿವಾಹಂ)
ಸಾರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ಜ್ವಳಪುರಾರಿ ಮೆರೆ
(ದಿರ್ದ್ದಂ || ೮೮

ವ|| ಅಂತು ಮೆರೆದು ನಿಜಕರಾಗ್ರದಿಂ ತತ್ಕರತಳಕರಾಳಖಡ್ಗಮಂ ಕಳೆದು
ಬಿಸುಟು

ಕಂ|| ದರಹಾಸಪ್ರಭೆ ಸೂಸು |
ತ್ತಿರೆ ಕರುಣಾಮೃತದ ತೆರೆಯಿಡೆನೆ ಮೊಗದೊಳ್ಕಂ ||
ಕರನೆರಗಿ ನಿಂದತನ್ನೃಪ |
ನರಸಿಗೆನಿನ್ನಿಷ್ಟಮಾವುದದನೆರೆಯೆಂದಂ || ೮೯

ಎನಲೊಡನೆ ದೇವ ಪಂಚಾ |
ನನ ಮುನ್ನಳಿದಂಗೆ ಹರಣಮಂ ಕರುಣಿಪುದೆಂ ||
ದೆನೆ ಮಗುಳ್ದ* ಮಚ್ಚಿದೆಂ ಬೇ |
ಡೆನುತಿರ್ದ್ದಂ ಭಕ್ತವತ್ಸಲಂ ಕೃಪೆಯಿಂದಂ || ೯೦

ವ|| ಎಂದಭವನನೋಘವಚನಮಂ ಕೇಳ್ದು

ಕಂ|| ತಿರುಕೊಳವಿನಾಚಿಗಂ ಶಂ |
ಕರ ಕರುಣಿಪುದಸುವನಾದೊಡೆನೆ ಮಚ್ಚಿ ಮಹೇ ||
ಶ್ವರನಬಳಿ ನೀನೆಣಿಪುದೀ |
ಶಿರಂಗಳಂ ಕ್ರಮದಿನೆಂದು ಬೆಸಸಿದನಾಗಳ್ || ೯೧

ವ|| ಎನೆ ಮಹಾಪ್ರಸಾದಮೆಂದದಂ ಮನದೆಗೊಂಡಾಶಿರಂಗಳಂ ಪಸೆದು ನೋಡಿ

ಕಂ|| ಅರಸಿ ನಿಜಾಂಗುಲಿಯಿಂದೊಂ |
ದೆರಡುಂ ಮೂರೈದೆ ನಾಲ್ಕುವೈದಾರೇಳೆಂ ||
ದಿರದೆಣಿಪುದುಮಾಗಳೆ ನಿಜ |
ಶಿರಂಗಳೇಳ್ಡಂಗದೊಂದುಗೂಡಿದುವಾಗಳ್ || ೯೨

ಜಯರವಮುಂ ಸುರವರಭೇ |
ರಿಯರವಮುಂ ಶರಣಜನದುಘೇರವಮುಂ ವಿ ||
ಸ್ಮಯಕರಸುರಕುಜಸುಮವೃ |
ಷ್ಟಿಯರವಮುಂ ದೆಸೆಯನಳುರ್ದದೇಂ ಮುಸುಕಿದುದೋ || ೯೩

ವೃ|| ಬಲವರಲಾಟಿಸುತ್ತಿರೆ ಪದಂ ಪದಪಿಂ ನಡೆನೋಡಲೆಂದು ಕ |
ಣ್ಮಲರೆಳಸುತ್ತೆ ಬಿಚ್ಚಿರೆ ಕರಂ ಕರಮರ್ಚಿಸಲೆಂದು ನಾಟಕಂ ||
ನಲಿಯೆ ರಸಜ್ಞೆ ಕೀರ್ತಿಸಲೊಡರ್ಚಿರೆ ಜಜ್ಜರಮುಜ್ಜಿಗಂ ಪೊದ |
ಳ್ದಲರೆ ಸಮಾನಮಾನಸರದೇನೆಸೆದಿರ್ದರೊ ಭೂಧವಾದಿಗಳ್ || ೯೪

ವ|| ಅಂತೆಸೆಯುತ್ತುಮಿರ್ದು ಕಟ್ಟೆದಿರೊಳೆಸೆವಿಷ್ಟಪ್ರದನೆನಿಪಷ್ಟಮೂರ್ತಿಯ ವಿಮಳಮೂರ್ತಿಯನಾನಂದಬಾಷ್ಪಬಿಂದುಮಂಜರೀಮಂಜುಳಾಕ್ಷಿಗಳಿನವರಭೀಕ್ಷಿಪಾಗಳ್ ||

ವೃ|| ಜಡೆ ಮುಡಿ ತಾಳ್ದಗಂಗೆ ಪಣೆಗಣ್ಫಣಿಕುಂಡಳಮಿಂದುಲೇಖೆ ಚೆ |
ಲ್ವಿಡಿದೆಸೆವೈಮೊಗಂ ಕರೆಗೊರಲ್ಕರಿಕೃತ್ತಿ ಮೃಗಾರಿಚರ್ಮದೊ ||
ಳ್ಪುಡೆ ತಿಸುಳಂ ಕರೋಟಿ ದಶಬಾಹು ಮುರಾಂತಕನಕ್ಷಿತಳ್ತಮೆ |
ಲ್ಲಡಿಯೊಡಲರ್ಧದದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ || ೯೫

ವ|| ಅಂತಿದಿರೊಳೆಸೆವ ಮದನಮದರದನಿಬಿಡುವಿದಳನವಿಳಾಸಪಂಚಾಸ್ಯನನವಂಚಿತಪಂಚಾಕ್ಷರೀಪ್ರಭಾವಪ್ರಭಾವಲ್ಲಭ ಪ್ರಥಭರ್ಾವಂಚೆರಸುಮಾಮಹಾನುಭಾವರ್ಭಕ್ತಿರಸವಿಸರವಿಲುಳಿತಲಲಿತಹೃದಯಾರವಿಂದರಾಗಿ ದಂಡಪ್ರಣಾಮಂಗೆಯ್ದು ನುತಿಸುತ್ತುಮಿರ್ಪ್ಪರ್ಗಳ್

ವೃ॥ ಜನತಾಪಾಪಹಪಾದನೂರ್ಜಿತಕಳಾಪೂರ್ಣಂ ಮನೋಜಾತಿರಂ |
ಜನದಿವ್ಯಾಂಗನನಂತಕಾಂತನಿದಿರೊಳ್ತಾನೊಪ್ಪೆ ಸೋಮಂ ನರೇಂ ||
ದ್ರನ ಕಣ್ಣೈದಿಲರಲ್ವುದುಂ ಮುಗಿವುದುಂ ಹಸ್ತಾಬ್ಜಮೇಂ ಚಿತ್ರವಿಾ |
ತನ ಹೃದ್ವಕ್ತ್ರಸರೋಜವೊಲ್ದಲರ್ದುದಾಶ್ಚರ್ಯಾವಹಂ ಭಾವಿಸಲ್ || ೯೬

ವ|| ಎಂದಲ್ಲಿ ನೆರೆದವಿಬುಧಸ್ತುತಿಸುತ್ತುಮಿರ್ಪನ್ನೆಗಂ ||

ವೃ|| ಪಿರಿದುತ್ಸಾಹದೆ ನೋಡಿಯುಂ ಗಿರಿಶನಂ ಕೊಂಡಾಡಿಯುಂ ಪಾಡೆಯುಂ |
ಚರಣಾಂಭೋಜಕೆ ವೃತ್ತಮತ್ತೆರಗಿಯುಂ ರಾಗಾಕುಳಂ ಚಿತ್ತನೊಂ ||
ದಿರೆ ಪೂರ್ಣೋತ್ಸವಮೈದಿಯುಂ ತಣಿದುದಿಲ್ಲೇನೆಂಬೆನುದ್ಯತ್ಕಳೇ |
ವರವಿಸ್ಫೂರ್ಜಿತಸಾತ್ವಿಕಂ ಗುಣನಿಧಿ ಶ್ರೀಚೋಳಭೂಪಾಲಕಂ || ೯೭

ಕಂ|| ಶ್ರೀರಾಜಶೇಖರಾಖ್ಯಕು |
ಮಾರಂ ನಿಜಮೌಳಿಮಣಿರುಚಿಪ್ರಸವದಿನಂ ||
ದಾರಾಜಶೇಖರಾಂಘ್ರಿಸ |
ರೋರುಹಮಂ ಪೂಜೆಗೆಯ್ದು ನುತಿಸಿದನೊಲವಿಂ || ೯೮

ವ|| ಅದೆಂತೆನೆ ||

ವೃ|| ಪುರಹರ ಪೂರ್ಣರೂಪ ಪುರುಷೋತ್ತಮವಂದ್ಯ ಪುರಂದರಾರ್ಚ್ಯ ಪು |
ಷ್ಕರಸರಿದುತ್ತಮಾಂಗ ಪರಮೇಶ್ವರ ಪನ್ನಗಭೂಷ ಪಾರ್ವತೀ ||
ವರ ಶರಣಾಗತಪ್ರಕರರಕ್ಷಕ ಶಂಕರ ಶರ್ವರೀಶಶೇ |
ಖರ ಜಯದೇವದೇವ ಜಗತೀಧರಮಂದಿರ ಮಂಗಳೋದಯಾ || ೯೯

ವ|| ಎಂದು ಪೊಗಳ್ದು ಮಗುಳ್ದೆರಗಿ ನಿಂದು ||

ಕಂ|| ಚರಣನಖಮಣಿಮುಕುರದೊ |
ಳ್ನರಪತಿ ಮಾರ್ಪೊಳೆದು ತೋರಿದಂ ಕೈಲಾಸ ||
ಸ್ಥಿರತೆಗಿದಗ್ಗಳಮೆನುತಂ |
ತುರಿಪಂ ಮಿಗೆ ನೆಲಸಿದಂತಿರಾಶಶಿಧರನಾ || ೧೦೦

ವ|| ಆಗಳ್

ವೃ|| ಎಳಸನ್ನೇತ್ರಂಗಳಿಂದೀಕ್ಷಿಸಿದನಮುಮಸತ್ತ್ರೀಮಮುಂ ಜೇರಿದಂ ಮಂ|
ಜುಳಬಾಹಾಮಂಡಳಂ ತಕ್ಕಿರೆ ಮಿಗೆ ಬಿಗಿದೊಲ್ದಪ್ಪಿದಂ ಕಂದ ಜಾರೆಂ||
ದೆಳಸುತ್ತುಂ ಮತ್ತೆ ಮನ್ಮಂತ್ರದಮಹಿಮೆಯನೀತಾವನೈ ತೋರ್ದನುರ್ವೀ|
ತಳದೊಳ್ಪೇಳೆಂದು ನಂದೀಶನೊಳೆ ಪೊಗಳ್ದನಾನಂದದಿಂದದ್ರಿಜೇಶಂ|| ೧೦೧

ವ|| ಎಂದು ಮತ್ತಮಿರದೆ||

ಕಂ|| ಸ್ಕಂದನುಪಮನ್ಯುಮುನಿ ಸಾ|
ನಂದಶತಾನಂದಮುರುಘರೀಧರಣೀಜ್ಯ||
ನ್ನಂದನನಿವರುವಸ್ಸೆರ್|
ಪೊಂದಿದಪರತರಷಡಕ್ಷರಾತ್ಮಕರಲ್ತೇ|| ೧೦೨

ವ|| ಅಂತುಮಲ್ಲದೆಯುಂ||

ವೃ|| ಇವನೇಸತ್ಯೇಂದ್ರನಪ್ಪಂ ಬಗೆವೊಡಮಮ ಸತ್ಯೇಂದ್ರಜೋಳೋರ್ಪಿಪಂ ಮ|
ತ್ತಿವನೇ ಸನ್ಮಂತ್ರಲಕ್ಷ್ಮಂ ನಿಜದಿನದರೆ ಸನ್ಮಂತ್ರಲಕ್ಷ್ಮಂ ಬಳಿಕ್ಕಂ||
ತಿವನೇ ನೋಳ್ಪಾಗಳಾಹಾ ಮಿತವಚನನಿವಂ ತಪ್ಪದೆಂತಪ್ಪೊಡಂ ಕೇ|
ಳಿವನೇ ಸನ್ಮಂತ್ರಿ ನಾಥಂಗತಿಹಿತನೆನುತುಂ ಶಂಕರಂ ನಂದಿಗೆಂದಂ|| ೧೦೩

ವ|| ಮತ್ತಮಲ್ಲಿ

ವೃ|| ಅಂಬಿಕೆ ಸಂಭ್ರಮಂಮಿಗೆ ಪದಕ್ಕೆರಗಿರ್ದನರೇಂದ್ರಕಾಂತೆಯುಂ|
ತಾಂ ಬಿಗಿದಪ್ಪಿ ತತ್ಸುತಸತೀಮುಖಮಂ ಕೃಪೆಯಿಂದೆ ನೋಡಿ ತ||
ನ್ನಾಂಬುಜದಿಂದೆ ಮೆಯ್ದಡವಿ ಮೋಣ್ಪರಸುತ್ತಿವರಂತೆ ಶಂಭುವಂ|
ನಂಜದರಾರೆನುತ್ತೆ ಪೊಗಳ್ದಳ್ಕನುಳಾಮುಖಶಕ್ತಿಬೃಂದದೊಳ್|| ೧೦೪

ಕಂ|| ಕರಿಮುಖನಿದು ಪೊಸತೆಂದಂ|
ಶರಜನ್ಮಂ ಚಿತ್ರಮೆಂದನಮರರ್ಪ್ಪೆರಿದ||
ಚ್ಚರಿಯೆಂದಸ್ಸುರರಮುನಿಗ|
ಳ್ಕರಮರಿದರಿನೆಂದರವರುರಿತಮನಾಗಲ್|| ೧೦೫

ವ|| ಅಂತು ಸಮಸ್ತಪ್ರಶಸ್ತಪ್ರಮಥರುದ್ರಭಕ್ತಮಹಾಗಣಮಗಣಿತೋ
ತ್ಸೋತ್ಸವಂ ಮಿಗೆಪೊಗಳುತ್ತುಮಿರೆಯಿರೆ

ವೃ|| ಜವದಿಂದೇಳ್ತಂದುಮೀಶಂಬೆಸಸಲೊಡನೆ ಬಾನತ್ತಣಿಂ ಭಾನುಭಾನು |
ಪ್ರವಿರಾಜದ್ಭರ್ಮಜಂಜತ್ಕಳಶವಿಳಸಿತಂಗಳ್ಮಣಿಶ್ರೇಣಿಮಾಲಾ ||
ನಿವಹಂಗಳ್ಮಂಗಳಾಲಂಕರಣಶತಯುತಂಗಳ್ಪತಾಕಾನ್ವಿತಂಗ |
ಳ್ದಿವಿಜಕ್ಷ್ಮಾಜಪ್ರಸೂನಪ್ರಸರಸರಯುತಂಗಳ್ಮಹಾಪುಷ್ಪಕಂಗಳ್ || ೧೦೬

ವ|| ಅಂತೇಳ್ತಂದಪುಷ್ಪಕಂಗಳೊಳವಂದಿರಂ ಕೂರ್ಮೆಯಿಂ ಕುಳ್ಳಿರಿಸಿ
ಪುಷ್ಪೇಷುದರ್ಪಪ್ರಭಂಜನಪ್ರಭಂಜನಾಪ್ತೇಕ್ಷಣನಾಕ್ಷಣಂ ಸಕ್ಷಣಂ ಸಕಲಗ
ಣಂಬೆರಸು ಶೈಲಜಾಸಹಿತಂ ಕೈಲಾಸಾಭಿಮುಖನಾಗಿ ಗಗನಮಂಡಳದೊಳಗಣಿ
ತೋತ್ಸವಂ ಮಿಗೆ ಬರುತ್ತುಮಿರೆಯಿರೆ

ಮಂದಾನಿಲರಗಳೆ|| ಆಸಮಯದೊಳಮರರ್ಜಯಜಯವೆಸೆ | ಭಾಸುರ
ಸುರಕುಜದಲರ್ಮಳೆ ಘೋರೆನೆ | ಸುರಿಯುತ್ತಿರೆ ಸುತ್ತಿರೆ ಗಣಸಿಜಯಂ | ಪಿರಿದೊ
ತ್ತರಿಸುತ್ತಿರೆ ಖಚರಜಯಂ | ಎಡವಕ್ಕದೆ ರಕ್ಕಸವಗೆಯುಂ ಬರೆ | ಜಡಜಭವಂ
ಬಲವಕ್ಕದೊಳೈತರೆ | ಪಿಂದೆಸೆ ಸುಮನೋರಮಣಾದಿಗಳಿರೆ | ಮುಂದೆಸೆ ರಂಭಾ
ವಧು ನರ್ತಿಸುತಿರೆ | ಮುತ್ತಿನಸತ್ತಿಗೆ ತೊಳತೊಳಗುತ್ತಿರೆ | ಸುತ್ತಿ ತನುದ್ಯುತಿ
ಥಳಥಳಸುತ್ತಿರೆ | ಕರೆದುವು ಬಿರುದಿನಕಹಳೆಗಳಾಗಳ್ | ಪರೆದುದು ದುಂದುಭಿರ
ವಮೆಣ್ದೆಸೆಯೊಳ್ | ಪೊಸರನ್ನದ ಚಿನ್ನದ ನಜೆತೋರಣ | ಮೆಸೆದಿರ್ದುದು ಗಮ
ನೋತ್ಸವಕಾರಣ | ಮಿಂದಿರೆ ಶಾರದೆಯುಚಾಮರಮಂ | ಮುಂದೆಸೆ ಡಾಳಿಸು
ತಿರೆ ಸಾಮರವಂ| ಗುಡುತುಂ ನುತಿಸುತ್ತಿರೆ ಸುರಮುನಿಗಳ್| ಮೃಡಜಯ ಜಯ
ಯೆಂದೆಸೆ ಘನಮುನಿಗಳ್ | ಸುರನದಿ ತೆರೆಮುಸಗದತೆರದಿಂದಂ | ಭರದಿಂ ನಂದಿಯು
ನೇರುತ್ತಂದಂ | ಮಿಗೆ ಬಂದಾಸ್ಥಾನದೊಳಗಜೇಶಂ | ಸೊಗಯಿಸಿದಂ ಕೈಲಾ
ಸದೊಳೀಶಂ

ವ|| ಮತ್ತಮುದುಸಂತತಸಮಧಿಗತಭರ್ಮಕೂರ್ಮಸಶರ್ಮಪರಿಜಳತ್ಪ್ರ
ಘುಳತರಶಫರನಿಳಿಕರಿಸಿಕರ ಮಕರಸುಕರಜಿವ. ಕರಧನಳಮರಾಳಮಂಜುಳಮದ

ಮಧುಕರ ಪ್ರಕರಮಧುರರವಪರಿಗತನಿಜರಜಃಪುಂಜಪಿಂಜರಿತಜಳಕನಕಕಮಳಕು
ಮುದಕಲ್ಹಾರವಿಸರಸರಳತರತರಂಗರಂಗದಭಂಗಶೈವಲಲತಾವಿತಾನವಿಳಸಿತವಿತತ
ಸ್ವಕೀಯಮಹನೀಯಗಾಂಭೀರ್ಯಪರಿಹಸಿತಸುಧಾಶರಧಿಪುರ ಶ್ರೀಮೇಖಲಾಕಲಿತ
ಪರಿಖಾವಲಯವಲಿತಪುರೋಪವನ ಪವನಕಂಪಿತಸರಸರಸಾಲತರುಸಲ್ಲಲಿತಸಮುಲ್ಲ
ಸಿತಪಲ್ಲವಪ್ರತಾನ ಪ್ರತಿಬಿಂಬಕದಂಬಪದ್ಮರಾಗಾಯಿತಸ್ಫಟಿಕಮಣಿಮಯ
ವಿಶಾಲಸಾಲಾಟ್ಟಾಲಜಾಲಚಾರುತರಚತುರ್ದ್ವಾರಸಾರಸುಗಮನಿಗಮಮಯ
ನಭಃಕಟಾಹಚುಂಬಿಜೃಂಭಿತಮಹಾಗೋಪುರಾಗ್ರಕಮನೀಯತಪನೀಯದಂಡ
ಮಂಡಿತಸಮುತ್ತುಂಗಪುಂಗವಧ್ವಜರುಚಿರಮಣಿಮುಕುರಮುಖಮುಕುರಾವವ
ಲೋಕನಚಿರಸ್ಥಿತಹಿಮಕರವಧೂನಿಕರಕೇಕರಪ್ರಸಾದಪರಿವಿಲೀನಪರಿಸರಸ್ಥಿತಲ
ಸಿತವಿಶದಶಶಿಮಣಿಪ್ರಾಸಾದಪರಿಗಳಿತಸದಮಳಜಳಪ್ರವಾಹನಿಷ್ಯಂದಯಾಸಪರಿವರ್ಧಿ
ತಾನಲ್ಪಕಲ್ಪತರುಪಙ್ಕ್ತಿಸಂತತದರದಳಿತಪರಿಮಳಭರಿತಕುಸುಮವಿಸರವಿಸರದಮಂ
ದಮರಂದರಸಕದಂಬಕರ್ದಮಿತವಿಧುರವೀಧೀಸನಾಥಮುಂ, ಮಹೋಜ್ಜ್ವಳಮ
ಹೇಂದ್ರಮಣಿಖಚಿತರುಚಿನಿಚಿತ ಭರ್ಮನಿರ್ಮಿತನಿಶಾಂತಸಂತಾನಪುರೋಭಾಗಭಾ
ಸುರವ್ಯಕ್ತಮುಕ್ತಾಫಳಪ್ರಕರ ಪರಿಖಚಿತವಿಳಾಸಸೌಧಾಗ್ರಪ್ರತ್ಯಗ್ರರತ್ನಪಂಜರ
ಮಂಜುಳಶುಕಶಾರಿಕಾನಿಕುರುಂಬಪರಿಪಠಿತನಿಟಿಲನಯನಲೀಲಾಕಥಾಕಲಾ ಕರ್ಣ
ನಕರ್ಣಕೌತುಕಾಂತರಂಗಸಂಗತಪ್ರಮದಪ್ರಮೋದಭರಭರಿತಸಸಾತ್ವಿಕಾಗಣ್ಯಾಗ
ಣ್ಯಾಗ್ರಗಣ್ಯಾಸಮುದಯಸಮಂಚಿತಮುಂ, ಮತ್ತಂ ಕಾಂಚನೋದಂಚಿತಪಾಂಚಾ
ಲಿಕಾಪುಂಜರಂಜಿತವಜ್ರಮಯಸ್ತಂಭಸಂಭೃತಪ್ರವಾಲದಂಡಮಂಡಿತಹರಿನ್ಮಣಿವಿತ
ರ್ದಿವೇದಿಕಾಹರಿಮಣಿಪ್ರತೋಳಿಕಾ ದ್ವಾರಸವಮಣಿಗ್ರಥಿತಚಾರುತೋರಣಾಂಚಿ
ತವೈಡೂರ್ಯಮಣಿಸೋಪಾನವಿಳಸಿತವಿಳಾಸಮಂಟಪಪರಂಪರಾಪರಿಶೋಭಿತಪದ್ಮ
ರಾಗ ಮಣಿಮಯ ಕನತ್ಕಳಶಪ್ರಭಾಭಿಭಾಸುರತರುಣಭಾಸ್ಕರಕಿರಣಪಲ್ಲವಿತಘನ
ಗಗನಗಹನಮುಂ, ನಿರುಪಮಾನನಿತ್ಯೈಶ್ವರ್ಯಲಕ್ಷ್ಮೀಲಾಸ್ಯರಂಗಸ್ಥಳಮುಂ, ಷ
ಡ್ವರ್ಗದುರ್ಗಮಧ್ವಾಂತವಿಧ್ವಂಸನವಿಧಿಮಾರ್ತಾಂಡಮಂಡಲಮುಂ, ನಿರತಿಶಯಸು
ಖಫಲೋದಯಕಲ್ಪಪಾದಪಮುಂ, ಸಮಂಜಸಮುಕ್ತಿರಮಣೀರಮಣೀಯಮುಖ

ಮುಕುರಮುಂ, ನಿಜಸ್ಮರಣಪರಿಣತಜನವಿಪುಳವಿಪತ್ಕದಂಬಜಳದಪಟಳಜಂಝಾಪ್ರ
ಭಂಜನಮುಂ, ಶ್ರುತಿತತಿಕೃತಸ್ತುತಿತರಂಗಿಣೀಸಂಗತಪಾರಾವಾರಮುಂ, ಶರಣಾಗ
ತಜನವ್ರಜವಜ್ರಪಂಜರಮುಂ, ಸಕಲಮಂಗಳಕಳಾಕೇಳೀನಿವಾಸಮುಮೆನಿಸಿ ಪೊಗ
ಳ್ತೆವೆತ್ತು ಪೆಂಪುವಡೆದಕೈಲಾಸಾಖ್ಯಮಹಾಪುರದಂತರ್ವಳಯವಿಳಸಿತ ಶಶಧರ
ತಕರಸಹಸ್ರರುಚಿನಿಚಯ ರುಚಿರತರಸದಲಂಕಾರಸಾರಸರ್ವಸ್ವಸದನ ಮಹಾಸಭಾ
ಮಂಟಪಮಧ್ಯಮಂಜುಳದಿವ್ಯಸಿಂಹಾಸನ ಸವ್ಯಪಾರ್ಶ್ವಸಮುಪಸ್ಥಿತಸರ್ವಮಂಗ
ಳಾಚರಣಾರವಿಂದಸೇವಾವಸರಸಾವಧಾನಮಾನಸಮಾನಸಂಯುತನಿರತಿಶಯ ಸೌಂ
ದರ್ಯ ಮಾಧುರ್ಯ ಸಮಾರೂಢಪ್ರೌಢತಾರುಣ್ಯಲಾವಣ್ಯಪರಿಮಿಳಿತಘನಜ
ಘನಕನಕಘಟಸಮಸಮಸ್ತನಯುಗಳಕೇಶಭರಭಾರಭಾಸುರಭಾರತೀಭಾರ್ಗವಿ
ಪ್ರಮುಖಲೇಖನಾಯಕ ನಿಕಾಯಕಾಮಿನೀಪ್ರಬಲಬಲಕಲಿತಸುಲಲಿತ ಕಳೇವರ
ಸಮುಜ್ಜ್ವಳವಿಳಾಸವಿದಿತಕುಸುಮವಿಸರವಿಭೂಷಣಭೂಷಿತಾವಯವನವವಯಸ್
ಮುದಿತ ವಿಪುಳವಿಭವ ವಿಭ್ರಮವಿರಾಜಿತ ಸರತಿಸಾಂಜಲಿಪುಟ ನಿಟಿಲಕುಟಿಲಕ್
ಷ್ಣೇಕ್ಷುಕೋದಂಡಮಂಡಿತಬಂಧುರಕಂಧರಕಂದರ್ಪನಿನುದಾರಸಾರಶೃಂಗಾರ
ರಸಮುಮಂ, ಮತ್ತಮತಿ ವಿಕೃತವೇಷಮುಮರ್ದಿರೆ ನೆತ್ತಿಯೊಳೆತ್ತಿಕಟ್ಟಿದ
ಜಂಡಿಕೆಯೊಳೊತ್ತಡರ್ಚಿದಬೆಳ್ಗವಡಿಕೆಯಮಾಲೆ ಜೂಳಿಕೆ ವಿಡಿದು ಜತಿಜತಿಗೊಲೆಯೆ
ಪುಲಿದೊವಲಬಲಲ್ಗಸೆಯಮೇಲಳವಡಿಸಿ ಕಟ್ಟಿಬಿಟ್ಟಕಿರುಗಂಟೆಗಳ ತೊಂಗಲ್ತೊ
ನೆದು ಝುಣಝುಣಧ್ವನಿಗುಡೆ ಮೊಗಮನುರುಗಿಸಿ ಮೂಗುಮನಲರ್ಚಿ ಪುರ್ಬ
ನೇರಿಸಿ ಕಣ್ಣಂಮೆಳ್ಳಿಸಿ ನಾಲಗೆಯಂ ನೀಡಿ ಪಲ್ಗಳಂ ತೆರೆದು ಬಸಿರನುರ್ಬಿಸಿ ಕೊರ
ಲಂ ಕೊಂಕಿಸಿ ನಡುವಂ ಬಂಕಿಸಿ ನೆರೆದಗಣಂಗಳ್ನಗೆಗಡಲೊಳೋಲಾಡೆ ಪಾದ
ತ್ರಯದೊಳ್ನಲಿದು ನರ್ತಿಸಿ ಮೃಡನ ಮೊಗದಾವರೆಗೆ ಮುಗುಳ್ನಗೆಯನೋಲಗಿ
ಪಭೃಂಗಿರಿಟಿಯಿಂ ಹಾಸ್ಯರಸಮುಮಂ, ಮತ್ತಂ ಚಿರಕಾಲಮುಗ್ರತಪಂಗೈದು ವನ
ಜಭವನಿಂ ವರಂಬಡೆದು ಕಡುಗೊರ್ಬಿದದನುಜಜನದಿನಾದಬಾಧೆಗಳ್ಕಿ ಬಳ್ಕಿ ಕಂದಿ
ನೊಂದೇಳ್ತಂದಿಂದುಧರಸಂಘ್ರಿಗೆ ಬಿನ್ನವಿಸಲ್ಸಮಯಂಬಡೆಯದೆ ಕಡೆವಾಗಿಲೊಳ್
ರಿದುಕಾಲಂ ಕಾದು ಸಿಂದೊಳಗಣ್ಗೆ ಸಲ್ಗೆ ವಿಗೆ ಪೋಪಗರುಡಧ್ವಜಾದಿದಿವಿಜ

ವ್ರಜದಬೆಂಬಳಿಯೊಳೊಯ್ಯನಡಂಗಿ ಪೊಕ್ಕುಪೋಪಾಗಳ್ತಡೆದುಪಿಡಿದುಸೂಂಕಿರ್ಘಂ
ಕಿಸಿಜಡಿದುಪೊಡೆವದೌವಾರಿಕಪ್ರಚಂಡಗಣೇಂದ್ರರ ದಂಡಪಾತದಿಂ ದಿಂಡುಗೆಡೆದ
ಳಲ್ದು ಬಳಲ್ದು ಪಸುಸುಯ್ದು ಬಸವಳಿದು ಕಂಬನಿದುಂಬಿ ತನ್ಮನಗಲ್ದು ಸೆರೆಸಿ
ಕ್ಕಿದನಿಜಾಂಗನೆಯುರಂ ನೆನೆನೆನೆದು ಪಲುಂಬಿ ಪಳಯಿಸುವದಿವೌಕಸರಿಂ ಕರುಣ
ರಸಮುಮಂ, ಮತ್ತಮಾವಿಷಾದವಿಧುರಿತರ ಕಾರ್ಪ್ಪಣ್ಯೋಕ್ತಿಗೇಳ್ದು ಕರುಣಂಗೆ
ಯ್ದು ಶಿವನಂಘ್ರಿಯುಂ ಕಾಣಿಸಿ ಬಿನ್ನಪಂಗೈಸಿ ತನ್ನಿರೂಪದಿಂ ನಂದೀಶ್ವರಂ ಕಳಿಪೆ
ಕಡುಪಿಂ ಪರಿತಂದು ತದರಾತಿಖಲದನುಜಬಲಮಂ ಬೆಂಬತ್ತಿ ಮುತ್ತಿ ಪೊಡೆದು
ಬಡಿದು ಕಡಿಕಂಡಂಗೈದು ಸೀಳ್ದು ಪೋಳ್ದು ಸಂಹರಿಸಿ ಮುಗುಳ್ದಭವನಲ್ಲಿಗೆಯ್ತಂ
ದಾಗಳ್ಕನ್ನೆತ್ತರಿಂ ನನೆದಕರುಳ ಮಾಲೆಯುಮಾಂತ್ರಪ್ರೋತಕಟಿ ನಾಸ್ಥಿಪಾತ್ರಮುಂ
ಕೊಡರ್ದಕರಾಳತರಖರಖಡ್ಗಂ ಕರತಳದೊಳಿಂಬುವಡೆಯೆ ವಿಕಚಜಪಾಕುಸುಮ
ರಕ್ತರಕ್ತಜಳಧಾರಾಸಿಕ್ತಶ್ಮಶ್ರುಮಾಂಸಳಕಂಠಾಕುಂಠಿತಭ್ರುಕುಟಿಭಯಂಕರ
ಮುಖತದೀಯವಿಕಟಶಿರೋಮಾಲೆ ಕಂಠೋಪಕಂಠದೊಳ್ಮೆರೆಯೆ ಪೊಡಮಟ್ಟು
ನಿಂದಭೀಕರಾಕಾರಭೈರವವ್ರಜದಿಂ ಬೀಭತ್ಸರಸಮುಮಂ, ಮತ್ತಮನೇಕಮುಖಂ
ಗಳನನಂತನೇತ್ರಂಗಳನಪರಿಮಿತಭುಜಂಗಳನಗಣಿತಪದಂಗಳನಸಂಖ್ಯಾತಕರ್ಣಂ
ಗಳಂ ತಳೆದು ಶಶ್ವದ್ವಿಶ್ವರೂಪಮಂ ತೋರ್ಪ್ಪ ವಿಧಿಸೃಷ್ಟಿಯುಮನಳಿದು ಪೊಸತಂ
ಮಾಳ್ಪ ನಿಜಾಭರಣಫಣಿಯಿಂ ಗರುಡನಂ ಬೆಂಕೊಳಿಪ ಮೌಳಿಜೂಟದೊಳ್ತಳೆದವಿ
ಧುಶಕಲದಿಂ ವಿಧುಂತುದನನದಿರ್ಚುವ ಪದನಖಮಯೂಖದಿಂ ಖದ್ಯೋತಮಂಡಳ
ಮಂ ಖದ್ಯೋತಕೆಣೆಯೆನಿಪ ಲೀಲಾವೇಶವಶೋದುನ್ಮಿಷಿತನಿಟಿಲತಟನಯನಪಟು
ಸ್ಫುಟವಿನಿರ್ಗತಶಿಖಿಶಿಖಾವಿಸ್ಫುರದ್ವಿಸ್ಫುಲಿಂಗದಸಂಘೋಘಮುಲ್ಲಮುನಾಪೋಶನಂ
ಗೊಳಿಪಹೂಂಕೃತಿಧ್ವಾನವಿನಿಜಾಂಡಭಾಂಡಮನಲ್ಲಾಡಿಪಭುಜಪರಿಘಭ್ರಾಂತಿಯಿಂ
ಭಗಣಮನಿಳೆಗುದಿರ್ಚುವ ನಿಜಶ್ವಾಸಜಂಝಾಪ್ರಭಂಜನಪಾತದಿಂ ವಿಬುಧವಿಮಾನ
ಕೋಟಿಯಂ ತರಗೆಲೆಯಂತೆ ಪಾರಿಪ ಮಹಾದ್ಭುತವಿಚಿತ್ರಚರಿತ್ರನನಾಥಶರಣಾಗತ
ರಕ್ಷಕಖಳಶಿಕ್ಷಕನಿರುಪಮಾನಮಾನೋನ್ನತಾನೂನಪಾವಮುಘ್ರಗಮುಪ್ಪಿತನಮಂ
ಚಿತನಿರರ್ಗಳನಿಸರ್ಗಪ್ರಭಾವಮುಪಾನುಭಾವಪ್ರಸಿದ್ಧರುದ್ರಗಣೇಂದ್ರರಿಂದನ್ವಿತ

ರಸಮುಮಂ, ಮತ್ತಮಿದಿರ್ಚಿದೊಡೆ ಜವನಕೋಣನ ಕೋಡಂ ಕೀಳ್ವ, ಮಿಳ್ತುವಿ
ನದಾಡೆಯುಂ ಮುರಿವ, ಮಾರಿಯನಾಲಿಗೆಯುಂ ಪರಿವ ಭೈರವನ ಮುಂದಲೆಗೊಯ್ವ,
ಚಾಮುಗಿಯ ನುಗಿದುಂಗುರಂಗೈದಂಗುಲಿಯೊಳ್ತೊಡರ್ಚುವ, ಕುಳಗಿರಿಯುಂ ನೆಗಪಿ
ತಿರಿಕಲ್ಲಾಡುವ, ದಿಕಮತಟಕರಿನಿಖರ್ಪರಂತಗ್ಗಿನುಗ್ಗಿಮೆಟ್ಟಿ ನಾಟ್ಯಮನಾಡುವ,
ದಿಗ್ಗಜಂಗಳನಿಗ್ಗವಮಂ ಮುರಿದು ಮುದ್ಗರಂಗೆಯ್ದು ಪಿಡಿವ, ಮಹೀವಿಯತ್ತಳಮಂ ಕ
ರತಳದಿಂ ತಳೆದು ತಾಳಂಗುಟ್ಟುವ, ಸಿಡಿಲಂ ಕಡಿದು ಕಡೆಯಂಗೈದೆಡಗಾಲೊಳಿಕ್ಕುವ,
ಕಾಲಾಗ್ನಿಯುಂ ಪೊಸೆದು ಬೊಟ್ಟಿಟ್ಟುಕೊಳ್ವ, ಪೊಡೆಯುರಲನಂ ಜಡಿವ, ಜಡಜಜನ
ಪಣೆಯಕ್ಕರಮಂ ತೊಡೆವ, ಕಡಲಂ ಕುಡಿವ, ಬಡಬನಂ ಪಿಡಿವ, ರವಿಶಶಿಗಳಂ ಮಿಡಿ
ವ, ಕುಳಿಕನಂ ತುಡುವ, ಭಗಣಮಂ ಮುಡಿವ, ಮೃಡನ ಸಾಸಮೆ ಪಲವುರೂಪಾಂ
ತುದೆನಿಸಿ ನಿಂದತಿಬಳಪ್ರಥಿತಪ್ರತಾಪಸಮುಗ್ರೋದಗ್ರವಿಗ್ರಹವಿಜಿತವಿಗ್ರಹವೀರ
ವೀರಪ್ರಮಥವಾರದಿಂ ವಿಸ್ಫಾರವೀರರಸಮುಮಂ, ಮತ್ತಂ ಜಡಿವಫಣಿಕುಂಡಳದ
ಕೆಂಜೆಳಗು ಥಳಥಳಿಸಿ ತಳ್ತಿರೆ ಕುಡಿಗೆಂಪನಾಳ್ದು ಪೊಳೆದು ಬಿಂಕಂಬೆತ್ತು ಕೊಂಕಿ
ನಿಂದಕೂರ್ದಾಡೆಗಳ ನಿಜನಿಟಿಲತಟದೊಳಳವಟ್ಟು ಬಿಸಿಯುಬೆಳಗನೊಳಕೊಂಡೊಳ
ಗೊಳಗೆ ಘುಳುಘುಳಿಸವಿಪುಳತರಸ್ಫುರದ್ವಿಸ್ಫುಲಿಂಗಸಂಘಾತಸಂಗತಸಂವರ್ತಶಿಖಿವಿ
ಲೋಚನದಜಟುಲತಟಿಲ್ಲತಾಕುಟಿಲಜಟಾಪಟಲಮಕುಟತಟಘಟಿತಪಟುದನುಜಕ
ಪಾಲವಲಯದ ಧಗಧಗಿತನಿಸ್ತ್ರಿಂಶತ್ರಿಶೂಲಖಡ್ಗಚಾಪಮಾರ್ಗಣಕಲಿತಕರಚತು
ಷ್ಟಯದ ಕಂಠೋಪಕಂಠಸಂಘಟಿತಘನಘೋಷವಿಷವಿಷಮಭೀಷಣೋತ್ಫಣಿತಫ
ಣೀಂದ್ರಗ್ರೈವೇಯಕದ, ನಿಜಭುಜಾಂತರಾಳದೊಳ್ಪೊಬ್ಬಿಗೊಟ್ಟಬ್ಬರಿಸಿಕೊರ್ಬ್ಬಿದ
ಸುರರಿಪುಶಿರೋಮಾಲೆಯವಿಕಟಾಟ್ಟಹಾಸಭಾಸುರಭ್ರುಕುಟಿಭಯಂಕರಮುಖಾಂ
ಬುಜದ ಜಗಿದುಟ್ಟಚಿತ್ರಕಾಯಚರ್ಮಚಿತ್ರವಸನದ ಪೊದೆದಮದೇಭಚರ್ಮದುತ್ತ
ರೀಯಕದ ವಾಮಾಂಘ್ರಿಯೊಳೊಲೆದುದ್ಘೋಷಿಪದನುಜಮದಭಂಜನನೆಂಬಬಿರುದಿ
ನತೊಡರ ಸಜಳಜಳಧರಮದಾಳಿಕುಳನೀಲರುಚಿಸಮುಗ್ರೋಗ್ರವಿಗ್ರಹದ ಪೊಸಪರ್ವ
ವಿಜೃಂಭಿಸೆ ಸಮಪರಾಕ್ರಮಸಮನ್ವಿತಾಪ್ರಮಿತಪ್ರಮಥರುದ್ರಗಣಸಮಾವೃ
ತದಕ್ಷಮುಖಸಮಾಗತಸಕಳದಿವಿಜವಿದ್ರಾವಣವೀರಭದ್ರನಿಂ ರೌದ್ರರಸಮುಮಂ,

ಮತ್ತಮತಿವಿತತವಿಶದರುಚಿಪರಿಹಸಿತಶಶಿರುಚಿಸ್ಫಟಿಕಮಣಿಕುಟ್ಟಿಮಪ್ರತಿಬಿಂ
ಬಿತಮಹೇಂದ್ರಮಣಿನಿರ್ಮಿತತನ್ಮಂಡಪಾಗ್ರವಲಭಿಭಾಗಸಂಭೃತ ಪ್ರಚುರಮೇಚಕ
ರುಚಿಪ್ರಚಯಮಂ ಮುನ್ನೀರೊಳ್ಮುನ್ನಮೊಗೆದು ಬೆನ್ನಟ್ಟಿ ಸುಟ್ಟುರಿಪಿ ವಿಲಯಂ
ಗೆಯ್ಯಲುಜ್ಜುಗಿಸಿ ವಂದಘೋರತರಗರಳಂಗೆತ್ತಗಿದು ಸುಗಿದು ಪೆಡಂಮೆಟ್ಟಿ ನಡ
ನಡಂನಡುಗಿ ಸೆಡೆದಡಿಗಡಿಗೆ ತಲ್ಲಣಿಸಿ ಮೃಡಂಗೆ ಮೊರೆಯಿಡಲುಜ್ಜುಗಿಪಮು
ಗ್ಧಮರಪ್ರಕರದಿಂ ಭಯಾನಕರಸಮುಮಂ, ಮತ್ತಮೆಳಲ್ವಕೆಂಜಡೆಯ ಪೊಳೆವ
ಸುಲಿಪಲ್ಗಳ ನೊಸಲೊಳ್ಮಿಸುಪಭಸಿತತ್ರಿಪುಂಡ್ರದ ಹಸನರುಚಿಲಸಿತಸುಪ್ರಸನ್ನ
ಮುಖಾಂಬುಜದ ಕೊರಲುರಂತೀವಿತಳೆದ ರುದ್ರಾಕ್ಷಮಾಲಿಕೆಗಳನೆಡವೆಗಲಿಂ
ಬಲದಬಱಿವರೆಗಮೆಳಲೆವಿಟ್ಟಜೋಗವಟ್ಟಿಗೆಯ ವಾಮಕಕ್ಷದೊಳಿರುಂಕಿದಭಸ್ಮ
ಘುಂಟಿಕೆಯ ಬಲದಕರಾಗ್ರದೊಳಾಂತಪಳಿಕುಗುಂಡಿಗೆಯ ಪೊಪೆದುಟ್ಟಮೃದು
ವಲ್ಕಲದ ಕಡುಬೆಡಂಗಡರೆ ಹೃದಯಕಮಳಮಧ್ಯಮಂಡಿತಮಂಡಲತ್ರಯಾಗ್ರ
ದೊಳ್ಬಿಡದೆ ಜಾಸಿಪದಿವ್ಯಮೂರ್ತಿ ಜಲಕ್ಕನೆ ಸುರಸಭಾಮಧ್ಯಭಾಸಮಾನಸಿಂಹಾ
ಸನಸಮಾಸೀನಮಾಗಿ ತೊಳತೊಳಗಿ ತೊಟ್ಟನೆ ದಿಟ್ಟಿಗಿನಿದುಗರೆದು ಮೆರೆಯೆ ಕೀಲಿ
ಸಿದಂತೆ ತಳ್ತೆನೆಮಿಡುಕದನೋಟಮುಮಾನೋಟದೊಳ್ಸಿಲ್ಕಿ ಕಟ್ಟುವಡೆದಂತೆ ನೆಲೆ
ಗೊಂಡ ಮನಮುಮಾಮನದ ಬೆಂಬಳಿವಿಡಿದು ಪಾರಳಿದಶೇಷಕರಣಂಗಳುಮಾಕ
ರಣಂಗಳೊಡನಡಂಗಿ ನಿಷ್ಪಂದತೆಗೆ ಪಕ್ಕಾದಹರಣಮುಮಾಹರಣಮಂ ಬಳಿವಿಡಿದು
ನಿಶ್ಚಲತ್ವಂಬಡೆದಹಂಕೃತಿಯುಳಿದು ಹರವಸಂ ಕಯ್ಮಿಕ್ಕು ಜಲಧಿಯೊಳಾಳ್ದ ಜಲೋ
ಪಳಜಳದಂತೆ ಕಟ್ಟನೆಕರಗಿತೊಟ್ಟನೆ ರಸಮಯಮಾದಪರಮಾನಂದಸುಧಾಸಮುದ್ರ
ದೊಳವಗಾಹಮಿರ್ದ್ದ ಶಿವಯೋಗೀಂದ್ರಸಂತಾನದಿಂ ಶಾಂತರಸಮುಮಂಕೈಕೊಂ
ಡು ತಳೆದತ್ಯಂತಮನೋಹರಮಾಗಿ ರವಿಶಶಿಶಿಖಿಶತಕೋಟಿದಿವ್ಯರುಚಿಯುಂ ಪಳಿದು
ಪಜ್ಜಳಿಪನಿರುಪಮನಿರತಿಶಯನಿರವದ್ಯನಿರವಧಿವಿವಿಧವಿಭವ ಸಮಧಿಗತತಸ್ಮಾ
ಸಭಾಮಧ್ಯಮಂಡಿತಮಣಿಗಣಖಚಿತಮಹನೀಯತಪನೀಯಮಯಮಘಮಘಿತ
ಮಧುಕರರವಮಧುರಸರಸಪರಿಮಳಮಿಳಿತದರದಳಿತಸುರಕುಜಕುಸುಮನಿಕರಮಾ
ಲಿಕಾಲಂಕೃತಮಹಾರಮಣೀಯವಿತಾನದ ಕೆಳಗಳವಟ್ಟವಿತತಪ್ರಭಾವಳಯವಿಳಸಿ
ತಮಹಾಮೃಗೇಂದ್ರಾಸನಮಧ್ಯದಲ್ಲಿ

ಕಂ|| ಫಣಿಪತಿ ನಾಳಂ ದಳಕುಳ |
ಮಣಿಮಾದಿಗಳಮರ್ದಶಕ್ತಿ ಕರ್ಣಿಕೆ ಭಾಸ್ವ ||
ದ್ಗುಣವಿದ್ಯೇಶಕ್ಕೇಸರ |
ಗಣಮಾಗಿರೆ ಮಿಸುಪಪದ್ಮಪೀಠಸ್ಥಳದೊಳ್ || ೧೦೭

ವೃ|| ವಿತತಾನಂದರಸಾಕರಂ ಪ್ರಣತವೃಂದಶ್ರೀಕರಂ ವಿಶ್ವವಿ |
ಶ್ರುತವಿದ್ಯಾಬ್ಜದಿವಾಕರಂ ಪ್ರಬಳಮಾಯಾಭೀಕರಂ ಭಕ್ತಸಂ ||
ತತಿದುಗ್ಧಾಬ್ಧಿಸುಧಾಕರಂ ಸುಕೃತಸದ್ರತ್ನಾಕರಂ ದೇವವಂ |
ದಿತನಿರ್ದ್ದಂ ಮಹಿಮಾಕರಂ ಶಶಿಕಳಾಶ್ರೀಶೇಖರಂ ಶಂಕರಂ || ೧೦೮

ವ|| ಮತ್ತಂ

ವೃ|| ಗಿರಿಜಾತಾದೀರ್ಘನೇತ್ರದ್ಯುತಿಧವಳಿತಚರ್ಮಾಂಬರಂ ಕೌಮುದಿವ್ಯಾಂ |
ಬರಮುಂ ತನ್ಮಂಜುಮಂದಶ್ವಸಿತಸುರಭಿತಶ್ರೀಗಳಶ್ರೀರಸಂ ಕ ||
ತ್ತುರಿಯುಂ ತತ್ಕಾಯಭಾಸ್ವದ್ರುಚಿನಿಚಯಪಿಶಂಗೀಕೃತಾಂಗಾಹಿ ಚಾಮಿ |
ಕರಚಂಚನ್ಮಾಲೆಯುಂ ಪೋಲ್ತಿರೆ ಕರಮೆಸೆದಂ ಬಾಲಚಂದ್ರಾವತಂಸಂ|| ೧೦೯

ಕಂ|| ಕರೆಮರೆಯಿಲ್ಲದ ಬಲ್ಲವ |
ರರಿತಕ್ಕೊಳಗಾಗದಾಗಮದ ಬಗೆಪುಗದೆ ||
ಚ್ಚರಜತಿಗಳ ಜಾನಕ್ಕೆಡೆ |
ದೆರಪಾಗದಚಿನ್ಮಯಪ್ರಭಂ ಮೆರೆದಿರ್ದ್ದಂ || ೧೧೦

ತತ್ವಾತೀತಂ ತತ್ವವಿ |
ಭುತ್ವಯುತಂ ತತ್ವಕಾರಣಂ ತತ್ವನಿಯಂ ||
ತೃತ್ವಪರತಂತ್ರರಹಿತಂ |
ತತ್ವಲಯಸ್ಥಾನಸೆಸೆದ ನಾಸ್ಥಾಯಿಕೆಯೊಳ್ || ೧೧೧

ಎಲ್ಲಂ ತಾನಲ್ಲದ ಬಳಿ |
ಕೆಲ್ಲಂ ತಾನಾದ ಶೂನ್ಯನಲ್ಲದ ರೂಪೊಂ ||
ದಿಲ್ಲದೊಳಗಲ್ಲದುರೆ ಪೊರ |
ಗಲ್ಲದ ಪವಣಕ್ಕೆನಿಲ್ಲದನುಪಮನೆಸೆದಂ || ೧೧೨

ಪಳವಾತಿನ ಮಾತಿನ ಗಳ |
ಬಳಮಂ ಬಗೆಗೊಳದ ಒಚ್ಚಬರಿಯುರಿವಿನ ತ ||
ಣ್ಪೆಳಗಿನ ಬಳಗಂ ಬಳೆದು |
ಜ್ಜ್ವಳಿಸಿದುದೆನಿಸಿದುದು ಮೃಡನ ಮೂರ್ತಿವಿಳಾಸಂ || ೧೧೩

ಅಮಿತಮಹಿಮಾಬ್ಧಿ ಶತಕೋ |
ಟಿಮನೋಭವರೂಪನೆನಿಪರುದ್ರನ ಸೌಂದ ||
ರ್ಯಮನಿಂತುಟೆಂದು ಬಣ್ಣಿಸ |
ಲಮರಾಚಾರ್ಯಾಹಿರಾಜರೇಂ ನೆರೆದಪರೇ || ೧೧೪

ಅದರಿಂ ಪೊಗಳಲ್ಕಾನ |
ಕ್ಕಿದೆನೀವಾಣೀವಧೂಟಿ ಶಿವಭಕ್ತಿರಸೋ ||
ನ್ಮದೆ ಮಗುಳ್ದು ಪೊಗಳಲಾಟಿಪ |
ಳಿದಲಂಘ್ಯಂ ಪ್ರೇಮಕಾಮಿನೀಜನವೃತ್ತಂ || ೧೧೫

ವ|| ಅದುಕಾರಣದಿಂ ಬಲ್ಲಂತೆ ಬಣ್ಣಿಪೆನದೆಂತೆನೆ

ಕಂ|| ಪರಿವೃತಫಣಿವರನಮರ್ದ್ದಿ |
ಪ್ಪಿರೆ ಪರಿಗತಸಿಂಧುಬಂಧುರಂ ಮಂದರಭೂ ||
ಧರಮೆನಿಸಿ ಮೆರೆದುದಾಪುರ |
ಹರನುಜ್ಜ್ವಳಮಕುಟಮತುಳಮಣಿಗಣಮಹಿತಂ || ೧೧೬

ಜಡೆವಳ್ಳಿಯಾಂತಮೊಗುಳ್ಗಳ |
ಗಡಣಂ ತಳನೆನಿಸಿ ಗಾಂಗಜಳಕಣತತಿ ಸಂ ||
ಗಡಿಸಿರೆ ಶಶಿಕಳೆ ಬಳಸಿ |
ರ್ದ್ದುಡುಗಳ ಮಧ್ಯದೊಳೆ ಮೆರೆವುದೆನೆ ಕಂಗೊಳಿಕುಂ || ೧೧೭

ಜಡೆದುರುಗಲೆಡೆಯ ಮಡದಿಯ |
ಮುಡಿಯುಗ್ರದೊಳೈದೆ ತೋಳಪಮುತ್ತಿನಸೆರೆಯೆಂ ||
ಬೆಡೆಗೆಡೆಯಾದುದು ಪದಪಂ |
ಪಡೆನೆಲವೆರೆ ಮಕುಟದಗ್ರದೊಳ್ಪುಪತಿಯಾ || ೧೧೮

ಗಿರಿಧನುಗೇರಿಸುತುಂ ಪಣಿ |
ದಿರುವಂ ಜೇವೊಡೆಯೆ ಸಿಡಿದಫಣಮಣಿ ಪಣೆವ ||
ತ್ರಿರದೆಸೆವಂತೆಸೆದುದು ಭವ |
ಹರನನುಪಮನಿಟಿಲತಟಧನಂಜಯನಯನಂ || ೧೧೯

ಅಂಬಾನನಬಿಂಬಾಧರ |
ಚುಂಬನಸಂಕ್ರಾಂತಘುಸೃಣರಸತಿಲಕಂ ತಾ ||
ನೆಂಬಿನಮಂಬಕಮುಳಿಕದೊ |
ಳಿಂಬಾದುದು ಶಂಬರಾರಿಮದಭಂಜನನಾ || ೧೨೦

ವಿಲಸದ್ದ್ವಿಜರಾಜದ್ಯುತಿ |
ಮಿಲಿತಾರುಣಬಿಂಬಸುಪ್ರಭಾಧರಮುಧಿಕೋ ||
ಜ್ಜ್ವಲಘನರುಚಿ ವದನಂ ಕ |
ಣ್ಗೊಲವಿತ್ತುದನಂತಸಂಪದಂ ಪರಶಿವನಾ || ೧೨೧

ನಿಂದಿಸಿದುದಿಂದುಬಿಂಬಮ |
ನಿಂದುಧರಾನನಮುಮಂದರುಚಿಯುತಮನಿಶಂ ||
ಕಂದದಕುಂದದದೋಷಂ |
ಬೊಂದದಚೆಲ್ವಿಂದೆ ಸತ್ಕಳಾಪರಿಪೂರ್ಣಂ || ೧೨೨

ನಿಜಕೋಟಿ ಮಿಡುಕೆ ಮಿಡುಕಿಪು |
ದು ಜಗತ್ಕೋಟಿಯುನೆನಿಪ್ಪಶರ್ವನ ಪುರ್ವ್ವಂ ||
ಗಜಧನುಗಸಾರಕೋಟಿಗೆ |
ವಿಜಿತಕ್ಕೆಣೆಯೆಂಬನಾಗನೇ ಕಡುಗಾಂಪಂ || ೧೨೩

ವಿದಿತಜಗತ್ಪ್ರಾಣಂ ಪು |
ಟ್ಟಿದತಾಣಂ ಘ್ರಾಣಮತುಳಮಂಜುಳಮುದು ಗೆ ||
ಲ್ದುದು ಸಾರ್ದ್ಗಳಿಶಿಶುವಸುವಂ |
ಸಪದಿಕ್ಕ್ರಪಕನಕಚಂಪಕಮನಘಹರನಾ || ೧೨೪

|| ಶಿವಕರ್ಣಾಕಾರಶ್ರೀ |
ಭವಮಾಶ್ರೀಕಾರವುಪ್ಪುದಲ್ಲದೊಡುರುವ ||
ರ್ಣವಿಳಾಸತೆ ಶಾಸ್ತ್ರಾದಿ |
ಶ್ರವಣತೆ ಶುಭಕರಣಭಾವವೇಂ ಸಮನಿಪುದೇ || ೧೨೫

ಹರಕರ್ಣಪೂರಕಮಳಂ |
ಶಿರದಿಂದುವನೆಯ್ದಿ ಪಿಡಿದು ಸೊದೆಗೊಂಬುದೆನು ||
ತ್ತುರರೆ ಪಿಸುಣಾಡುವಂತಿರೆ |
ಕರಮೆಸೆದುದು ಕರ್ಣದಱಿಯೊಳಳಿರವಮಿಷದಿಂ || ೧೨೬

ಗೌರೀವಿಲೋಚನಾಸ್ಯಜ |
ಕೋರಾಂಬುಜಸಮ್ಮದಪ್ರದಪ್ರಭಮತುಳಂ ||
ರಾರಾಜಿಸಿದುದು ಕುಮುದಸ |
ರೋರುಹಸಖಲೋಚನದ್ವಯಂ ಶಶಿಧರನಾ || ೧೨೭

ಫಣಿಫಣಮಣಿಕಿರಣಗಣಾ |
ರುಣಿತಂ ಮಣಿದರ್ಪಣಪ್ರಭಂ ಕದಪದು ಪಾ ||
ರ್ವಣಸಮುದಿತೇಂದುಬಿಂಬಮ |
ನಣಕಿಪುದಮಳಾಂಶು ಚಂದ್ರಚೂಡಾಮಣಿಯಾ || ೧೨೮

ಹಾರೋರಗಫಣಮಣಿದೀ |
ಪೋರುಶಿಖಾಕಜ್ಜಳಾಯಿತಂ ಗಳಗರಳಂ ||
ಗೌರೀನಯನಾಂಜನರೇ |
ಖಾರಸಮುಮರ್ದಂತೆ ಮೆರೆದುದಹಿಭೂಷಣನಾ || ೧೨೯

ಗಿರಿಜಾತಾಗುರುತರಕುಚ |
ಭರಕಾಶ್ಮೀರಾಂಗರಾಗರಾಗಾಂಕಪವಿ ||
ಸ್ಫುರಿತಭುಜಮಜಿತಮಿಳಿಪಿದು |
ದರುಣಾಬ್ಜರಜಃಪಿಶಂಗಿತೋರ್ಮಿಯ ಚೆಲ್ವಂ || ೧೩೦

ಹರಬಾಹುಕಲ್ಪತರುಭಾ |
ಸುರಶಾಖೆಯ ಪಲ್ಲವಂ ಕರಂ ಕರಮೆಸೆಯು ||
ತ್ತಿರೆ ತತ್ಪ್ರಸೂನನವಮಂ |
ಜರಿಯೆನಿಸಿದುದಮಳನಖನಿಕಾಯಾಂಶುಚಯಂ || ೧೩೧

ನಿಟಿಲಾಕ್ಷವಕ್ಷಮುಗಜಾ |
ಘಟಕುಚಚಂದನರಸಾಂಕಮಮಳಿನಮತುಳ ||
ಸ್ಫಟಿಕಕವಾಟದ ಸಿರಿ ಸಂ |
ಘಟಿಸಿರೆ ಮೆರೆದುದು ಚಿದಂಗನಾಮಣಿಗೃಹದಾ || ೧೩೨

ಕುಂಜರಭಂಜನಶೌರ್ಯಸ |
ಮಂಜಸ ಕುಧರಾಗ್ರವಾಸಿ ಪಂಚಾಸ್ಯಂಗೇಂ ||
ಮಂಜುಳತರ ಕೃಶಮಧ್ಯಂ |
ರಂಜಿಪುದಚ್ಚರಿಯೆ ನೋಳ್ಪೊಡೆಂಬವೊಲೆಸೆಗುಂ || ೧೩೩

ಇಂಗಡಲೊಳೊಗೆದ ಸುಳಿಯಂ |
ಭಂಗಾನ್ವಿತಮೆನಿಪಭವನ ನಾಭೀವಲಯಂ ||
ತಾಂ ಗೆಲೆವಂದುದರಲ್ದು ಬೆ |
ಡಂಗಾಂತೆಸೆವಜ್ಜ ದುಂಡುಮಲ್ಲಿಗೆಯುರಲಂ || ೧೩೪

ಅಭ್ರಮುವಲ್ಲಭಕುಂಭದ |
ವಿಭ್ರಮಮಂ ಸೆಳೆದು ತಳೆದು ಮೆರೆದುದು ಪೊರೆವಾ ||
ಶುಭ್ರರುಚಿ ಹೇಮಸೂತ್ರಪ |
ರಿಭ್ರಾಜಿತಮಧಿಕಮಂಧಕಧ್ವಂಸಕನಾ || ೧೩೫

ಮಾರಾರಿಯ ನುಣ್ದೊಡೆಯಾ |
ಕಾರಮನಾನಲ್ಕೆ ಬಯಸಿ ಬಾಳೆಗಳನಿಶಂ ||
ನೀರುಂಡು ನಾರನುಡುತಂ |
ಸಾರಿ ಸದಾತಪಮನಾಂತು ಮೆರೆಗುಂ ಬನದೊಳ್ || ೧೩೬

ಹರಚರಣದ ಸೌಂದರ್ಯಮ |
ನರವಿಂದಜನಿಂದಮಾಗದುದನರ್ಥಿಸಿ ಪಂ ||
ಕರುಹಮದುಪಾದಪೀಠದ |
ಪರಿಜಂ ತಳೆದದನೆ ಪೊತ್ತು ಸೇವಿಪುದಿನ್ನುಂ || ೧೩೭

ಮಣಿವಹರಿಮುಖಸುರರ್ಕ್ಕಳ |
ಮಣಿಮಕುಟದಮೌಕ್ತಿಕಂಗಳುಡುಗಣಮೈತಂ ||
ದಣಿಯುರದಿಂ ಪದನಖಪಾ |
ರ್ವಣಶಶಿಯಂ ಸೇವಿಪಂತಿರೇನೊಪ್ಪಿದುದೋ || ೧೩೮

ಬಿಡುಗಣ್ಣರರ್ಚಿಸಿದಸೊಂ |
ಪಡರ್ದಸರೋಜದ ಪರಾಗತತಿ ಕಂಗೊಳಿಕುಂ ||
ಕಡುಜತಿಗಳಮನಮೆಲ್ಲಂ |
ಬಿಡದೋಲಗಿಪಂತೆ ಮೃಡನ ಮೆಲ್ಲಡಿದಳಿರೊಳ್ || ೧೩೯

ಸೊದೆಗೆತ್ತು ನಖರುಚಿಗೆ ಬಳ |
ಸಿದಫಣಿಪನ ಫಣೆಯ ಮಣಿಯ ಬೆಳಗೆಳವಿಸಿಲೆಂ ||
ದೊದವಿದಸೊಂಪಂ ತಳೆದಂ |
ದದೆ ಮೆರೆದುದು ಪಾದಪಂಕಜಂ ಪುರಹರನಾ || ೧೪೦

ಜನನಕುಜಮೂಲಮಂ ನೆ |
ಟ್ಟನೆ ಕಡಿಯಲ್ವಿಡಿದನೆಸಿಸಿದುದು ಪರಶು ಶಿವಾ ||
ನನಶಶಿಯಿಂ ತೆಗೆದಾಂತವೊ |
ಲೆನಸುಂ ಮಿಗಮಿರ್ದ್ದುದಾಕಪರ್ದಿಯಕರದೊಳ್ || ೧೪೧

ವೃ|| ಪಳಿದುದ್ಯದ್ದುಗ್ಧವಾರ್ಧಿದ್ಯುತಿಯನೊಪೆದು ದೇವಾಂಗನಾಪಾಂಗದೊಳ್ |
ಳ್ಪೆಳಗಂ ತಳ್ಪೊಯ್ದು ಚಂದ್ರಾತಪಮನಲೆದು ವಾಣೀತನುದ್ಯೋತಿಯುಂ ಪಂ ||
ಪಳಿವನ್ನಂ ಪೊಯ್ದು ತಾರಾಚಳರುಚಿಚಯಮಂ ತೂಳ್ದು ಮಂದಾಕಿನೀಮಂ
ಜುಳಕಾಯಚ್ಛಾಯೆಯಂ ಪಚ್ಚಿದುದು ಪರಶಿವಾಂಗಾವದಾತಪ್ರಕಾಶಂ ||

ಗಗನಂ ನಾಭಿ ನಿಭಂ ಶತಾಂಶು ನಿಜತೇಜೋಪಿಂದು ಬೀಜಂ ಮಹಾ |
ಗ್ನಿ ಗಳತ್ಪಾದರಜಂ ಧರಿತ್ರಿ ಶಶಿ ನಿರ್ಮಾಲ್ಯೋದ್ಗಮಂ ಶ್ವಾಸವಾ ||
ಶುಗಮಾದ್ಯಂ ಜಲಮಂಗಘರ್ಮಜಲಮಾತ್ಮಾಂಭೋಧಿನಿರ್ಯತ್ಕಣಾ |
ಳಿಗಳಿಂದ್ರಾದಿಗಳೆಂದೊಡೇಂ ಪೊಗಳ್ವೆನೋ ಪೆಂಪಂ ಮಹಾದೇವನಾ || ೧೪೩

ಕನಕನಗೇಂದ್ರಧರ್ಮಕರನಾಗಿಯುಮುನ್ನತಧರ್ಮಹಂತೃ ಸಂ |
ಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾ ||
ಮನುಮೆನಿಸಿದ್ದ ಕಾಮಮಥನಂ ಪರಮೋಕ್ಷದನಾಗಿಯುಂ ಸನಾ | ೧೪೪
ತನಪರಮೋಕ್ಷಲುಬ್ಧಮತಿಯೆಂದೆನಿಸಿರ್ದನಹೀಂದ್ರಭೂಷಣಂ ||

ಚರಿತದೊಳುಂಟೆ ನೋಡೆ ಕರೆ ಕಂಠದೊಳಲ್ಲದೆ ರಾಗಮಾಜಟೋ |
ತ್ಕರದೊಳಮಲ್ಲದುಂಟೆ ಮನದೊಳ್ವಿಷಮಸ್ಥಿತಿ ನೈಜನೇತ್ರಭಾ ||
ಸುರತೆಯೊಳಲ್ಲದುಂಟೆ ಮತಿಯೊಳ್ಜಡಸಂಗತಿ ತನ್ನೊಳುಂಟೆ ಮೇ |
ಣ್ಕೈರದೊಳಗಲ್ಲದೆಂಬನುಡಿಗೊಲ್ದೆಡೆಗೊಟ್ಟನವಂ ಸದಾಶಿವಂ || ೧೪೫

ಸಿರಿಗಧಿದೇವಿ ಶಾರದೆಯ ಸತ್ಕಳೆ ಸೈಪಿನ ಜನ್ಮಭೂಮಿ ಸ |
ಚ್ಚರಿತದ ಸೀಮೆ ಸತ್ಯದತವರ್ಮನೆ ಪೆರ್ಮೆಗಡಪ್ಪ ಸಿದ್ಧಿಗಾ ||
ಗರಮತುಳೋತ್ಸವಕ್ಕೆ ನೆಲೆ ಚೆಲ್ವಿನ ಕೋಶಮನೂನಮಂಗಳೋ |
ತ್ಕರನಿಧಿ ಗೌರಿ ರಂಜಿಸಿದಳಂಕದೊಳಿಂದುಕಳಾವತಂಸನಾ || ೧೪೬

ನಗೆಗಣ್ಣೈದಿಲನೈದೆ ಸೀವ್ಪಗಿಸೆ ಚಂದ್ರಂಗೀಯೆ ಕುಂದಂ ಮೊಗಂ |
ನಗಮಂ ಪತ್ತಿಸೆ ನಾಸಿಕಂ ಸುಲಲಿತಂ ಚಾಂಪೇಯಮಂ ಪೊನ್ನಬಿಂ ||
ದಿಗೆಯಂ ಮೆಯ್ಗುರೆವಂತೆ ಗೆಯ್ಯೆ ಕುಚಮಾವೇಣೀಭರಂ ಕಾಳಪ |
ನ್ನಗನಂ ಪುತ್ತುಡರ್ವಂತೆ ಮಾಡೆ ಮೆರೆದಳ್ಶರ್ವಾಣಿ ಸೌಂದರ್ಯದಿಂ || ೧೪೭

ಅರುಣಂ ಪಾಣಿ ತಳಿರ್ಕಚಂ ಕುಸುಮಗುಚ್ಛಂ ಕುಂದದಂತಾಂಶು ಭಾ|
ಸುರಪುಷ್ಪಂ ಭ್ರಮರಾಳಿ ನೀಲಮಣಿಚಂಚನ್ಮಾಲೆ ಪಾದಾಬ್ಜಜಂ ||
ಧುರಪೀಠಂ ಕಲಿತಾಲವಾಲಮಮರೀನೇತ್ರಾಂಶು ಪೊಯ್ನೀರದಾ |
ಗಿರೆ ಸಂಶ್ಲಿಷ್ಟಶಿವಾಮರಾಗೆ ಶಿವೆಯಾಂತಳ್ಸ್ವರ್ಲತಾ ಶೋಭೆಯಂ || ೧೪೮

ಗಳದುದ್ಯದ್ದಾನಧಾರಾಸುರಭಿಮಿಳಿತಕರ್ಣಾನಿಳೋದ್ದಂಡಶುಂಡಾ |
ಗ್ರಳಸತ್ಫೂತ್ಕಾರ ನಿರ್ಯಜ್ಗಲಲವನಿವಹಕ್ಕಾಸೆವಟ್ಟೈದಿನಿಂದಂ ||
ತಿಳಿಯಂ ಪೊತ್ತಿರ್ದ್ದಹೀಂದ್ರಂ ಮಿಸುಗೆಪೊಡೆಯುಹೀಂದ್ರಂ ಕರಂಕಣ್ಗೆವಂದಂ|
ಗಳಿತಾಶಂ ವಿಘ್ನನಾಶಂ ಪೃಥುಸಕಳಕಳಾಪೂರ್ಣಕೋಶಂ ಗಣೇಶಂ|| ೧೪೯

ಬಾಲಾದಿತ್ಯಾಂಶುಭಾಸ್ವತ್ತನು ಮಣಿಗಣಭೂಷಾವಹಂ ಪೀನಮುಕ್ತಾ |
ಮಾಲಾಲಂಕಾರವಕ್ಷಸ್ಸ್ಥಳನುರುತರಕೋಟೀರಧೌರೇಯಸಸ್ಮೇ ||
ರಾಲಾಪಾಳಿಸ್ವನಾಸ್ಯಾಂಬುಜನಹಿಭುಗಿನಾರೂಢನೊಪ್ಪಿರ್ದ್ದನುದ್ಯ |
ಲ್ಲೀಲಾಯುಕ್ತಂ ಸಶಕ್ತಿಸ್ಫುರಿತಭುಜನುಮಾಸತ್ಕುಮಾರಂ ಕುಮಾರಂ||೧೫೦

ಪದಪಾದಂ ವೇದಪಾದಸ್ಫುಟಮಣಿಕಟಕಂ ಕಾಲಪಾಲಂ ಕಳಾಕಾಂ |
ತಿ ದಯಾಸ್ಯಂ ಚಿತ್ಪ್ರಭಾಕ್ಷಂ ಪ್ರಣವರವಠಣತ್ಕಾರನಾನಂದಸಾಸ್ನಾ ||
ಸ್ಪದನಾಮ್ನಾಯಾಂತಘಂಟಾಗಳನಮೃತಕಕುದ್ಬಂಧುರಂ ಚಿತ್ಕ್ರಿಯಾಹ್ಲಾ|
ದದಶೃಂಗಂ ಧರ್ಮರೂಪಂ ತೊಳಗಿದನಭವಾಂಭೋಧಿಚಂದ್ರಂ ವೃಷೇಂದ್ರಂ ||

ಸ್ಮಿತವಕ್ತ್ರಂ ರಕ್ತಕರ್ಣಾಭರಣಕಲಿತಮುದ್ದೀಪ್ತದೀರ್ಘಾಂಗನಾಲಂ |
ಚಿತಹಾರಂ ಭಸ್ಮರೇಖಾತ್ರಯವಿಳಸಿತಭಾಳಸ್ಥಳಂ ಚೀನಚೇಲಾ ||
ವೃತಮಧ್ಯಂ ಮೌಕ್ತಿಕಪ್ರಸ್ಫುಟಮುಕುಟನುದಂಚತ್ಸುವರ್ಣೋರುವೇತ್ರಾಂ |
ಚಿತಹಸ್ತಂ ನಿಂದು ಕಣ್ಗೊಪ್ಪಿದನಭವಸಭಾವಾಸದೊಳ್ನಂದಿಕೇಶಂ || ೧೫೨

ರುರುಘಂಟಾಕರ್ಣನಂಡಾಭರಣನಹಿಧರಂ ಶಂಕುಕರ್ಣಂ ಪ್ರಕುಂಡೋ |
ದರಸಂಭೋದಸ್ವನಂ ಧೂರ್ಜಟಿ ಜಟಿಲಿ ಜಟಾಮಾಲಿ ಕಾಲಾಂತಕಂ ಶಂ ||
ಕರಸೋಂಕಾರಂ ವೃಷೇಂದ್ರಧ್ವಜನಜಿನವಸಾನಂ ವಿಷಾದಂ ವಿಪದ್ಘೀ |
ಕರನಂಗಾರಾಂಗನಂಗೋದ್ಭವಹರನಸುರಧ್ವಂಸಕಂ ವೀರಭದ್ರಂ || ೧೫೩

ಹರಿವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ ಮೇಷವಕ್ತ್ರಂ ಘನೇ|
ಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ ಗೋಪವಕ್ತ್ರಂ ವಸೇ ||
ಚರವಕ್ತ್ರಂ ಕಿರಿವಕ್ತ್ರನುಗ್ರಶಿಖಿವಕ್ತ್ರಂ ವ್ಯಾಘ್ರವಕ್ತ್ರಂ ಪಯ |
ವಕ್ತ್ರಂ ರುರುವಕ್ತ್ರರೆಂಬಿರೆಸೆದರ್ಮಿರ್ಕ್ಷೇತ್ರಪಾಲಾಸ್ಥಾನದೊಳ್ || ೧೫೪

ವಟರುದ್ರಂ ವಂದ್ಯರುದ್ರಂ ಕಲವಿಕರಣರುದ್ರಂ ಕಳಾಮೇಯರುದ್ರಂ |
ವಿಟರುದ್ರಂ ವೀರರುದ್ರಂ ಬಲವಿಕರಣರುದ್ರಂ ಮಹಾಬಾಹುರುದ್ರಂ ||
ಪಟುರುದ್ರಂ ಪಾಶಿರುದ್ರಂ ಪರಮಮಹಿಮರುದ್ರಂ ಪರೇಶಾನರುದ್ರಂ |
ನಟರುದ್ರಂ ನೀಲರುದ್ರಂ ಜಗದಧಿಪತಿರುದ್ರಂ ಜನಾಧಾರರುದ್ರಂ || ೧೫೫

ತಿರುಮೂಲಂಜೇರಮಾಂಕಂಮುರುಘುರಿರಿವದಾಂಡಾರಿವಾಗೀಶ್ವರಂಸೌಂ|
ದರನಾನ್ಯೈನಾರರೇಣಾಂಧಣರಣುತನುವೆಳ್ಕೂತರೇಣಾಧಿನಾಥಂ |
ಸಿರಿಯಾಳ್ವಂ ಸೇದಿರಾಜಂ ಮೊನೆಯಿಡುವನುಮಷ್ಟೂತಿಯೇಕಾಳಿ ಚಂಡೇ |
ಶ್ವರನಾಕಣ್ಣಪ್ಪದೇವರ್ಮ್ಮರೆದರಭಸದ್ಭಕ್ತಿಸಂಪತ್ತಿಯುಕ್ತರ್ || ೧೫೬

ಶುಕಕಣ್ವಾಗಸ್ತ್ಯಭೃಗ್ವಂಗಿರಸಸನಕಸಾನಂದಸೂತಾತ್ರಿಗಳ್ಕಾ |
ಶಿಕಭಾರದ್ವಾಜಶಾತಾತಪಕಪಿಲಕಣಾದಾಸಿಲಾದಾಕ್ಷಪಾದಾ ||
ಜಕಮಾರ್ಕಂಡೇಯಮಾಂಡವ್ಯರುರುವಿಮದಜಾಬಾಲಬೋಧಾಯನರ್ನ್ನಿರ್ಗಂ |
ದಕಳಂಕಕ್ಕೀರ್ತಿಸುತ್ರೊತ್ತಿಪ್ಪಿದರಭವಸಭಾವಾಸದೊಳ್ಭಕ್ತಿಯಿಂದಂ ||೧೫೭

ವರುಣಂ ಪೊಂಗಿಂಡಿಯಂ ವಾಸವನೆ ಡವಕೆಯಂಪಾವಕಂ ದೀಪಮಂಭಾ|
ಸ್ಕರಪುತ್ರಂಛತ್ರಮಂ ವೀಜನಮನನಿಲನಬ್ಜಾಕ್ಷನಾದರ್ಶಮಂ ಚಾ |
ಮರಮಂ ಶ್ರೀವಾಣಿಗಳ್ಪಿತ್ತಪನಡಪವನೀಶಾನನಂಗಾಂಗರಾಗೋ ||
ತ್ಕರಮಂಖಡ್ಗಾದಿಯಂ ದಾನವಪತಿ ಪಿಡಿದೋಲೈಸಿ ನಿಂದರ್ದ್ದರಾಗಳ್||೧೫೮

ಯಮಕವಚನ|| ಮತ್ತಮಾಮಹಾಸ್ಥಾನಂ ಸಾರಸ್ವತಸ್ಫುರಿತಮಾನಸಕಮಳವಿತತಾಮೋದವಾಹಸುಧೀರಾಜಸಮನ್ವಿತಮುಂ | ಸಾರಸ್ವತಸ್ಫುರಿತಮಾನಸಕಮಳವಿತತಾಮೋದವಾಹಸುಧೀರಾಜ ಸಮನ್ವಿತಮುಂ| ಸಾನಂದಸನಂದನಸಮಾಗತಶತಕ್ರತುಸುಮನೋಮುನಿಸಮಂಚಿತಮುಂ | ಸಾನಂದಸನಂದನಸಮಾಗತಶತಕ್ರತುಸುಮನೋಮುನಿಸಮಂಚಿತಮುಂ | ವಿತತಸಖುರುಚಿರುಚಿರವನಮಾಲಾಸುಮನಸ್ಸುಗಂಧದೇಹಾನುಕಂಪಿತಸುಪರ್ಣಸಮುದ್ಧೃತಪರಾಗಸ್ತೋಮಮಧುಹರಪರಮಹಿಮಯುತಹರಿವಿರಾಜಿತಮುಂ | ವಿತತಸಖುರುಚಿರುಚಿರವನಮಾಲಾಸುಮನಸ್ಸುಗಂಧದೇಹಾನುಕಂಪಿತಸುಪರ್ಣಸಮುದ್ಧೃತ ಪರಾಗಸ್ತೋಮಮಧುಹರಪರ

ಮಹಿಮಯುತಹರಿವಿರಾಜಿತಮುಂ | ಹುತಾಶನಜಂಡದಂಡಧರಪಾಶಹಸ್ತನಿಧೀಶ ವೃಷಾಂಕಶೂಲಧರರುಂಡಾಭರಣಮಹಾಭೈರವಗಣಕಲಿತಮುಂ| ಹುತಾಶನಜಂಡ ದಂಡಧರಪಾಶಹಸ್ತನಿಧೀಶವೃಷಾಂಕಶೂಲಧರರುಂಡಾಭರಣಮಹಾಭೈರವಗಣಕ ಲಿತಮುಂ | ಸದಾಲೋಕಹಿತಕರಸ್ಫುರಿತಪುಷ್ಕರವಿಬುಧಚಕ್ರಸಮೀಹಿತೋದಯ ರುಚಿರಸಿತಭಾನುರಂಜಿತ ಮಹೋತ್ಪಳಮಿತ್ರವಿಳಸಿತಮುಂ | ಸದಾಲೋಕಹಿತಕರ ಸ್ಫುರಿತಪುಷ್ಕರವಿಬುಧಚಕ್ರಸಮೀಹಿತೋದಯರುಚಿರಸಿತಭಾನುರಂಜಿತಮಹೋ ತ್ಪಳಮಿತ್ರವಿಳಸಿತಮು ಮೆನಿಸಿರ್ದುದಂತುಮಲ್ಲದೆಯುಂ ||

ವೃ|| ಮರುದಾಕೀರ್ಣಾಪ್ಸರಂಸತ್ತಿಲಕ ವಿಲಸಿತಂರಾಜಹಂಸಾನ್ವಿತಂ ಭಾ|
ಸುರರಂಭಾಶೋಕಪೂಗಸ್ಥಿತಿ ಶಿಖಿಶುಕವಿಭ್ರಾಜಿತಂ ಗಂಧವಾಹಾ |
ಗುರುಗೋಜಸ್ಫಾರಪುನ್ನಾಗಕಮುರುಸುಮನೋವೃಂದಪದ್ಮಾಭಿರಾಮ |
ಸ್ವರಜಂಚದ್ಭೃಂಗ್ಯಲಂಕಾರಕಮಭವಸಭಾವಾಸಮುದ್ಯಾನಸಾಮ್ಯಂ ೧೫೯
ಕರಮೆಸೆದಿರ್ದುದಭ್ರಚರದಿಂಚರದಿಂ ಚರದಿಂದಿರಾಮುಖಾ |
ಮರತರುಣೀಸುಲಾಸ್ಯರಸದಿಂ ರಸದಿಂ ರಸದಿಂ ಪೊದಳ್ದಶಂ ||
ಕರಕವಿವರ್ಗದಿಂದೆ ಸುರಭಾಸುರಭಾಸುರ ಭಾಗಭಂಗಮಾ |
ವರನುತಿಯಿಂ ಸಭಾಸ್ಥಳಿ ಕಳಾಪಕಳಾಪಕಳಾಪಮೌಳಿಯಾ ||೧೬೦||

ವ|| ಇಂತನಂತಸಂಭ್ರಮಮನನುಂದವಿಭ್ರಮಮನನೂನಾಶ್ಚರ್ಯಮನತೀ ವಸಂಪದಮನತರ್ಕ್ಯವಿಸ್ತಾರಮನಖಂಡಮಹಿಮೆಯನೊಳಕೊಂಡು ನುತಿವೊಡಸ ದಳಮಾದನಿರುಪಮಾನಾನೂನಘನಪರಮಮಂಗಳ ಮಹಿತಮಹಾಸ್ಥಾನದಲ್ಲಿ ||

ಕಂ|| ನಮದಮರಕನಕಮೌಳಿಗ |
ಳಮದ*ರ್ರಸಿದೊಡುದಿ*ರ್ದರೇಣು ಪುಗೆ ಬಾಯ್ಗಳೊಳಾ||
ಗಮಮಂ ಪಡೆದೋದುವವಾ |
ಗ್ರಮಣಂತಳೆದಂ ಹಿರಣ್ಯಗರ್ಭಾಖ್ಯತೆಯಂ ||೧೬೧||

ವೃ|| ಗಳಪದಿರಿಂದ್ರ ಸೂಂಕದಿರುಪೇಂದ್ರ ತೊಲಂಗೆಲೆಚಂದ್ರ ಮೆಲ್ಲನೊ |
ಲ್ದೊಳಪುಗುಮಿತ್ರ ಕಯ್ಮುಗಿ ವಿಧಾತ್ರ ಶರಣ್ಬುಗು ವೀತಿಹೋತ್ರಹಿಂ||
ದುಳಿ ಧನಪಾಲ ಸಾರ್ಕ್ಕಣೆಗೆಲೋಲಸಮೀರಣ ಕಾಲಸಿಲ್ಬುದೆಂ |
ದಳಘುರವಂ ಗುಹುತ್ತಿಜಡಿಸಂ ಜವನಿಂದವೆ ಸಂದಿರ್ಕ್ಕೆಸ್ವರಂ ||೧೬೨||

ಪೊಡೆಯುತ್ತುಂ ವೇತ್ರದಿಂದಿಟ್ಟಣಿಪದನುಜರಂ ಯಕ್ಷರಂ ನೂಂಕುತುಂ ಕ|
ಣ್ಗಡೆಯಿಂದಂಝುಂಕಿಸುತ್ತಂಮುನಿನಿವಹಮನಾದರ್ದಿತ್ತುತುಂಸಿದ್ಧರಂಮೇ||
ಣ್ಗಡಿಯುತ್ತುಂ ಸಾಧ್ಯರಂ ಹೊಯ್ಯೆನುತೆ ನಿಲಿಸುತಿಂದ್ರಾದ್ಯರಂ ಗೀತನೃತ್ಯ |
ಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ದ್ದಂ ||
ಶ್ರುತಿಕೋಟಿಸ್ತೋತ್ರನಾದಂಮುನಿಪಜಯಜಯಧ್ವಾನಮಂಭೋಜಗರ್ಭೋ
ನ್ನತವಕ್ತ್ರೋದ್ಭೂತಸಾಮಧ್ವನಿ ಸುರವನಿತಾಗೀತರಾವಂ ಪ್ರಮೋದಾಂ||
ಚಿತಗಂಧರ್ವಾಂಗನಾನರ್ತನ ಘನನಿನದಂ ಭೃಂಗಿನಾಟ್ಯಸ್ವನಂ ಪ್ರ |
ಸ್ತುತನಾನಾವಾದ್ಯಘೋಷಂ ಬೆರಸಿಬಳೆದುದೆತ್ತೆತ್ತಲುಂ ಪರ್ಬ್ಬತಾಗಳ್ ||

ಸುರಪಂ ಮಂದಾರದಿಂದಚ್ಯುತನರುಣಸರೋಜಾತದಿಂ ಚಂದ್ರನಿಂದೀ |
ವರದಿಂ ಬಾಲಾಬ್ಜಮಿತ್ರಂ ಧವಳಕಮಳದಿಂ ಪದ್ಮಜಂ ಹೇಮಪದ್ಮೋ ||
ತ್ಕರದಿಂ ವಿತ್ತೇಶನುದ್ಯತ್ಕನಕಕುಸುಮದಿಂ ಮಾರುತಂ ದಿವ್ಯಸೌಗಂ |
ಧಿರಜಃಸೌಗಂಧದಿಂದರ್ಚಿಸೆ ನಿಜಪದಮಂ ಭರ್ಗನೊಪ್ಪಿರ್ದ್ದನಾಗಳ್ ||

ಕರಮೆಸೆದಿರ್ದ್ದರೀಶ್ವರಸಮಕ್ಷದೊಳುದ್ಭಟಬಾಣಭಟ್ಟಭಾ |
ಸ್ಕರವರಪುಷ್ಪದತ್ತರುಮುದಗ್ರಹರೀಶ್ವರರಾಘವಾಂಕಶಂ ||
ಕರವಿಭುಗಳ್ಸುಕೇಶಿ ಮಲಯಾಧಿಪಮಲ್ಹಣಭೀಮಬಿಲ್ಹಣ |
ಸ್ಸುರುಚಿರಕಾಳಿದಾಸಕವಿಭೋಜಮುಖರ್ನ್ನುತಿಸುತ್ತೆ ಭಕ್ತಿಯಿಂ ||೧೬೬||

ಮಣಿಮಣಿದೇಳ್ವ ನಿಲ್ವ ನಡೆನೋಡುವ ಪಾಡುವ ಜೋಲ್ವ ತೇಲ್ವಸಂ |
ದಣಿಪಕುಕಿಲ್ವ ಕೂಗಿಡುವ ರಾಗಿಪ ರಂಜಿಪ ಸುತ್ತಿಬರ್ಪ್ಪರಿಂ ||
ಗಣಗುಣಿವಾರ್ಪ್ಪ ಸಾರ್ಪ್ಪ ನಗುವಂಘ್ರಿಯನಪ್ಪುವ ಲಲ್ಲೆದೋರ್ಪ್ಪಕ |
ಣ್ಬೊಣರ ಸುಖಾಶ್ರುವಿಂ ನನೆವ ನಚ್ಚಿನ ಮಚ್ಚಿನ ಭಕ್ತರೊಪ್ಪಿದರ್ ||೧೬೭||

ತವಕದೆ ನೋಡಿನೋಡಿ ತಣಿವೈದವು ಕಣ್ಗಳನೂನಮೂರ್ತಿಯಂ |
ಸವಿಮಿಗೆ ಪಾಡಿಪಾಡಿ ತಣಿವೈದದು ಜಿಹ್ವೆ ತದೀಯಕೀರ್ತಿಯಂ ||
ಸವೆಯದೆ ಮಾಡಿಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ |
ನವವಿಧಭಕ್ತಿಯುಕ್ತಶರಣಾವಳಿಗೆಂದೆನೆ ನೈಪದೆಂತುಟೋ | ||೧೬೮||

ಇಂತತ್ಯಂತಪ್ರಭಾವಂಬಡೆದು ಮಿಸುಗುವಾಸ್ಥಾನದೊಳ್ಸತ್ಕೃಪಾದ್ರ್ |
ಸ್ವಾಂತಂ ಸತ್ಯೇಂದ್ರನಂ ತತ್ತನುಜಮುಖರನೊಲ್ದೀಕ್ಷಿಸುತ್ತುಂ ಭವಾನೀ||
ಕಾಂತಂ ಕೊಂಡಾಡಿ ಕೇಡಿಲ್ಲದಗಣಪದಸಾಮ್ರಾಜ್ಯಮಂ ಸಾರ್ಚ್ಚ್ ತಾನ|
ಶ್ರಾಂತಂ ಕಣ್ಗೊಪ್ಪಿದಂ ಮಂಜುಳಗುಣಗಣಮಾಣಿಕ್ಯಕೋಶಂಮಹೇಶಂ ||

ವ|| ಆಗಳ್ಮೈಯ್ಯಿಕ್ಕಿ ಕಯ್ಯೆತ್ತಿ ಸಮ್ಮುಖದೊಳ್ಪಂಡಕೀರ್ತಿಗಳ್ಕಳಕಳಮಂ ನಿವಾರಿಸಿ ಸಂಭ್ರಮಿಸಿ ನಿಂದು

ಸ್ತುತಿ|| ಲಲಿತರಗಳೆ|| ಜಯಜಯಸುಧಾಕರಕಲಾಕಲಿತಕೋಟೀರ | ಜಯಜಯಶಿವಾಂಗಸಂಗತಮಂಗಳಾಕಾರ | ಜಯಜಯಪಿತಂದ್ರವೃಷಭೇಂದ್ರ ಚತುರತುರಂಗ | ಜಯಜಯ ಮಹಾನಟನಚಲಕುಲಾಚಲಶೃಂಗ | ಜಯಜಯ ಮಹಾಮಹಿಮಹಿಮಗಿರಿಸುತಾಕಾಂತ | ಜಯಜಯಸುಭಿಕ್ಷಾಟನೇಕ್ಷಿತೇಂದ ನಿಶಾಂತ | ಜಯಜಯವಿಶೃಂಖಲಖಲಾಂಗಜಾಂಗವಿಭಂಗ | ಜಯಜಯಚ, ತೋದ್ದಂಡದಂಡಧರಕುಧರಾಂಗ | ಜಯ ಜಯ ನಭೋನಗರಹರಣಪಟುನಿಟಿಲಾಕ್ಷ | ಜಯಜಯಜಲಂಧರಮದಾಂಧಗಜಹರ್ಯಕ್ಷ | ಜಯಜಯ ಪಿತಾಮಹಮಹಾಕರೋಟಿಕರಾಗ್ರ | ಜಯಜಯ ನಿಕೃತ್ತಸುರಪಕ್ಷದಕ್ಷಮಹೋಗ್ರ| ಜಯಜಯ ನೃಸಿಂಹ ಸಂಹರಣಪಟುಶರಭಾಂಗ | ಜಯಜಯ ನಿಜಾಂಗಾರ್ಧ ಸಂಗನಗಜಾರ್ಧಾಂಗ | ಜಯಜಯ ಸುತಾಕಾಮವಿಧಿಹರಕಿರಾತೇಶ | ಜಯಜಯ ಜಿತತ್ರಿವಿಕ್ರಮವಿಕ್ರಮನಿವೇಶ | ಜಯಜಯ ಸಮಾದತ್ತಚಂಡವರವರದೇವ | ಜಯಜಯ ಜಗತ್ಪ್ರಳಯಕರಗರಧರಗ್ರೀವ | ಜಯಜಯಾಚ್ಯುತದತ್ತ ಚಕ್ರರಕ್ಷಣಶೀಲ | ಜಯಜಯ ಗಜೇಂದ್ರಮುಖಮುಖವಿಲೋಕನಲೋಲ | ಜಯಜಯ ಕುಮಾರಮಾರಿತದಿವಿಜರಿಪುಜಾಲ | ಜಯಜಯ ವಿಳಾಸಕೃತವಿದಿತೈಕಪದಲೀಲ | ಜಯಜಯಶುಭಾಪಹಸುಖಾವಹಸದಾಲಾಪ | ಜಯಜಯ ಸುದಕ್ಷಿಣಾಮೂರ್ತಿವಿಳಸಿತರೂಪ | ಜಯಜಯ ಹರಿಬ್ರಹ್ಮಮೃಗ್ಯಪರತರಲಿಂಗ | ಜಯಜಯ ಸಮಾಮ್ನಾಯಗೇಯಮಹಿಮೋತ್ತುಂಗ | ಜಯದೇವ ದೇವಮಹಾದೇವನಮಸ್ತೇನಮಃ

ವ|| ಎಂದಖಂಡವಿಭವಕ್ಕೊರ್ಕಂಡಾಡುತ್ತುಮಿರೆಯಿರೆ

ಕಂ|| ಹರಭಕ್ತಿಸುಖಸುಧಾಸಾ |
ಗರಮಗ್ನಂಗಣುತೃಣೋಪಮಂ ಹರಿಸುರಪಾ ||
ದ್ಯರ ಪದಪಲ್ಲವಮಮರ್ದುಂ |
ಡರಬಾಯ್ಗಂಬಿಲದ ರಸಮದೇಂ ಸೊಗಯಿಕುಮೇ || ೧೭೦

ವ|| ಎನಿಸಿ

ವೃ|| ಪರಮಾನಂದರಸಪ್ರಸನ್ನವದನಂ ಪಂಚಾಕ್ಷರಾಮೋದವಿ |
ಸ್ಫುರಿತಸ್ವಾಂತಪಯೋರುಹಂ ಶಿವಪದಾಂಭೋಜಾತಭೃಂಗಂ ಗುಣಾ ||
ಕರಚೂಡಾಮಣಿ ರಾಜಶೇಖರಮಹೀಶಂ ತನ್ಮಹಾದೇವ ಭ |
ಕ್ತಿರಸಾನಂದತೃಣೀಕೃತಾನ್ಯಸುಖನೊಪ್ಪಿರ್ದ್ದಂ ತದಾಸ್ಥಾನದೊಳ್ ||೧೭೧

ಇಂತೀಕಾವ್ಯಮನೊಲ್ದು ಕೇಳ್ದ ವಿಬುಧರ್ಮ್ಮೆಚ್ಚಿ ಕೊಂಡಾಡೆ ಪೇ |
ಳ್ದಂ ತಾನೊರ್ವ್ವನೆ ಸಾಂಬಶಂಭುಕೃಪೆಯಿಂದೇಕಾಬ್ದದೊಳ್ಪೂರ್ಣ್ಣಮ ||
ಪ್ಪಂತೋರಂತೆ ಷಡಕ್ಷರಾರ್ಯನನಘಂ ಸಾಹಿತ್ಯಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗಸಂಗತಮಹಾಮಾಹೇಶ್ವರಂ ಭಕ್ತಿಯಿಂ || ೧೭೨

ಸರಸಾರ್ಥಂ ಸವಿವಾತು ಜಾಣ್ಮೆಯೊಳವೆಂದಾಮ್ನಾಯಸಂಸ್ತುತ್ಯಶಂ |
ಕರನಾಮಾಂಕಿತಮಲ್ಲದನ್ಯಕೃತಿಯೊಳ್ವಿದ್ವಜ್ಜನಂ ಮೋಹಿಪೊಂ ||
ದಿರವಲ್ತೆಂದಿದರೊಳ್ಸದಾರಮಿಸುಗೆಂದೋರಂತೆಪೇಳ್ದಂ ಷಡ ||
ಕ್ಷರದೇವಂ ರಸಮರ್ಥಮೊಳ್ಪುಮಿಸುಪೀಸತ್ಕಾವ್ಯಮಂ ಶ್ರಾವ್ಯಮಂ || ೧೭೩

ತ್ರಿದಶಜನಗ್ಗದೀವುದೆರೆದರ್ಥಮನೈದುಸುರೋರ್ವಿಜಂ ಸಮಂ |
ತಿದು ಬಿಡದೊಂದೆ ಕಾವ್ಯನವಕಲ್ಪಕುಜಂ ಸಕಳಗ್ಗವೀವುದು ||
ವಿರ್ದಸುಪದಾರ್ಥಮಂ ಸವಿಕಳಧ್ವನಿ ಪಲ್ಲವಸೂನಶೋಭಿತಾ |
ನದರಿಸಿದಕ್ಕೆ ಸಧ್ವನಿಲಸತ್ಪದಪೂರ್ಣ್ಣಕದಿಂ ಸಮಾನಮೇ || ೧೭೪

ಕಂ|| ಪದಪಾಳಿಕ್ರಮಯುಕ್ತಂ |
ಸದಮಳಮಂತ್ರಾರ್ಥವಾದಸಹಿತಂ ತಾನಾ ||
ದುದರಿಂದೀಕಾವ್ಯಂ ವೇ |
ದದವೋಲ್ಬುಧಜನಕೆ ಮಂಗಳಪ್ರದಮಲ್ತೇ || ೧೭೫

ಶ್ರುತಿಗತಿಜಿತಮತಿವಿಬುಧ |
ಪ್ರತತಿಗೆ ಶಿವಮಂತ್ರಮಹಿಮಯುತಮೀಕಾವ್ಯಂ ||
ಶ್ರುತಿಗತಿಜಿತಮತಿವಿಬುಧ |
ಪ್ರತತಿಗೆ ತಾನೆನಿಪುದರರೆ ವಿಶ್ವಂಭರೆಯೊಳ್ || ೧೭೬

ವೃ|| ಸರಸಾಲಂಕೃತಿ ಜಾತಿ ರೀತಿ ಗಮಕಂ ಸೊಂಪಿಂಪು ನುಣ್ಪೊಳ್ಪು ಭಾ |
ಸುರಭಾವಂ ನೆಲೆಗೊಂಡು ತೋರೆ ರಸಗಾನಂಬೋಲ್ಮನಂಗೊಳ್ಪವಿ ||
ಸ್ಫುರದಸ್ಮತ್ಕೃತಿಯುಂ ಸದಾವಿಷಮದಾಟೋಪಂ ಜಗತ್ಪ್ರಾಣಸಂ |
ಹರವಕ್ರಕ್ರಮವಿಕ್ರಮಂಖಳಭುಜಂಗಂ ಕೇಳದೇಂ ಪೋಕುಮೇ || ೧೭೭

ಇದುಪೊಸತಿಂಪು ನೋಡಿದು ನವೀನಮನೂನಮೃದೂಕ್ತಿ ಭಾವಮಿಂ |
ತಿದು ನವಮಿಂತಿದಲ್ತೆ ಸದಲಂಕೃತಿ ನವ್ಯಮುದಾತ್ತವೃತ್ತಿ ತಾ ||
ನಿದು ಮಿಗೆ ನೂತ್ನಮೆಂದಖಿಳಕಾವ್ಯಕಳಾವಿದರೊಲ್ದು ಕೇಳ್ದು ಮ |
ಚ್ಚದೆ ನುತಿಗೆಯ್ಯದಿರ್ಪ್ಪರೆ ಷಡಕ್ಷರದೇವಕೃತಪ್ರಬಂಧಮಂ || ೧೭೮

ವಿತತಾಲಂಕಾರವಿಭ್ರಾಜಿತೆ ಗುಣಗಣಸಂಯುಕ್ತೆ ಶೃಂಗಾರಸಾರಾ |
ನ್ವಿತೆ ಸದ್ವೃತ್ತಿಪ್ರಕಾಶೋದಯೆ ಮೃದುಪದವಿನ್ಯಾಸೆ ಸದ್ಭಾವಶೋಭಾ ||
ವಿತೆ ಭಾಸ್ವದ್ರೀತಿರೇಖಾಲಸಿತೆ ಧೃತಸದಾಮೋದೆ ಭೂಚಕ್ರದೊಳ್ಮ |
ತ್ಕೃತಿಕಂಜತ್ಕಾಂತೆ ಮತ್ಕೀರ್ತಿಯನವಿಯೆನೆ ಸಂತೋಷದಿಂ ವಿರ್ಕ್ಕೆ ನಿಜ್ಜಂ ||

ಅಕಳಂಕಂ ವಿಬುಧಪ್ರಣೀತಸುಮನಸ್ಸಂಯುಕ್ತಮಿಷ್ಟಾರ್ಥದಂ |
ಸುಕುಮಾರಸ್ಥಿತಿ ಸಾರಲಕ್ಷಣಯುತಂ ಸದ್ರಾಗಶೋಭಾಕರಂ ||
ಸಕಳಾಮ್ನಾಯಶಿರಸ್ಸ್ಥಳಸ್ಥಗಿತಮೆಂದುಂ ನಿಂದಪ್ಪೋಲ್ಶಂಕರಾಂ |
ಘ್ರಿ ಕರಂ ಸಿಲ್ಕೆ ಮದೀಯಕಾವ್ಯಮನಿಶಂ ವಿಶ್ವಂಭರಾಚಕ್ರದೊಳ್ || ೧೮೦

ಪರಮೈಶ್ವರ್ಯಮನೀಶ್ವರಂ ಪ್ರವಿಲಸತ್ಕಲ್ಯಾಣಿ ಕಲ್ಯಾಣಮಂ |
ಕರಿವಕ್ತ್ರಂ ಕರಣೀಯಸಿದ್ಧಿಯನಮಂದಾನಂದಮಂ ನಂದಿ ಬ ||
ಹಿರಥಂ ಪೂರ್ಣಮನೋರಥಂಗಳನತಂದ್ರಂ ಶ್ರೀವೃಷೇಂದ್ರಂ ವೃಷೋ |
ತ್ಕರಮಂ ಮತ್ಕೃತಿಗೀಕ್ಷ್ವವರ್ಗ್ಗಳಿಯೊಳೆಂದುಂ ಮಾಳ್ಕೆ ಸಂಪ್ರೀತಿಯಿಂ || ೧೮೧

ಅಮೃತಶ್ರೀವೃತೆ ಸತ್ಫಳಾನ್ವಿತೆ ಮರುತ್ಸಂಸೇವ್ಯೆ ಸಚ್ಛಾಯೆ ಸ |
ಪ್ರಮದಾನೂನವಿನಾಯಕೋತ್ಸವೆ ಸದಾಮೋದಪ್ರಸನ್ನಸ್ಫುರ ||
ತ್ಸುಮನಸ್ಸಂಯುತೆ ನಿರ್ಜರಾರ್ಯಪಿತೆ ಹೈಮಕ್ಷ್ಮಾಧ್ರಸಂಜಾತೆಯಾ |
ಕ್ರಮಿತಸ್ಥಾಣು ಮೃಡಾನಿ ಕಲ್ಪಲತೆಯಂತೀಗೆಮ್ಮಭೀಷ್ಟಾರ್ಥಮಂ || ೧೮೩

ಶ್ರೀಮನ್ನಂದನಭಾಸಿ ಸಂಗತಮಹಾಪರ್ಣಾಶ್ರಿತಾಂಗಂ ಸದಾ |
ಳ್ಯಾಮೋದಪ್ರದಸೌಮನಸ್ಯಮಧಿಕಚ್ಛಾಯಂ ಶುಕಾದಿದ್ವಿಜ ||
ಸ್ತೋಮಪ್ರೇಮಕರಂ ಕುವೃತ್ತಿರಹಿತಂ ಸರ್ವಾಗಮೌಘಸ್ತುತಂ |
ಸ್ವಾಮಿಶ್ರೀಶಿವಲಿಂಗಮೀಗೆಮಗಮರ್ತ್ಯೋರ್ವೀಜಮಿಷ್ಟಾರ್ಥಮಂ ||೧೮೩

ಸುರಚಿರಶಾಲಿವಾಹನಶಕಾನ್ವಿತರತ್ನಸಮುದ್ರಬಾಣಭೂ |
ಪರಿಗಣನಾಂಕಬಂಧುರಜಯಾಬ್ದದ ಮಾಘದ ಶುಕ್ಲಪಕ್ಷವಿ ||
ಸ್ಫುರಿತತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣಮಾಯ್ತು ಶಂ |
ಕರಶಿವಲಿಂಗಪಂಘ್ರಿಕೃಪೆಯಿಂದೆ ಷಡಕ್ಷರದೇವನಿರ್ಮಿತಂ || ೧೮೪

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣಮಹಾ
ಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿ
ರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನ
ಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರ
ದೇವ ವಿರಚಿತಮಪ್ಪ ರಾಜಶೇಖರವಿಳಾಸ
ವಿಪುಳಪ್ರಬಂಧದೊಳ್ಪರಮೇಶ್ವರಪ್ರ
ಸನ್ನತಾತದಾಸ್ಥಾನವರ್ಣನಂ
ಚತುರ್ದಶಾಶ್ವಾಸಂ
ಸಂಪೂರ್ಣಂ.



---

ಅಂತು ಆಶ್ವಾಸ ೧೪ಕ್ಕಂ ಪದ್ಯ ಗಣನೆ ೧೨೬೯ಕ್ಕಂ ಮಂಗಳಮಸ್ತು.

ರಾಜಶೇಖರವಿಳಾಸಂ ಸಂಪೂರ್ಣಂ.

## ಶ್ಲೋಕ

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರ |
ನ್ಮಂಜೀರದ್ವಯಮಂಜುನಾದವಿಭವಶ್ರೀಗರ್ವಸರ್ವಂಕಷಾಃ ||
ಜೀಯಾಸುರ್ಭವತಷ್ಷಡಕ್ಷರವಿಭೋ ಕುಂದಾರವಿಂದಾವಳೀ |
ಮಂದಾರದ್ರುಮಮಂಜರೀಮಧುಝುರೀಮಾಧುರ್ಯಧುರ್ಯಾಗಿರಃ ||



ಬಾಲಸುಧಾಂಶುಪತ್ತನ ಷಡಕ್ಷರಸತ್ಕವಿನಿರ್ಮಿತಂ ಸುಧೀ |
ಲಾಲಿತರಾಜಶೇಖರವಿಳಾಸಸಮಾಹ್ವಯಸುಪ್ರಬಂಧಮಾ ||
ಖೂಲಿತಬುದ್ಧಿಪಾಠಕವಿಲೇಖಕಸಂಗತಿಯಿಂದಬದ್ಧಮಾ |
ಲಾಲಯಮಾಗಿ ನಂಜುವೆರಸಿದ್ಧಿನಿವಾಲವೊಲಿದ್ದುದಕ್ಕಟಾ ||

ಪಂಡಿತರುದ್ರದೇವತನಯಂ ಗಿರಿಜಾಪತಿಪಾದಪೂಜನೋ |
ದ್ದಂಡತರಪ್ರಭಾವಪರಿಲಬ್ಧಲಸತ್ಕವಿತಾವಿಲಾಸನಾ ||
ಖಂಡಲಸಾಮ್ಯಕೃಷ್ಣವಸುಧಾಪತಿದಿವ್ಯಸಭಾಮನೀಷಿಕೈ |
ಕೊಂಡುಸಮಂತಿದಂ ಕರಿಪೃಷಾಂಕನೆ ತಿದ್ದುತೆಮುದ್ರೆಗೈಸಿದಂ ||






Printed at the Crown Press, Mysore—1913.

## ಪ್ರಸಿದ್ಧಿ ಪತ್ರಿಕೆ.

[illegible]ರಾಜಶೇಖರ ವಿಳಾಸವನ್ನು ಮಾಡಿದ ಷಡಕ್ಷರದೇವ[illegible]ಂದ [illegible] ರಚಿಸಲ್ಪಟ್ಟ ಶಬರಶಂಕರ ವಿಳಾಸವೆಂಬ ಕರ್ಣಾಟಕ ಸಂಪ್ರ ಗ್ರಂಥವು ಲೇಖಕಪಾಠಕಾದಿಗಳ ಅವ್ಯುತ್ಪನ್ನತೆಯಿಂದಾದ ಶಬ್ದದೋಷ, ಅರ್ಥದೋಷ, ವಾಕ್ಯದೋಷ, ಛಂದೋದೋಷಗಳಿಂ [illegible] ವಾಗಿ ಬೇವಿನೆಣ್ಣೆಯಿಂ ಮಿಶ್ರಿತವಾದ ಜೇನಿನಂತೆ [illegible]ಗಿ ಜುಗುಪ್ಸಾವಹವಾಗಿಯೂ, ವಿದ್ಯಾರ್ಥಿಗಳಿಗೆ ಕ್ಲೇಶಕಾರಿಯಾಗಿಯೂ [illegible] ವವರಿಗೆ ದುಷ್ಕರವಾಗಿಯೂ [illegible] ಅಸಹ್ಯವಾಗಿದ್ದ ಶಬರ ಶಂಕರ ವಿಳಾಸವನ್ನು ರಾಜಶೇಖರ ವಿಳಾಸವನ್ನು ಪರಿಶೋಧಿಸಿದ ಜೇ. ಪಿ. ಆರ್. ಕವಿ[illegible]ಗಳಿಂದ ಚೆನ್ನಾಗಿ ಪರಿಶೋಧಿಸಿದ ನಂತರದಲ್ಲಿ [illegible] ಪಾಠಗಳನ್ನೂ [illegible] ಸಂದರ್ಭಗಳಲ್ಲಿ ಪದಗಳನ್ನೂ ವಿಂಗಡಿಸಿ ಒಳ್ಳೆಯ ಕಾಗದದಲ್ಲಿ [illegible]ವಾದ ಅಕ್ಷರಗಳಿಂದ ಸುಂದರವಾಗಿ ಮುದ್ರಣ ಮಾಡಿಸಿದ್ದೇವೆ. ಈ ಗ್ರಂಥದಲ್ಲಿ ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುತ್ತಿರುವಲ್ಲಿ ಋಷಿಗಳು ಶಿವನಿಗೆ ಮೊರೆಯಿಡಲು, ಶಿವನು [illegible] ಕಿರಾತರೂಪದಿಂದ ಪಾರ್ವತೀ ಪ್ರಮಥರೊಡನೆ ಅರ್ಜುನನ [illegible] ಬಂದು ಒಂದು ಹಂದಿಯ ನಿಮಿತ್ತವಾಗಿ ಅವನೊಡನೆ [illegible]ಯುದ್ಧ ಮಾಡಿ, [illegible] ಶೌರ್ಯಕ್ಕೆ ಮೆಚ್ಚಿ ಪ್ರಸನ್ನನಾಗಿ ಅವನಿಗೆ ಪಾಶುಪತಾಸ್ತ್ರ[illegible] ವಾಗಿ ವರ್ಣಿಸಲ್ಪಟ್ಟಿರುವುದು. ಇದು [illegible] ವ್ಯಾಸಿಗ[illegible]ಕ ವಾಗಿಯೂ, ಶಿವಭಕ್ತಿಸಂಪನ್ನ[illegible]ರಿಗೆ ಪಠನಯೋಗ್ಯವಾಗಿಯೂ ಇದೆ. ಇದು ಡೆಮ್ಮಿ [illegible]ಸಿನಲ್ಲಿ [illegible] ಫಾರಮು ಅಂದರೆ [illegible] ಪುಟಗಳುಳ್ಳದಾಗಿರುವುದು. ಇದುವರೆಗೆ ಇಷ್ಟು ಶುದ್ಧವಾದ ಪುಸ್ತಕವು ಲಿಖಿತ ಪುಸ್ತಕಗಳೊಳಗೂ ಮುದ್ರಿತ ಪುಸ್ತಕಗಳೊಳಗೂ ಒಂದಾದರೂ ಇಲ್ಲ.— ಕ್ರಯ 8 ಆಣೆ. ಪೋಸ್ಟ್ ಛಾರ್ಜು ಬೇರೆ.

[illegible] ವೆಂಕಟಾಚಲಂ ಶ್ರೆಟ್ಟಿ

ಶ್ರೀ ವಾಣೀವಿಳಾಸ ಬುಕ್ ಡಿಪೋ,

ಮೈಸೂರು.